ಶ್ರೀ

# ಗಣಪತಿ ಸಂಖ್ಯಾ ಶಾಸ್ತ್ರ

(ಪ್ರಜಾವಾಣಿ ಸಾಪ್ತಾಹಿಕ ಧಾರಾವಾಹಿ ಲೇಖನ ಸಂಗ್ರಹ)

* ಭಾನುಪ್ರಿಯ



|| ಅಗಜಾನನ ಪದ್ಮಾರ್ಕಂ, ಗಜಾನನಮಹರ್ನಿಶಂ ಅನೇಕದಂತಂ ಭಕ್ತಾನಾಂ ಏಕದಂತಂ ಉಪಾಸ್ಮಹೇ||

• • •


**ಶ್ರೀ ಕೃಷ್ಣ ಆಸ್ಟ್ರೋ ಬ್ಯೂರೋ**

592, ಸಜ್ಜನರಾವ್ ರೋಡ್, ವಿಶ್ವೇಶ್ವರಪುರಂ, ಬೆಂಗಳೂರು-560 004

# ಓಂ

|| ಓಂ ಸರ್ವಧರ್ಮಕರ್ಮ ದೀಪಿಕಾಯೈನಮಃ ||

||ಓಂ ನಮಃ ಶಿವಾಯ ಗಂ ಗಣಪತಯೇ ನಮಃ ಓಂನಮಃ ಶಿವಾಯ ||





ಶ್ರೀ ಚಾಮುಂಡೇಶ್ವರಿ ಅಮ್ಮನವರಿಗೆ ಸಮರ್ಪಣೆ

## ಭಾನುಪ್ರಿಯರ ಪ್ರಕಟಣೆಗಳು

1. ಗ್ರಹಶೀಲಗಳು
2. ಭಾಗ್ಯದ ಲಕ್ಷ್ಮೀ ಬಾರಮ್ಮಾ (ಸ್ವಲ್ಪ ಪ್ರತಿಗಳು)
3. ಕೈಗೂ ಒಂದು ಭಾಷೆ
4. ಶ್ರೀ ಗಣಪತಿ ಸಂಖ್ಯಾ ಶಾಸ್ತ್ರ

## ಬರಬೇಕಾದ ಗ್ರಂಥಗಳು

1. ಉಡುದಶಾ ಫಲ
2. ಶ್ರೀ ಗಣಪತಿ ಪ್ರಶ್ನಶಾಸ್ತ್ರ
3. ದುಡಿಮೆಯ ದಾರಿಯಲ್ಲಿ
4. ನಿಮ್ಮ ಮದುವೆ - ಮನೆಯಾಕೆ ಅದೃಷ್ಟ
5. ಶಾಂತಿ ಕರ್ಮ ಆಚರಣೆ



ಮುಖ ಪುಟ ವಿನ್ಯಾಸ ಮತ್ತು ಮುದ್ರಣ :
**ಶ್ರೀ ವಿನಾಯಕ ಗ್ರಾಫಿಕ್ಸ್**
ಬೆಂಗಳೂರು - ೫೬೦೦೫೩
ದೂರವಾಣಿ : 623459

ಶ್ರೀ

# ಗಣಪತಿ ಸಂಖ್ಯಾ ಶಾಸ್ತ್ರ

(ಪ್ರಜಾವಾಣಿ ಸಾಪ್ತಾಹಿಕ ಧಾರಾವಾಹಿ ಲೇಖನ ಸಂಗ್ರಹ)

*

ಭಾನುಪ್ರಿಯ



*

ಶ್ರೀ ಕೃಷ್ಣ ಆಸ್ಟ್ರೋ ಬ್ಯೂರೋ
592. ಸಜ್ಜನರಾವ್ ರೋಡ್
ವಿಶ್ವೇಶ್ವರಪುರಂ. ಬೆಂಗಳೂರು-560 004

ಪ್ರಕಾಶಕರು :

**ಶ್ರೀ ಕೃಷ್ಣ ಆಸ್ಟ್ರೋ ಬ್ಯೂರೋ**

592, ಸಜ್ಜನರಾವ್ ರೋಡ್

ವಿಶ್ವೇಶ್ವರಪುರಂ, ಬೆಂಗಳೂರು-560 004

ಪ್ರಥಮ ಮುದ್ರಣ 1974

ದ್ವಿತೀಯ ಮುದ್ರಣ 1996

ಬೆಲೆ - ರೂ. 75-00

ಮುದ್ರಕರು :

ಸನ್‌ಶೈನ್ ಆಫ್‌ಸೆಟ್ ಪ್ರಿಂಟರ್ಸ್

ನಂ. 39/1, ಮಾರೇನಹಳ್ಳಿ

ಜೆ. ಪಿ. ನಗರ, 2ನೇ ಹಂತ

ಬೆಂಗಳೂರು - ೫೬೦ ೦೭೮



ಪೂಜ್ಯಾಯ ರಾಘವೇಂದ್ರಾಯ ಸತ್ಯಧರ್ಮರತಾಯ ಚ।
ಭಜತಾಂ ಕಲ್ಪವೃಕ್ಷಾಯ ನಮತಾಂ ಕಾಮಧೇನವೇ॥

# ಲೇಖಕರ ಮಾತು

ಹಿಂದಿನದು, ಇಂದಿನದು ಮಂದಿಗೆ ಸಾಮಾನ್ಯ. ಮುಂದೇನು? ಇದು ಅವರಿಗೆ ಮಹತ್ವದ್ದು. ಕಳೆದಿದ್ದು ಅನೇಕರಿಗೆ ಬೇಸರ. ಕಾರಣ ಅದರಲ್ಲಿ ಕಾಣುವುದು ತಮ್ಮ ತಮ್ಮ ಯೋಗ್ಯತೆಗೆ ತಕ್ಕಂತೆ ಬಾಳುವೆಯ ಸಾಧನೆಗಳು. ಆದರೆ ಮುಂದಿನದು ಕಲ್ಪನೆಯ ಆಶಾಗೋಪುರ. ದುಡಿದು ದಣಿದು ಧನ ಬಂದರೆ ಸಂತಸವೆಲ್ಲಿ ? ಆದರೆ ಆ ಧನ ಕೈ ಮೀರಿ ಖರ್ಚಾದಾಗ ಮಾತ್ರ ಬೇಸರ ಆಗದೆ ಇರದು. ಕಾರಣ ಅದರ ಹಿಂದಿನ ದೇಹಶ್ರಮದ ನೆನಪು. ಅನಾಯಾಸದ ಸಂಪತ್ತು ಸ್ಥಾನ ಮಾನಗಳು ಈ ಕಾರಣ ಎಲ್ಲರಿಗೂ ಹರ್ಷದಾಯಕ. ಇದಕ್ಕೆ ಅದೃಷ್ಟ ಇರಬೇಕು. ಅದು ಇಲ್ಲ. ಸುಲಭದ ಸಂಪತ್ತು ದೊರೆಯದು. ಎಲ್ಲರಿಗೂ ಇದು ತಿಳಿದದ್ದೇ ಆದರೂ ಅದನ್ನು ನಿರೀಕ್ಷಿಸುವ ಹಕ್ಕು ಅವರಿಗೆ ಇದೆ. ಮುಂದಿನ ಈ ಸುಲಭದ ಭೋಗ ಭಾಗ್ಯದ ಕಲ್ಪನೆ ಒಂದು ಸಹಜದ ಆಕರ್ಷಣೆ. ದಕ್ಕಲಿ ಬಿಡಲಿ ದಕ್ಕೀತು ಎನ್ನುವ ಒಂದು ನಂಬಿಕೆಯೇ ಈ ಸಂತಸದ ಕಾರಣ.

ಈ ಭಾಗ್ಯದ ನಿರೀಕ್ಷೆಗೆ ವಾಸ್ತವಿಕ ಆಧಾರ ಏನೂ ಇರಲಾರದು. ಈ ಕಾರಣ ಅದರ ಅರಿವಿನ ಮಾರ್ಗವೂ ವಾಸ್ತವಿಕ ಅಂಶಗಳ ಮಿತಿಯಲ್ಲಿರದು. ಇದು ಯಾವುದೋ ಅತಿಮಾನವ ಶಕ್ತಿಯ ಕೃಪೆ. ಆಗ ಮಾತ್ರ ಈ ನಮೂನೆ ಭಾಗ್ಯ ಸಾಧ್ಯ. ಇದನ್ನು ತಿಳಿಯಲು ನಾನಾ ಮಾರ್ಗಗಳು. ನಂಬಿಕೆ ಇದರ ಬುನಾದಿ. ಗ್ರಹ ಶಾಸ್ತ್ರ ಅವುಗಳಲ್ಲಿ ಒಂದು ರೀತಿ. ಇದಕ್ಕೆ ಗ್ರಹಮಾನ ತೋರಿಸುವ ಜಾತಕ ಅಗತ್ಯ. ಅಲ್ಲದೆ ಲೆಕ್ಕದ ತಲೆನೋವು ಬೇರೆ. ಜಾತಕವೇ ಹಲವರಿಗೆ ಇರದು ಆದರೆ ಹೆಚ್ಚಿನಂಶ ಅವರಿಗೆ ತಮ್ಮ ಜನನದ ತಾರೀಖಂತೂ ಗೊತ್ತಿರುತ್ತದೆ. ಈ ಆಧಾರ ಸಾಕು. ಸಂಖ್ಯಾ ಶಾಸ್ತ್ರದಲ್ಲಿ ಇದರಿಂದ ಅನೇಕ ವಿಷಯಗಳನ್ನು ತಿಳಿಯಲು ಸಾಧ್ಯ.

ಸಂಖ್ಯೆಗಳಿಗೂ ಗ್ರಹಗಳಿಗೂ ಒಂದು ನಿಕಟ ಸಂಬಂಧ ಇದ್ದಂತೆ ಕಾಣಬರುತ್ತದೆ. ಸಂಖ್ಯೆಯ ಗುಣಗಳು ಯಾವುದೋ ಗ್ರಹದ ಗುಣಗಳಿಗೆ ಸರಿ ಹೋಲುತ್ತದೆ. ಎರಡರ ಗುಣಗಳಿಗೂ ಸಾಮ್ಯ ಕಂಡುಬಂದಾಗ ಆಗ ಆ ಸಂಖ್ಯೆ ಆ ಗ್ರಹದ್ದು ಎಂಬ ನಂಬಿಕೆ ಮೂಡುತ್ತದೆ. ಇದು ಕೇವಲ ಮಾನಸಿಕ ತರ್ಕದ ಫಲ ಇದ್ದೀತು. ಸಂಖ್ಯೆಯ ಗುಣಗಳು ಗ್ರಹಗಳಿಗೆ ಹೊಂದಿಕೆಯಾದರೆ ಆ ಸಂಖ್ಯೆಯ ನಡೆಗಳು ಮಾತ್ರ ಅಂಕಗಣಿತದಂತೆ ಇರುತ್ತದೆ. ಕಾರಣ ಅದು ಅದರ ಸಹಜದ ಗುಣವೇ ಸರಿ. ಅಂಕಗಣಿತದ ಸಂಖ್ಯೆಯ ಪ್ರಗತಿಯ ಹಂತಗಳು ಆ ಸಂಖ್ಯೆಯ ಮುಂದಿಗೆ ಜೀವನದ ಪ್ರಗತಿಯ ಹಂತಗಳು. ಇಲ್ಲಿ ಇದು ಒಂದು ವೈಶಿಷ್ಟ್ಯ. ಅದೇ ರೀತಿ ಅಂಕಗಳ ವರ್ಗೀಕರಣ ಸಹ ಜೀವನದಲ್ಲಿ ಆಗು ಹೋಗುಗಳನ್ನು ಸಮ ಸಮ ಹಂಚಿಕೊಳ್ಳುವ ಮಂದಿಯನ್ನು ತೋರಿಸುತ್ತದೆ.

ಉದಾಹಾರಣೆಗೆ ಮೂರು ಆರಾಗಿ ಒಂಭತ್ತು ಆಗುತ್ತದೆ. ಎರಡು ನಾಲ್ಕಾಗಿ ಎಂಟಾಗುತ್ತದೆ. ಅದೇ ರೀತಿ ಐದು ಹತ್ತಾಗಿ ಇಪ್ಪತ್ತಾಗುತ್ತದೆ.. ಆದರೆ ಇವೆಲ್ಲವೂ ಒಂದು ಸಂಖ್ಯೆಯ ನಾನಾ ಹಂತಗಳು. ಈ ಕಾರಣ ಈ ಅಂಕಿಗಳಲ್ಲಿ ಒಂದು ರೂಪ ಮರೆಸಿಕೊಂಡು

ಲೀನವಾಗಿರುತ್ತದೆ. ಉದಾಹಾರಣೆಗೆ ಒಂದಕ್ಕೆ ಒಂದು ಸೇರಿದರೆ ಎರಡು ಮತ್ತೊಂದು ಸೇರಿದರೆ ಮೂರು ಇತ್ಯಾದಿ. ಆದರೆ ಆ ಒಂದು ದೈವಿಕ ಪ್ರಭಾವ ಗುಣ ಕರ್ಮಗಳಿಗೆ ತುತ್ತಾದಾಗ ಅದು ಆ ವರ್ಗದ ಮಹತ್ತದ ಸಂಖ್ಯೆ ಆಗುತ್ತದೆ. ಒಂದು ನೂರಾದರೆ, ಮೂರು ಮೂವತ್ತು ಆಗುತ್ತದೆ. ನಾಲ್ಕು ನಲವತ್ತು ಆದಂತೆ.

ಈ ಪ್ರಗತಿಯ ಹಂತಗಳನ್ನು ಕೆಲವರು ಕಾಲದ ಮೂರು ಭಾಗಗಳಿಗೆ ಸಮನ್ವಯ ಮಾಡುತ್ತಾರೆ. ಉದಾಹರಣೆಗೆ ಮೂರು ಭೂತ ಕಾಲ. ಆರು ವರ್ತಮಾನ ಕಾಲ. ಒಂಭತ್ತು ಭವಿಷ್ಯದ ಕಾಲ. ಮೂರು ಸಂಖ್ಯೆಯಲ್ಲಿರುವಾಗ ಒಂಭತ್ತು ಜೀವನದ ಅಂತಿಮ ಭವಿಷ್ಯವನ್ನು ತೋರಿಸುತ್ತದೆ. ಆದರೆ ಅಂಕಗಳ ಈ ನಡೆಯ ಅರಿವಿಲ್ಲ. ಆಗ ಒಂಭತ್ತು ಸಂಖ್ಯೆಯ ಭವಿಷ್ಯ ಕಾಣದಿರಬಹುದು. ಈ ಅರಿವು ಮೂಡಲು ಸಂಖ್ಯೆಗಳ ನಡೆಯ ವಿವಿಧ ಹಂತಗಳನ್ನು ತೋರಿಸುವ ಸಂಖ್ಯಾ ಶಾಸ್ತ್ರ ಒಂದು ಸುಲಭದ ನೆರವು ಆದೀತು. ಇದೇ ರೀತಿ ಸಂಯುಕ್ತ ಸಂಖ್ಯೆಗಳು ತಮ್ಮ ತಮ್ಮ ಉತ್ತರಾರ್ಧ ಸಂಖ್ಯೆಯ ನಡೆಯನ್ನು ಅವಲಂಬಿಸಿರುತ್ತವೆ.

## ನಾಡೀ ಗ್ರಂಥಗಳಲ್ಲಿ ಸಂಖ್ಯೆಗಳು – ಪುರಾಣದಲ್ಲಿ ಪುರಾವೆಗಳು

ಗತಕಾಲದ ಹಿಂದೂ ಸಮಾಜದ ರೀತಿ ನೀತಿಗಳನ್ನು ಮಹರ್ಷಿಗಳು ಗ್ರಂಥಗಳಲ್ಲಿ ಕತೆಗಳಲ್ಲಿ ತೋರಿಸಿದ್ದಾರೆ. ಉದಾಹರಣೆಗೆ ವೇದವ್ಯಾಸರು ಬರೆದ ಪುರಾಣಗಳು ಉತ್ತಮ ಪುರಾವೆಗಳು. ಮಾನವೀಯ ಆದರ್ಶಗಳಿಗಾಗಿ ಬಾಳುವೆ ನಡೆಸಿದ ಪರಮಾತ್ಮನ ಅಂಶಗಳಿಂದ ಅವತಾರ ಮಾಡಿದ ಮಹಾತ್ಮರ ಕತೆಗಳು. ಆ ಆದರ್ಶಗಳನ್ನೇ ಅನುಸರಿಸಿ ಬಾಳುವೆ ನಡೆಸಿದ ಮನುಷ್ಯರ, ರಾಜರ ಕತೆಗಳು. ಈಗಿನ ಮಂದಿಗೆ ತಲೆಪಂಕ್ತಿಗಳಾಗಿವೆ. ಈ ಉದಾತ್ತ ಬರವಣಿಗೆಗಳಲ್ಲಿ ಕಾಣದಂತೆ ಹಿನ್ನೆಲೆಯಲ್ಲಿ ಸಂಖ್ಯೆಗಳ ಪ್ರಭಾವ ಅಡಗಿರುತ್ತದೆ. ವೈಜ್ಞಾನಿಕ ದೃಷ್ಟಿಯಲ್ಲಿ ಈ ಅಂಶ ಬೆದಕಿ ಹುಡುಕಿದರೆ ಕಾಣದೇ ಇರದು.

ಉದಾಹರಣೆಗೆ ವಾಲ್ಮೀಕಿ ರಾಮಾಯಣದಲ್ಲಿ ಶ್ರೀರಾಮನ ಪೂಜೆಗೆ ಗುರು ಸಮಾನನಾದ ಶ್ರೀ ಆಂಜನೇಯನ ಸಾಹಸದ ವರ್ಣನೆ ಐದನೆಯ ಸುಂದರಕಾಂಡದಲ್ಲಿದೆ. ಶ್ರೀಮಂತ ಭಾಗವತದಲ್ಲಿ ವೇದವ್ಯಾಸರಿಗೆ ಭಾಗವತದ ಸಾರವನ್ನು ಬೋಧೆ ಮಾಡಿದ ನಾರದರ ಸಂಗತಿ ಇದೆ. ಹೀಗೆ ಗುರುವಿನ ಸಂಖ್ಯೆಯಾದ ಐದನ್ನು ಆ ಗುರುವಿನ ವಿಷಯಗಳನ್ನು ಹೇಳುವಾಗ ಬಳಸಿಕೊಂಡಿರುತ್ತಾರೆ. ಇದೇ ರೀತಿಯಾಗಿ ಭಾಗವತದ ನಾಲ್ಕನೆಯ ಸ್ಕಂದದಲ್ಲಿ ಜಗನ್ಮಾತೆ ಪಾರ್ವತಿಯ ಕತೆ ಇದೆ. ನಾಲ್ಕು ಚಂದ್ರನ ಸಂಖ್ಯೆ. ಇದು ತಾಯಿಯ ಗ್ರಹ. ಏಳು ಮೃತ್ಯು ಸಂಖ್ಯೆಯಾಗಿ ಏಳನೆಯ ಸಂಖ್ಯೆಯಲ್ಲಿ ಪ್ರಹ್ಲಾದನ ಮೃತ್ಯುಯೋಗವನ್ನು ಜಯಿಸಿದ ಶ್ರೀ ಹರಿಯಂಶ ನರಹರಿಯ ಅವತಾರದ ಕತೆ ಇದೆ. ಇದೇ ರೀತಿಯಾಗಿ ಮೂರನೆಯ ಸಂಖ್ಯೆಯ ಮಂಗಳನು ಭೂ ಗ್ರಹವಾಗಿ ಆ ಪ್ರಪಂಚದ ಸೃಷ್ಟಿಕ್ರಮವನ್ನು ಕಾಣಬಹುದು. ಕುಜ ಶನಿ ಯೋಗದ ಈ ಸಂಖ್ಯೆ ಪಾಪದ್ದು ಎಂದು ಮಹಾಘೋರವಾದ ರಾಕ್ಷಸರ ವಧೆಯ ಕತೆ ಇದೆ ಈ ನಮೂನೆ ಕತೆಗಳಲ್ಲಿ ಸಂಖ್ಯೆಯ ಗುಣಗಳ ಸಾಮ್ಯವನ್ನು ಕಾಣಬಹುದು.

ಈ ಸಂಖ್ಯೆಗಳ ನೇರವಾದ ಬಳಕೆ ನಾಡೀಗ್ರಂಥಗಳಲ್ಲಿ ಕಂಡೀತು. ನಾಡೀಗ್ರಂಥಗಳು ಪ್ರತಿ ಮನುಷ್ಯನ ಆಗುಹೋಗುಗಳನ್ನು ಅವರ ಜನ್ಮ ಜಾತಕದ ಆಧಾರದ ಮೇಲೆ ವಿವರವಾಗಿ ತಿಳಿಸುವ ಜ್ಯೋತಿಷ್ಯ ಗ್ರಂಥಗಳು. ಇವುಗಳ ಲೇಖಕರು ಯಾವುದಾದರೂ ಒಂದು ಗ್ರಹಕ್ಕೆ ಜಪ ತಪ ಅನ್ನದಾನಾದಿಗಳನ್ನು ಮಾಡಿ ಅದರ ಫಲವನ್ನು ವಶಮಾಡಿಕೊಂಡು ಆ ಗ್ರಹವನ್ನು ಹಿಡಿದು ಜಾತಕದ ಫಲಗಳನ್ನು ಶುರು ಮಾಡಿ ಅನಂತರ ಇತರ ಗ್ರಹಗಳ ಫಲಗಳನ್ನು ವಿವರಿಸುತ್ತಾರೆ. ಸಾಮಾನ್ಯವಾಗಿ ಅವರು ಹಿಡಿದು ವಿವರಿಸುವ ಗ್ರಹದ ಹೆಸರೇ ಆ ನಾಡೀಗ್ರಂಥಕ್ಕೂ ಇರುತ್ತದೆ. ಹಾಗಿಲ್ಲ, ಆ ಗ್ರಹದ ಅಧಿದೇವತೆಯ ಹೆಸರನ್ನು ಇಟ್ಟಿರುತ್ತಾರೆ. ಉದಾಹರಣೆಗೆ ರವಿ ನಾಡಿ. ಕಶ್ಯಪ ನಾಡಿ. ಹಾಗೆಯೇ ಕುಜನ ಸಂಬಂಧದ ನಾಡಿಗಳು ಸ್ಕಂದ ನಾಡಿ, ಕೌಮಾರನಾಡಿ. ಬುಧನದು ಸತ್ಯನಾಡಿ, ಬುಧ ನಾಡಿ ಇತ್ಯಾದಿ. ಈ ನಾಡಿಗಳಲ್ಲಿ ಗ್ರಹಗಳ ಯೋಗ ಕುಲದ ವರುಷಗಳ ಸಂಖ್ಯೆ ಆ ಗ್ರಹದ ಸಂಖ್ಯೆಗೆ ಹೊಂದುತ್ತದೆ. ಅಷ್ಟೇ ಅಲ್ಲ. ಜ್ಯೋತಿಷ್ಯ ಗ್ರಂಥಗಳಲ್ಲಿಯೂ ಸಹ ಗ್ರಹಗಳಿಗೆ ಈ ಸಂಖ್ಯೆಗಳನ್ನು ಬಳಸಿರುವುದು ಕಾಣಬರುತ್ತದೆ. ಉದಾಹರಣೆಗೆ ಕಾಳಿದಾಸನ ಉತ್ತರ ಕಾಲಾಮೃತ ಗ್ರಂಥದಲ್ಲಿ ನಾಲ್ಕನೆಯ ಕಾಂಡದಲ್ಲಿ ಭಾಗ್ಯ ಯೋಗವನ್ನು ಹೇಳುವಾಗ ಇಪ್ಪತ್ತೇಳನೆಯ ಶ್ಲೋಕದಲ್ಲಿ ಹೀಗೆಂದಿದ್ದಾನೆ.

ಅರ್ಕಸ್ನಾಗ (೩೦) ಚಟು (೧೬) ಸ್ತನು (೬) ರ್ಜಾನ (೮) ನಟಿ: (೧೦) ವೇಟಾ
(೧೨) ಯಮ: (೧) ಸ್ಸ್ವಸ್ತನೋ
ಚಂದ್ರಾದ್ಯಾಗ್ರಹಯೋ : ಕಲ್ಯೈಕ್ಯಾಮಿನ (೧೨) ಹೃಷ್ಟಿಷ್ಟಂ
ವಿಧೋರ್ಯದ್ವಹಮ್
ತದ್ರಾ ಶೌ ತು ವಿಪಾಪಶೋಭನಯಿಗೆ ಕೋಟೀಶ್ವರಂ ತಸ್ಯತೆ ಚೇತಾಪಾಪೇ
ತು ಸಹಸ್ರಶಃ ಖಿಲಯಿಗೇ ತುಂಗೇ ಒ ಕೋಟೀಶ್ವರಮ್

ಸೂರ್ಯನಿಗೆ ಮೂವತ್ತು ಚಂದ್ರನಿಗೆ ಹದಿನಾರು ಕುಜನಿಗೆ ಆರು ಬುಧನಿಗೆ ಎಂಟು ಗುರುವಿಗೆ ಹತ್ತು ಶುಕ್ರನಿಗೆ ಹನ್ನೆರಡು ಮತ್ತು ಶನಿಗೆ ಒಂದು ಹೀಗೆ ಗ್ರಹಗಳಿಗೆ ಕಲೆಗಳನ್ನು ಹೇಳಿದ್ದಾನೆ.

## ಗಣಪತಿ ಸಂಖ್ಯಾಶಾಸ್ತ್ರದಲ್ಲಿ ಎರಡು ನಮೂನೆ ಸಂಖ್ಯೆಗಳು

ಗಣಪತಿ ಸಂಖ್ಯಾ ಶಾಸ್ತ್ರದಲ್ಲಿ ಎರಡುಭಾಗಗಳು. ಎರಡು ನಮೂನೆ ಸಂಖ್ಯೆಗಳು. ಮೊದಲನೆಯದು ಗ್ರಹ ಸಂಖ್ಯೆಗಳು. ಇದರ ಬಗ್ಗೆ ಈ ಪುಸ್ತಕ. ಎರಡನೆಯದು ರಾಶಿ ಸಂಖ್ಯೆಗಳು. ಮೇಷಾದಿ ಹನ್ನೆರಡು ರಾಶಿಗಳಿಗೆ ರಾಶಿಗಹತ್ತು ಹತ್ತು ಸಂಖ್ಯೆ ಗಳಂತೆ ನೂರಇಪ್ಪತ್ತು ಸಂಖ್ಯೆಗಳು. ಇದರಲ್ಲಿ ಒಂದೊಂದು ರಾಶಿಗೆ ಒಂದೊಂದು ದಶಕ ವಿಗಾಸಲು. ಪ್ರತಿ ದಶಕದ ಏಕಾಂಕ ಸಂಖ್ಯೆಗಳು ಆ ರಾಶಿಯ ಒಂಭತ್ತು ನವಾಂಶಗಳನ್ನು ತೋರಿಸುತ್ತದೆ. ಈ ಬಗ್ಗೆ ಲೇಖಕರು ಮುಂದೆ ಗಣಪತಿ ಪ್ರಶ್ನೆ ಶಾಸ್ತ್ರ ಎಂಬ ಗ್ರಂಥದಲ್ಲಿ ವಿವರಿಸುವ ಉದ್ದೇಶವಿದೆ. ಈಗ ಓದುಗರ ಕೈಲಿರುವ ಪುಸ್ತಕ ಅವರಿಗೆ ಉಪಯುಕ್ತವಾದರೆ ಆಗ ಮುಂದಿನ ಗ್ರಂಥವನ್ನು ಓದುಗರ ಕೈಸೇರಿಸಲು ಪ್ರಯತ್ನ ಮಾಡಲು ಸಾಧ್ಯ.

ಲೇಖಕರಿಗೆ ಈ ಸಂಖ್ಯೆಗಳಲ್ಲಿ ಆಸಕ್ತಿ ಹುಟ್ಟಿ ಹದಿನೈದು ವರುಷಗಳು ಸಂದಿವೆ. ಆಗ ಒಂದು ಸಲ ಸಂಸ್ಕೃತ ಭಾಷೆಯಲ್ಲಿದ್ದ ನಾಡೀ ಶಿವ ಮಹಾವಾಕ್ಯ ಗ್ರಂಥದಲ್ಲಿ ಜಾತಕ ಫಲ ಕೇಳುತ್ತಿರುವಾಗ ಪ್ರಥಮ ಬಾರಿಗೆ ಗಣಪತಿ ಚಕ್ರ ಶಾಸ್ತ್ರದ ವಿಷಯ ಪ್ರಸ್ತಾಪ ಬಂದಿತು.

ಜಾತಕದ ಕೊನೆಯಲ್ಲಿ ಗಣಪತಿ ಪ್ರಶ್ನೆ ಶಾಸ್ತ್ರದ ಸಾಹಿತ್ಯ.ಅಕ್ಷರ ಚಕ್ರಗಳು ಮತ್ತು ಅದರ ಹಿಂದಿರುವ ಗಣಿತದ ಉಲ್ಲೇಖವಿತ್ತು. ಇದು ರಾಶಿ ಸಂಖ್ಯೆಗಳ ಆಧಾರದಿಂದ ಕೂಡಿದ್ದು. ಮತ್ತೊಮ್ಮೆ ನಂದಿ ನಾಡೀ ಪ್ರಶ್ನೆ ಗ್ರಂಥದಲ್ಲಿ ಗ್ರಹ ಸಂಖ್ಯೆಗಳ ಪ್ರಸ್ತಾಪ ಬಂದಿತ್ತು. ಬೇರೆಬೇರೆ ಊರುಗಳಲ್ಲಿ ಇತರ ನಾಡೀ ಗ್ರಂಥಗಳಲ್ಲಿ ಫಲ ಶ್ರಮಣ ಮಾಡುವಾಗ ಈ ಗ್ರಹ ಸಂಖ್ಯೆಗಳ ಬಳಕೆ ಸಾಧಾರಣವಾಗಿ ಕಾಣ ಬರುತ್ತಿತ್ತು. ತಮಿಳು ಸಂಸ್ಕೃತ ಎರಡು ಭಾಷೆಗಳ ನಾಡೀ ಗ್ರಂಥಗಳಲ್ಲಿಯೂ ಇದರ ಬಳಕೆ ಒಂದೇ ನಮೂನೆ ಇದ್ದದ್ದು ಶಾಸ್ತ್ರಸಮನ್ವಯದ ಸಾಕ್ಷಿ. ಇದರ ಆಧಾರದ ಮೇಲೆ ಆ ಕಾಲದಿಂದಲೂ ಲೇಖಕರು ತಮ್ಮ ವೃತ್ತಿಯಲ್ಲಿ ಈ ಸಂಖ್ಯೆಗಳನ್ನು ಬಳಸಿಕೊಂಡೇ ಬಂದದ್ದು. ಅದರಲ್ಲಿ ಒಂದು ಧಾರಾಕಾರವಾಗಿ ಹರಿಯುವ ಶಾಸ್ತ್ರದ ಹಾದಿ ಕಂಡುದು ಸಹಜ. ಇದರ ಆಧಾರ ಮತ್ತು ವೃತ್ತಿ ಅಭ್ಯಾಸದ ಅನುಭವದಲ್ಲಿ ಕಂಡದ್ದು ಎರಡೂ ಸೇರಿ ಈ ಪುಸ್ತಕದಲ್ಲಿ ಗ್ರಹ ಸಂಖ್ಯೆಗಳು ಒಂದು ರೂಪು ಪಡೆಯಲು ಸಾಧ್ಯವಾಯಿತು. ಪ್ರತಿ ಸಂಖ್ಯೆಯ ಬಗ್ಗೆ ವಿವರಿಸುವಾಗ ಆ ಸಂಖ್ಯೆಯ ಹಿನ್ನೆಲೆಯ ಸೂತ್ರ ತಮ್ಮ ತಿಳಿವಳಿಕೆಗೆ ಬಂದಷ್ಟು ವಿವರವಾಗಿ ವಂಚನೆ ಇಲ್ಲದೆ ಹೇಳಿದೆ.

ಕರ್ನಾಟಕ ಸರಕಾರದ ವಾರ್ತಾ ಇಲಾಖೆಯ ಸಂಬಂಧವಾಗಿ ದೆಹಲಿಯಲ್ಲಿ ಈಗಿರುವ ಮಾನ್ಯ ಮಿತ್ರ ಶ್ರೀ. ಎಂ. ಎಸ್. ಭರದ್ವಾಜರು ಆಗ ಒಂದು ಸಾಪ್ತಾಹಿಕ ವನ್ನು ಹೊರಡಿಸುತ್ತಿದ್ದರು. ಆಗ ಅದರಲ್ಲಿ ವಾರದ ಭವಿಷ್ಯ ಲೇಖಕರದು. ಅದರಲ್ಲಿ ಕೊನೆಯದು ಅದೃಷ್ಟ ಸಂಖ್ಯೆಗಳ ಪಟ್ಟಿ. ಇದರ ಮಹಿಮೆ ಆಗಲೇ ಗೋಚರವಾದದ್ದು. ಅದೃಷ್ಟ ಸಂಖ್ಯೆಗಳನ್ನು ಬರೆಯುವ ಉದ್ದೇಶ ಏನೇ ಇರಲಿ ಮಂದಿಯನ್ನು ಜೂಜಾಡಲು ಉತ್ತೇಜನೆ ಕೊಡಲಂತೂ ಅಲ್ಲ ಆದರೆ ಅದರ ಉಪಯೋಗ ಮಾತ್ರ ಎಂದು ಗೊತ್ತಾಗಿದ್ದು ಮನಸ್ಸಿಗೆ ಬೇಸರವಾದುದು ಸಹಜ. ಆಗ ಒಬ್ಬ ಮಿತ್ರರು ಈ ಗ್ರಹಸಂಖ್ಯೆಗಳನ್ನು ಅಭ್ಯಾಸ ಮಾಡಿ ಅವರು ಈಗ ಕುದುರೆ ಜೂಜಿನ ಬುಕ್ಕಿಯಾಗಿ ಹೇರಳ ಧನ ಸಂಪಾದನೆ ಮಾಡಿ ಕೊಂಡಿರುವುದು ಈ ಸಂಖ್ಯೆಗಳಲ್ಲಿ ಮಹತ್ವವಿದೆ ಎಂದಂತಾಯಿತು.

ಪ್ರಜಾವಾಣಿ ಪತ್ರಿಕೆಯಲ್ಲಿ ದಿನ ಭವಿಷ್ಯ ಬರೆಯುವಾಗಲೂ ಈ ಸಂಖ್ಯೆಗಳನ್ನು ಉಪಯೋಗಿಸುತ್ತಾ ಬಂದಿದೆ. ಈಗಲೂ ಸಹ ಈ ಅದೃಷ್ಟ ಸಂಖ್ಯೆಗಳು ಮಟಕ ಇತ್ಯಾದಿ ಜೂಜಾಡಲೇ ಮಂದಿ ಉಪಯೋಗಿಸುತ್ತಿರುವುದು ಸಂಖ್ಯೆಗಳ ಮಹತ್ವವನ್ನು ತೋರಿಸುತ್ತದೆ. ಆದರೆ ಬೇರೆ ವ್ಯವಹಾರಗಳಲ್ಲಿ ಇದನ್ನು ಬಳಸುವುದು ಹಿತಕರ. ಆದರೂಮಂದಿ ಆ ರೀತಿ ಉಪಯೋಗಿಸರು. ಬಳ್ಳಾರಿಯ ಮಿತ್ರರೊಬ್ಬರಂತೆ ಈ ಸಂಖ್ಯೆಗಳ ಸಹಾಯದಿಂದ ಜೀವನದಲ್ಲಿ ಧನಾಗಮ ಸುಗಮ ಎನ್ನುತ್ತಾರೆ. ಇದರಿಂದೇನು? ಎಲ್ಲರೂ ಜೂಜಾಡಬೇಕು ಎಂದಲ್ಲ. ಕಾರಣ ನಾಲ್ಕು ಜನ ಕಳೆದದ್ದು ಒಬ್ಬರಿಗೆ ಸಂಪತ್ತು. ಇದರ ವ್ಯಾಪಾರ ವ್ಯವಹಾರಗಳಲ್ಲಿ ಇದರ ಉಪಯೋಗ ಮಾಡಿಕೊಳ್ಳಬೇಕು ಎನ್ನುವುದು ಲೇಖಕರ ಉದ್ದೇಶ.

ಪ್ರಜಾವಾಣಿ ಪ್ರಧಾನ ಸಂಪಾದಕರಾದ ಶ್ರೀ ಟಿ. ಯಸ್. ರಾಮಚಂದ್ರರಾಯರು ಔದಾರ್ಯದಿಂದ ಜ್ಯೋತಿಷ್ಯ ಶಾಸ್ತ್ರ ಪರಿಚಯದ ಲೇಖನಗಳ ಪ್ರಕಟನೆಗೆ ಅನುವಾಗಿ ಎಂಟು ವರುಷಗಳ ಕಾಲ ಕಳೆದಿತ್ತು. ಒಮ್ಮೆ ಇದನ್ನು ಸಾಕಾಗಿಸಿ ಮಂದಿಯ ಜನ್ಮ ತಾರೀಖಿನ ಮೇಲೆ ಲೇಖನಗಳನ್ನು ಬರೆಯಲು ಸಲಹೆ ಇತ್ತರು. ಆಗ ಈ ಗಣಪತಿ ಸಂಖ್ಯಾ ಶಾಸ್ತ್ರ ಸಾಹಿತ್ಯ

ಹೊರಬರಲು ಒಂದು ಅವಕಾಶ ಆಯಿತು. ಅದೇ ನಮಗೆ ನೀಡಿದ ಸ್ಫೂರ್ತಿ ಮತ್ತು ಉತ್ತೇಜನ. ಇದರ ಪ್ರಕಟಣೆ ಶುರುವಾದ ಮೇಲೆ ಅನೇಕ ಓದುಗರಿಂದ ಹಿತಕರ ಉತ್ತೇಜಕ ಪತ್ರಗಳು ಬಂದು ಈ ಸಾಹಿತ್ಯ ಮಂದಿಗೆ ಬೇಕು ಎನ್ನುವುದಾಯಿತು. ಗಣಪತಿ ಸಂಖ್ಯಾ ಶಾಸ್ತ್ರದ ಮೊದಲನೆಯ ಭಾಗವಾದ ಗ್ರಹಸಂಖ್ಯಾ ಶಾಸ್ತ್ರ ೧೯೭೧ ರಿಂದ ೭೫ರ ಕೊನೆಯವರೆಗೆ ಪ್ರಜಾವಾಣಿ ಸಾಪ್ತಾಹಿಕದಲ್ಲಿ ಧಾರವಾಹಿಯಾಗಿ ಬಂದಿದೆ. ಅದರ ಹೊಣೆ ಹೊತ್ತ ಮಿತ್ರ ಶ್ರೀ ವೈಕುಂಠ ರಾಜುರವರ ಸಹಕಾರಕ್ಕೆ ನಾವು ಋಣಿಗಳು. ಆದರೆ ಈವರೆಗೆ ಜ್ಯೋತಿಷ್ಯ ಶಾಸ್ತ್ರದ ಸಾಹಿತ್ಯವನ್ನು ಕರ್ನಾಟಕದ ಮಂದಿಗೆ ಮೂಲೆ ಮೂಲೆಯಲ್ಲಿದ್ದರೂ ಕೈ ಸೇರುವಂತೆ ಪ್ರಜಾವಾಣಿಯಲ್ಲಿ ಪ್ರಕಟಿಸಿದ ಉದಾರ ಮನಸ್ಸಿನ ಆಪ್ತ ಮಿತ್ರರು ಪ್ರಧಾನ ಸಂಪಾದಕರು ಶ್ರೀ ರಾಮಚಂದ್ರರಾಯರು ಇದರ ಮುಂದಿನ ಭಾಗವಾದ ಗಣಪತಿ ಪ್ರಶ್ನೆ ಶಾಸ್ತ್ರವನ್ನು ಸಹ ಸಾಪ್ತಾಹಿಕದಲ್ಲಿ ಪ್ರಕಟನೆ ಮಾಡಲು ಅನುವಾಗುವುದು ಶಾಸ್ತ್ರಸೇವೆಯ ದೃಷ್ಟಿಯಲ್ಲಿ ಪುಣ್ಯಕರ. ಆದರೆ ಅವರ ವಿಶಾಲ ಮನೋಭಾವದ ಮೇಲೆ ನಮ್ಮ ಆಶಾಗೋಪುರ ನಿಂತಿದೆ. ಕನ್ನಡಿಗರಿಗೆ ಈ ಸಾಹಿತ್ಯ ಅಗತ್ಯ ಸಿಗುವಂತೆ ಮಾಡಿಯಾರು ಎಂಬ ನಂಬಿಕೆ ಇದೆ. ಈ ಲೇಖನ ಮಾಲೆ ಸಾಪ್ತಾಹಿಕದಲ್ಲಿ ಆರಂಭವಾದಾಗಿನಿಂದಲೂ ಇದರ ಪುಸ್ತಕ ರೂಪದ ಪ್ರಕಟನೆಗೆ ಬೇಡಿಕೆ ಓದುಗರಿಂದ ಬರುತ್ತಲೇ ಇದೆ. ಇದನ್ನು ಸಾಧಿಸಲು ಲೇಖನ ಪೂರ್ತಿಯಾದರೂ ಕಾಗದದ ಅಭಾವದ ಕಾರಣ ನಿಧಾನವಾದದ್ದು ಸ್ವಾಭಾವಿಕ.

ಈ ಸಂಖ್ಯಾ ಶಾಸ್ತ್ರ ಸಾಹಿತ್ಯವನ್ನು ಒಂದು ರೂಪಿಗೆ ತಂದು ಧಾರಕಾರವಾಗಿ ಬರೆದ ಸಾಹಸ ಲೇಖಕರದು. ಆದರೆ ಅದರ ಬಳಕೆಯಲ್ಲಿ ಇವರು ಒಬ್ಬರೇನಲ್ಲ. ಇದೇ ಊರಿನ ವೃತ್ತಿತಜ್ಞ ಪಂಡಿತ ಶಶಿಕಾಂತ ಜೈನರು, ಮೈಸೂರಿನ ಡಾ || ಮಾರುತಿರಾಯರು ಅಲ್ಲದೆ ಡಾ || ಭಾಷ್ಯಂ ಇನ್ನೂ ಅನೇಕರು ಇರಬಹುದು. ಗಣಪತಿ ಸಂಖ್ಯಾಶಾಸ್ತ್ರದ ಬಗ್ಗೆ ಒಂದು ಲೇಖನವನ್ನು ಲೇಖಕರು ಹಿಂದೆ ೧೯೬೪ ರಲ್ಲಿ ನಡೆದ ಅಖಿಲ ಕರ್ನಾಟಕ ಜ್ಯೋತಿಷ್ಯ ಸಮ್ಮೇಳನದ ತಜ್ಞರ ಸಭೆಯಲ್ಲಿ ಓದಿದ್ದುಂಟು. ಆಗ ಆ ಲೇಖನ ಆ ಸುಮಾರಿನ ವಾರಗಳಲ್ಲಿ ಹೆಸರಾಂತ 'ಪ್ರಜಾಮತ' ವಾರ ಪತ್ರಿಕೆಯಲ್ಲಿ ಮೂರು ಕಂತುಗಳಲ್ಲಿ ಪ್ರಕಟವಾಗಿದೆ. ಅಲ್ಲದೆ ಆ ಸಮ್ಮೇಳನದ ನೆನಪಿನಂಕ ಗ್ರಂಥದಲ್ಲಿಯೂ ಸಹ ಪ್ರಕಟವಾಗಿದೆ. ಈ ಕಾರಣ ಈ ಪುಸ್ತಕ ಜ್ಯೋತಿಷಿಗಳಿಗೆ. ಶಾಸ್ತ್ರಾಭಿಮಾನಿಗಳಿಗೆ ಹೊಸದೇನೂ ಇಲ್ಲ. ಆದರೆ ಅದರ ವಿವರ ಸಾಹಿತ್ಯದ ಒಂದು ಪುಸ್ತಕ ರೂಪ ಇದು ಎನ್ನಬಹುದು.

### ನಾಲ್ಕು ಭಾಗಗಳು

ಈ ಪುಸ್ತಕದಲ್ಲಿ ನಾಲ್ಕು ಭಾಗಗಳು. ಮೊದಲನೆಯದು. ದಿನಾಂಕದ ಆಧಾರದ ಮೇಲೆ ಮಂದಿಯ ಗುಣಶೀಲಗಳ. ವಿಮರ್ಶೆ. ಜೀವನದ ಆಗುಹೋಗುಗಳ ವಿವರಣೆ. ಪ್ರಗತಿ ವರ್ಷ ಸಂಖ್ಯೆಗಳು ಮತ್ತು ಪರಿಸರದ ಹೊಂದಾಣಿಕೆ ಇತ್ಯಾದಿ. ಅಲ್ಲದೇ ಸಂಖ್ಯೆಗಳ ಹಿನ್ನೆಲೆ. ಅದರ ಪುಷ್ಟೀಕರಣ ವಿಧಾನ ವಿವರಣೆ ಇತ್ಯಾದಿ. ಸಂಖ್ಯೆಯ ಹಿನ್ನೆಲೆಯ ವಿಮರ್ಶೆ ಮಾಡುವಾಗ ವೇದಾಂತದ ವಿಷಯಗಳನ್ನು ಆಗಾಗ ಉಪಯೋಗಿಸಿಕೊಂಡಿದೆ. ಈ ಹಾದಿ ಕೇವಲ ಲೇಖಕರ ವೈಯಕ್ತಿಕ ಕಲ್ಪನೆಯ ತರ್ಕ. ವೇದಾಂತಿಗಳಿಗೆ ಇದು ಒಂದು ನಮೂನೆ ಅಪಚಾರ ಎಂಬ ಭಾವನೆ ಮೂಡಿದರೆ ಆಗ ಅವರಿಗೆ ಕ್ಷಮೆಯ ಬೇಡಿಕೆಯೂ ಸಹ ಲೇಖಕರ ಒಂದು ಋಣ ಆಗಿದೆ.

ಎರಡನೆಯ ಭಾಗದಲ್ಲಿ ಜನ್ಮ ತಾರೀಖಿನ ತಿಂಗಳ ಸಂಖ್ಯೆಯ ಆಧಾರದ ಮೇಲೆ ಮಂದಿಯ ಸಂಸಾರದ ಜೀವನದ ವಿಮರ್ಶೆ ಇದೆ. ಕೇವಲ ವ್ಯಕ್ತಿ ಅಭ್ಯಾಸದ ಕಾಲದಲ್ಲಿ ಕಂಡಿರುವ ಒಂದು ಅಂಶ ಎನ್ನಬಹುದು. ಜೊತೆಗೆ ಅಲ್ಲಲ್ಲಿ ಕೇಳಿ ಬಂದ ನಾಣ್ಣುಡಿಗಳು ಮತ್ತೊಂದು ಕಾರಣ. ಮೂರನೆಯ ಮಗನಿಗೆ ಕಷ್ಟ, ನಾಲ್ಕು ಗಂಡಾದರೆ ಶುಭ, ಆರನೆಯವನು ಗಂಡಾದರೆ ಅರಸನು ಇತ್ಯಾದಿ ನುಡಿಗಳಲ್ಲಿ ಸಂಖ್ಯೆಯ ಮಹಿಮೆಯನ್ನು ಕಾಣಬಹುದು. ತಿಂಗಳ ಸಂಖ್ಯೆಯ ಪ್ರಭಾವ ಸಂಸಾರದ ಮೇಲೆ ಎಂಬ ನೀತಿ ಕೇವಲ ಲೇಖಕರ ಅಭ್ಯಾಸಕಾಲದಲ್ಲಿ ಕಂಡದ್ದು. ಅಸಂಖ್ಯಾತ ಓದುಗ ಶಾಸ್ತ್ರ ಹವ್ಯಾಸಿಗಳು ಇದನ್ನು ಪರೀಕ್ಷಿಸಿ ಇದರ ತಥ್ಯವನ್ನು ಕಾಣಲು ಶಕ್ಯ ಎನ್ನುವ ಭರವಸೆಯಿಂದ ಈ ಭಾಗ ಸೇರಿಸಲ್ಪಟ್ಟಿದೆ. ಅಂದರೆ ಇದಕ್ಕೆ ನಾಡೀ ಗ್ರಂಥಗಳಲ್ಲಿಯಾಗಲೀ ಇತರ ಜ್ಯೋತಿಷ್ಯ ಗ್ರಂಥಗಳಲ್ಲಿಯಾಗಲೀ ಆಧಾರ ನಮಗೆ ಕಂಡಿಲ್ಲ. ಇದು ಕೇವಲ ಒಂದು ಪ್ರಯೋಗದಿಂದ ಸಿದ್ಧಪಡಬೇಕಾದ ಅಂಶ.

ಮೂರನೆಯ ಭಾಗದಲ್ಲಿ ವರುಷ ಫಲವಿದೆ. ದಿನಾಂಕದ ಭಾಗದಲ್ಲಿ ಕೇವಲ ಮೂವತ್ತೊಂದು ಸಂಖ್ಯೆಯವರೆಗೆ ಫಲವಿದ್ದು, ಅದರ ಮುಂದಿನ ಅಂಕಗಳಿಗೆ ಫಲ ನೂರರವರೆಗೆ ಈ ಭಾಗದಲ್ಲಿ ವಿತರಣೆಯಿಂದ ವಿಸ್ತಾರವಾಗಿ ಹೇಳಲ್ಪಟ್ಟಿದೆ. ಮೊತ್ತದಲ್ಲಿ ಈ ಭಾಗದಲ್ಲಿ ಯಾವ ಅಂಶವಾಗಲೀ ಸಂಖ್ಯೆಗಳ ಮೂಲತತ್ವದಲ್ಲಿ ಭಿನ್ನ ಇರದು. ಕೆಲವರ ಮತದಂತೆ ಇದು ಮಂದಿಯ ಸಾರ್ವಜನಿಕ ಚಟುವಟಿಕೆಯ ಲಕ್ಷಣವನ್ನು ತೋರಿಸುತ್ತೆ. ಕೆಲವು ಸಲ ಇದು ಅವರು ಮಾಡುವ ಉದ್ಯೋಗದ ಮೇಲೆ ಪ್ರಭಾವವನ್ನೂ ಬೀರುತ್ತದೆ. ಇದು ಸಹೃದಯ ವ್ಯಕ್ತಿ ಪಂಡಿತರಿಗೆ, ಹವ್ಯಾಸೀ ಅಭ್ಯಾಸಿಗಳಿಗೆ ಉಪಯೋಗ ಆದೀತು ಎನ್ನುವ ಭರವಸೆ ಇದೆ.

ಮೂರನೆಯ ಭಾಗದಲ್ಲಿ ಎರಡನೆಯ ಅಂಕದಲ್ಲಿ ದಿನಾಂಕ ಸಂಖ್ಯೆಯ ಆಧಾರದಿಂದ ವ್ಯಕ್ತಿಯ ಜೀವಿತ ಕಾಲದಲ್ಲಿ ನಡೆಯುವ ದಶಾಕ್ರಮವಿದೆ. ಈ ಕ್ರಮ ನಾಡೀ ಶಿವಮಹಾವಾಕ್ಯ ಮತ್ತು ನಂದಿ ನಾಡಿಗಳಲ್ಲಿ ಗಣಪತಿ ಚಕ್ರ ಭಾಗದಲ್ಲಿ ಹೇಳಲ್ಪಟ್ಟಿದೆ. ಇದಲ್ಲದೆ ಬೇರೆ ರೀತಿಯಲ್ಲಿಯೂ ಸಹ ಈ ಕ್ರಮ ಬದಲಾಗಬಹುದು ಎಂದು ಲೇಖಕರ ಅಭಿಪ್ರಾಯ. ಏಕರೂಪತೆಗಾಗಿ ಮತ್ತು ಗಣಪತಿ ಉಪಾಸನೆಯಲ್ಲಿ ಸುಪ್ತವಾಗಿರುವ ಗ್ರಹಗಳ ಮಾಲೆಯ ಕಾರಣ ಈ ಕ್ರಮವನ್ನು ಆ ಗ್ರಂಥಗಳಲ್ಲಿ ಹೇಳಿರಬಹುದು.

ಲೇಖಕರ ಅಭಿಪ್ರಾಯದಲ್ಲಿ ಸಂಖ್ಯಾದಶಾ ಕ್ರಮ ಅಭ್ಯಾಸ ಮಾಡುವ ಜ್ಯೋತಿಷ್ಯ ಸ್ವಂತ ಜಾತಕವಲ್ಲಿ ಗ್ರಹಗಳು ಯಾವ ಕ್ರಮದಲ್ಲಿ ರಾಶಿಗಳಲ್ಲಿವೆಯೋ ಆ ಕ್ರಮ ಅವರಿಗೆ ಫಲಕಥನದಲ್ಲಿ ಸಾಧಿಸಲು ಶಕ್ಯ. ಇದು ಒಂದು ಕ್ರಮ. ಎರಡನೆಯದು ಚಂದ್ರನಿಂದ ಶುರುವಾಗಿ ಚಂದ್ರನಿರುವ ನಕ್ಷತ್ರದ ದಶಾಧಿಪತಿ ಎರಡನೆಯದು ಅವನಿರುವ ನಕ್ಷತ್ರದ ದಶಾಧಿಪತಿಯ ದೆಶೆ ಮೂರನೆಯದು ಹೀಗೆ ಒಂಭತ್ತು ಗ್ರಹಗಳ ದಶಾಕ್ರಮ. ಅಭ್ಯಾಸದ ಕಾಲದಲ್ಲಿ ಜ್ಯೋತಿಷ್ಯರು ಯಾವುದನ್ನು ರೂಢಿಸಿಕೊಂಡು ಬಂದರೆ ಆ ಕ್ರಮ ಅವರಿಗೆ ಸಾಧನೆಯಾಗುತ್ತದೆ. ಕಾರಣ ಅಭ್ಯಾಸ ಸಾಧ್ಯೇ ವಿದ್ಯಾ ಅಂದರು.

ನಾಲ್ಕನೆಯ ಭಾಗ ಬಹಳ ಮುಖ್ಯವಾದ ಭಾಗ. ಇಲ್ಲಿ ಈ ಸಂಖ್ಯೆಗಳನ್ನು ದೈನಂದಿನ ವ್ಯವಹಾರದಲ್ಲಿ ಉಪಯೋಗಿಸುವ ಕ್ರಮವನ್ನು ಹೇಳಿದೆ. ಇರುವ ಅನೇಕಾನೇಕ ಉಪಯೋಗ

ಗಳಲ್ಲಿ ದೈನಂದಿನ ಹೋರಾಕ್ರಮ ಒಂದು. ಆದರೆ ಇಲ್ಲಿ ಹೇಳದೆ ಇರುವ ಅನೇಕ ಕ್ರಮಗಳಿವೆ. ಅದು ವೃತ್ತಿ ಹವ್ಯಾಸಿಗಳ ಮನೋವೃತ್ತಿ. ಕಲ್ಪನೆಯ ಸಾಮರ್ಥ್ಯ. ಅಭಿರುಚಿಗಳನ್ನು ಅನುಸರಿಸಿರುತ್ತದೆ. ಕಾರಣ ಸಂಖ್ಯೆಗಳ ಉಪಯೋಗದಿಂದ ಸೀಮೆ ಆಕಾರದಷ್ಟು ವಿಶಾಲ. ದೈವಿಕ ಸಾಧನೆ ಮತ್ತು ವ್ಯವಹಾರ ಕುಶಲ ಬುದ್ಧಿ ಚಾತುರ್ಯಗಳಿಗೆ ಅನುಗುಣ ಇದರ ಫಲಕಲ್ಪನೆ.

## ಮೊತ್ತದ ಮಾತು

ಗಣಪತಿ ಸಂಖ್ಯಾಶಾಸ್ತ್ರದಲ್ಲಿ ಕೇವಲ ಸಂಖ್ಯೆಗಳು ಮತ್ತು ಅವುಗಳ ಪ್ರಭಾವ. ಜ್ಯೋತಿಷ್ಯದ ಅರಿವು ಗ್ರಹಗಳ ಗುಣಶೀಲಗಳ ಕಲ್ಪನೆ ಇದರ ಸಾಧನೆಗೆ ಬೇಕಾದ ಅಗತ್ಯದ ಅಂಶಗಳು. ಆದರೆ ಜಾತಕ. ಜಾತಕದ ಗ್ರಹಗಳ ಭಾವಫಲಗಳು. ಉಡುದಶಾಕ್ರಮದ ಪ್ರಭಾವ ಇತ್ಯಾದಿಗಳಿಗೆ ಇದರ ಜೊತೆ ಸಮನಡೆ ಸಲ್ಲದು. ಜಾತಕದ ಫಲ ಎಲ್ಲಕ್ಕಿಂತ ಮಿಗಿಲು. ಸಂಖ್ಯಾಶಾಸ್ತ್ರ ಅದಕ್ಕೆ ಸಹಕಾರೀ ಶಾಸ್ತ್ರ. ಜಾತಕ ಹೇಳುವಾಗ ಗ್ರಹಗಳ ಕಾಲ ನಿರ್ಣಯ ಮಾಡುವಾಗ ಸಂಖ್ಯಾ ಶಾಸ್ತ್ರ ಬಳಸಲು ಬಂದೀತು. ಆದರೆ ವಿಲೋಮದಲ್ಲಿ ಸಂಖ್ಯಾ ಶಾಸ್ತ್ರ ಹೇಳುವಾಗ ಜಾತಕದ ಗ್ರಹ. ಉಡುದಶಾಕ್ರಮ ಫಲ ಹೇಳಲು ಬಾರದು. ಈ ಕಾರಣ ಜಾತಕ ಇಲ್ಲದವರಿಗೆ. ಜ್ಯೋತಿಷ್ಯ ಶಾಸ್ತ್ರ ಬಳಸಲು ಬಾರದ ವ್ಯವಹಾರಗಳ ಸನ್ನಿವೇಶಗಳಿಗೆ ಅಥವಾ ಸಂಖ್ಯಾಶಾಸ್ತ್ರ ಒಂದನ್ನೇ ಬಳಸಿಕೊಂಡು ಬರುವ ಅಭ್ಯಾಸೀ ವೃತ್ತಿಯವರಿಗೆ ಇದು ಉತ್ತಮ ಫಲ ಕೊಡುವುದರಲ್ಲಿ ಸಂದೇಹ ಇರದು. ಅಚ್ಚರಿಯ ಸಂಗತಿ ಎಂದರೆ ಕೆಲವು ಸಲ ಜ್ಯೋತಿಷ್ಯ ವಿಭಾಗದಲ್ಲಿ ಕಾಣಬರುವ ಸತ್ಯಾಂಶಗಳಿಗಿಂತಲೂ ಮಿಗಿಲಾಗಿ ಸಂಖ್ಯಾಶಾಸ್ತ್ರದಲ್ಲಿ ಹೆಚ್ಚಿನ ಅಂಶಗಳು ಗೋಚರವಾಗಲು ಶಕ್ಯ ಎನ್ನುವುದು ತುಂಬಾ ಸಮಾಧಾನಕರ ಸಂಗತಿಯಾಗಿದೆ. ಆದರೂ ಭಾರತೀಯ ಗಣಪತಿ ಸಂಖ್ಯಾಶಾಸ್ತ್ರ ಸಾಹಿತ್ಯ ಈಗಲೇ ಪ್ರಜಾವಾಣಿಯವರ ಉತ್ತೇಜನದಿಂದ ಮಂದಿಯ ಮಡಿಲು ಸೇರಿರುವುದು. ಈವರೆಗೆ ಕೇವಲ ವಿದೇಶದ ಸಂಖ್ಯಾಶಾಸ್ತ್ರದ ಗ್ರಂಥಗಳು ಓದುಗರ ಮುಂದಿತ್ತು. ಕನ್ನಡದಲ್ಲಿ ಶುದ್ಧ ಭಾರತೀಯ ಪರಂಪರೆಯ ಸಂಖ್ಯಾಶಾಸ್ತ್ರ ಗ್ರಂಥರೂಪದಲ್ಲಿ ಇರುವುದು ಇದೇ ಮೊದಲು. ಈ ಕಾರಣ ಹವ್ಯಾಸಿಗಳು ಇದನ್ನು ಪರಿಗಣಿಸಿ. ಉಪಯೋಗಿಸಿ ಹೆಚ್ಚು ಹೆಚ್ಚು ಪ್ರಚಾರವಾಗಲು ಸಹಾಯಕರಾಗಬೇಕು. ಆಗ ಅದು ನಮ್ಮ ಸಂಸ್ಕೃತಿಗೆ ನಾವು ಮಾಡುವ ಒಂದು ಅಳಿಲು ಸೇವೆ. ಇದು ಮೊದಲ ಯತ್ನ. ಪಂಡಿತರು ಇದರಿಂದ ಬೇರೆ ಬೇರೆ ಶುದ್ಧೀಕರಣ ಕ್ರಮಗಳನ್ನು ಕೈಗೊಂಡು ಇದರಲ್ಲಿ ಇರಬಹುದಾದ ಪ್ರಮಾದಗಳನ್ನು ಸರಿಪಡಿಸಿ ಸಂಖ್ಯಾಶಾಸ್ತ್ರ ಮುಂದೆ ಬರುವ ಯುವಕರಿಗೆ ಒಂದು ಉಪಯುಕ್ತ ಕೊಡುಗೆಯಾಗಬೇಕು ಎನ್ನುವುದು ಲೇಖಕರ ಒಂದು ಹಿರಿಯಾಸೆ.

# ಮೊದಲ ನುಡಿ

ಹನ್ನೊಂದು ವರ್ಷದ ಗೆಳೆತನ. ಜ್ಯೋತಿಷ್ಯ, ಹಸ್ತಸಾಮುದ್ರಿಕಾ, ಮುಂತಾದವುಗಳಲ್ಲಿ, ವೈಯಕ್ತಿಕವಾಗಿ ನನಗೆ ಅಷ್ಟಾಗಿ ನಂಬಿಕೆ ಇಲ್ಲದಿದ್ದರೂ, ಗೆಳೆಯ ಶ್ರೀ ನಾಗರಾಜ್ ಅವರು ಈ ಶಾಸ್ತ್ರಗಳ ಬಗ್ಗೆ ನಡೆಸಿರುವ ಅಗಾಧ ಅಧ್ಯಯನ, ಮತ್ತು ಅವರಿಗಿರುವ ಅಪಾರ ನಿಷ್ಠೆ ಇವುಗಳನ್ನು ಸಮೀಪದಿಂದ ಕಂಡರಿತ ನಾನು, "ಪ್ರಜಾವಾಣಿ " ಯ ಸಂಪಾದಕನಾಗಿ, ಅವರ ಜ್ಞಾನಭಂಡಾರ ನಮ್ಮ ವಾಚಕ ಕೋಟಿಗೆ ದೊರಕಲೆಂಬ ಉದ್ದೇಶದಿಂದ, ಕಳೆದ ಹತ್ತಾರು ವರ್ಷಗಳಿಂದ "ಜ್ಯೋತಿಷ್ಯ ಶಾಸ್ತ್ರ ಪರಿಚಯ", "ಗಣಪತಿ ಸಂಖ್ಯಾ ಶಾಸ್ತ್ರ" ಗಳನ್ನು, ನಮ್ಮ ಪತ್ರಿಕೆಯಲ್ಲಿ ಪ್ರಕಟಿಸಿದ್ದೇವೆ. ಶ್ರೀ ನಾಗರಾಜ್ ರವರ ನಿತ್ಯ ಭವಿಷ್ಯ ಅಂದಿನಿಂದ ಇಂದಿನವರೆವಿಗೂ ಜನಪ್ರಿಯವಾಗಿದೆ.

ಮೊತ್ತ ಮೊದಲಾಗಿ, ಶ್ರೀ ನಾಗರಾಜರವರು, ಪ್ರಕಟ ಮಾಡಿದ "ಗ್ರಹ ಶೀಲಗಳು" ಗ್ರಂಥಕ್ಕೆ ಮೊದಲ ನುಡಿ ಬರೆದ ನಾನೇ ಈಗ ಪ್ರಕಟವಾಗುತ್ತಿರುವ "ಗಣಪತಿ ಸಂಖ್ಯಾ ಶಾಸ್ತ್ರ" ಬೃಹತ್ ಗ್ರಂಥಕ್ಕೂ ಮುನ್ನುಡಿ ಬರೆಯಲೇಬೇಕೆಂಬ ಒತ್ತಡ ಬಂದು, ಬರೆಯುತ್ತಿದ್ದೇನೆ. ಇವೆರಡು ಗ್ರಂಥ ಪ್ರಕಟಣೆಗಳ ನಡುವೆ ನಮ್ಮ ಬಳಗದ "ಸುಧಾ " ಸಾಪ್ತಾಹಿಕದಲ್ಲಿ ಪ್ರಕಟವಾದ "ಕೈಗೂ ಓದು ಭಾಷೆ " ಮತ್ತು " ಭಾಗ್ಯದ ಲಕ್ಷ್ಮಿ ಬಾರಮ್ಮ " ಎಂಬ ಸಂಗ್ರಹಗಳನ್ನೂ ಶ್ರೀ ನಾಗರಾಜ್ ಹೊರ ತಂದಿದ್ದಾರೆ; ಇವೆಲ್ಲ ಜನಪ್ರಿಯವಾಗಿವೆ. ಇದೀಗ "ಗ್ರಹ ಶೀಲಗಳು" ತಮಿಳಿಗೇ ಭಾಷಾಂತರಗೊಂಡು ಹೊರಬರುವ ಹಾದಿಯಲ್ಲಿದೆ. ಜ್ಯೋತಿಷ್ಯ ವಿಭಾಗದ ಸಾಹಿತ್ಯದಲ್ಲಿ ಆಸಕ್ತಿಯುಳ್ಳ ಮಹಾಜನರಲೆಲ್ಲ "ಗಣಪತಿ ಸಂಖ್ಯಾ ಶಾಸ್ತ್ರ" ಆಸಕ್ತಿ ಕೆರಳಿಸುವುದೆಂಬ ನಂಬಿಕೆ, ಆಸೆ ನನ್ನದು.

ಬೆಂಗಳೂರು
೨೦-೫೦-೧೯೭೪

ಟಿ. ಎಸ್. ರಾಮಚಂದ್ರರಾವ್
ಸಂಪಾದಕರು-ಪ್ರಜಾವಾಣಿ

# ಎರಡನೆಯ ಮುದ್ರಣದ ಮುನ್ನುಡಿ

ಈಗ ಈ ಪುಸ್ತಕಗಳು ಸಂಪೂರ್ಣವಾಗಿ ಮಾರಲ್ಪಟ್ಟು ಕೆಲವು ಹಳೆಯ ಪುಸ್ತಕಗಳ ಭಂಡಾರದಲ್ಲಿ ಹೆಚ್ಚಿನ ಬೆಲೆಗೆ ಕೊಂಡು ತಂದ ನಮ್ಮ ಮಿತ್ರರನೇಕರ ಇಚ್ಛೆಯಂತೆ ಈ ಎರಡನೆಯ ಮುದ್ರಣ ಈಗ ಮಾರುಕಟ್ಟೆಗೆ ಸರಬರಾಜಾಗಿದೆ. ಇಲ್ಲಿ ಇಪ್ಪತ್ತು ವರುಷಗಳ ಹಿಂದೆ ಮೊದಲನೆಯ ಮುದ್ರಣಕಾಲದಲ್ಲಿದ್ದ ಕಾಗದದ ಬೆಲೆ ಮುದ್ರಣದ ಬೆಲೆ ಇತರ ಅಂಶಗಳಿಂದಾಗಿ ಈ ಗ್ರಂಥದ ಬೆಲೆ ಐದರಷ್ಟಾಗಿದೆ. ಈ ಕಾರಣ ಓದುಗರ ಗ್ರಂಥದ ಒಲವಿನ ಬಲ, ಕುತೂಹಲ ಮತ್ತು ಅದರ ಉಪಯೋಗದ ಬಯಕೆಗಳು ಈ ಪುಸ್ತಕ ಕೊಂಡು ತಮ್ಮ ಖಾಸಗಿ ಗ್ರಂಥ ಭಂಡಾರದಲ್ಲಿಡಲು ಮನಸ್ಸಾದರೆ ನಮಗೆ ಸಾಕು. ಇತ್ತೀಚೆಗಂತೂ ಕಾಗದದ ಬೆಲೆ 40 ಶತಾಂಶ ಜಾಸ್ತಿಯಾಗಿ ನಮ್ಮ ಅಂದಾಜಿಗಿಂತ ಮೀರಿದ ಖರ್ಚಾಗಿದೆ. ಈ ಕಾರಣ ಬೆಲೆ ಹೆಚ್ಚಾಗಬೇಕಾದ ಅಗತ್ಯವಿದೆ.

ಈ ಎರಡನೆಯ ಮುದ್ರಣದ ಹೊಣೆ ಹೊತ್ತ ಸನ್‌ಶೈನ್ ಆಫ್‌ಸೆಟ್ ಪ್ರಿಂಟರ್ಸಿನ ಮಾಲೀಕರಾದ ಶ್ರೀ ಎಸ್. ಕುಮಾರರವರಿಗೆ ಧನ್ಯವಾದಗಳು. ದುರ್ಲಭದ ಉತ್ತಮ ದರ್ಜೆಯ ಕಾಗದವನ್ನು ತಂದು ನಮಗೆ ಸಹಾಯ ಮಾಡಿದ ಮಿತ್ರರಾದ ಶ್ರೀ ಹರೀಶ್. ಜನಾಬ್ ಲತೀಫ್ ಖಾನ್‌ರವರು. ಶ್ರೀ ತಿವಾರಿಯವರಿಗೆ ನಾವು ಚಿರಋಣಿಗಳು. ಗ್ರಂಥ ವಿಸ್ತಾರ ಭಯದಿಂದ ಕಾಗದ ಅಭಾವದಿಂದ ಪುಸ್ತಕ ಎಂದಿನಂತೆ ಮುದ್ರಿತವಾಗಿದೆ. ಕರ್ನಾಟಕದ ಮಂದಿ ಮನಸ್ಸು ಮಾಡಿದರೆ ಮುಂದಿನ ಭಾಗ ಪ್ರಕಟವಾಗುವುದು. ಸುಗಮ

ಇತಿ ಲೇಖಕ

ವಿಷಯಸೂಚಿ

ಭಾಗ ೧

## ಭಾಗ ೨



## ಭಾಗ ೩

ಭಾಗ ೪

೧

# ಗಣಪತಿ ಸಂಖ್ಯಾ ಶಾಸ್ತ್ರ

## ಶೂನ್ಯ - ದೇವರು

ಈ ಪ್ರಪಂಚ ದೈವಿಕ ಸೃಷ್ಟಿ. ಇಲ್ಲಿಯ ಜೀವಿಗಳೂ ಅಷ್ಟೇ. ಜೀವ ಇರುವವರೆಗೆ ಜೀವನ. ಈ ಜೀವನ ಆಗುಹೋಗುಗಳ ರಾಶಿ. ಆಗುಹೋಗುಗಳ ಅರಿವೂ ಅಗತ್ಯ. ಈ ಅರಿವಿಗಾಗಿ ಮಾನವನದು ಯತ್ನ. ಅದಕ್ಕೆ ಪೂರಕ ಶಾಸ್ತ್ರಗಳು. ಮಾನವನ ಉನ್ನತಿ ಶಾಸ್ತ್ರದ ಹೊಣೆ. ಲೋಕ ಕಲ್ಯಾಣ ಇದರ ಉದ್ದೇಶ.

ಕಷ್ಟ ಉನ್ನತಿಗೆ ಅಡ್ಡಿ. ಸಹಜ ವ್ಯಾಪಾರಕ್ಕೆ ವಿಘ್ನ. ಇದರ ನಿವಾರಣೆ ಸುಖ. ಸುಖ ಕಷ್ಟದ ನಿವೃತ್ತಿಯ ಭಾವ. ಸುಖಕ್ಕೆ ತನ್ನದೇ ಆದ ನಿಲುವು ಇಲ್ಲ. ಇದು ತನ್ನ ನಿಲುವಿಗೆ ಕಷ್ಟವನ್ನೇ ಅವಲಂಬಿಸುತ್ತೆ. ಈ ಕಾರಣ ಕಷ್ಟವಿಲ್ಲದೆ ಸುಖವಿಲ್ಲ. ಕಷ್ಟ ಇದರ ಉತ್ಪತ್ತಿ. ನಿವಾರಣೆ ಈ ಅರಿವು ಮೂಡಲು ಈ ಶಾಸ್ತ್ರ.

**ಸಾಂಕೇತಿಕ ಭಾಷೆ :**

ಶಾಸ್ತ್ರಗಳ ಭಾಷೆ ಹಲವಾರು. ಗ್ರಹಗಳ ಭಾಷೆ ಜ್ಯೋತಿಷ್ಯ. ಕರ್ಮ ಅದರ ಗುಣ ವಿನಿಮಯ ಭಾಷೆ ಧರ್ಮ ಶಾಸ್ತ್ರ. ಇದರಂತೆಯೇ ಸಂಖ್ಯಾ ಭಾಷೆಯೂ ಒಂದು. ಸಂಖ್ಯೆ ಗ್ರಹಗಳ ಸಾಂಕೇತಿಕ ಭಾಷೆ. ಸಂಖ್ಯೆಗಳ ರೂಪ ರೇಖೆಗಳು ಶಾಸ್ತ್ರ ಭಾಷೆಯಲ್ಲಿಯೇ ಇವೆ.

ಪ್ರಪಂಚದ ಸೃಷ್ಟಿಯ ಮೊದಲು ಏನಿತ್ತು? ಅದೇ ಶೂನ್ಯ. ಪ್ರಪಂಚದ ನಾಶದ ನಂತರ ಏನು ಇರುತ್ತೆ? ಅದೂ ಶೂನ್ಯ. ಪ್ರಪಂಚದ ಜೀವನ ಈ ಎರಡು ಶೂನ್ಯಗಳ ಅಂತರ. ಶೂನ್ಯದ ರೂಪ ಪ್ರಪಂಚದ ರೂಪವೇ ಆಗಿದೆ. ಕಾರಣ ಪ್ರಪಂಚದ ಅಸ್ತಿತ್ವ ಈ ಶೂನ್ಯಗಳ ಅಂತರ. ಪ್ರಪಂಚ ಗೋಳಾಕಾರ. ಈ ಕಾರಣ ಶೂನ್ಯದ ರೂಪೂ ಗೋಳವೇ ಆಗಿದೆ. (0)

ಶೂನ್ಯ, ಸೊನ್ನೆ. ಇದರ ಅರಿವು ಅವ್ಯಕ್ತ. ವಾಸ್ತವಿಕ ರೂಪು ಇಲ್ಲದ್ದು. ಆದರೆ ಅದರ ಗುಣದ ಅರಿವು ಸ್ಪಷ್ಟ. ಅವ್ಯಕ್ತ ಎನ್ನುವುದೇ ಅದರ ಪ್ರಧಾನ ಗುಣ. ಈ ಗುಣದ ಇನ್ನೊಂದು ಅಂಕಿತ ದೇವರು. ಪರಮಾತ್ಮ. ಹಿಂದಿನ ಕಾಲದ ಗಣಿತಜ್ಞರು ಈ ಶೂನ್ಯವನ್ನೇ ದೇವರು ಎಂದು ಪೂಜಿಸುತ್ತಿದ್ದರು. ಆದರೆ ಆಗ ಧರ್ಮಗುರುಗಳಿಗೆ ಇದು ಏನೋ "ಪೈಶಾಚಿಕ" ಎಂದು ಭಯಬಿದ್ದು ಆ ಶೂನ್ಯದ ಆರಾಧಕರ ತಲೆ ತೆಗೆದಿದ್ದರು. ಆದರೆ ಈಗ

ಹಾಗಲ್ಲ. ಪರಮಾತ್ಮನ ಗುಣ ಈ ಶೂನ್ಯದ ಗುಣ ಎರಡೂ ಒಂದೇ. ಇದೇ ತಜ್ಞರ ನಂಬಿಕೆ. ಕಾರಣ, ಶೂನ್ಯದ ಗುಣ ನಿರ್ಣಯ ಶಾಸ್ತ್ರದ ಆಧಾರ ಬಿಂದುವಿನಿಂದ. ಇದು ಗಣಿತ ಭಾಷೆ.

### ಅಂಕಗಣಿತ ಮೊದಲ ಪ್ರಯೋಗ

ಶೂನ್ಯ ಸೊನ್ನೆ. ಇದರ ಬೆಲೆ ಏನು? ಇದರ ಗುಣವೇನು? ಅಂಕಗಣಿತದ ಮೊದಲ ಪ್ರಯೋಗವೇ ಇದು. ಅಂಕಿ ಯಾವುದೇ ಆಗಲಿ ಈ ಸೊನ್ನೆಯಿಂದ ಗುಣಿಸಿ. ಆಗ ಬರುವುದು ಶೂನ್ಯ. ಅಂಕಿಗೆ ತನ್ನ ಗುಣವೇ ಇರದು. ಈ ಸೊನ್ನೆಯ ಗುಣವನ್ನೇ ಹೊಂದುತ್ತೆ. ಸೊನ್ನೆಯ ಮಹತ್ವ ಇದು. ತನ್ನೆಡೆಗೆ ಬಂದರೆ ಅದರ ಗುಣದಲ್ಲಿ ಅಂಕಿಯ ಗುಣ ನಾಶ. ಈ ಮಹತ್ವದ ಗುಣ ದೇವರದು. ಈ ಕಾರಣ ವೇದಾಂತಿಗಳು "ನರನಿಗೆ ನಾರಾಯಣ ಸಿಕ್ಕಿದರೆ ನರನೂ ನಾರಾಯಣನೇ" ಎಂದರು. ಯಾರನ್ನು ಮುಟ್ಟಲಿ ಅವರನ್ನು ತನ್ನಂತೆ ಮಾಡುವ ಶಕ್ತಿ ದೇವರದು. ಗುಣಾಕಾರ ಎಂದರೆ ಗುಣಗಳನ್ನು ಹೊಂದುವಂತೆ ಮಾಡುವುದು.

ಶೂನ್ಯ ಪರಮಾತ್ಮ. ಒಂದು, ಮಾನವನ, ವ್ಯಕ್ತಿ. ಇವನದು ನಿಲುವಿನ ರೂಪ. ಇದರಿಂದ ಈ ಸಂಖ್ಯೆಯ ರೂಪ (೧) ಎಂದಾಯಿತು. ಜೀವ ಈ ಒಂದು. ಪರಮಾತ್ಮ ಈ ಶೂನ್ಯ. ಒಂದು ಹಿಂದುಳಿದು ಶೂನ್ಯಕ್ಕೆ ಮುಂದೆ ಮುಂದೆ ಜಾಗ ಮಾಡಿದರೆ ಆಗ ಒಂದಕ್ಕೆ ಬೆಲೆ. ಒಂದರ ಮುಂದೆ ಒಂದು ಶೂನ್ಯ. ಆಗ ಒಂದರ ಬೆಲೆ ಹತ್ತು. ಎರಡು ಸೊನ್ನೆಗಳಿಂದ ನೂರು. ಹೀಗೆ ಒಂದು ಹಿಂದೆ ಹಿಂದೆ ಹೋಗುತ್ತಾ ಶೂನ್ಯಕ್ಕೆ ಸ್ಥಳ ಹೆಚ್ಚಾದರೆ ಆ ಒಂದರ ಬೆಲೆಯೂ ಏರುತ್ತಾ ಹೋಗುತ್ತೆ. ಉದಾಹರಣೆಗೆ ೧೦,೧೦೦,೧೦೦೦ ಇತ್ಯಾದಿ.

ಇದೇ ಪೂರ್ವದ ಋಷಿಗಳ ಅಭಿಪ್ರಾಯವೂ ಹೌದು. ಯಾರು ದೇವರಿಗೆ ಮಹತ್ವ ಹೆಚ್ಚು ಹೆಚ್ಚು ಕೊಡುತ್ತಾರೆ. ಅವರಿಗೆ ಈ ಲೋಕದಲ್ಲಿ ಮಹತ್ವ ಕೂಡಾ ಏರುತ್ತಾ ಹೋಗುತ್ತದೆ. ಈ ಅಂಕಿಗಳ ಸ್ಥಾನದ ಮಹತ್ವ ಮಹಾವೀರನ ಕೊಡುಗೆ. ಇದರಲ್ಲಿ ಅಡಗಿದ ಅರ್ಥ, ಜೀವ-ಪರಮಾತ್ಮ ಈ ಎರಡೂ ತತ್ವಗಳ ಪರಸ್ಪರ ಸಂಬಂಧ. ಇದು ಪ್ರಾಚೀನ ಧರ್ಮತಜ್ಞರ ದುಡಿಮೆಯ ಫಲ.

ಆದರೆ ಒಂದು ಮುಂದಾಗಿ ಶೂನ್ಯ ಹಿಂದು ಹಿಂದಕ್ಕೆ ಹೋದರೆ ಆಗ ಒಂದರ ಬೆಲೆ ಕಡಿಮೆ ಕಡಿಮೆ. ದೇವರನ್ನು ಹಿಂದು ಹಿಂದಕ್ಕೆ ತಳ್ಳಿದರೆ ಬೆಲೆ ಕಡಿಮೆ ಆಗುವುದು ಒಂದಕ್ಕೆ ಸೊನ್ನೆಗಲ್ಲ. ಉದಾಹರಣೆಗೆ ೧. ೦೧. ೦೦೧. .೦೦೦೧.

### ವಿರೋಧ ಗುಣ

ಒಂದು, ಇದರ ಗುಣ ಶೂನ್ಯದ ವಿರುದ್ಧ. ಶೂನ್ಯ ಯಾರು ಬರಲಿ ತನ್ನಂತೆ ಅದನ್ನು ಮಾಡುತ್ತೆ. ಉದಾಹರಣೆಗೆ ೦×೧ = 0. ೦× ೨ = 0 ಇತ್ಯಾದಿ. ಆದರೆ ಒಂದು ಹಾಗಲ್ಲ. ಯಾರು ಬಂದರೆ ಅದರಂತೆ ಇದು ಆದೀತು! ತನ್ನ ನಿಲುವು. ಅಸ್ತಿತ್ವಗಳನ್ನೇ

ಕಳೆದುಕೊಂಡೀತು. ಉದಾಹರಣೆಗ ೧× ೨ = ೨. ೧ × ೩ = ೩ ಇತ್ಯಾದಿ. ಈ ಕಾರಣ ಒಂದು ಮತ್ತು ಸೊನ್ನೆ, ಈ ಎರಡರ ಗುಣ ಒಂದಕ್ಕೊಂದು ವಿರೋಧ.

ಒಂದು ಜೀವ. ಈ ಮನುಷ್ಯ, ಶೂನ್ಯದೊಡನೆ ಮಾತ್ರ ಇದರ ಗುಣ ಶೂನ್ಯ. ಹಾಗಿಲ್ಲ. ಯಾವದರ ಸಂಗ ಸಿಕ್ಕಿದರೆ ಅದರಂತೆ. ಉಳಿದ ಅಂಕಿಗಳು ಗುಣಮಯ ನಿರ್ದಿಷ್ಟ ಗುಣಗಳಿಂದ ಕೂಡಿವೆ. ಈ ಗುಣಗಳು ವಾಸ್ತವಿಕ. ನಮಗೆ ಕಾಣುವಂತಹುದು. ಇದು ವ್ಯಕ್ತ ಗುಣಗಳು. ಈ ಒಂದು, ಗುಣಗಳಲ್ಲಿ ಬೆರತರೆ ಆ ಗುಣಗಳಲ್ಲಿ ಅದು ಲೀನವಾಗುತ್ತೆ. ಶೂನ್ಯವನ್ನು ತಲುಪದು. ಈ ಗುಣಗಳಿಗೆ ಬೇರೊಂದು ಹೆಸರು ಪ್ರಕೃತಿ. ಮಾಯೆ ಅಂದರು. ಮಾಯೆಯಲ್ಲಿ ಸಿಲುಕಿದರೆ ಪರಮಾತ್ಮ ದೂರ. ಪರಿಣಾಮ ಶೂನ್ಯ ಆಗದು.

ಈ ಅಂಕಿಗಳು ಗುಣಮಯ. ದೇವರು ಶೂನ್ಯ. ಜೀವ ಒಂದು. ಈ ಎರಡರ ಸಂಬಂಧ ಒಂದು, ಸೊನ್ನೆ. ಅದೇ ಹತ್ತು (೧೦) ಈ ಹತ್ತೇ ಅಂಕಿಗಳ ಪರಮಾವಧಿ. ಈ ಕಾರಣ ಅಂಕಿಗಳು ಒಂದರಿಂದ ಹತ್ತರವರೆಗೆ. ಉದಾಹರಣೆಗೆ ೧, ೨, ೩, ೪, ೫, ೬, ೭, ೮, ೯ ನಂತರ ಹತ್ತು, ಒಂದು, ಸೊನ್ನೆ ಎರಡರ ಮಧ್ಯೆ ಈ ಅಂಕಿಗಳು. ಜೀವನಿಗೆ ಪರಮಾತ್ಮನನ್ನು ಮುಟ್ಟಲು ಮಧ್ಯೆ ಬರುವ ಮಾಯೆಯ ಗುಣ ವಿಕಾರಗಳು.

ಈ ಅಂಕಿಗಳು ವ್ಯಕ್ತ. ಅದರ ಗುಣಗಳೂ ವ್ಯಕ್ತ. ಇದರ ನಿರ್ಣಯ ಇತರ ತತ್ವಗಳಂತೆ. ಜ್ಯೋತಿಷ್ಯದ ಗ್ರಹಗಳಂತೆ. ಒಂದೊಂದು ಅಂಕಿಗೆ ಒಂದೊಂದು ಗುಣ. ಒಂದೊಂದು ಗ್ರಹ. ಆ ಗ್ರಹದ ಫಲ, ಪ್ರಭಾವ, ಪರಿಣಾಮ ಗ್ರಹಶಾಸ್ತ್ರದಂತೆ.

ಸಂಖ್ಯೆ ಒಂದು, ಬೇರೆ ಸಂಬಂಧ ಇಲ್ಲ. ಆಗ ಇದು ನಿರ್ಗುಣ. ಯಾವ ಚೇಷ್ಟೆಯೂ ಇರದು. ಕೇವಲ ಜಡತ್ವ, ಭ್ರಮೆ, ಕತ್ತಲು, ಇದೇ ತಮಸ್ಸು. ಅದರೆ ಈ ಸ್ಥಿತಿ ಕೇವಲ ತತ್ಕಾಲಿಕ. ಕಾರಣ ಇತರ ಸಂಖ್ಯೆಗಳು ಸುಮ್ಮನೆ ಬಿಡವು. ಈ ಒಂದೂ ಸಹ ಸುಮ್ಮನೆ ಇರದು. ಒಂದು ಎನ್ನುವುದಕ್ಕೆ ತನ್ನ ನಿಲುವಿನ ಅರಿವಿದೆ.

ಈ ಅರಿವೇ "ಅಹಂ ತತ್ವ". ಈ ನಿಲುವು ಶಾಶ್ವತ ಎನ್ನುವ ಭಾವನೆ ಒಂದು ಭ್ರಮೆ. ಒಂದು ಇಂದಿಲ್ಲ ನಾಳೆ ಶೂನ್ಯ ಆಗಲೇ ಬೇಕು. ಈ ಒಂದರ ನಿಲುವು ಎಂದಿದ್ದರೂ ನಾಶವೇ! ಈ ಕಾರಣ "ಜಾತಸ್ಯ ಮರಣಂ ಧ್ರುವಂ" ಎಂದರು.

ಈ ತಾತ್ಕಾಲಿಕ ಜಡತ್ವ ಈ ಒಂದರ ಗುಣ. ಈ ಜಡತ್ವ ಶನಿಯಿಂದ, ಶನಿಯ ಗುಣ ತಮಸ್ಸು, ಇದು ಕತ್ತಲು. ಈ ಕತ್ತಲನ್ನು ಕತ್ತರಿಸಲು ಸೂರ ಚಂದ್ರರು ಬೆಳಕಿನ ಕಣ್ಣುಗಳಾದರು. ತಮಸ್ಸನ್ನು ಸುಡಲು ಅಗ್ನಿಯೇ ಮೂರನೇ ಕಣ್ಣಾಯಿತು. ಸ್ವಚ್ಛ ತೊಳೆಯಲು ಗಂಗೆ ಬಂದಳು. ಈ ಸಲಕರಣೆಗಳು ಈಶ್ವರನಿಗೆ ಅವ್ಯಕ್ತನಿಂದ ದತ್ತ. ಈ ಕಾರಣ ಈ ತಮಸ್ಸಿಗೆ ಅಭಿಮಾನಿ ಈಶ್ವರನು. ಅವನು ತ್ರಿನೇತ್ರನು.

# ಎರಡು - ವಿಜ್ಞಾನ ಸಂಖ್ಯೆ ಬುಧ

ಒಂದು ಶೂನ್ಯದಿಂದ ಬಂದ ಆಕಾರ. ಇದು ಜಡತ್ವ ಸಂಖ್ಯೆ, ಕಾರಣ ಚೇಷ್ಟೆ ಇಲ್ಲ. ಇದು ನಿದ್ರಾವಸ್ಥೆ. ಒಂದು ಒಂಟಿ. ಒಂಟಿತನ ಎಲ್ಲರಿಗೂ ಬೇಸರ.' ಈ ಕಾರಣದಿಂದ ಒಂದು ಇನ್ನೊಂದನ್ನು ಹುಡುಕುತ್ತೆ. ಆಗ ಇದಕ್ಕೆ ಕ್ರಿಯೆ. ಒಂದು ಋಣ. ಒಂದು ಧನ (positive and Negative). ಒಂದನ್ನೊಂದು ಸೇರಿ ಎರಡು ಆಯಿತು.

ಎರಡು ಇದು ಜ್ಞಾನ ಸಂಖ್ಯೆ. ಜಗತ್ತಿನ ವಿಶಿಷ್ಟ ವ್ಯಾಪಾರಗಳೂ ಈ ಎರಡರಲ್ಲಿದೆ. ಜ್ಞಾನ-ಅಜ್ಞಾನ, ಬೆಳಕು-ಕತ್ತಲೆ, ಗಂಡು - ಹೆಣ್ಣು, ಜನ್ಮ-ನಾಶ ಇತ್ಯಾದಿ. ಜಡಕ್ಕೆ ಚೇತನಾ ಶಕ್ತಿ ಎರಡನೆಯದು. ಪ್ರಪಂಚದ ಆಗು-ಹೋಗುಗಳು ಎಲ್ಲಕ್ಕೂ ಈ ಎರಡರ ಜ್ಞಾನ ಅಗತ್ಯ. ಎರಡನ್ನೂ ತಿಳಿದವನನ್ನು ಸರ್ವಜ್ಞ ಎಂದರು.

## ಕರ್ಮ - ಪ್ರತಿಫಲ

ಕರ್ಮ ಇದಕ್ಕೆ ಸಾಧನೆ ಎರಡನೆಯದು. ಕರ್ಮ ಒಂದು. ಅದರ ಪ್ರತಿಫಲ ಎರಡನೆಯದು. ಒಂದೇ ಇದೆ. ಆಗ ಆ ಒಂದು ಏನೂ ಮಾಡದು! ಮಂಕು ಮಂಕಾಗಿ ಕೂತೀತು. ಆದರೆ ಇನ್ನೊಂದು ಸೇರಿತು. ಆಗ ಬುದ್ಧಿ ಕೆಲಸ ಮಾಡುತ್ತೆ. ಯಾರು? ಏನು? ಏಕೆ? ಈ ವಿಚಾರದ ಹೊಳೆ ಹರಿದೀತು. ಇದರಿಂದ ಕರ್ಮ ಪ್ರವೃತ್ತಿ. ಜಡತ್ವದಲ್ಲಿ ಚೇತನವನ್ನು ಮೂಡಿಸುವ ಪರಮಾತ್ಮನ ಶಕ್ತಿ ಈ ಎರಡು. ಇದನ್ನು "ಚೈತ್ರ" ಎಂದರು. ಇದರಿಂದ ಜಡತ್ವ ಪರಿಹಾರ, ಬುದ್ಧಿಯ ಉದಯ. ಜಾಗೃತಿಯ ಸಂಕೇತ. ಬುದ್ಧಿಯ ಕಾರಕ ಬುಧ. ಈ ಎರಡನೆಯ ಶಕ್ತಿ. ಎಲ್ಲದರಲ್ಲಿ ಎರಡನೆಯವರು ಈ ಬುಧ. ಹೃದಯದಲ್ಲಿ ಮೂಡಿ ಬರುವ ವಿಶಿಷ್ಟ ಭಾವನಾಲಹರಿಗಳಿಗೂ ಈ ಬುಧನೇ ಕಾರಕನು.

ಈ ಕಾರಣ (೨) ಸಂಖ್ಯೆಗೆ ಬುಧನು ಅಧಿಪತಿ. ಬ್ರಹ್ಮ, ವಿಷ್ಣು, ಹರ ಇವರಲ್ಲಿ ಎರಡನೆಯವನು ಶ್ರೀಹರಿ. ಯಾವುದೇ ಒಂದನ್ನು ಎರಡು ಭಾಗ ಮಾಡಿದರೆ ಮಧ್ಯೆ ಬರುವ ನೇಟನು ಈ (೨) ಸಂಖ್ಯೆಯವನು. ಎಲ್ಲಾ ಅಂಕಿಗಳ ಮಧ್ಯ ಇರುವ ಅಂಕಿಯೂ ಈ ಬುಧನೇ! ಎರಡು ಭಾಗಗಳಲ್ಲಿ ಎರಡನೆಯದು ಈ ಬುಧನ ಗುಣ. (latter half)

# (ಎರಡು) - ಗುಣಶೀಲಗಳು

ಮಕ್ಕಳಲ್ಲಿ ಎರಡನೆಯ ಗರ್ಭ ಈ ಬುಧನು. ಗಂಡಸರಲ್ಲಿ ಎರಡನೆಯವನು, ಹೆಂಗಸರಲ್ಲಿ ಎರಡನೆಯವಳು ಈ ಬುಧನ ವರ್ಗಕ್ಕೆ ಸೇರಿದವರು. ಎರಡು ಎಲ್ಲಿ ಬರಲಿ ಅವನೇ ಈ ಬುಧ. ನಿಮಗೆ ಎರಡನೆಯವನು ಸ್ನೇಹಿತನು ಇತ್ಯಾದಿ.

ಎರಡು ವಿಜ್ಞಾನ ಸಂಖ್ಯೆ. ಬುದ್ದಿಯ ಉದಯದ ಸಂಖ್ಯೆ. ಈ ಕಾರಣ ಯಾವುದೇ ತಿಂಗಳಿನಲ್ಲಿ ಎರಡನೆಯ ತಾರೀಖು ಜನಿಸಿದರೆ ಅವರು ಬುದ್ಧಿವಂತರು. ಉಪದೇಶಕರು. ಜಡತ್ವವನ್ನು ಪರಿಹಾರ ಮಾಡಲು ಇವರ ದುಡಿಮೆ. ಮೇಧಾವಂತರು ಈ ತಾರೀಖಿನಲ್ಲಿ ಜನಿಸಿಯಾರು! ಉದಾಹರಣೆಗೆ, ಮಹಾತ್ಮಾ ಗಾಂಧಿ, ಲಾಲ್ ಬಹದ್ದೂರ್ ಶಾಸ್ತ್ರಿ ಇವರ ಜನ್ಮದಿನಾಂಕ ಈ ಎರಡು.

## ಅಧ್ಯಯನ ಶೀಲರು

ಈ ಜನಗಳು ಸಾಧಾರಣವಾಗಿ ಅಧ್ಯಯನ ಶೀಲರು. ಭಾಷಾ ಪ್ರವೀಣರು. ಉತ್ತಮ ಲೇಖಕರು. ಮಾತಿಗಿಂತ ಮಿಗಿಲು ಇವರ ಬರಹ. ಇವರಿಗೆ ಕೇವಲ ಎರಡನೆಯ ಯೋಗ, ಈ ಕಾರಣ ಆದರ್ಶದ ಅನುಗಾಮಿಗಳು. ಹಾಗಿಲ್ಲ ಆದರ್ಶ ವ್ಯಕ್ತಿಯ ಹಿಂಬಾಲಕರು. ಮೇಲು ಪಂಕ್ತಿಯನ್ನು ತಪ್ಪದೆ ನಡೆಸುವವರು. ಇವರು ಖಚಿತ ಜ್ಞಾನ ಪ್ರಿಯರು. ಇದಕ್ಕೆ ಸರಿಯಾಗಿ ಇವರಿಗೆ ಜೀವನದ ಎರಡನೆಯ ಭಾಗ ಅತ್ಯಂತ ಯಶಸ್ಸುದಾಯಕ. ಎರಡನೆಯವರ ಅಗತ್ಯ ಇದ್ದೇ ಇದೆ. ಈ ಕಾರಣ ಇವರು ಯಾರನ್ನೂ ಕಳೆದುಕೊಳ್ಳು ವವರಲ್ಲ. ಸ್ನೇಹ ಇವರಿಗೆ ಪ್ರಿಯ. ಎರಡನೆಯವರ ಹಿತಚಿಂತನೆ ಇವರ ಗುರಿ.

ಎರಡನೆಯ ಸ್ಥಾನವಾದ ಸೆಕ್ರೆಟರಿ, ಮಂತ್ರಿತ್ವ, ಉಪದೇಶಕರು, ಬುದ್ಧಿ ಜೀವಿಗಳ ಉದ್ಯಮ ಈ ಸಂಖ್ಯೆಯ ಕರ್ಮ. ಈ ಎರಡರ ಕಾರಣ, ಜೀವನದ ಉತ್ತರಾರ್ಧ, ನಲ್ವತ್ತು ವರ್ಷಗಳ ನಂತರ ಇವರಿಗೆ ಅಭ್ಯುದಯ, ರಾಜಯೋಗ.

ಎರಡನೆಯ ತಾರೀಖು ಜನಿಸಿದವರಿಗೆ ಜನನ ಕಾಲವಲ್ಲಿ ಬುಧ ಬಲಹೀನ. ಆಗ ಈ ಬುದ್ದಿಯ ನ್ಯೂನತೆ. ವಿದ್ಯೆಗೂ ಕಂಟಕ. ಇದಕ್ಕೆ ಪರಿಹಾರ ಅಭಿಮಾನಿ ದೇವತೆ ಶ್ರೀಹರಿಯ ಉಪಾಸನೆ.

# ಮೂರು - ಅಗ್ನಿ ಪ್ರಭಾವ

ಒಂದೇ ಇದೆ. ಯಾವ ಕ್ರಿಯೆಯೂ ಇರದು. ಇದು ಜಡತ್ವ. ಶನಿಯ ಪ್ರಭಾವ. ಆದರೆ ಎರಡು ಸೇರಿತು. ಆಗ ಪರಸ್ಪರ ಪ್ರತಿಕ್ರಿಯೆ. ಇದರಿಂದ ಮೂರನೆಯದು ಉತ್ಪತ್ತಿ. ಎರಡು ವಸ್ತುಗಳ ಪರಸ್ಪರ ಘರ್ಷಣೆ. ತಿಕ್ಕಾಟ. ಇದರ ಫಲ ಅಗ್ನಿ. ಹೊಗೆಯಿಂದ ಕೂಡಿದ ಅಗ್ನಿ.

ಪುರುಷ ಪ್ರಕೃತಿ. ಈರ್ವರ ಪ್ರತಿಕ್ರಿಯೆ ಶಕ್ತಿ ಉದಯ. ಗಂಡು ಹೆಣ್ಣು ಎರಡರ ಪ್ರತಿಕ್ರಿಯೆ ಕಾಮ. ಈ ರೀತಿ ಈ (೩) ಮೂರು ಸಂಖ್ಯೆಗೆ "ಅಗ್ನಿ" ಅಧಿಪತಿ. ಈ ಕಾರಣ ಅಗ್ನಿಯೂ ಮೂರು. "ಅಗ್ನಿ ಸ್ತ್ರಯೀ ಮಯಃ" ಎಂದರು.

ಊರ್ವಶೀ ಪ್ರಾಪ್ತಿಗಾಗಿ ಯಜ್ಞ ಮಾಡಲು ಪುರೂರವನಿಗೆ ಗಂಧರ್ವರು ಅಗ್ನಿಯನ್ನು ಕೊಟ್ಟರು. ಆದರೆ ಅಶ್ವತ್ಥ ಬುಡದಲ್ಲಿ ಅದು ಲೀನವಾಯಿತು. ಆಗ ಆ ಮರದ ಎರಡು ತುಂಡುಗಳನ್ನು ಊರ್ವಶೀ ಮಂತ್ರ ಪೂರ್ವಕ ಕಡೆಯಲು ಈ ಮೂರು ವಿಧದ ಅಗ್ನಿಗಳು ಉತ್ಪತ್ತಿ ಆದುವು. "ತಸ್ಯ ನಿರ್ಮಂಥನಾತ್ ಜಾತೋಜಾತವೇದಾ ವಿಭಾವಸುಃ। ತ್ರಯ್ಯಾ ಸವಿದ್ಯಯಾ ರಾಜ್ಞಾ ಪುತ್ರತ್ವೇ ಕಲ್ಪಿತ ಸ್ತ್ರಿವೃತ್॥" ಎಂದರು.

ಜಡತ್ವದ ಮೇಲಿನ ಕ್ರಿಯೆಯಿಂದ ಇದು ಜ್ವಾಲೆಯ ಅಗ್ನಿಯಲ್ಲ. ಇದು ಹೊಗೆಯಿಂದ ಕೂಡಿದ್ದು. ಜಡತ್ವದ ದೋಷದಿಂದ ಕೂಡಿದ್ದು. ಈ ಕಾರಣ ಶಕ್ತಿಯೂ ಸಹ ತ್ರಿಮುಖಳಾಗಿ ಇದನ್ನು ಎದುರಿಸಿದಳು. ಈ ಮೂರು ರೂಪಗಳೇ ಮಹಾಕಾಳಿ, ಮಹಾಲಕ್ಷ್ಮಿ, ಮಹಾ ಸರಸ್ವತಿ. ಈ ಕಾರಣ ಈ (೩) ಸಂಖ್ಯೆಗೆ ಇವಳು ಅಧಿದೇವತೆಯಾದಳು. ಮೂರನೆಯ ಕಣ್ಣೂ ಸಹ ಅಗ್ನಿಯೇ ಆಯಿತು. ಸಂಧ್ಯಾವಂದನೆಯಲ್ಲಿಯೂ ತಮಸ್ಸಿನ ರಾತ್ರಿಗೆ ಅಗ್ನಿಯೇ ದೇವತೆಯಾದನು.

## ಕುಜ ಶನಿ ಪ್ರಭಾವ

ಒಂದು ಜಡತ್ವ. ಎರಡರ ಪರಸ್ಪರ ಕ್ರಿಯೆ ಅಗ್ನಿ. ಈ ಅಗ್ನಿಗೆ ಕುಜ ಜಡತ್ವಕ್ಕೆ ಶನಿ. ಈ ಕಾರಣ ಈ (೩) ಮೂರು ಸಂಖ್ಯೆಗೆ ಕುಜ-ಶನಿಗಳ ಯೋಗವಾಯಿತು. ಇದು ಒಂದು ನಮೂನೆ ಕುಜ ದೋಷದ ಸಂಖ್ಯೆ. ಹೊಗೆಯೇ ಅಗ್ನಿಯ ಈ ದೋಷ.

ಗಂಡು ಹೆಣ್ಣು ಎರಡರ ಪ್ರತಿಕ್ರಿಯೆ ಕಾಮ. ಈ ಸಂಖ್ಯೆಯ ಗುಣ ಕಾಮ. ಕುಜನ ದೋಷವೂ ಕಾಮವೇ ಸರಿ. ಇದರಿಂದ ವೀರ್ಯ ಹಾನಿ. ಪ್ರತಿಫಲವಿಲ್ಲದ ವೀರ್ಯ ಹಾನಿ. ಇದರಿಂದ ಪೋಷಕ ತತ್ವಕ್ಕೆ ಹಾನಿ. ಪೋಷಕ ತತ್ವ ಆಹಾರ. ಶನಿಯ ಕಾರಣ ಈ ಆಹಾರದ

ಅಭಾವ. ಇದು ದರಿದ್ರ ಲಕ್ಷಣ. ಈ ಆಹಾರಕ್ಕಾಗಿಯೇ ಭಿಕ್ಷೆ. ಈ ಭಿಕ್ಷಾಟನೆಗೂ ಈ (೩) ಸಂಖ್ಯೆಯೇ ಕಾರಣ. ಇದು ಕುಜ ದೋಷದ ಒಂದು ರೂಪ.

ಈ ಮೂರು ಸಂಖ್ಯೆಗೆ ಕುಜನ ಕಾರಕತ್ವಗಳ ಅಭಾವ. ಮಂಗಳನ ದೋಷದಿಂದ ಈ ಸಂಖ್ಯೆ ಅಮಂಗಳ. ಮಂಗಳ ಕಾರ್ಯಗಳನ್ನು ಈ ಸಂಖ್ಯೆಯಲ್ಲಿ ಮಾಡುವುದಿಲ್ಲ. ಮೂರನೆಯ ತಿಂಗಳಾದ ಜ್ಯೇಷ್ಠ ಮಾಸದಲ್ಲಿ ಶುಭ ಕಾರ್ಯ ನಡೆಸರು. "ತ್ರಿಜ್ಯೇಷ್ಠಂ ವರ್ಜ್ಯಂ" ಎಂದರು. ಮೂರು ಬ್ರಹ್ಮಚಾರಿಗಳು ಸಂಸಾರದಲ್ಲಿ ಕೂಡದು ಎಂದರು. ಈ ರೀತಿ ಮೂರು ಎಲ್ಲೆಡೆ ಬೇಡ ಎಂದರು.

ಈ ಮೂರು ಸಂಖ್ಯೆಯ ದೋಷ ನಿವಾರಣೆಗಾಗಿ ದೇವರಿಗೆ ಈ ಸ್ಥಾನ ಮೀಸಲು. ಮೊದಲು ಗಣಪತಿ. ಎರಡು ಗುರು. ಮೂರು ದೇವರ ಸ್ಥಾನ ಇದು ಆರಾಧನೆ ಕ್ರಮ. ಕನಿಷ್ಠ ಮೂರು ಪ್ರದಕ್ಷಿಣೆಗಳನ್ನಾದರೂ ಮಾಡಬೇಕು ಎಂದರು.

ಕುಜ ದಕ್ಷಿಣ ದಿಕ್ಕಿಗೆ ಅಧಿಪತಿ. ಇದರ ದೋಷ ನಿವಾರಣೆಗಾಗಿ ದೇವತಾ ಬಿಂಬವನ್ನು ದಕ್ಷಿಣಕ್ಕೆ (ಬಲಕ್ಕೆ) ಬಿಟ್ಟುಕೊಂಡು ಸುತ್ತುವುದಕ್ಕೆ " ಪ್ರದಕ್ಷಿಣೆ" ಎಂದರು. ಈ ದೋಷ ಹರಣಕ್ಕೆ ಬ್ರಹ್ಮ ತತ್ವವೂ ಮೂರು ರೂಪಗಳನ್ನು ಹೊಂದಿತು. ಬ್ರಹ್ಮ, ವಿಷ್ಣು, ಶಿವ ಎಂಬುವೇ ಈ ರೂಪಗಳು.

## ಜೀವಿತದಲ್ಲಿ ಪ್ರಭಾವ

ಸಂಖ್ಯೆ ಮೂರು. ಇದರ ಪ್ರಭಾವ ಜೀವಿತದಲ್ಲಿಯೂ ಕಾಣುತ್ತೆ. ಇದು ಮೂರನೆಯ ಗರ್ಭದಲ್ಲಿ ಜನಿಸಿದವರಿಗೆ ಸರಿ. ಮೂರನೆಯ ತಾರೀಖು ಜನಿಸಿದವರಿಗೂ ಸರಿ ಆದೀತು. ಮೂರನೆಯ ಗರ್ಭ ಜನನಕ್ಕೆ ಈ ಕುಜ ಶನಿ ಯೋಗ. ಇವರಲ್ಲಿ ಕುಜದೋಷದ ಲಕ್ಷಣಗಳು ಎದ್ದು ಕಾಣುತ್ತೆ.

ಮೂರನೆಯ ಗರ್ಭ ಗಂಡು. ಆಗ ಆ ಮಗುವಿಗೆ ಬಾಲ್ಯದಲ್ಲಿ ಕಷ್ಟ. ಕುಜದೋಷದಿಂದ ಮುಂದೆ ಬರುವುದು ಕಷ್ಟ. ಜೀವಿತದ ಒಂದೊಂದು ಘಟ್ಟವೂ ತೀವ್ರ ಸಾಧನೆಯ ಪ್ರತಿಫಲ. ಆಗಾಗ ಹಲ್ಲು ನೋವು. ಹೊಟ್ಟೆ ನೋವು. ಇವರಿಗೆ ಸಹಜ. ಎಷ್ಟು ಸಂಪಾದನೆ ಮಾಡಿದರೂ ಖರ್ಚು. ಮದುವೆಯ ನಂತರ ಮೊದಲು ಕಷ್ಟ. ಯತಿಗಳ ಸೇವೆಯಿಂದ ಮೂರು ವರ್ಷಗಳ ನಂತರ ಸುಖ ಪ್ರಾಪ್ತಿ. ಕುಜ-ಶನಿಗಳ ಉದ್ಯಮದಿಂದ. ಯಂತ್ರಾಗಾರ ಗಳಲ್ಲಿ ಇವರಿಗೆ ಜಯವಿದೆ. ಗಂಡು ಮಕ್ಕಳಲ್ಲಿ ಮೂರನೆಯವನಿಗೆ ಅರಿಷ್ಟ ತೀವ್ರ. ಮದುವೆ ಯಿಂದ ಸುಖ ಇರದು. ಇಂಜಿನಿಯರಿಂಗ್ ಉದ್ಯಮದಿಂದ. ಯಂತ್ರಗಳ ದುಡಿಮೆಯಿಂದ ಜೀವನ. ಪರಜನಗಳಲ್ಲಿ ಪರ ಊರಿನಲ್ಲಿ ಇವನಿಗೆ ಸುಖ. ರಕ್ತ ಬಂಧುಗಳಿಂದ ಅನುಕೂಲ ಇರದು. ಹುಟ್ಟಿದ ಪರಿಸರ. ಊರು ಯಾವುದೂ ಆಗದು.

ಇವರು ಮೊದಮೊದಲು ಕೃಶ ದೇಹಿಗಳು. ಆದರೆ. ಉತ್ತರಾರ್ಧ ಸ್ಥೂಲಕಾಯ ಮೂಡೀತು. ಆಗ ಇವರಿಗೆ ಉಷ್ಣವಾತದಿಂದ ಪೀಡೆ. ಈ ಜನಗಳಿಗೆ ವಾಹನಗಳಿಂದ ಸುಖವಿದೆ. ಯೋಗವೂ ಇದೆ. ಅದಿಲ್ಲ. ಅವಯೋಗ ನಡೆದೀತು. ಇವರು ಸೋದರ

ಪ್ರೇಮಿಗಳು, ದಾಕ್ಷಿಣ್ಯಪರರು. ಆದರೆ, ಇವರಿಗೆ ಯಾರಿಂದಲೂ ಸಹಾಯ ಆಗದು. ಇದು ವಿಧಿಯ ವಿಕಟ ಹಾಸ್ಯ. ಈ ಜನಗಳಿಗೆ ಮಹಾರಾಷ್ಟ್ರ ಇಲ್ಲ ತಮಿಳುನಾಡಿನಲ್ಲಿ ಭಾಗ್ಯವಿದೆ. ಜೀವಿತದ ಮಧ್ಯೆ ಆಕಸ್ಮಿಕ ಅಪಾಯವೂ ಇದೆ. ಕೈಕಾಲಿಗೆ ಪೆಟ್ಟು ಆಗುವ ಸಂಭವವೂ ಇದೆ. ಇವರಿಂದ ಮಂಗಳ ಕಾರ್ಯಗಳು ಜರುಗುವುದು ಕಷ್ಟ. ದೇವೀ ಆರಾಧನೆ ಇವರಿಗೆ ಇಷ್ಟ. ಹಣಕ್ಕಿಂತ ಅನ್ನದಾನ ಶ್ರೇಷ್ಠ ಎಂದು ಇವರ ಮತ.

## ಸ್ತ್ರೀಯರಿಗೆ ಕಷ್ಟ

ಮೂರು ಸಂಖ್ಯೆ ಸ್ತ್ರೀಯರಿಗೆ ಅಷ್ಟು ಒಳಿತಲ್ಲ. ಒಟ್ಟು ಮಕ್ಕಳಲ್ಲಿ ಮೂರನೆಯ ಗರ್ಭ ಹೆಣ್ಣು. ಆಗ ಅದಕ್ಕೆ ಕುಜನಿಂದ ದೋಷ. ಮಂಗಳ ಕಾರ್ಯ ಆಗುವುದು ತಡ. ಹೆಣ್ಣು ಮಕ್ಕಳಲ್ಲಿ ಮೂರನೆಯದು ಇಲ್ಲಿ ಆಕೆಗೆ ಆರೋಗ್ಯ ಹಾನಿ. ಈ ಪರಿಣಾಮ ಋತುಕಾಲದ ದೋಷ. ಇದರಿಂದ ಅನೇಕರಿಗೆ ಋತುಕಾಲದಲ್ಲಿ ತೀವ್ರ ಹೊಟ್ಟೆ ನೋವು. ಹಲವರಿಗೆ ತಂಗಿಯ ಯೋಗದಿಂದ ಅಕ್ಕನಿಗೆ ಮದುವೆ ಆಗುವುದು ಕಷ್ಟ.

"ಪ್ರಭವ" ವರ್ಷದಿಂದ ಮೂರನೆಯದಾದ ಶುಕ್ಲ ವರ್ಷದಲ್ಲಿ ಜನಿಸಿದ ಸ್ತ್ರೀಯರಿಗೆ ವಿವಾಹ ನಿಧಾನ ಆದೀತು. ಮೂರನೆಯದು ಶುಕ್ಲ ವರ್ಷವಾಗಿ, ಮೂರನೆಯ ಗರ್ಭವಾಗಿ, ಹಾಗಿಲ್ಲ ಮೂರನೆಯ ಮಗಳಾದರೆ ಇನ್ನೂ ಸರಿ. ವಯಸ್ಸಿನಲ್ಲಿ ಇಷ್ಟದಂತೆ ಮದುವೆ ಆಗದು. ನಿರಾಸೆಯಾಗಿ ಕೊನೆಗೆ ಸಿಕ್ಕ ವರನಿಗೆ, ಮದುವೆ ಆದೀತು. ಈ ಸಂಖ್ಯೆಯ ಅರಿಷ್ಟ ಕೇವಲ ಋತು ದೋಷಕ್ಕೆ ಸಂಬಂಧಿಸಿದ ಯೋಗ. ಇದರಿಂದ ಕೆಲವರಿಗೆ ಉದರವಾಯು ರೋಗವೂ ಸಹಜ ಬಳುವಳಿ.

ಆದರೆ ಈ ಜನರು ಉತ್ತಮ ಪಾಕತಜ್ಞರು. ಆದರೆ, ತಾವೇ ಮಾಡರು. ಮಾಡಿದರೆ "ಶಹಭಾಷ್" ಎಂದಾರು. ಈ ಹೆಣ್ಣುಗಳು ಸ್ವಭಾವತಃ ಹಠದವರು. ಆದರೆ, ಇವರಿಗೆ ಜಯ ಸಿಗುವುದು ಕಷ್ಟ, ಸೋತರೂ ಪಟ್ಟು ಬಿಡರು. ಮೂರನೆಯ ಮಗ ವರನಾದರೆ ಈಕೆಗೆ ಇನ್ನೂ ಕಷ್ಟ. ಮನೆ ಬಿಟ್ಟು ಒಂಟಿ ಸಂಸಾರ ಮಾಡ ಬೇಕಾದೀತು. ಹಾಗಿಲ್ಲ ದೋಷವೂ ಕಡಿಮೆ. ಈ ಜನಗಳು ಸಾಧಾರಣ ದೇವೀ ಕ್ಷೇತ್ರಗಳಲ್ಲಿ ಹುಟ್ಟಿದವರು. ದೇವೀ ಕ್ಷೇತ್ರದಲ್ಲಿ ಭಾಗ್ಯವನ್ನು ಹೊಂದುವ ಜನ. ಇವರು ಹೊಟ್ಟೆ ತುಂಬಾ ತಿನ್ನರು. ಆದರೆ ತಿನ್ನಿಸದೇ ಬಿಡರು. ಆದರೆ ಕಾಸುಕೊಡರು.

ದಾಂಪತ್ಯದಲ್ಲಿ ಇವರಿಗೆ ಜಗಳವೇ ಪ್ರೇಮ. ಗಂಡನನ್ನು ಕೈಯಲ್ಲಿ ಆಡಿಸುವ ಹಂಬಲ ಬೇರೆ. ಆದರೆ ಪತಿಭಕ್ತಿ, ಪತಿಸೇವಾಪರರು. ಸಾಧಾರಣ ೩, ೩೦, ವರ್ಷಗಳ ನಂತರ ಇವರಿಗೆ ಸುಖಯೋಗ ನಡೆಯುತ್ತೆ.

# ದೋಷ ಪರಿಹಾರ

"ಮುಟ್ಟಿದ್ದಕ್ಕೆ ಮೂರು ಸಲ" ಈ ಗಾದೆ ಇದೆ. ಮೂರನೆಯ ಸಲ ಆದರೆ ಆದಹಾಗೆ ಇಲ್ಲ, ಇಲ್ಲ. ಇಲ್ಲಿ ಮೂರು ವಿಘ್ನ ಸಂಖ್ಯೆ. ಈ ಸಂಖ್ಯೆ ಜೀವನದಲ್ಲಿ ಸೋಲನ್ನೇ ತೋರಿಸುತ್ತೆ. "ಈಸಬೇಕು, ಇದ್ದು ಜಯಿಸಬೇಕು." ಈ ಹಾದಿ ಒಂದೇ ಸರಿ.

ಮೂರನೆಯ ತಾರೀಖು, ಹಾಗಿಲ್ಲ ಮೂರನೆಯ ಗರ್ಭ. ಗಂಡುಗಳಲ್ಲಿ ಮೂರನೆಯವರು, ಇಲ್ಲ ಹೆಣ್ಣುಗಳಲ್ಲಿ ಮೂರನೆಯವಳು. ಇನ್ನೂ ವಿಸ್ತಾರವಾಗಿ ಯಾವುದರಲ್ಲಿ ಆದರೂ ಸರಿ. ಮೂರನೆಯವನೇ ಆದರೆ ಈ ಸಂಖ್ಯೆಯ ಪರಿಮಿತಿಯಲ್ಲಿ ಬಂದಾನು. ಮೂರು ಜನ ಭಾಗೀದಾರರು. ಇದರಲ್ಲಿ ಮೂರನೆಯವನಿಗೆ ಈ ಯೋಗ.

## ಪರಿಹಾರ

ಇದಕ್ಕೆ ಪರಿಹಾರ? ಗುಂಪಿನಲ್ಲಿ, ಸಂಸಾರದ ಒಕ್ಕೂಟದಲ್ಲಿ ಈ ಮೂರನೆಯ ಸಂಖ್ಯೆ ಪರಿಣಾಮಕಾರಿ. ಈಗ ಉದಾಹರಣೆಗೆ ಮೇಲುಗಡೆ ಇಬ್ಬರು ಇದ್ದರೆ ಇವರು ಮೂರನೆಯ ವರು, ಆ ಇಬ್ಬರು ಇಲ್ಲ. ಆಗ ಇದು ಮೂರನೆಯದ್ದಲ್ಲ. ಕೇವಲ ಒಂದೇ ಆದೀತು! ಈ ಕಾರಣ ಈ ಮೂರು ಸಂಖ್ಯೆಯೋಗ ಹೊರಗಡೆ ಬಂದು ನಿಂತಾಗ ಒಂದೇ ಆಗುತ್ತದೆ. (Independent) ಈ ಜನಗಳು. ಬಹುಶಃ ಸಂಸಾರದಿಂದ ದೂರ ಇದಾರೆ. ಆಗ ಈ ಮೂರರ ಪ್ರಭಾವ ಇರದು. ಕಾರಣ ಉದ್ಯೋಗ ವಿಹಾರ ಪ್ರಯಾಣ ಯಾವುದೇ ಆಗಲಿ ಈ ಮೂರರ ಯೋಗ ತಪ್ಪಿ ಸುಖ ಉಂಟು.

ಎರಡು ಮಕ್ಕಳ ನಂತರ ಮೂರನೆಯದು ಜನನ. ಕೆಲ ವರ್ಷಗಳನಂತರ ಮೇಲಿನ ಅಣ್ಣಂದಿರಲ್ಲಿ ಒಬ್ಬರಿಗೆ ಅಪಮೃತ್ಯು. ಆಗ ಮೂರನೆಯವರು ಎರಡನೆಯವನಾದಾನು. ಆಗ ಮೂರು ಸಂಖ್ಯೆಯ ಯೋಗ ತಪ್ಪಿ ಎರಡನೆಯ ಸಂಖ್ಯೆಯ ಫಲ ನಡೆಯುತ್ತೆ. ಎರಡನೆಯ ಸಂಖ್ಯೆ ಯೋಗ ಬಲವಿಲ್ಲ. ಆಗ ಇವನು ಒಂಟಿ, ಇಲ್ಲ, ಮೊದಲನೆಯವನೇ ಆದಾನು!

# ನಾಲ್ಕು - ಚಂದ್ರನ ಪ್ರಭಾವ

ಎರಡು (೨) ಬುದ್ಧಿ ಉದಯದ ಸಂಖ್ಯೆ. ಜ್ಞಾನ ಆಗಬೇಕು. ಅದಕ್ಕೆ "ಎರಡು" ಅಗತ್ಯ. ಬುದ್ಧಿಯ ಕೆಲಸ, ಕೆಲಸದ ಕ್ಷೇತ್ರ ಈ ಎರಡು. ಬುದ್ಧಿಗೆ ಚಿತ್ತ ಎಂದರು. ಈ ಚಿತ್ತ ಒಂದು ಶಕ್ತಿಯ ಸ್ವರೂಪ. ಇದು ಕೆಲಸ ಮಾಡುವ ಕ್ಷೇತ್ರ ಮನಸ್ಸು. ಈ ಮನಸ್ಸು ಎರಡು ಸಂಖ್ಯೆಯ ಅಭಿವೃದ್ಧಿ ಸಂಖ್ಯೆ. ೨×೨ = ೪ ಈ ಕಾರಣ ನಾಲ್ಕು (೪) ಮನಸ್ಸಿಗೆ ಕಾರಣ ಸಂಖ್ಯೆ. ಈ ಮನಸ್ಸು ಚಂದ್ರನ ಸೀಮೆ ಮನಸ್ಸು ಒಂದೇ ಏನು? ಚಂದ್ರ, ಚಂದ್ರನ ಕಾರಕತ್ವಗಳು ಏನೇ ಇರಲಿ, ಅದಷ್ಟೂ ಈ ನಾಲ್ಕನೆಯ (೪) ಸಂಖ್ಯೆಯಲ್ಲಿಯೇ ಅಡಗಿರುತ್ತೆ.

ಚಂದ್ರನು ಜಲಕಾರಕ. ಸಾಗರದಲ್ಲಿ ನೀರು ಹೆಚ್ಚು. ಇದರಿಂದ ಪೂರ್ವಿಕರು "ಚತುಸ್ಸಾಗರ ಪರ್ಯಂತಂ" ಎಂದರು. ಜಲ ಎಂದರೆ ನೀರು ಅಷ್ಟೇ ಅಲ್ಲ. ನೀರಿನ ಗುಣವಾದ ಹರಿಯುವಿಕೆಯೂ ಅಷ್ಟೆ. (Fluids) ಹರಿಯುವಿಕೆ ಅಥವಾ ಚಲನೆ, ಸಂಚಾರ ಈ ಸಂಖ್ಯೆಯ ಗುಣ. ಸ್ಥಿರತೆ ಇಲ್ಲದೆ ಇರುವುದೂ ಸಹ ಇದರದೇ ಗುಣ. ಈ ಕಾರಣ ಚಂದ್ರನು, ಮನಸ್ಸು ಚಂಚಲ ಅಂದರು. ಸಂಚಾರದ ವೇಗಕ್ಕೂ ಹೋಲಿಸಿ "ಮನೋಜವಂ" ಎಂದರು.

ಈ ನಾಲ್ಕು (೪) ಸಂಖ್ಯೆಗೆ ಚಂದ್ರನ ಪ್ರಭಾವ. ಉದಾಹರಣೆಗೆ ೪, ೧೩, ೩೪, ೪೪, ೫೪ ಇತ್ಯಾದಿ. ಪೂರ್ಣ ಸಂಖ್ಯೆ ಆದಾಗ (೪೦) ಶುಕ್ರನ ಪ್ರಬಾವ ಇದ್ದೀತು. ಜ್ಯೋತಿಷ್ಯದಲ್ಲಿ ನಾಲ್ಕನೆಯ ಭಾವ, (೪)ನೇ ಸ್ಥಾನಕ್ಕೆ " ಮಾತೃ ಭಾವ" ಎಂದರು.

ಚಂದ್ರ ಸ್ತ್ರೀ ಸೂಚಕ ಗ್ರಹ. ಈ ಕಾರಣ ನಾಲ್ಕನೆಯ ಗರ್ಭ ಸ್ತ್ರೀ ಎಂದರು. ಆದರೆ ಅದು ಗಂಡು ಆದರೆ ಸುಯೋಗ ಎಂದರು "ನಾಲಾವುದು ಅಕ್ ಆನ ಅರಸಾರ" ಎಂದರು.

(೪) ನಾಲ್ಕು ಸಂಖ್ಯೆ ಮನಸ್ಸಿನ ಸಂಖ್ಯೆ. ಮನಸ್ಸಿನ ಕ್ರಿಯೆಯಾದ ಕುತೂಹಲ ಅದರಿಂದ ಉದ್ಭವವಾದ ಪ್ರಶ್ನೆಗೂ ಈ ನಾಲ್ಕು ಕಾರಣ. ಈ ಶಾಸ್ತ್ರ ಪ್ರಶ್ನೆ ಗ್ರಂಥ. ಇದರಲ್ಲಿ ಎತ್ತಿದ್ದು ಗಣಪತಿ ಪ್ರಶ್ನೆ ಶಾಸ್ತ್ರ. ಗಣಪತಿ ಅದಕ್ಕೆ ಅಭಿಮಾನಿ ದೇವತೆ. ಅವನ ವ್ರತ ತಿಥಿ ಚತುರ್ಥಿ (ನಾಲ್ಕು).

# ಜೀವಿತದಲ್ಲಿ ಪ್ರಭಾವ

ಮಕ್ಕಳಲ್ಲಿ ನಾಲ್ಕನೆಯ ಗರ್ಭ. ಆ ಶಿಶುವಿಗೆ ಈ (೪) ನಾಲ್ಕರ ಗುಣ ಹೆಚ್ಚು ಗಂಡುಗಳಲ್ಲಿ ನಾಲ್ಕನೆಯದು, ಹೆಣ್ಣುಗಳಲ್ಲಿ ನಾಲ್ಕನೆಯದು. ಈ ಶಿಶುಗಳಿಗೆ ಮಧ್ಯಮ ಯಾವುದೇ ತಿಂಗಳು ಆಗಲಿ (೪) ನಾಲ್ಕನೆಯ ತಾರೀಖು ಹುಟ್ಟಿದ ಶಿಶುವಿಗೂ ಈ ಗುಣ ಹೆಚ್ಚು.

ಈ ಜನಗಳಿಗೆ, ಚಂದ್ರನು ಪ್ರಧಾನ ಪ್ರಭಾವ ಬೀರುವ ಗ್ರಹ. ಚಂದ್ರನು ಮಾತೃಕಾರಕ. ಇದರಿಂದ ಇವರು ಮಾತೃಪ್ರೇಮಿಗಳು. ಹಲವರಂತೂ ಜಗನ್ಮಾತೆಯ ಉಪಾಸಕರು. ಕ್ಷಣ ಚಿತ್ತ, ಕ್ಷಣ ಪಿತ್ತದ ಚಂಚಲ ಮನಸ್ಸಿನವರು. ಮನಸ್ಸು ಬಂದರೆ ಸರಿ, ಬರಲಿಲ್ಲ ಇಲ್ಲ. ಈ ರೀತಿಯ ಸ್ವಭಾವ. ಮಾತೃ ಗುಣಗಳನ್ನೇ ಹೋಲುವ ಮಂದಿ. ಮಾತೃವಿನಂತೆ ಉಪಚಾರ ಮಾಡಿ ಪೋಷಿಸುವ ಜನ. ಹೆಣ್ಣಿನ ಮನಸ್ಸಿನಂತೆ ಇವರ ಸ್ವಭಾವ ಬಹು ಸೂಕ್ಷ್ಮ. ತಮ್ಮವರು ಏನೇ ಮಾಡಲಿ ಅದು ಇವರಿಗೆ ಅಪ್ಯಾಯಮಾನ. ತಮ್ಮವರನ್ನು ಟೀಕೆ ಮಾಡಿದರೆ ಇವರಿಗೆ ಸಹಿಸದು. ಅದು ಸರಿ ಟೀಕೆ ಆದರೂ ಹಿಡಿಸದು. ತಮ್ಮವರು ಏನೇ ಕೇಳಲಿ ಪ್ರೀತಿಯಿಂದ ಕೊಡುವ ಉದಾರಿಗಳು. ಅವರ ತಪ್ಪುಗಳನ್ನು ಮನ್ನಿಸುವ ಕ್ಷಮಾಗುಣ ಬೇರೆ. ವಿಶಾಲ ಹೃದಯಿಗಳು ಮತ್ತು ಮೃದು ಸ್ವಭಾವದವರು.

### ಸಂಚಾರ ಪ್ರಿಯರು

ಇವರು ಚಂದ್ರನಂತೆ ಸಂಚಾರ ಪ್ರಿಯರು. ನದೀ ಸಮುದ್ರ ತೀರಗಳಲ್ಲಿ ಇವರಿಗೆ ಹರ್ಷ. ಸಮುದ್ರ ತೀರ ಪಟ್ಟಣಗಳಲ್ಲಿ ಇವರಿಗೆ ಭಾಗ್ಯೋದಯ. ಅಕಸ್ಮಾತ್ ಯೋಗ ಗಳಿಂದ ಇವರ ಜೀವನದಲ್ಲಿ ಪ್ರಗತಿ ಆದೀತು. (By accident)

ಜಲಕಾರಕನಾದ ಚಂದ್ರ. ಈ ಕಾರಣ ಇವರು ನೀರಮೈಯವರು. ದುಂಡಗೆ ದಪ್ಪಗೆ ಇವರ ದೇಹ. ಅಲ್ಲದೆ ಗುಂಡು ಮುಖದವರು. ಪ್ರೇಮಗ್ರಹ ಚಂದ್ರ. ಚಂದ್ರನ ಬೆಳಕು ಚಂದ್ರಿಕೆ. ಹುಣ್ಣಿಮೆಯ ರಾತ್ರಿ ಈ ಬೆಳಕು ಅತಿ ಹೆಚ್ಚು. ಇವರಿಗೆ ಪ್ರೇಮ ಒಂದು ಗುಣ. ಸಾಧಾರಣ ಈ ಸಂಖ್ಯೆ ಹೆಂಗಸಿಗೆ ಪ್ರಿಯ.

ಹೆಣ್ಣಿನಂತೆ ಇವರ ಮನಸ್ಸು ಉದ್ವೇಗ, ಉಲ್ಲಾಸಗಳ ಬೀಡು. ಪ್ರೇಮಕ್ಕಾಗಿ ಏನು ತ್ಯಾಗ ಆದರೂ ಸರಿ, ಮಾಡಿಯಾರು. ದಾಕ್ಷಿಣ್ಯ, ದಯೆಯ ಕರುಣಾಮೂರ್ತಿಗಳು. ಈ ಕಾರಣ ಕಾರುಣ್ಯ ಮೂರ್ತಿ ಕೃಷ್ಣನ ಅವತಾರ ವಂಶ ಚಂದ್ರನದು. ಪ್ರೇಮನಾಟಕ ಶಾಕುಂತಲದಲ್ಲಿ ನಾಲ್ಕು ಸಂಖ್ಯೆಯ ಪ್ರಭಾವ. ನಾಲ್ಕನೆಯ ಅಂಕದ ನಾಲ್ಕು ಶ್ಲೋಕಗಳು ಇತ್ಯಾದಿ. ಪುರಾಣಗಳಲ್ಲಿಯೂ ಈ ಪ್ರಭಾವ ಕಂಡೀತು. ಭಾಗವತದ ನಾಲ್ಕನೆಯ ಸ್ಕಂದ ಪಾರ್ವತಿಯ ಕಥೆ. ಪಾರ್ವತಿ ಜಗನ್ಮಾತೆ. ಈ ಕಾರಣ ಇವಳು ಚಂದ್ರಕಲಾ ಶೋಭಿತಳು.

ಏರಿಳಿತ ಹೆಚ್ಚು

ನಾಲ್ಕು ಸಂಖ್ಯೆಯವರ ಜೀವನದಲ್ಲಿ ಏರಿಳಿತ ಹೆಚ್ಚು. ಶುಕ್ಲದಲ್ಲಿ ಚಂದ್ರನಿಗೆ ಏರು. ಕೃಷ್ಣ ಪಕ್ಷದಲ್ಲಿ ಇಳಿತ. ಹೀಗೆ ಇವರ ಜೀವನ. ಮಾನಸಿಕ ಜೀವನ ಇವರದು. ಏರಿಳಿತದ ವ್ಯಾಪಾರವೂ ಇವರಿಗೆ ಪ್ರಿಯ. ಉನ್ನತ ಮಟ್ಟದ ವ್ಯಾಪಾರಿಗಳು ಈ ನಾಲ್ಕು ಸಂಖ್ಯೆಯವರು. ಇವರು ಏಕಾಕಿ ಅಲ್ಲ. ಏಕಾಕಿ ಇವರು ಏನೂ ಮಾಡರು. ಇವರಿಗೆ ಸಖರು. ಇದರ ಕನಿಷ್ಠ ಸಂಖ್ಯೆಯಾದ ಎರಡು ಸಂಖ್ಯೆಯವರು. ಸ್ನೇಹ ಇವರಿಗೆ ಬೇಕು. ಈ ಮಂದಿಗೆ ವಯಸ್ಸಿನ ಭಾಗದಲ್ಲಿ ೪ ಬಂದಾಗ ಇವರ ಜೀವನ ಸುಖಮಯ. 8 ಬಂದಾಗ ಕಷ್ಟ. ಉದಾಹರಣೆಗೆ ೨, ೪, ೧೪, ೩೪, ೪೪, ೫೪, ೬೪ ಈ ವಯಸ್ಸುಗಳು ಪ್ರಧಾನ ಘಟನೆಯ ವರ್ಷಗಳು..

ಪ್ರಾಯ ವರ್ಷ ೪೦ ರಿಂದ ಹತ್ತು ವರ್ಷಗಳಲ್ಲಿ ಈ ಸಂಖ್ಯೆಯ ಪ್ರಭಾವ ಕಂಡೀತು. ೧೯೪೦ ರಿಂದ ೧೯೫೦ ಹತ್ತು ವರ್ಷಗಳೂ ಸಹ ಜೀವಿತ ಕಾಲದ ಭಾಗ್ಯೋದಯ, ೧೯೪೨, ೪೪, ೪೮ ಈ ಇಸ್ವಿಗಳಲ್ಲಿ ಜನಿಸಿದವರು ಇವರಿಗೆ ಜೀವನದ ಸಖರು.

ಒಂದು ಸಂಖ್ಯೆ ಜಡತ್ವ. ನಾಲ್ಕು ಸಂಖ್ಯೆಯ ಮನಸ್ಸಿಗೆ ಇದು ಬೆರೆತರೆ ಮಾನಸಿಕ ಜಾಡ್ಯ. ಈ ಕಾರಣ ನಾಲ್ಕನೆಯ ತಿಂಗಳು ಮೊದಲನೆಯ ದಿನ ಮೂರ್ಖರ ದಿನ ಎಂದರು.

# ಐದು - ಪುಣ್ಯ ಸಂಖ್ಯೆ

ಸೃಷ್ಟಿ, ಇದರ ಮುನ್ನ ಶೂನ್ಯ (0). ಇದರಿಂದ ಜೀವನ (೧) ಉತ್ಪತ್ತಿ. ಇದರ ಪರಿಣಾಮ ಲಯ. ಆ ಲಯದ ನಂತರವೂ ಶೂನ್ಯ. ಈ ಎರಡು ಶೂನ್ಯಗಳ (+0;- 0) ಮಧ್ಯೆ ಈ ಜೀವದ (೧) ಕಾರ್ಯ, ಜೀವನದ ನಡೆ. ಈ ನಡೆಗೆ ಗುಣಮಯದ ಒಂಭತ್ತು ಸಂಖ್ಯೆಗಳು, ಹಂತಗಳು. ಈ ಸಂಖ್ಯೆಗಳ ಮಾಯಾಗುಣ (೧) ಜೀವನಿಗೆ ತಪ್ಪದು. ಕರ್ಮದ ಅನುಭವಕ್ಕೆ ಈ ಒಂಭತ್ತು ಹಂತಗಳ ನಡೆ. ಇದೇ ಈ ಜೀವನದ ಕಾರ್ಯಕ್ರಮ. ಜೀವ (೧)ಕ್ಕೆ (0) ಶೂನ್ಯದತ್ತ ನಡೆ. ಈ ನಡೆಯೇ ಕರ್ಮ. ಈ ಕಾರಣ ಸಂಖ್ಯೆ (೧೦) ಹತ್ತನ್ನು "ಕರ್ಮ ಸಂಖ್ಯೆ" ಅಂದರು. ಜಾತಕದಲ್ಲಿಯೂ ಹತ್ತನೆಯ (೧೦) ಸ್ಥಾನವನ್ನು "ಕರ್ಮಸ್ಥಾನ" ಎಂದರು. (೧-೯) ಒಂಭತ್ತು ಗುಣಮಯ ಸಂಖ್ಯೆಗಳು ಈ ಗುಣಮಯಳಾದ ಮಾಯೆಗೆ ಜೀವನು ಮರಳು. ಈ ಕಾರಣ ಜೀವನಿಗೆ ಈ ಗುಣ ಸಂಖ್ಯೆಗಳನ್ನು ದಾಟುವುದು ಕಷ್ಟ. ಇದಕ್ಕೆ ಕೌಶಲ್ಯ ಅಗತ್ಯ. ಕೌಶಲ್ಯಕ್ಕೆ ಜ್ಞಾನ ಅಗತ್ಯ. "ಜ್ಞಾನೇನ ಕರ್ಮಭೇದಃ" ಎಂದರು. ಈ ಕರ್ಮ ಸಂಖ್ಯೆಯನ್ನು ಭೇದಿಸಿದರೆ, ಕತ್ತರಿಸಿದರೆ ಬರುವ ಸಂಖ್ಯೆ (೫) ಐದು. ಈ ಐದು (೫) ಕರ್ಮವನ್ನು ಕತ್ತರಿಸುವ ಸಂಖ್ಯೆ. ಈ ಸಂಖ್ಯೆ ಜ್ಞಾನ ಸಂಖ್ಯೆ. ಈ ಜ್ಞಾನ ಗುರುವಿನ ಪ್ರಸಾದ. ಪೂರ್ವ ಪುಣ್ಯದಿಂದ ಈ ಜ್ಞಾನ ಪ್ರಾಪ್ತಿ. ಈ ಕಾರಣ (೫) ಪುಣ್ಯ ಸಂಖ್ಯೆ ಆಯಿತು. ಜ್ಞಾನಗ್ರಹ ಗುರುವಿಗೆ (೫) ಐದು ಸಂಖ್ಯೆ ಆಯಿತು. ವಿದ್ಯೆಯಿಂದ ಜ್ಞಾನ. ಈ ಕಾರಣ ವಿದ್ಯಾ ಸಂಖ್ಯೆ ಎಂದರು. ಜಾತಕದಲ್ಲಿಯೂ ಸಹ ಐದನೆಯ ಸ್ಥಾನ, ವಿದ್ಯಾಸ್ಥಾನ, ಪೂರ್ವ ಪುಣ್ಯ ಸ್ಥಾನ ಎಂದರು.

ಕರ್ಮದಲ್ಲಿ ನರಳುವ ಜೀವನವನ್ನು ಉದ್ಧರಿಸುವವನು ಮಗ. "ಪಿತರಂ ತ್ರಾಯತೇ ಇತಿ ಪುತ್ರಃ" ಎಂದರು. ಈ ಕಾರಣ ಈ ಐದು (೫) ಪುತ್ರಸ್ಥಾನದ ಸಂಖ್ಯೆ. ಐದನೆಯ ಸ್ಥಾನವನ್ನು ಪುತ್ರಸ್ಥಾನ ಅಂದರು.

ಪೂರ್ವ ಮಹರ್ಷಿಗಳು ಪುರಾಣಗಳಲ್ಲಿ ಕೂಡ ಈ ನಿಯಮವನ್ನು ಪಾಲಿಸಿದ್ದಾರೆ. ರಾಮಾಯಣದಲ್ಲಿ ಐದನೆಯ ಅಧ್ಯಾಯ "ಬ್ರಹ್ಮಾಗಮನ", ಗುರುವಿನ ಪ್ರಭಾವ. ಐದನೆಯ ಕಾಂಡ ಸುಂದರ ಕಾಂಡ. ಅಲ್ಲಿ ಆಂಜನೇಯನ ಸಾಹಸ. ರಾಮನು ದೇವರು, ಆಂಜನೇಯನು ಗುರು.

ಕರ್ಮ ತೊಳೆಯಲು ಜ್ಞಾನ ಬೇಕು. ಜ್ಞಾನ ಗ್ರಹ ಗುರು. ಈ ಜ್ಞಾನದಿಂದ ಶುಚಿತ್ವ ಸಾಧನೆ. ಈ ಕಾರಣ ಸಂಖ್ಯೆಯ ದೋಷಗಳನ್ನು ತೊಳೆಯಲು ಗುರುವಿನ ಐದು ಸಂಖ್ಯೆಯ ಬಳಕೆ. ಸಂಖ್ಯೆ ಮೂರು, ನಾಲ್ಕು, ಆರು ಯಾವುದೇ ಆಗಲಿ ಆ ದಶಕದಲ್ಲಿ ಈ ಐದು

ಬಂದಾಗ ಆ ಸಂಖ್ಯೆ ದೋಷ ನಿವೃತ್ತಿ. ಉದಾಹರಣೆಗೆ (೩) ಸಂಖ್ಯೆ ದೋಷ ೩೫ರಲ್ಲಿ ನಾಲ್ಕರದು ೪೫ರಲ್ಲಿ ಆರನೆಯದು ೬೫ರಲ್ಲಿ ಇತ್ಯಾದಿ. ಈ ಕಾಲದಲ್ಲಿ ಜನಗಳಿಗೆ ಅಯಾ ಸಂಖ್ಯೆ ತತ್ವದ ಅಭಿಮಾನಿ ದೇವತಾ ಕ್ಷೇತ್ರದರ್ಶನ. ಆ ತತ್ವ ವಿದ್ಯಾ ಪ್ರಾಪ್ತಿ ಇತ್ಯಾದಿ.

ಗುರುವಿನ ದೋಷವೇ ಇದೆ ಆಗ (೫) ಐದು ಬಂದಾಗ ಧನಹಾನಿ. ವಿದ್ಯಾಹಾನಿ. ಪುತ್ರಹಾನಿ. ಗುರುಶಾಪ ಇತ್ಯಾದಿ. ಆದರೆ ಈ ಐದರ ದೋಷ ಐವತ್ತರಲ್ಲಿ ನಿವೃತ್ತಿ ೫೦ನೆಯ ವರ್ಷ. ೫೦ನೆಯ ಇಸ್ವಿ ನಡೆಯುವಾಗ ಕಷ್ಟ ಫಲ ನೀಗಿ ಶುಭೋದಯ ಎಂದರ್ಥ.

## ಜೀವಿತದಲ್ಲಿ ಪ್ರಭಾವ

ಐದನೆಯ ಪ್ರಸವ. ಐದನೆಯ ತಾರೀಖು ಜನನ. ಗಂಡು ಮಕ್ಕಳಲ್ಲಿ ಐದನೆಯವನು. ಹೆಣ್ಣುಮಕ್ಕಳಲ್ಲಿ ಐದನೆಯವಳು. ಇವರಿಗೆ ಈ ಐದು (೫) ಸಂಖ್ಯೆಯ ಪ್ರಭಾವ ಕಾಣುತ್ತೆ.

(೫) ಐದು ಕಷ್ಟ ನೀಗುವ ಸಂಖ್ಯೆ. ಕಾರಣ ಜ್ಞಾನದ ಬಲ. ಈ ಕಾರಣ ಈ ಜನಗಳು ಕಷ್ಟ ಪರಿಹಾರಕರು. ಸಂಸಾರದ ಭಾರವನ್ನು ಹೊತ್ತು ಸುಖ ಕೊಡುವ ಮಂದಿ. ಇವರು ದೇವತಾ ಭಕ್ತರು. ವಿದ್ಯಾವಿನಯಶೀಲರು ದೇವತಾ ಪ್ರಸಾದದಿಂದ ಹುಟ್ಟಿದವರು. ಗರ್ಭಕಾಲದಲ್ಲಿ ಐದನೆಯ ತಿಂಗಳಿನಲ್ಲಿ ದೇವತಾಸೇವೆ ಮಾಡಿಹುಟ್ಟಿದವರು. ಈ ಕಾರಣ ಧರ್ಮ ಕಾರ್ಯಗಳಲ್ಲಿ ಶ್ರದ್ಧೆ. ಪೂರ್ವಾಚಾರ ಪದ್ಧತಿಗಳಲ್ಲಿ ಗೌರವ. ಧರ್ಮ ಕರ್ಮ ದೃಷ್ಟಿಯಿಂದ ಎಲ್ಲರಿಗೂ ಆಗುವ ಮಂದಿ.

ಹೆಚ್ಚಿನಂಶ ಇವರಿಗೆ ವಿದ್ಯೆಯಿಂದ ಜೀವನ. ಇಪ್ಪತ್ತು ವರ್ಷ ಪ್ರಾಯದಿಂದಲೇ ಕೆಲವರಿಗೆ ಉದ್ಯೋಗ ಆಗುತ್ತೆ. ನ್ಯಾಯಾಂಗದಲ್ಲಿ. ಹಾಗಿಲ್ಲ. ಧನ ವ್ಯವಹಾರ ಸಂಸ್ಥೆ ಗಳಲ್ಲಿ ಇವರಿಗೆ ಉತ್ತೇಜನವಿದೆ. ವಿದ್ಯಾ ಪ್ರಚಾರ. ವಿದ್ಯಾಲಯಗಳಲ್ಲಿ ಇವರಿಗೆ ಪ್ರಗತಿ. ಧನಯೋಗವೂ ಪ್ರಬಲ. ಐವತ್ತು ವರ್ಷಗಳ ನಂತರ ಇವರಿಗೆ ಸುಖಯೋಗ. ಮಕ್ಕಳಿಂದ ಇವರಿಗೆ ಸುಯೋಗ. ಜೇಷ್ಠಪುತ್ರನು ಇವರಿಗೆ ಆಗಿ ಬಂದು ಮುದಿತನ ಸುಖಮಯ.

ಒಂದು ವೇಳೆ ವಿದ್ಯೆಯಲ್ಲಿ ತಡೆ. ಧನದ ಬಿಕ್ಕಟ್ಟು. ಪುತ್ರಶೋಕ ಇದ್ದಾವು. ಆಗ ಇವರ ಜೀವಿತ ಗ್ರಹ ಗುರು ಬಲಹೀನ ಅಂದರ್ಥ. ಆಗ ಶ್ರೀಗುರುಗಳು ಇಲ್ಲ ಆಂಜನೇಯನ ಪೂಜೆ. ಉಪಾಸನೆಗಳು ಶಾಂತಿ ವಿಧಾನ. ಶ್ರೀಮತ್ ಭಾಗವತ ಪಾರಾಯಣದಿಂದಲೂ ಈ ದೋಷ ನಿವೃತ್ತಿ.

ಇವರಿಗೆ ವಯೋಮಾಲೆಯಲ್ಲಿ ೨೦. ೨೫. ೩೫. ೪೫. ೫೫ ಜೀವನದ ಪ್ರಗತಿಯ ಹಂತಗಳು. ಇಂಗ್ಲಿಷ್ ಇಸ್ವಿಯಲ್ಲಿ ಕೂಡ ಈ ಮೇಲಿನ ಸಂಖ್ಯಾ ವರ್ಷಗಳಲ್ಲಿ ಉತ್ತಮ ಯೋಗವು.

೬

# ಆರು - ಕುಜನ ಯೋಗ

ಸಂಖ್ಯೆ (೩) ಮೂರು ಕುಜನ ದೋಷದ ಸಂಖ್ಯೆ. ಇದಕ್ಕೆ ಧೂಮ (ಹೊಗೆ) ಯೋಗ. ಇದಕ್ಕೆ ಕುಜ-ಶನಿಯೋಗ ಇರುತ್ತೆ. ಆದರೆ (೬) ಆರು ಸಂಖ್ಯೆ ಕುಜನ ಯೋಗ ಸಂಖ್ಯೆ. ಇದು ಕುಜನ ಅಭಿಮಾನಿ ದೇವತೆ ಶ್ರೀ ಸುಬ್ರಹ್ಮಣ್ಯನ ಪ್ರಸಾದದ ಸಂಖ್ಯೆ. ಕಾರಣ ಅರಿಷಡ್ವರ್ಗಗಳನ್ನು ಗೆದ್ದವನು.

ಪ್ರತಿ ತಿಂಗಳಿನ ೬ನೆಯ ತಾರೀಖು ಜನಿಸಿದವರು, ಆರನೆಯ ಗರ್ಭದಲ್ಲಿ ಜನಿಸಿದವರು. ಹೆಣ್ಣುಗಳಲ್ಲಿ ಆರನೆಯವರು, ಗಂಡು ಮಕ್ಕಳಲ್ಲಿ ಆರನೆಯವರು. ಇವರಿಗೆ ಈ ಕುಜನಿಂದ ಸುಯೋಗ ನಡೆಯುತ್ತೆ. ಇವರು ಹಠ ಸಾಧಕರು. ಕಷ್ಟ ನಷ್ಟಗಳು ಬರಲಿ ಅಂಜುವವರಲ್ಲ. ಸಾಧಿಸಿ, ಸಾಧಿಸಿ ಜಯಲಕ್ಷ್ಮಿ ಇವರಿಗೆ ಒಲಿದಾಳು. ಅಷ್ಟೇ ಅಲ್ಲ ಇವರು ಸೋದರ ವರ್ಗ ಪ್ರಿಯರು. ಯಂತ್ರ ವಾಹನಾದಿಗಳಲ್ಲಿ ಸಂಪತ್ತು ಬಂದೀತು. ಮಂಗಳ ಕಾರ್ಯಗಳಲ್ಲಿ ಇವರಿಗೆ ಪ್ರಬಲ ಯೋಗ.

ವೀರ್ಯಶಾಲಿಗಳಾದ ಕಾರಣ ಇವರಿಗೆ ಸ್ತ್ರೀಯರಿಂದ ಸುಖ ಉಂಟು. ಇವರಿಗೆ ಸ್ತ್ರೀಯು ವಶ್ಯಳು. ಭೋಗ ಭಾಗ್ಯಗಳ ಅನುಭವದಲ್ಲಿ ಇವರು ನಿಷ್ಣಾತರು. ಭೋಜನ ರುಚಿ ತಿಳಿದವರು. ಚೊಕ್ಕ ಭೋಜನದ ಬಲ ಬೇರೆ. ಬಾಲ್ಯದಲ್ಲಿ ಇವರು ಕೃಶರಾಗಿದ್ದು ಉದರ ಸಂಬಂಧ ರೋಗಿಗಳು. ಅನಂತರ ಕಟ್ಟುಮಸ್ತಾದ ದೇಹ ಮೂಡಿ ಬಂದು ಇವರು ಸುಖಿಗಳು.

ಇವರಿಗೆ ಸಾಧಾರಣ (೩) ಮೂರನೆಯ ಸಂಖ್ಯೆಯ ಜನಗಳ ಗಂಟು. ಅವರ ಕಷ್ಟಗಳು ಇವರಿಂದ ಪರಿಹಾರ. ಸಂಸಾರದ ಜವಾಬ್ದಾರಿ ಹೊರುವ ಆಸೆಯಿಂದ ಖರ್ಚು ಹೆಚ್ಚು. ಇವರು ಉದಾರಿಗಳು. ಅತಿಥಿ ಸತ್ಕಾರ ಇವರಿಗೆ ಪ್ರಿಯ. ತಿನ್ನುವುದೂ ಹೆಚ್ಚು. ತಿನ್ನಿಸುವುದೂ ಒಂದು ಸಂತೋಷವೇ ಸರಿ. ಆದರೆ ಕಾಸು ಮಾತ್ರ ಕೊಡರು.

ಆರು (೬) ಸಂಖ್ಯೆಯ ಜನಗಳಿಗೆ ಹಣದ ಮೇಲೆ ಗಮನ ಇರದು. ಆಸ್ತಿ ಬೇಕು. ವಾಹನ ಬೇಕು, ಭೋಗ ಭಾಗ್ಯ ಬೇಕು. ನಾಲ್ಕು ಜನಗಳು ತಮಗೆ ದುಡಿಯಬೇಕು ಅವರಿಗೆ ಆಶ್ರಯ ಕೊಡಬೇಕು. ಈ ಔದಾರ್ಯದ ಆದರ್ಶ ಇವರ ಹಂಬಲ.

ಇವರಿಗೆ ಸಾಧಾರಣವಾಗಿ ಯಂತ್ರ ಉದ್ಯಮಗಳಲ್ಲಿ ಜಯವಿದೆ. ನೂರಾರು ಶ್ರಮ ಜೀವಿಗಳ ದುಡಿಮೆಯಿಂದ ಭಾಗ್ಯವಿದೆ. ಲೋಕೋಪಯೋಗಿ ಕೆಲಸಗಳಲ್ಲಿ ಜೀವನೋಪಾಯ ಸುಲಭ. ಆದರೆ ಇವರೇ ದುಡಿಯುವ ಮಂದಿ ಅಲ್ಲ! ಇವರಿಗೆ ದೇಶಾಟನೆ ಪ್ರಿಯ. ಯಾತ್ರೆಗಳೂ ಪ್ರಿಯ. ಉದ್ಯಮದಲ್ಲಿ, ಉದ್ಯೋಗದಲ್ಲಿ ಯಾವುದಾದರೂ ಸರಿ, ಅಡ್ಡಿ

ಆತಂಕಗಳು ಬಂದರೆ ಒಂದು ಸಲ ದೇಶಾಟನೆ ಮಾಡಿ ಬಂದರೆ ಆ ವಿಘ್ನ ಪಾರಾಗಿ ಸುಯೋಗ ಬಂದೀತು. ಇನ್ನು ವಿದೇಶಯಾತ್ರೆಯೇ ಆದರೆ ಸುಯೋಗವಲ್ಲದೇ ಮತ್ತೇನು? ಹಾಗಿಲ್ಲ ದೇಶದಲ್ಲಿ ಸಂಚಾರ ಮಾಡುವುದರಿಂದ ಉದ್ಯೋಗ, ಉದ್ಯಮಗಳ ಪ್ರಗತಿ ಎಂದೂ ಆದೀತು.

ಇವರಿಗೆ ಆಗಾಗ ಆಗದವರು ಇದ್ದಾರು. ಇವರಿಗೆ ವಿದ್ಯೆಯಿಂದ ಯೋಗವಿಲ್ಲ. ಕೆಲವರಿಗೆ ವಿದ್ಯೆಯೂ ಇರದು. ವಿದ್ಯಾ ಜೀವಿಗಳಲ್ಲಿ ಇವರಿಗೆ ಮರ್ಯಾದೆಯೂ ಅಲ್ಪ. ಧನ ವ್ಯವಹಾರ ಜೀವಿಗಳು ಅಷ್ಟೆ. ನ್ಯಾಯಾಲಯಗಳು ಇವರಿಗೆ ಆಗವು. ಆದರೆ ಸಾಧಿಸಿಯೇ ತೀರುವ ಜನ. ಇವರಿಗೆ ಧನದ ಹಂಬಲ ಇರದು. ಧನ ಕೂಡಿಡುವ ಹಂಬಲೂ ಇರದು. ಆ ರೀತಿ ಜಪುಣ ವ್ಯವಹಾರಿಗಳು ಇವರಿಗೆ ವಿರೋಧಿಗಳೇ ಸರಿ.

ಧನದಿಂದ ಇವರಿಗೆ ಯೋಗವಿಲ್ಲ, ಆದರೆ ಋಣದಿಂದ ಯೋಗವಿದೆ. ಸ್ವಂತ ಹಣದಿಂದ ಉದ್ಯಮ ಮಾಡಿದರೆ ಎಲ್ಲವನ್ನು ಕಳೆದಾರು. ಆದರೆ ಸಾಲ ತೆಗೆದು ಯತ್ನ ಮಾಡಿದರೆ ಇವರಿಗೆ ಪ್ರಗತಿ ಹೆಚ್ಚು. ಯಂತ್ರವಾಹನಗಳು ಇವರಿಗೆ ಅದೃಷ್ಟ ತರುತ್ತವೆ. ಆದರೆ ಗೋವು ಕುದುರೆಗಳಿಂದ ಅವಯೋಗ ನಡೆದೀತು.

ಇವರಿಗೆ (೫) ಐದನೆಯ ಸಂಖ್ಯೆ ಆಗದು. ಕಾರಣ ಇವರಿಗೆ ಗುರುವಿನ ದೋಷ ಪ್ರಬಲ. ಈ ಕಾರಣ (೫)ನೆಯ ಸಂಖ್ಯೆಯ ವರ್ಷ ಬಂದಾಗ ಧನಹಾನಿ, ಮಕ್ಕಳಿಂದ ದುಃಖ, ನ್ಯಾಯಾಂಗಗಳಲ್ಲಿ ಕಷ್ಟ ಇತ್ಯಾದಿ. ೫, ೨೫, ೩೫, ೪೫, ೬೫ ಈ ವರ್ಷಗಳಲ್ಲಿ ಈ ಕಷ್ಟ ಎಂದರ್ಥ.

ಇವರಿಗೆ ಮಕ್ಕಳಿಂದ ಅವಯೋಗ. ಕೆಲವರಿಗೆ ಮಕ್ಕಳೂ ಇರದು. ಜೀವಿತದ ಇಳಿಗಾಲದಲ್ಲಿ ಮಗನೇ ಇವರಿಗೆ ವಿರೋಧಿ ಆದಾನು. ಆದರೆ ಆಗ ಇವರಿಗೆ ಆಸ್ತಿ ಭೂ ಭಾಗ್ಯ ಇದ್ದೀತು. ಆದರೆ ಧನ ಇರದು. ಈ ಕಾರಣ ಇವರಿಗೆ ಧನ ಬಂದಾಗ ಆಸ್ತಿ ಮಾಡುವುದು ಒಳಿತು. ಮಕ್ಕಳಿಂದ ಸುಖ ಇರದು. ಅನೇಕರಿಗೆ ಉಪಪತ್ನಿಯ ಯೋಗ ಇರುತ್ತೆ. ವಯಸ್ಸಾದರೂ ಸಹ ಇವರು ಕಾಮಿಗಳು. ಯುವಕರಂತೆ ದೇಹದಾರ್ಢ್ಯ ಇದ್ದೀತು. ಈ ಕಾರಣ ಸಂಸಾರದಲ್ಲಿ ಇವರಿಗೆ ಆಗಾಗ ದಾಂಪತ್ಯದಲ್ಲಿ ಕಹಿ ಪ್ರಸಂಗಗಳು ಸಾಮಾನ್ಯ.

ಸಾಧಾರಣವಾಗಿ ಇವರಿಗೆ (೩) ಮೂರನೆಯ ಸಂಖ್ಯೆಯವರಿಂದ ತಲೆನೋವು ವಯೋಮಾಲೆಯಲ್ಲಿ ಮೂರನೆಯ ವರ್ಷ ಬಂದಾಗ ಕಷ್ಟ. ಉದಾಹರಣೆಗೆ ಮೂರನೆಯ ವಯಸ್ಸಿನಲ್ಲಿ ಕಾಯಿಲೆ ಅಪಘಾತ. ೧೩ನೇ ವಯಸ್ಸಿನಲ್ಲಿ ವಿದ್ಯಾ ವಿಘ್ನ. ಧನಹಾನಿ ೨೩, ೩೩, ೪೩, ೫೩, ೬೩ ಇತ್ಯಾದಿ ವಯಸ್ಸುಗಳಲ್ಲಿ ಇವರಿಗೆ ಕಷ್ಟ ಬಂದೀತು. ಆದರೆ ಈ ಕಷ್ಟಗಳು (೬) ಆರನೆಯ ಸಂಖ್ಯೆ ಬಂದಾಗ ಪರಿಹಾರ ಸುಯೋಗವೂ ನಡೆದೀತು. (೩) ಮೂರನೆಯ ವರ್ಷದಲ್ಲಿ ಬಂದ ಕಷ್ಟ (೬) ಆರನೆಯ ವರ್ಷದಲ್ಲಿ ಪರಿಹಾರ. ಹೀಗೆ ೬, ೧೬, ೨೬, ೩೬, ೪೬, ೫೬, ೬೦ ಈ ವರ್ಷಗಳಲ್ಲಿ ಇವರಿಗೆ ಉತ್ತಮ ಯೋಗ, ಕಷ್ಟವೂ ಪರಿಹಾರ. ಅದೂ ಅಲ್ಲದೆ. ಆಂಗ್ಲ ಇಸ್ವಿಗಳಲ್ಲಿ ಈ ವರ್ಷಗಳು ಬಂದಾಗ ಆ ಸಂಖ್ಯೆಯಂತೆ ಯೋಗ ನಡೆಯತ್ತೆ. ೧೯೬೦ನೆಯ ಇಸ್ವಿಯ ನಂತರ ಹತ್ತು ವರ್ಷ ಯೋಗ ಎಂದರ್ಥ.

# ಸ್ತ್ರೀಯರಿಗೆ ಮಂಗಳದಾಯಕ

ಮೂರು ಸಂಖ್ಯೆ ಅಶುಭ. ಕಾರಣ ಅದು ಕುಜ ಶನಿಯೋಗ. ಇದನ್ನೇ ಮಂಗಳನ ದೋಷ ಎಂದರು. ಈ ದೋಷ (೩) ಮೂರನೆಯ ವರ್ಷ ಬಂದರೆ ನಡೆಯುತ್ತೆ. ಈ ಅರಿಷ್ಟ ಕಾಲ (೩) ಮೂರು ವರ್ಷ. ಉದಾಹರಣೆಗೆ ೧೩, ೨೩, ೩೩, ೪೩, ೫೩, ೬೩ ಇತ್ಯಾದಿ ವರ್ಷಗಳು ಕಷ್ಟ ಪ್ರದ. ಚಿಕ್ಕವಯಸ್ಸಿನಲ್ಲಿ ಸುಖ ಇರದು. ಮಂಗಳ ಕಾರ್ಯಗಳಿಗೂ ವಿಘ್ನ. ಒಲ್ಲದ ಸಲ್ಲದ ಸಂಗದಿಂದ ಬೇಸರ. ಈ ಯೋಗ ೧೩, ೨೩ ವರ್ಷಗಳಲ್ಲಿ ಹೆಚ್ಚು. ಮದುವೆಗಳಿಂದ ಹೆಣ್ಣಿಗೆ ನಿರಾಸೆ. ನಿರ್ಣಯವಾದ ಮದುವೆಗಳು ಮುರಿದು ಬಿದ್ದಾವು. ಆದರೆ ಈ ಅರಿಷ್ಟ ಮೂರು ವರ್ಷಗಳು. ಈ ವಯಸ್ಸಿನಲ್ಲಿ ಮದುವೆ ಆದರೆ ದೂರಬಾರ ಹೋಗಿ ನೆಲಸುವ ಯೋಗ ಕೊಡುತ್ತೆ. ಇದನ್ನು ಬಿಟ್ಟರೆ ಈ ದೋಷ (೬) ಆರನೆಯ ಸಂಖ್ಯೆಯಲ್ಲಿ ನಿವಾರಣೆ. ಉದಾಹರಣೆಗೆ ಮದುವೆಗಳು ೧೬, ೨೬, ೩೬ ಶುಭಪ್ರದ ಎಂದರ್ಥ.

ವಿವಾಹ ಪೂರ್ವದಲ್ಲಿ ಮೂರನೆಯ (೩) ಗರ್ಭದ ಹೆಣ್ಣಿಗೆ ಋತು ಪೀಡೆ ಇದ್ದೀತು. ಹಿರಿತನ ಬಂದನಂತರ ಕಷ್ಟಗಳೂ ಇದ್ದಾವು. ಆದರೆ ಶ್ರೀ ಚಾಮುಂಡೇಶ್ವರಿ ಆರಾಧನೆಯಿಂದ ಈ ದೋಷವು ಪರಿಹಾರ. ಆಗ (೬) ಆರನೆಯ ಸಂಖ್ಯೆ ವರ್ಷದಲ್ಲಿ ಶುಭವು ಉತ್ಪತ್ತಿಯಾಗಿ ವಿವಾಹವು ಶುಭಪ್ರದ. ಆದರೆ ಮೊದಲು ಮೂರು ವರಗಳು ನಿರ್ಣಯವಾಗಿ ಬಿಟ್ಟು ನಾಲ್ಕನೆಯದು ಅನುಕೂಲದ ಬಂಧುತ್ವ ಆಗುವುದು. ಇದಕ್ಕೆ ಕಾರಣ ಈ (೬) ಆರನೆಯ ಸಂಖ್ಯೆಗೆ ಸ್ತ್ರೀಯರಿಗೆ ಮುಖ್ಯವಾದ ಕುಜ ಶುಕ್ರ ಯೋಗವು ಇರುವುದು.

ಹಾಗಿಲ್ಲ ಹೆಣ್ಣು ಮೈ ನೆರದ ವರ್ಷದಿಂದ ಮೂರು (೩) ವರ್ಷಗಳು ಅಶುಭ. ಆರನೆಯ (೬) ವರ್ಷದಲ್ಲಿ ವಿವಾಹ. ಈ ದೋಷವು ಪ್ರಬಲವಿದೆ. ಆಗ ಶಾಂತಿಯನ್ನೂ ಮಾಡರು. ಆಗ ಹನ್ನೆರಡು ವರ್ಷಗಳು ಶುಭ ಇರದು. ಅನಂತರ ವಿವಾಹ ಕಾಲಾನುಕೂಲ ದಿಂದ ಆದೀತು. ಈ ರೀತಿ (೩) ಮೂರನೆಯ ಸಂಖ್ಯೆಯ ದೋಷ (೬) ಆರನೆಯ ಸಂಖ್ಯೆಯಲ್ಲಿ ನಿವೃತ್ತಿ. ಈ ಕಾರಣ ಈ ಹೆಣ್ಣುಗಳಿಗೆ ೧೯೬೦ರ ನಂತರ ಹತ್ತು ವರ್ಷಗಳು ಯೋಗಪ್ರದ ಎನ್ನಬಹುದು.

# ಏಳು - ಸಂಖ್ಯೆ ಮೃತ್ಯು

ಕೆಲವರಿಗೆ "ಏಳು" ಎಂದರೆ ಭಯ! ವೈಶ್ಯರಂತೂ ಎಣಿಸುವುದರಲ್ಲಿ ನಿಷ್ಣಾತರು. ಇವರು ಸಹ "ಏಳು" ಎಂದು ಹೇಳರು. ಐದು. ಆರು. (ಏಳು) ಎನ್ನಬೇಕು. ಬದಲಾಗಿ "ಹೆಚ್ಚಲಿ" ಎನ್ನುತ್ತಾರೆ. ಈ ಸಂಖ್ಯೆಯನ್ನು ಶಂಕೆ ಭಯ ಇಲ್ಲದೇ ಉಪಯೋಗಿಸಿ ಯಶಸ್ವಿಯಾದವರು ೭ O' Clock ಬ್ಲೇಡಿನವರು! ಕ್ಷೌರ ಕರ್ಮಕ್ಕೆ ಈ ಏಳು ಕೀರ್ತಿ ತಂದೀತು! ಅಷ್ಟೇ ಹೊರತು ಬೇರೆ ಎಲ್ಲಿಯೂ ಇರದು. ಹೆಸರು ಹೇಳದಷ್ಟು ಕೆಟ್ಟದ್ದು ಏನು? ಬಹುಶಃ ಈ ಏಳು (೭) ಮೃತ್ಯುವನ್ನು ತೋರಿಸೀತು. ಇದು ನಮ್ಮಲ್ಲಿ ರೂಢಿಯಾದ ನಂಬಿಕೆ. ವಿದೇಶೀಯರೂ ಸಹ seven in Heaven ಎಂದರು. "ಸ್ವರ್ಗ" ಎಂದರೆ ಸಾವಿನ ಮುಂದಿನದು. "ಸಾವು" ಅನಂತರ ಈ ಸ್ಥಿತಿ. ಅಲ್ಲಿಯೂ ಸಹ ಏಳು (೭) ಸಂಖ್ಯೆಯ ಭಯ!

ಪುರಾಣಗಳಲ್ಲಿ. ಶಾಸ್ತ್ರಗಳಲ್ಲಿ ಏಳು ಮುಖ್ಯ. ಪೃಥು ಮಹಾರಾಜನು ಈ ಭೂಮಿಯನ್ನು ಏಳು ಭಾಗಗಳಾಗಿ ವಿಂಗಡಿಸಿದನಂತೆ. ಸಂಗೀತದಲ್ಲಿ ಏಳು ಹಂತಗಳನ್ನು ಮಾಡಿದರು. ಧ್ವನಿ ಪ್ರವಾಹದ ಈ ಏಳು ಹಂತಗಳನ್ನು ಸಪ್ತ ಸ್ವರಗಳು ಎಂದರು. ಸಾಧಾರಣ ವಿಂಗಡಣೆಗೆ ಈ ಸಂಖ್ಯೆಯನ್ನು ಉಪಯೋಗಿಸಿದರು. ಎರಡು ಸೀಮೆಗಳ ಮಧ್ಯೆ ಇರುವ "ಗಡಿ" ಈ ಏಳು. ಇದಕ್ಕೆ "ಸಂಧಿ" ಎಂದರು. ಕಾಲಮಾನದಲ್ಲಿ ಇದನ್ನು "ಸಂಧ್ಯಾ ಕಾಲ" ಎಂದರು. ಈ ಸಂಧ್ಯಾಕಾಲ ವಿಪತ್ತು. ಈ ಕಾರಣ ಅದರ ನಿವಾರಣೆಗೆ ದೇವತಾ ಸ್ಮರಣೆ. ಸಂಧ್ಯಾದೇವಿ. ಗಾಯಿತ್ರಿಯ ಉಪಾಸನೆ ಕತ್ತಲು ಬೆಳಕುಗಳ ಸಂಧಿಕಾಲ "ಪ್ರಾತಃ ಸಂಧ್ಯಾ" ಎಂದರು. ಈ ಕಾಲದಲ್ಲಿ ದೇವತೆಗಳ ಒಲ ಉದಯ. ಬೆಳಕು ಕತ್ತಲು ಸಂಧಿಗೆ "ಸಾಯಂ ಸಂಧ್ಯಾ" ಎಂದರು. ಇಲ್ಲಿ ರಾಕ್ಷಸರಿಗೆ ಬಲವೃದ್ಧಿ. ರಾಕ್ಷಸತ್ವ ಎಂದರೆ ಭಯ. ಕತ್ತಲು ಎಂದರೆ ಭಯ. ಈ ಭಯ ನಿವಾರಣೆಗೆ ಗಾಯತ್ರೀ ಉಪಾಸನೆ ಅಗತ್ಯ ಎಂದರು.

## ರಾಹುವಿನ ಪ್ರಭಾವ

ಏಳು "ಸಂಧಿ"ಯ ಸಂಖ್ಯೆ. ಎರಡು ಪ್ರತ್ಯೇಕ ತತ್ವಗಳ ಮಿಲನ ಅಥವಾ ಬೇರೆ ಆಗುವ ಸ್ಥಿತಿ. ಇಲ್ಲಿ ಎರಡು ತತ್ವಗಳ ಕನಿಷ್ಠ ಪ್ರಮಾಣದ ಮಿಶ್ರಣದ ಸ್ಥಿತಿ. State of mixture of two different entities ಸಂಧ್ಯಾ ಕಾಲದಲ್ಲಿ ಬೆಳಕು - ಕತ್ತಲುಗಳ ಕಲಬೆರಕೆಯ ಕಾಲ. ಇದನ್ನೇ Twilight ಎಂದರು. ಕತ್ತಲಿಗೆ ಕತ್ತಲಲ್ಲ. ಬೆಳಕಿಗೆ ಬೆಳಕಲ್ಲ. ಪೂರ್ವ ತತ್ವದ ಅವನತಿ ಉತ್ತರ ತತ್ವದ ಪ್ರಗತಿ ಇದರ ಗುಣ. ಎರಡು ವಿರೋಧ ತತ್ವಗಳ ಅಪೂರ್ವ ಮಿಲನ ಈ ರಾಹುವಿನ ಗುಣ. ಈ ಕಾರಣ ಇದು ಪ್ರಕೃತಿ ಗುಣವನ್ನು ಕಳೆದು ಕೊಳ್ಳುತ್ತೆ. ವಿಕೃತ ಗುಣ ಆಗುತ್ತೆ.

ಈ ವಿಂಗಡಣೆಯಲ್ಲಿ ದೇವತೆಗಳ ರೂಪಗಳೂ ಇವೆ. ತಲೆ ಒಂದು. ದೇಹ ಮತ್ತೊಂದು. ಇದು ವಿಕೃತ ರೂಪ. ಉದಾಹರಣೆಗೆ ಗಣಪತಿ. ನರಹರಿ ಇತ್ಯಾದಿ. ಈಶ್ವರ ತತ್ವ ವಿಷ್ಣು ತತ್ವ ಎರಡರ ಬೆರಕೆ ಈ ನರಹರಿ. ಈ ಕಾರಣ ಇದನ್ನು ಭಾಗವತದ (೭) ಏಳನೆಯ ಸ್ಕಂಧದಲ್ಲಿ ಹೇಳಿದರು. ಪ್ರಕೃತಿ ಎಂದರೆ ಶುದ್ಧ ರೂಪದ್ದು. ಅದಕ್ಕೆ ಅಪವಾದ ವಿಕೃತಿ. ಕಾರ್ಯಸಾಧನೆಗಾಗಿ ಈ ವಿಕೃತ ರೂಪು ಬಂದೀತು. ಇದರಿಂದ ಇಂತಹ ರೂಪಿನ ದೇವತೆಗೆ "ತಂತ್ರ ಮೂರ್ತಿ" ಎಂದರು. ಕಾರ್ಯಸಾಧನೆಗಾಗಿ ಅಪೂರ್ವದ ಹಾದಿ ಹಿಡಿಯುವ ಗುಣ ಈ ರಾಹುವಿಗೆ. ಈ ಕಾರಣ ಇದನ್ನು ತಂತ್ರ ಗ್ರಹ ಎಂದರು.

ದೈಹಿಕವಾಗಿ ಈ ಸಂಖ್ಯೆ ಎರಡು ಭಾಗಗಳು ಸೇರುವ ಸ್ಥಾನ. ರುಂಡ ಮುಂಡಗಳು ಸೇರುವ "ಕತ್ತು" ಅಥವಾ "ಸ್ಕಂಧ" ಈ ರಾಹು. ಮುಂಡ ಕೈಕಾಲುಗಳ ಸಂಧಿ "ನಡು" ಮತ್ತು "ಕಂಕಳು" ಈ ರಾಹು. ಎರಡು ದೇಶಗಳು ಸೇರುವ "ಗಡಿ"ಯೂ ಸಹ ಇದನ್ನೇ ತೋರಿಸುತ್ತೆ.

(೭) ಏಳು ಸಂಖ್ಯೆ ರಾಹುವಿನದು. ವಿದೇಶೀಯರ ಮತವೂ ಅಷ್ಟೆ. ಈ ಕಾರಣ ಈ ಸಂಖ್ಯೆಗೆ ರಾಹುವಿನ ಗುಣ. ಸರ್ಪವೇ ರಾಹು. ಹಾವಿನ ಗುಣ ಏಳರ ಗುಣ ಎನ್ನಬಹುದು.

## ಎರಡು ಮತ್ತು ಏಳು ಸಂಖ್ಯೆಗಳ ಜಂಟಿ ಪ್ರಭಾವ

ಈ ಸಂಖ್ಯೆ ತಿಂಗಳಿನ ಏಳನೇ ತಾರೀಖು ಹುಟ್ಟಿದವರಿಗೆ ಏಳು ನಾಯಕ ಸಂಖ್ಯೆ. ಏಳನೆಯ ಗರ್ಭದಲ್ಲಿ ಜನನವಾದವರಿಗೂ ಅಷ್ಟೆ. ಇದೇ ಕಾರಣದಿಂದ ಸರ್ಪದೇವತೆಯಾದ ಆದಿಶೇಷನು ಏಳನೆಯ ಗರ್ಭ ಸಂಜಾತನು. ಎರಡು ಗರ್ಭಕೋಶಗಳ ಸಂಕರದಿಂದ ಹುಟ್ಟಿದವನು. ದೇವಕಿಯ ಗರ್ಭದಿಂದ ರೋಹಿಣಿಯ ಗರ್ಭಕ್ಕೆ ಸ್ಥಳಾಂತರವನ್ನು ಹೊಂದಿ ಜನಿಸಿದವನು. ಈ ಕಾರಣ ಗರ್ಭ ಸಂಕರ ಅಥವಾ ಸಂಕರ್ಷಣ ಎಂದು ಹೆಸರಾಯಿತು. ಏಳನೆಯ ಇಸ್ವಿ ಏಳನೆಯ ತಿಂಗಳಿನ ಏಳು ಘಂಟೆಗೆ ಜನಿಸಿದವರಿಗೆ ಈ ಸಂಖ್ಯೆಯ ಗುಣದ ಪ್ರಭಾವ ಹಿರಿದು.

### ತಂತ್ರದ ಬುದ್ಧಿ

ಇತರ ಸಂಖ್ಯೆಗಳ ಬೆರಕೆಯಿಂದ ಇವನ ಗುಣ ಬೇರೆಬೇರೆ. ಉದಾಹರಣೆಗೆ ಎರಡನೆಯ ಗರ್ಭ. ಇದಕ್ಕೆ ಬುಧಅಧಿಪತಿ. ಏಳನೆಯ ತಾರೀಖು ಜನನ. ಆಗ ಈ ಬುಧ ರಾಹುಗಳ ಮಿಲಿತದ ಫಲ. ಇದು ಬುದ್ಧಿವಂತರ ಸಂಖ್ಯೆ. ತಂತ್ರದ ಬುದ್ಧಿ ಉಪಾಯದಿಂದ ಅಪಾಯ ಗೆಲ್ಲುವವರು. ಹಾವಿನಂತೆ ಏಟಿಗೆ ಸಿಗದೆ ನುಣುಚಿಕೊಂಡು ತಪ್ಪಿಸಿಕೊಳ್ಳುವ ಮಂದಿ. ಮಾತಿಗೆ ಸಿಕ್ಕಿ ಬೀಳುವ ಜನ ಇವರಲ್ಲ evasive type ಹೀಗೂ ಸರಿ ಹಾಗೂ ಸರಿ ಎನ್ನುವ ಸೂಕ್ಷ್ಮ ಬುದ್ಧಿವಂತರು. ಗಣಿತ ಶಾಸ್ತ್ರ ಕೋವಿದರು. ಗಣಿತ ವಿಲಾಸಿಗಳು. ತಂತ್ರ ಶಾಸ್ತ್ರವೇತ್ತರು. ವಿಕೃತ ರೂಪಿಗಳಾದ ಗಣಪತಿ, ನರಹರಿ ದೇವರ ಉಪಾಸಕರು. ವಿದೇಶ ಭಾಷಾಚತುರರು. ಎಂತರ ಬಿಕ್ಕಟ್ಟಿದ್ದರೂ ತಪ್ಪಿಸಿಕೊಳ್ಳುವ ಚಾಕಚಕ್ಯತೆ. ಸುಳ್ಳು ಇಲ್ಲ. ಸಂದೇಹದ ಮಾತಿನವರು. ವಿಕೃತ ರೂಪದ ವಿಕಟ ಹಾಸ್ಯ. ವಿಡಂಬನೆ ಇವರ ಮಾತು.

ಇವರು ವಿಜ್ಞಾನಗ್ರಂಥ ನಿರ್ಮಾತರು. ಈ ಪ್ರಭಾವ ಎರಡನೆಯ ತಿಂಗಳ ಏಳನೆಯ ತಾರೀಖಿಗೂ ಸಲ್ಲುತ್ತದೆ. ಯಾವುದೋ ರೀತಿ ೨ (ಬುಧ) ೭ (ರಾಹು) ಸಂಖ್ಯೆಗಳ ಬೆರಕೆ ಆದರೆ ಸರಿ. ಆದರೆ ಅದು ೨೭ ಆಗದು. ಬೇರೆ ಬೇರೆ ತತ್ವಗಳ ಸಂಖ್ಯೆಗಳಾಗಬೇಕು.

### ಜಾತಿ ಮಿಶ್ರಣ

ಇವರು ಹುಟ್ಟಿದ ಮನೆಯಲ್ಲಿ ಎರಡು ಜಾತಿಗಳು ಬೆರೆತಿರುತ್ತದೆ. ತಂದೆ ವೈಷ್ಣವ ತಾಯಿ ಸ್ಮಾರ್ತರು ಅಥವಾ ತಿರುಗು ಮುರುಗು. ಈ ರೀತಿ ಬೇರೆ ಬೇರೆ ಜಾತಿಗಳ ಮಿಶ್ರಣ. ಮನೆದೇವರೂ ಸಹ ಇದೇ ರೀತಿಯ ತಂತ್ರ ಮೂರ್ತಿಗಳಾದ ನರಹರಿ, ಗಣಪತಿ ಇತ್ಯಾದಿ. ಇಟ್ಟ ಹೆಸರು ಒಂದು, ಕೂಗುವುದು ಮತ್ತೊಂದು. ಇಲ್ಲಿ ಎರಡು ದೇವತೆಗಳ ಮಿಶ್ರಣದ ಹೆಸರು ಇದ್ದೀತು. ಹರಿಹರ , ನರಹರಿ, ಶಿವರಾಮ ಅಥವಾ ಸರ್ಪದ ಹೆಸರು. ಹೆಸರನ್ನು ಕೂಗುವುದೂ ಸಹ ವಿಕೃತ. ನರಸಿಂಹ ಹೋಗಿ ನಚ್ಚು ಆಗುವುದು ಇತ್ಯಾದಿ.

ಎರಡು ಲಗ್ನಗಳ ಸಂಧಿ ನಕ್ಷತ್ರ ಸಂಧಿ, ರಾಶಿ ಸಂಧಿ, ಕಾಲ ಸಂಧಿ, ಈ ರೀತಿ ಇರುವಾಗ ಜನನ. ಈ ಕಾರಣ ಇವರಿಗೆ ಬಾಲ್ಯದಲ್ಲಿ ಗಂಡಯೋಗ. ಏಳನೆಯ ವರ್ಷದಲ್ಲಿ ಮನೆಯಲ್ಲಿ ಸಾವು ಇತ್ಯಾದಿ ಕಷ್ಟಗಳು. ಎರಡರ ಸಂಖ್ಯೆಯ ತಿಂಗಳಿನ (ಫೆಬ್ರವರಿ) ಏಳನೆಯ ತಾರೀಖಿಗೆ, ಅಥವಾ ಎರಡನೆಯ ಗರ್ಭದ ಏಳನೆಯ ತಾರೀಖು ಜನನದ ಫಲ ಈ ರೀತಿ.

ಇವರಿಗೆ ಸಾಧಾರಣವಾಗಿ ಗಣಿತ ಶಾಸ್ತ್ರ, ಔಷಧಗಳ ತಯಾರಿಕೆ, ಮಾರಾಟ ಮತ್ತು ವರ್ತಮಾನ ಇಲಾಖೆಯ ಉದ್ಯಮಗಳಲ್ಲಿ ಜೀನ ನಡೆದೀತು. ಈ ಜನನಗಳಿಗೆ ಚಿತ್ರ ವಿಚಿತ್ರ ಘಟನೆಗಳು ೭, ೧೭, ೩೭, ೪೭, ೫೭, ೬೭ ವಯಸ್ಸುಗಳಲ್ಲಿ ಪ್ರಧಾನವಾಗಿ ನಡೆಯುತ್ತವೆ. ಇದು ಅಪವಾದ ಸಂಖ್ಯೆ. ಈ ಕಾರಣ ಯಾವುದೇ ಉದ್ಯೋಗ ಘಟನೆಗಳು ಎರಡನೆಯ ಪ್ರಯತ್ನದಿಂದ ಫಲದಾಯಕವು.

## ಮೂರು ಮತ್ತು ಏಳರ ಸಮನ್ವಯ

ಮೂರು (೩) ಕುಜ ಶನಿಯೋಗದ ಸಂಖ್ಯೆ. ಇದು ಮಂಗಳ ದೋಷದ ಸೂಚನೆ. (೭) ಏಳು ರಾಹುವಿನ ಸಂಖ್ಯೆ. ಈ ಎರಡು ಸಂಖ್ಯೆಗಳ ಪರಸ್ಪರ ಪ್ರತಿಕ್ರಿಯೆ ಇನ್ನೂ ಕೆಟ್ಟದ್ದು ಇದಕ್ಕೆ ಸರ್ಪದೋಷ ಎಂದರು. ಕಾರಣ ಕುಜ ರಾಹುಗಳು ಪರಸ್ಪರ ದ್ವೇಷಿಗಳು. ಇದು ದ್ವೇಷದ ಸಂಖ್ಯೆ, ಶನಿ ಬೆರೆತರೆ ಆಗ ಇದು ದೋಷ. ಈ ಕಾರಣ ಸರ್ಪದೋಷ. ಸರ್ಪದಂತೆ ಮತ್ಸರ ಸಾಧಿಸುವುದು ಇದರ ಗುಣ. ಶನಿಯೋಗವಿಲ್ಲ, ಆಗ ಇದು ಕೇವಲ ಹಠ, ಸಾಧನೆಯ ಪ್ರವೃತ್ತಿ.

ಮೂರನೆಯ ತಿಂಗಳಿನ( ಮಾರ್ಚಿ) ಏಳನೆಯ ತಾರೀಖು(೭) ಹುಟ್ಟಿದವರಿಗೆ ಈ ಪ್ರಭಾವ ತೀವ್ರ. ಮೂರನೆಯ ಗರ್ಭದಲ್ಲಿ ಏಳನೆಯ ತಾರೀಖು ಹುಟ್ಟಿದರೂ ಅಷ್ಟೆ. ಹಾಗಿಲ್ಲ ಏಳನೆಯ ತಾರೀಖಿನವನ ಸಂಗಡ ಮೂರನೆಯ ತಾರೀಖಿನವನು ಸೇರಿದರೂ ಇದೇ ಫಲ. ಆದರೆ ಇಲ್ಲಿ ೭೩ ಆದರೆ ದೋಷ. ೨೭ಕ್ಕೆ ಇದು ಅನ್ವಯಿಸದು. ಕಾರಣ (೩)

ಮೂರು ದಶಕವಾದರೆ (೩೦) ಅದು ಗುಣವಾಗಿ (೩೦) ಶೌರ್ಯವನ್ನು ತೋರಿಸುತ್ತೆ. ಏಳು ಜನರ ಒಕ್ಕೂಟದಲ್ಲಿ ಮೂರನೆಯವನಿಗೆ ಈ ಫಲ ನಡೆದೀತು.

### ಗಂಡಾಂತರ ಯೋಗ

ಇದು ಪ್ರಬಲ ಗಂಡಾಂತರ ಯೋಗ. ಆಕಸ್ಮಿಕ ದುರಂತದಲ್ಲಿ ಬರುವ ಅಪಮೃತ್ಯು. ವಿಕಲಾಂಗದ ಯೋಗ ಅಂದರು. ವಾಹನಗಳಿಂದ ಅಪಘಾತ, ಯಂತ್ರಗಳಿಂದ ಅಂಗ ಭಂಗ, ರಕ್ತ ಬಂಧುಗಳ ದ್ವೇಷದಿಂದ ಭೂಮಿ ಕಾಣಿ ಹಾನಿ ಇದರ ಫಲ.

ಮದುವೆಯಾದ ಏಳು ವರ್ಷಗಳು ಕಷ್ಟ. ಮೂರನೆಯ ವರ್ಷದಲ್ಲಿ ಸಕಾರಣ. ಇಲ್ಲ, ಗಂಡ ಹೆಂಡರಿಗೆ ದೂರ ವಸತಿ. ಆದರೆ ಇಲ್ಲಿ ಶುಭ ಸಂಬಂಧವಿದೆ. ಆಗ ಇದು ವಿದೇಶಯಾತ್ರೆಯ ಯೋಗ ಈ ಯೋಗ ಯಾವುದೇ ದಶಕದ ಮೂರು ಮತ್ತು ಏಳನೆಯ ವರ್ಷದಲ್ಲಿ ನಡೆಯುತ್ತೆ. ಏಳನೆಯ ವರ್ಷ ಮೂರನೆಯ ತಿಂಗಳು ಹಾಗಿಲ್ಲ ಮೂರನೆಯ ವರ್ಷ ಏಳನೆಯ ತಿಂಗಳು ಈ ರೀತಿ ಅಂಕೆ ಸಮನ್ವಯ. ಈ ದ್ವಂದ್ವ ಸಂಖ್ಯೆಯ ಪರಸ್ಪರ ವೇಧೆ ಜನ್ಮಾದಿ ೩. ೭. ೧೩. ೪೩. ೪೭. ೬೩. ೬೭. ೭೬ ವರ್ಷಗಳಲ್ಲಿ ಕಂಡೀತು. ಇಷ್ಟೇ ಏಕೆ ವಾಸ ಮಾಡುವ ಮನೆಗೆ ೭೩ ಸಂಖ್ಯೆ ಇದೆ. ಆಗಲೂ ಇದರ ಪ್ರಭಾವ ತಪ್ಪಿದ್ದಲ್ಲ. ಕೊನೆಗೆ ೬೭ನೆಯ ಇಸ್ವಿ. ಈ ವರ್ಷ ಪರಸ್ಪರ ಘರ್ಷಣೆಯ ವರ್ಷ. ರಾಜಕೀಯದಲ್ಲಿ ಅಂತರ ಕಲಹದ ವರ್ಷ. ಒಗ್ಗಟ್ಟಿಗೆ ಮುಗ್ಗಟ್ಟು ತಂದು ಇಬ್ಬಂದಿ ಆದ ವರ್ಷ. ಇಸ್ವಿಯ ಸಂಖ್ಯಾ ಫಲ ದೇಶಕ್ಕೆ, ವರ್ಷ ಪ್ರಾಯದ ಫಲ ವೈಯಕ್ತಿಕ. ವಾಹನಾದಿಗಳಿಗೆ ಬರುವ ಸಂಖ್ಯೆ ಕೂಡ ಈ ಕಾಯಿದೆಗೆ ತಪ್ಪಿದ್ದಲ್ಲ. ಉದಾಹರಣೆಗೆ ವಾಹನಕ್ಕೆ ೬೭೩ ಸಂಖ್ಯೆ ಇದೆ. ಈ ಇಸ್ವಿ ತಿಂಗಳಲ್ಲಿ ಅದು ಅಪಘಾತಕ್ಕೆ ಗುರಿ. ಆದರೆ ೭೩೬ ಹಾಗಲ್ಲ, ಇದು ಕೇವಲ ರಿಪೇರಿಯ ಸಂಖ್ಯೆ, ಮೂರರ ನಂತರ ೬ ಇರುವುದೇ ಕಾರಣ.

ಈ ಜನಗಳಿಗೆ ಪ್ರತಿ ದಶಕದ ೭ನೆಯ ವರ್ಷ ಅಶುಭ. ೬೭ನೆಯ ವರ್ಷ ಅಪಘಾತ. ೭೬ ವರ್ಷ ಆಯುಷ್ಯ. ೭೩ನೆಯ ವರ್ಷ ಕಾಯಿಲೆ ಶಸ್ತ್ರಚಿಕಿತ್ಸೆಯಿಂದ ಮೃತಿ. ಕೊನೆಗಾಲದಲ್ಲಿ ಕಷ್ಟ. ಇವರಿಗೆ ಆಗುವವರು ಕಡಿಮೆ. ನಾಗದೇವತಾ ಪ್ರಸಾದದಿಂದ ಇವರಿಗೆ ಸಂತಾನಪ್ರಾಪ್ತಿ. ಹಾಗಿಲ್ಲ ಮೂರನೆಯ ತಿಂಗಳು ಗರ್ಭಸ್ರಾವ ಆದರೂ ಇವರಿಗೆ ಮಕ್ಕಳಿಂದ ಸುಖ ಇರದು.

## ಏಳರ ಮೇಲೆ ನಾಲ್ಕರ ಪ್ರಭಾವ

ನಾಲ್ಕು ಚಂದ್ರನ ಸಂಖ್ಯೆ. ಏಳು ರಾಹುವಿನ ಸಂಖ್ಯೆ. ಈ ಎರಡು ಸಂಖ್ಯೆಗಳ ಪ್ರತಿಕ್ರಿಯೆ ಕೇವಲ ಮನಸ್ಸಿನ ಮೇಲೆ ಮಾತ್ರ. ಕಾರಣ ಚಂದ್ರನು ಮನಸ್ಸಿನ ಗ್ರಹ. ಹುಟ್ಟು ಜಾತಕಗಳಲ್ಲಿ ಚಂದ್ರ ರಾಹು ಯೋಗವಿದೆ. ಆಗಲೂ ಈ ಸಂಖ್ಯೆಯ ಪ್ರತಿಕ್ರಿಯೆ ಇರುತ್ತದೆ. ಮೊತ್ತದಲ್ಲಿ ರಾಹುಗ್ರಸ್ತ ಚಂದ್ರ ಈ ಯೋಗ.

ನಾಲ್ಕನೆಯ ಗರ್ಭದಲ್ಲಿ ಏಳನೆಯ ತಾರೀಖಿನಲ್ಲಿ ಜನನ. ಹಾಗಿಲ್ಲ ಏಳನೆಯ ಗರ್ಭದಲ್ಲಿ ನಾಲ್ಕನೆಯ ತಾರೀಖು. ಈ ರೀತಿ ಇದ್ದರೆ ಈ ಫಲ. ಹಾಗಿಲ್ಲ ೪೭ನೆಯ

ಇಷ್ಟಿಯ ಜನನ ಆಗಲೂ ಅಷ್ಟೆ. ಇದರಿಂದೇನು? ಕ್ಷಣ ಚಿತ್ತ ಕ್ಷಣ ಪಿತ್ತದ ಮನಸ್ಸು. ಗ್ರಹಣ ಹಿಡಿದ ಚಂದ್ರನಂತೆ ಫಲ. ಇದರಿಂದ ತಾಯಿಗೆ ಮನೋವ್ಯಾಕುಲ ರಾಹು ಚಂದ್ರಯೋಗ ತೀರ್ಥಯಾತ್ರೆಯ ಯೋಗ. ಇವರಿಗೆ ಅಲೆದಾಟ ಪ್ರಿಯ. ಯಾತ್ರೆಗಳೂ ಪ್ರಿಯ. ಈ ಸಂಖ್ಯೆಯ ವಾಹನಕ್ಕೂ ಅಷ್ಟೇ. ಬಿಡುವಿಲ್ಲದ ಓಡಾಟ. ಆದರೆ ಈ ಸಂಖ್ಯೆ ವ್ಯಾಪಾರಿಗೆ ಉತ್ತಮ. ಆದರೆ ಆಗಾಗ ಕಳ್ಳತನದ ಭೀತಿ ಇರುತ್ತೆ. ಕಾರಣ ಚಂದ್ರ ವ್ಯಾಪಾರಿ. ರಾಹು ಕಳ್ಳತನದ ತತ್ವ.

ಈ ರೀತಿ ಫಲ ನಲ್ವತ್ತು ವರುಷಗಳವರೆಗೆ ತೀವ್ರ. ಅನಂತರ ಇದು ಮೇಲು. ನಂಜುಂಡೇಶ್ವರನ ಅನುಗ್ರಹದಿಂದ ಎಲ್ಲವೂ ಪಾರು. ಉತ್ತಮ ದರ್ಜೆಯ ವ್ಯಾಪಾರದಿಂದ ಸ್ಥಿತಿವಂತನಾದಾನು. ಮಾನಸಿಕ ಪರಿವರ್ತನೆ ಆಗಿ ಮೇಲ್ಮಟ್ಟದ ಜೀವನ. ಆದರೆ ಬುದ್ಧಿ ಬಹು ಸೂಕ್ಷ್ಮ. ಒಂದು ಹೇಳಿದರೆ ಹೆಚ್ಚು ಮತ್ತೊಂದು ಹೇಳಿದರೆ ಕಡಿಮೆ. ಅಂತೂ ಈ ಜನಗಳಲ್ಲಿ ಏಗುವುದು ಕಷ್ಟ.

ಈ ಜನಗಳಿಗೆ ೧೫ ವರ್ಷ ಪ್ರಾಯದವರೆಗೆ ಕಷ್ಟ. ನಲ್ವತ್ತರ ನಂತರ ಉತ್ತಮ. ಏಳನೆಯ ವರ್ಷದಲ್ಲಿ ಮಾತೃಹಾನಿ ಇಲ್ಲ ಜಲಗಂಡ. ಆಯುಷ್ಯಮಿತಿ ೩೮ ವರ್ಷಗಳು.

## ಗುರುವಿನ ಸಂಖ್ಯೆಯ ಪ್ರತಿಕ್ರಿಯೆ

(೭) ಏಳನೆಯ ತಾರೀಖು. (೫) ಐದನೆಯ ತಿಂಗಳು (ಮೇ) ಹಾಗಿಲ್ಲ. ಐದನೆಯ ಗರ್ಭ ಏಳನೆಯ ತಾರೀಖು. ಈ ಜನಗಳಲ್ಲಿ ಈ ಎರಡು ಪ್ರತಿಕ್ರಿಯೆ ಸ್ಪಷ್ಟ. ಆದರೆ ಈ ಪ್ರತಿಕ್ರಿಯೆಯ ಪರಿಣಾಮ ಶುಭ ತರುತ್ತದೆ. ಕಾರಣ ಗುರುವು ಅನುಗ್ರಹ ಕರ್ತನು. ದೇವತಾ ಕೃಪೆಯಿಂದ ಈ ಜನನ. ನಾಗಶಾಂತಿ ಇಲ್ಲ. ಮತ್ತೊಂದು. ಅಂತೂ ದೇವತಾ ಸೇವೆಯಿಂದ ಈ ಸಂತಾನ. ವಂಶದ ಕುಡಿ ಅಭಿವೃದ್ಧಿ.

ಈ ಜನಗಳಿಗೆ ಗುರು ರಾಹು ಯೋಗ. ಇದು ಧನ ಸಂಚಯ ಯೋಗ. ಸ್ವಭಾವತಃ ಲೋಭಿಗಳು. ಕಾಸಿಗೆ ಬೆಲೆ ಹೆಚ್ಚು. ಮನುಷ್ಯರಿಗೆ ಬೆಲೆ ಕಡಿಮೆ. ವಯಸ್ಸಿನ ದಶಕಗಳಲ್ಲಿ ಐದು (೫) ಏಳನೆಯ (೭) ವರ್ಷ ಬಂದಾಗ ಇವರಿಗೆ ಉತ್ತಮ ಹಣ ಕೂಡಿಡುವ ಹುಂಬಲ. ಮನೆಯಲ್ಲಿ ಗರ್ಭಧಾರಣೆ ಆದಾಗಲೂ ಈ ರೀತಿ ಹಣ ಬಂದು ಸೇರುತ್ತೆ. ಹಾಗಿಲ್ಲ ಕೂಡಿಟ್ಟ ಹಣ ಬಂದು ಸೇರುತ್ತೆ. ಇವರಿಗೆ ಚಿಲ್ಲರೆ ದುಡ್ಡು ಖರ್ಚು ಮಾಡುವ ಯೋಗ ಇರದು. ಇವರು ಕೂಡಿಡುವುದೇ ಖರ್ಚಿಗೆ. ಆದರೆ ಈ ಅರಿವು ಇವರಿಗೆ ಮೂಡದು.

ಸಾಧಾರಣ ಈ ಜನಗಳು ಬ್ಯಾಂಕು. ವ್ಯವಹಾರ. ಲೇವಾದೇವಿ ಉದ್ಯಮಗಳಲ್ಲಿ ಜಯಶೀಲರು. ಹೆಂಗಸರಿಗೆ ಬಹು ಪುತ್ರ ಯೋಗ. ಪ್ರಾಯದ ವರ್ಷ ೧೭ ೩೭. ೫೭. ಈ ವರ್ಷಗಳಲ್ಲಿ ಇವರಿಗೆ ಪ್ರಬಲ ಧನಯೋಗವಿದೆ. ಸಂತಾನದಿಂದಲೂ ಸುಯೋಗ.

# ೮

# ಎಂಟು ಮಾಯಾ ಸಂಖ್ಯೆ - ಶಕ್ತಿ

ಶ್ರೀಹರಿಯಿಂದ ಈ ಲೋಕ. ಸೃಷ್ಟಿಕರ್ತನೂ ಅವನೇ. ಇದಕ್ಕೆ ಉಪಯೋಗಿಸಿದ ಶಕ್ತಿಯೇ ಮಾಯೆ. ಇದನ್ನು ವೈಷ್ಣವೀ ಮಾಯೆ ಎಂದರು. ಈ ಶಕ್ತಿಯು ಅಷ್ಟವಿಧ. ಅಷ್ಟಮಿಯಾ ತಿಥಿಗೆ ದೇವತೆ ಮಾಯೆ ದುರ್ಗಾ. ಕಾರಣ ಈ ಎಂಟು (೮) ಸಂಖ್ಯೆಗೆ ಮಾಯೆಯು ಸಂಖ್ಯೆ ಎಂದರು. ಬುದ್ಧಿ, ಮೋಹ ಒಂದು ನಮೂನೆ ಮಾಯೆ. ಬುದ್ಧಿ ಮೋಹ ಎಂದರೆ ಪ್ರೀತಿ, ಕಾಮ, ಮೋಹ, ವಾತ್ಸಲ್ಯ, ಭಕ್ತಿ ಇತ್ಯಾದಿ. ಇದರಿಂದ ಪ್ರಪಂಚದ ಪಾಲನೆ.

ಕರುಣೆ ಇಲ್ಲ. ಆಗ ದಾನ ಧರ್ಮಗಳಿರದು. ಭಕ್ತಿ ಇಲ್ಲ. ಆಗ ದೇವರು ದೇವಾಸ್ಥಾನಗಳು ಇರವು. ಕಾಮ ಪ್ರೇಮಗಳಿಲ್ಲ. ದಾಂಪತ್ಯ ಇರದು. ಸಂತಾನವೂ ಇರದು. ಜನವೆಲ್ಲಿ? ಜಗತ್ತೆಲ್ಲಿ? ಬುದ್ಧಿಯ ಮೋಹ ಜಾಲಗಳು ನಾನಾ ರೀತಿ. ಇವು ಬಂಧನದ ರೀತಿಗಳು. ಭಕ್ತಿಯೂ ಮೋಹವೇ ಸರಿ. ಆದರೆ ಅದು ದೇವರ ಮೇಲೆ ಈ ಕಾರಣ ಇದು ಜಾಗ್ರತಿಯ ವಿವೇಕ. ಅವನಿಂದ ದೂರ ಒಯ್ಯುವ ಬುದ್ಧಿಯ ಭಾವನೆಗಳು ಮಾಯೆ. ಈ ಮನೋವಿಚಾರಗಳು ನಿದ್ರೆಯತ್ತ ಸೆಳೆಯುತ್ತದೆ. ನಿದ್ರೆ ಎಂದರೆ ಕತ್ತಲು. ದೇವರು ಜ್ಞಾನದ ಸ್ತಂಭ, ಜ್ಯೋತಿಯ ನೆಲೆ. ಅದರಿಂದ ದೂರ ಇರುವುದು ಕತ್ತಲು. ಉದಾಹರಣೆಗೆ ಪ್ರೇಮ ಶುಭದ ಭಾವನೆ. ತ್ಯಾಗದ ಸಂಕೇತ. ಆದರೆ ಅದು ಹೆಣ್ಣಿಗಾಗಿ, ದೇವರಿಗಾಗಿ ಅಲ್ಲ. ಈ ಕಾರಣ ಇದು ಜ್ಯೋತಿಯ ಬಂಧನ ಅಲ್ಲ, ಕತ್ತಲಿನ ಬಂಧನ. ಇದರಿಂದ ದುಃಖ ಕೊನೆಯ ಫಲ. ಆದರೆ ಈ ಪ್ರೇಮ ಬಂಧನ ಶ್ರೀಹರಿಯ ಶಕ್ತಿ. ಇದರಿಂದ ಗಂಡ ಹೆಂಡಿರು, ಸಂಸಾರ, ಜಗತ್ತು ಇತ್ಯಾದಿ.

ಈ ಮಾಯೆ, ನಮ್ಮನ್ನು ದೇವರಿಂದ ದೂರ ಎಳೆಯುತ್ತದೆ. ಇದು ಕಷ್ಟದ ಬದಿಗೆ ತಳ್ಳುವ ಮೋಹ ಜಾಲ. ಈ ಮಾಯೆಯ ಗುರಿ - ದುಃಖ. ಅದರ ಪ್ರಭಾವ ಬುದ್ಧಿಯ ಮೇಲೆ. ಬುದ್ಧಿಗೆ ಗ್ರಹ ಬುಧ. ಗುರಿಯಾದ ದುಃಖವೇ ಶನಿ. ಈ ಕಾರಣ (೮) ಎಂಟು ಸಂಖ್ಯೆಗೆ ಬುಧ ಶನಿ ಯೋಗ ಎಂದರು.

ಮಾಯೆಯಾದ ಶಕ್ತಿಗೆ ಎಂಟು ಕೈಗಳು. ಮಾಯಾವಿ ಕೃಷ್ಣನು ಎಂಟನೆಯ ಗರ್ಭದವನು. ಈ ಸಂಖ್ಯೆ ಈ ಕಾರಣ ಪುರುಷ ಸಂಖ್ಯೆಯಲ್ಲ. ಎಂಟನೆಯ ಗರ್ಭ ಸ್ತ್ರೀ ಜನನ ಎಂದರು. ಈ ಸಂಖ್ಯೆಗೆ ಬುಧ ಶನಿಯೋಗ. ಇದು ನಪುಂಸಕ ಯೋಗ. ಪುರುಷನಲ್ಲ ಎಂದರ್ಥ. ಈ ಕಾರಣ ಶ್ರೀಕೃಷ್ಣ ಹುಟ್ಟಿದಾಗ ಎಂಟನೆಯದು ಹೆಣ್ಣು ಎಂದರು. ಆ ಹೆಣ್ಣು ದುರ್ಗಾ

ಎಂದರು. ಮೋಹ ಮಾಡುವ ಕಾರಣ ಮೋಹನ ಎಂದರು. ಮೊತ್ತದಲ್ಲಿ ಎಂಟು ಹೆಣ್ಣಿನ ಸಂಖ್ಯೆ. ಬುದ್ಧಿ ಮೋಹದಿಂದ ಆಗುವ ಕಷ್ಟ ಈ ಸಂಖ್ಯೆಯ ಗುಣ. ಇದನ್ನು "ಪ್ರಮಾದ" ಎಂದರು.

## ಆಯುಷ್ಯ ಸ್ಥಾನ

ಬುಧ ಶನಿ ಸಂಖ್ಯೆ (೮) ಎಂಟು. ಇದರ ಫಲ ನಿದ್ರೆ ಎಂದರು. ನಿದ್ರೆ, ದೀರ್ಘ ನಿದ್ರೆಯಾದರೆ ಅದು ಸಾವು. ಈ ಕಾರಣ ಜಾತಕದಲ್ಲಿ ಎಂಟನೆಯ ಮನೆ ಆಯುಷ್ಯ ಸ್ಥಾನ ಎಂದರು. ಇದು ಪ್ರಾಣ ವಾಯುವಿನ ಕೊನೆ ಉಸಿರು. ಈ ಕಾರಣ ಪ್ರಾಣ ವಾಯು ಈ ಎಂಟನೆಯ ಸಂಖ್ಯೆ. ವಾತ ರೋಗಗಳಿಗೂ ಇದೇ ಸಂಖ್ಯೆ ಆಧಾರ. ಮೊತ್ತದಲ್ಲಿ ಎಂಟನೆಯ ಸಂಖ್ಯೆಗೆ ಬುಧ ಶನಿಯೋಗ. ಇದು ಬುಧನ ತೀವ್ರ ದೋಷದ ಸಂಖ್ಯೆ. ಇದು ಬಂಧನದ ಯೋಗ. ಬಂಧನ ಗೃಹಗಳಾದ ಜೈಲು, ಉನ್ಮಾದ ಆಸ್ಪತ್ರೆ ಇದರ ಸ್ಥಾನಗಳು. ಇದಕ್ಕೆ ಸರಿಯಾಗಿ ಶ್ರೀ ಕೃಷ್ಣನ ಜನ್ಮಸ್ಥಳವೂ ಜೈಲೇ! ಒಟ್ಟಿನಲ್ಲಿ ಎಂಟು ಮಾಯಾ ಶಕ್ತಿ. ಈ ಶಕ್ತಿಯೇ ಪ್ರಕೃತಿ, ಪ್ರಕೃತಿ ಪ್ರಧಾನ ಸ್ಥಾನಗಳು. ಈ ಎಂಟನೆಯ ಸಂಖ್ಯೆಯ ಬೀಡು. ಪ್ರಕೃತಿಯ ಮನೋವಿಕಾರಗಳಿಗೂ ಸಂಖ್ಯೆ (೮) ಎಂಟೇ ಸರಿ.

ಒಂದು ಸಂಖ್ಯೆಯಿಂದ ಎಂಟು ಸಂಖ್ಯೆಯವರೆಗೆ ಈ ವಿಕಾರಗಳು. ಈ ಎರಡು ಸಂಖ್ಯೆಯ ಯೋಗ ಹದಿನೆಂಟು. ವಿಕಾರದ ಅಜ್ಞಾನ ಕಳೆಯಲು ಈ ಹದಿನೆಂಟು ಪುರಾಣ ಗಳನ್ನು ಬರೆದರು.

ಒಂದು (೧) ಸಂಖ್ಯೆ. ಇದು ಜೀವ. ಶೂನ್ಯ (೦) ಪರಮಾತ್ಮನು. ಶೂನ್ಯಕ್ಕೆ ಇತರ ಸಂಖ್ಯೆಗಳು ಬೆರೆತರೆ ಶೂನ್ಯವೇ ಆಗುತ್ತೆ. ಆದರೆ ಒಂದು ಹಾಗಲ್ಲ. ಆ ಸಂಖ್ಯೆಗಳ ಗುಣದಲ್ಲಿ ಈ ಒಂದು ಲೀನ ಆಗುತ್ತೆ. ಜೀವನು ಗುಣ ಸಂಖ್ಯೆಗಳಲ್ಲಿ ಲೀನ. ಆ ಗುಣ ಸಂಖ್ಯೆಯ ಪ್ರಭಾವದಲ್ಲಿ ಈ ಒಂದರ ಪ್ರಭಾವ ಅಡಗಿ ಮರೆಯಾಗುತ್ತದೆ.

ಉದಾಹರಣೆಗೆ ೧×೨ =೨, ೧×೩ = ೩ ಇತ್ಯಾದಿ. ಎರಡರಲ್ಲಿ ಬುದ್ಧಿ ಮೂರರಲ್ಲಿ ವಿರಸ ನಾಲ್ಕು ಭೌತಿಕ ಸುಖ. ಐದರಲ್ಲಿ ಸಂತಾನ ಮೋಹ, ಜ್ಞಾನ ವಿಕಾಸ. ಆರರಲ್ಲಿ ಶತ್ರು ಜಯದ ಪರಾಕ್ರಮ. ಏಳರಲ್ಲಿ ಸಾವು ಇತ್ಯಾದಿ ಗುಣಗಳು ಇದು ಮಾಯೆ. ಮಾಯೆ ಎಂದರೆ ಮನುಷ್ಯನ ಸಹಜ ಗುಣಗಳು. ಇದು ಅವನ ಪ್ರಕೃತಿ ಧರ್ಮ, ಗುಣಗಳು. ಇದರ ಪರಿಣಾಮ ಜೀವತ್ವದ ಗುರಿಯ ನಾಶ. ಈ ನಾಶ ಈ ಗುಣ ಸಂಖ್ಯೆಗಳ ಪರಿಣಾಮ. ಈ ಪರಿಣಾಮ (ನಾಶ) ಎಂಟು (೮) ಸಂಖ್ಯೆಯಲ್ಲಿ. ಈ ಎಂಟು ಈ ಕಾರಣ ದುಃಖ ಸಂಖ್ಯೆ. ಕಾರಣ, ಗುರಿ ತಪ್ಪಿದ ಜೀವನಿಗೆ (೧) ದುಃಖ ಗುರಿಯಾದರೂ ಏನು? ಸೃಷ್ಟಿಕರ್ತನಾದ ಪರಮಾತ್ಮನ ಸಾನ್ನಿಧ್ಯವನ್ನು ಪಡೆಯುವುದು.

ಮೊತ್ತದಲ್ಲಿ ಎಂಟರ ಗುಣಗಳು - ಬುದ್ಧಿ ಮೋಹ, ನಿದ್ರೆ, ದುಃಖ, ಕಷ್ಟ, ಬುಧನ ದೋಷಗಳು, ಬುಧನ ರೋಗಗಳು. ಮೋಹದ ಪರಿಣಾಮ ನಿತ್ರಾಣ, ನಿಶ್ಚೇಷ್ಟೆ. ಆಗ ಆಶ್ರಯದ ಅಗತ್ಯ. ಅನನ್ಯತೆಯ ದೀನ ಭಾವ. ಈ ಅನನ್ಯ ಶರಣ್ಯದ ಬಯಕೆ ಭಕ್ತಿ. ಈ

ಕಾರಣ (೮) ಎಂಟು ಭಕ್ತಿಯ ಸಂಖ್ಯೆ ಎಂದರು. ಬುಧ, ಶನಿ ನಪುಂಸಕ ಯೋಗ. ವೀರ್ಯ ಪೌರುಷ ನಾಶದ ಯೋಗ. ಆಗ ಪುರುಷನಲ್ಲಿ ಆಶ್ರಯದ ಬೇಡಿಕೆ. ಇದೇ ಭಕ್ತಿ. ಭಕ್ತರ ತಂಡಗಳೂ ಈ ಎಂಟನೆಯ ಗುಣದ ಸಂಕೇತ.

ಸಾಧಾರಣ ಈ ಎಂಟು ಸಂಖ್ಯೆಯ ಫಲ ಎಂಟನೆಯ ವರ್ಷದಲ್ಲಿ ನಡೆಯುತ್ತೆ. ಪ್ರಥಮ ಎಂಟು ವರ್ಷಗಳು ಹೆಚ್ಚಿನ ಫಲ. ಅನಂತರ ೧೮, ೨೮, ೩೮, ೪೮, ೫೮ ಇತ್ಯಾದಿ. ಪ್ರತಿ ಎಂಟನೆಯ ವರ್ಷ ಬಂದಾಗ ಅದರ ಫಲದ ಅನುಭವ. ಈ ಕಾರಣ ಎಂಟನೆಯವನಾದ ಕೃಷ್ಣನಿಗೆ ಎಂಟು ವರ್ಷಗಳವರೆಗೆ ಅನ್ಯರ ಪೋಷಣೆ ಎಂಟು ವರ್ಷಗಳ ನಂತರ ಈ ಬುಧ ಶನಿಯೋಗದ ಮೋಹ ಅಥವಾ ಕಲಿ ರೂಪನಾದ ಕಂಸನ ಸಂಹಾರ. ಆಗ ಈ ದೋಷದ ಪರಿಹಾರ.

## ಜೀವಿತದಲ್ಲಿ ಪ್ರಭಾವ

ಎಂಟನೆಯ ತಾರೀಖು, ಎಂಟನೆಯ ತಿಂಗಳು, ಎಂಟನೆಯ ಗರ್ಭ - ಈ ರೀತಿ ಜನನಗಳಲ್ಲಿ ಈ ಸಂಖ್ಯೆಯ ಪರಿಣಾಮ ಪೂರ್ಣ. ಈ ಫಲ, ಎಂಟನೆಯ ಗರ್ಭಕ್ಕೆ ಹೆಚ್ಚು ಫಲದಾಯಕ.

(೮) ಎಂಟು ಸಂಖ್ಯೆಗೆ ಬುಧನ ದೋಷ. ಕಾರಣ, ಬುಧ ಶನಿ ಸಂಯೋಗ. ಈ ಕಾರಣ ಎಂಟು ವರ್ಷಗಳು ಬಾಲ್ಯದಲ್ಲಿ ಕಷ್ಟ. ಈ ಕಾಲದಲ್ಲಿ ಬಂಧುಗಳಿಗೆ ಹಾನಿ, ಬೇರೆಯವರಲ್ಲಿ ಆಶ್ರಯ. ವೃದ್ಧ ಬಂದುಗಳಿಗೆ ಈ ಕಾಲದಲ್ಲಿ ಅರಿಷ್ಟ. ಬುಧನ ಕಾಯಿಲೆಗಳಿಂದ ಸಾವು ಇಲ್ಲ ನೋವು. ಚರ್ಮವ್ಯಾದಿ. ಶ್ವಾಸಕೋಶಗಳ ತೊಡಕು, ಸೇವಕರಿಂದ ಕೇಡು. ಈ ಕಾಲದಲ್ಲಿ ಬುಧನ ಎಂದರೆ ಹರಿಯ ಪ್ರಾಣಿ ಹಸುವಿನ ಸೇವೆ. ಪೂಜೆ. ಆರೈಕೆ ಉತ್ತಮ ಶಾಂತಿ. ಹಾಗಿಲ್ಲ ಆ ಜನಗಳಲ್ಲಿ ಆತ್ಮೀಯತೆಯಾದರೂ ಸರಿ. ಈ ಎಂಟು ವರ್ಷಗಳು ಬಾಲ್ಯ. ಆಗ ಬುದ್ಧಿಗೆ ಮಂಕು. "ಎಂಟು ವರ್ಷಕ್ಕೆ ಮಗ ದಂಟು" ಎನ್ನುವ ಗಾದೆ ಇವರಿಗೆ ಸಲ್ಲುತ್ತೆ.

ಪ್ರಕೃತಿ ಸೌಂದರ್ಯ ಇವರಿಗೆ ಪ್ರಿಯ. ಪ್ರಕೃತಿಯ ನೆಲೆಯಾದ ಹಳ್ಳಿಗಳೂ ಪ್ರಿಯ. ಉದ್ಯಾನ ವನಗಳಲ್ಲಿ ಅಡ್ಡಾಡುವುದು ಹವ್ಯಾಸ ಕೆಲವರಿಗೆ. ಇವರಿಗೆ ನೆನಪು ಕಡಿಮೆ. ಮರೆವು ಹೇಳಲಾಗದು. ಈ ಕಾರಣ ಇವರಿಗೆ ವಿದ್ಯೆಯಲ್ಲಿ ಮೊದ ಮೊದಲು ಕಷ್ಟ. ಇದಕ್ಕೆ ಶಾಂತಿ ಬುಧನ ಕ್ರಿಯೆ. ಇದು ಬರೆದು ಓದುವುದು "ಕರೆಯದೆ ಬರುವವನ ಬರೆಯದೆ ಓದುವವನ" ಎಂದು ಸರ್ವಜ್ಞ ಇವರಿಗಾಗಿ ಹೇಳಿದ್ದು.

ಬುಧನ ಅರಿಷ್ಟ, ಬಾಲ್ಯದಲ್ಲಿ ಆದರೆ ಬೆಳೆ ಬೆಳೆಯುತ್ತಾ ಕಡಿಮೆ. ಜೀವನದಲ್ಲಿ ಇವರು ಬಂಧುಗಳಿಂದ ದೂರ. ಬಂಧುಗಳೂ ಇವರಿಂದ ದೂರ. ಕುಟುಂಬದಲ್ಲಿ ಹೊರಗಿನವರಂತೆ ಇವರ ನಡವಳಿಕೆ. ಎದುರು ಕಂಡಾಗ ಮಾತು. ಅವರ ನೆರವು. ಅವರು ಹೋದರೆ ನೆನಪೂ ಅವರ ಹಿಂದೆಯೇ ಹೋದೀತು. (out of sight-out of mind) ಎಂದಂತೆ. ಇದರಿಂದ ಇವರಿಗೆ ಅಪವಾದ ಕಟ್ಟಿಟ್ಟ ಬುತ್ತಿ.

# ಒಂಭತ್ತು-ಜ್ಯೋತಿಯ ಸಂಖ್ಯೆ

# ಸೂರ್ಯ ಪ್ರಭಾವ

ಒಂದು (೧) ನಿರ್ಗುಣ ಸಂಖ್ಯೆ. ಸ್ವಂತಗುಣವಿಲ್ಲದ ಸಂಖ್ಯೆ. ಇತರ ಸಂಖ್ಯೆಗಳಲ್ಲಿ ಇದರ ಗುಣ ಲೀನ. ಗಣಿತಕ್ರಿಯೆಯಲ್ಲಿ ಇದು ಈ ರೀತಿ ಶೂನ್ಯ (0) ದಿಂದ ಬೇರೆ ಆಗಿದೆ. ಶೂನ್ಯಮಾತ್ರ ಇತರ ಸಂಖ್ಯೆಗಳ ಗುಣವನ್ನು ನಾಶ ಮಾಡುತ್ತೆ. ಅಲ್ಲದೆ ತನ್ನಂತೆ ಮಾರ್ಪಾಡು ಮಾಡುತ್ತೆ. ಶೂನ್ಯ ಮತ್ತು ಒಂದು ಈ ಸಂಖ್ಯೆಗಳ ನಿರ್ಗುಣತ್ವದ ವ್ಯತ್ಯಾಸಕ್ಕೆ ಉದಾಹರಣೆಗೆ ೧×೨=೨. ೧×೩=೩ ಇತ್ಯಾದಿ. ಆದರೆ ಶೂನ್ಯ ಹಾಗಲ್ಲ 0×೧=0. 0×೨=0 ಇತ್ಯಾದಿ.

ಈ ನಿರ್ಗುಣ ಸಂಖ್ಯೆ (೧) ಒಂದು. ಇದಕ್ಕೆ ಇತರ ಸಂಖ್ಯೆಗಳ ಕ್ರಿಯೆ ಗುಣೀಕರಣ ಕ್ರಿಯೆ. ೨. ೩. ೪. ೫. ೬. ೮ ಈ ಸಂಖ್ಯೆಗಳು ಗುಣಮಯ ಕೆಲವು ತಾರಕ ಗುಣದ್ದು. ಉಳಿದದ್ದು ನಾಶಕ ಗುಣದ್ದು. ಹೀಗೂ ಸರಿ. ಹಾಗೂ ಸರಿ. ಎಲ್ಲಾ ಸಂಖ್ಯೆಗಳೂ ಗುಣಮಯ. ಈ ಎಲ್ಲಾ ಗುಣಗಳೂ ಮಾಯೆಯಿಂದ ಕೂಡಿದ್ದು. ಮಾಯೆ ಎಂದರೆ ಪರಮಾತ್ಮನ ಅರಿವಿನಿಂದ ದೂರ ಇಡುವ ಬುದ್ಧಿಯ ಕ್ರಿಯಾವಿಶೇಷ. ಪರಮಾತ್ಮನ ಅರಿವು ಜ್ಞಾನ. ಈ ಜ್ಞಾನಕ್ಕೆ ಮೋಹ ಈ ಮಾಯೆ. ಇದು (೮) ಸಂಖ್ಯೆಯ ಗುಣ. ಅಜ್ಞಾನ, ಜ್ಞಾನವಿಲ್ಲದ್ದು, ನಿದ್ರೆ, ದೀರ್ಘ ನಿದ್ರೆ ಮರಣ. ಈ ಎಲ್ಲ ಗುಣವಿಶೇಷ (೮) ಸಂಖ್ಯೆಗೆ ಸೇರಿದ್ದು. ಇದಕ್ಕೆ ಬುಧ-ಶನಿಗಳ ಸಂಯೋಗ ಇರುತ್ತೆ. ಬುದ್ಧಿ ಬುಧ ಮೋಹ ಶನಿ. ಎರಡರ ಸಂಯೋಗ ಈ ಎಂಟು ಸಂಖ್ಯೆಯ ಫಲ. ಇದರಿಂದ ವಿಮುಕ್ತಿ ಹೇಗೆ? ಬೆಳಕಿನ ಉದಯವೇ ಇದಕ್ಕೆ ಪರಿಹಾರ. ಜ್ಞಾನದ ಬೆಳಕಿನಲ್ಲಿ ಈ ಮಾಯಾ ಕತ್ತಲು ನಾಶ. ಈ ಬೆಳಕಿನ ಸಂಖ್ಯೆ ಉಳಿದ ಸಂಖ್ಯೆಗಳ ಗುಣಗಳ ಕ್ರಿಯೆ. ಪ್ರತಿಕ್ರಿಯೆಗಳ ತಿಕ್ಕಾಟದಿಂದ ಹುಟ್ಟಿದ ತೇಜಸ್ಸು.

ಸಂಖ್ಯೆಗಳ ಗುಣಕ್ರಿಯೆಯಿಂದ ಜೀವನಿಗೆ ಗುಣದ ಅನುಭವ. ಪರಿಣಾಮ ಕಷ್ಟ, ದುಃಖ. ಇದರಿಂದ ಜ್ಞಾನ ಉದಯ. ಈ ಜ್ಞಾನವೇ ಜ್ಯೋತಿ ಹೀಗೆ ಎಂಟು ಸಂಖ್ಯೆಗಳ ನಡೆಯಿಂದ ಬಂದದ್ದು ಸಿಹಿ ಕಹಿ ಅನುಭವ. ಇದರಿಂದ ಮೂಡಿಬಂದದ್ದು ಈ ಜ್ಞಾನ. ಇದು ಜ್ಞಾನ ಜ್ಯೋತಿ. ಜ್ಯೋತಿ ಎಂದರೆ ಪ್ರಕಾಶ. ಈ ಪ್ರಕಾಶ ಸೂರ್ಯನಿಂದ. ಈ ಕಾರಣ ಈ (೯) ಒಂಭತ್ತು ಸಂಖ್ಯೆಗೆ ಸೂರ್ಯನೇ ಅಧಿಪತಿ. ಉದಾಹರಣೆಗೆ ಶ್ರೀರಾಮ ನವಮಿಾ ತಿಥಿಯಲ್ಲಿ

ಜನಿಸಿದನು. ಅಲ್ಲದೆ ಸೂರ್ಯನು ಬಲಿಷ್ಠನಾಗುವ ಮಧ್ಯಾಹ್ನದಲ್ಲಿ ಶ್ರೀರಾಮನ ಜನನ ಎಂದರು. ಸೂರ್ಯನ ವಂಶದಲ್ಲಿ ಜನನ.

### ಆಡಳಿತ ಶಕ್ತಿ ದೈವದತ್ತ

ಸೂರ್ಯ ದೇಹದಲ್ಲಿತಲೆ, ವ್ಯಾಪಾರ ಉದ್ಯಮಗಳಲ್ಲಿ ಆಡಳಿತಗಾರನು. ಸರ್ಕಾರದಲ್ಲಿ ಅಧಿಕಾರಿಯು. ಸೂರ್ಯ ರಾಜಗ್ರಹ. ರಾಜನ ಮಾತು ಆಣತಿ. ಈ ಆಣತಿ ಅವನಿಗೆ ಸ್ವಭಾವ. ಎಲ್ಲರೂ ಯಾವ ಮಾತಿಗೆ ತಲೆ ಬಾಗುವರೋ ಅವರೇ ರಾಜರು. ಯತ್ನದ ಅಗತ್ಯವಿಲ್ಲದೆ ಈ ಶಕ್ತಿ ದೈವದತ್ತ. ಇದು ಸೂರ್ಯಗ್ರಹದ ಪ್ರಭಾವ. ರಾಜ ಈಗಿಲ್ಲ. ಆದರೆ ಈ ಗುಣ ಯಾರಲ್ಲಿ? ಅವರಿಗೆ ಈ ಸೂರ್ಯನ ಪ್ರಭಾವ. ಅವನ ವಾಣಿ ಅಧಿಕಾರವಾಣಿ, ಯಂತ್ರಗಳಂತೆ ಇತರರು ಅದಕ್ಕೆ ಬದ್ಧ!

ಸೂರ್ಯನ ಸಂಖ್ಯೆ ಒಂಭತ್ತು (೯). ಈ ಸಂಖ್ಯೆಯ ಗುಣ ಸೂರ್ಯನ ಗುಣ. ಈ ಸೂರ್ಯನಿಗೆ ಈ ಶಕ್ತಿ ಹೇಗೆ? ಅವನ ತಾಪ, ಪ್ರತಾಪ ಅಂತಹುದು! ಬೆಂಕಿಯ ಉತ್ಕಟಾವಸ್ಥೆ ಈ ಜ್ಯೋತಿ. ಬೆಂಕಿ ಈ ಜ್ಯೋತಿಗೆ ಪೂರ್ವಜನ್ಮ. ಈ ಬೆಂಕಿ ಅಂಗಾರಕ. ಈ ಅಂಗಾರಕನ ಸಂಖ್ಯೆ ಆರು (೬). ಇದರಿಂದ ಬೆಂಕಿ ಜ್ಯೋತಿಗೆ ಅಧೀನ. (೬) ಸಂಖ್ಯೆ. ಈ ಸೂರ್ಯನ (೯)ನೇ ಸಂಖ್ಯೆಗೆ ಅಧೀನ. ಈ ಬೆಂಕಿಗೆ ಪೂರ್ವಜನ್ಮ ಕೊಳ್ಳಿ. ಸೌದೆ. ಹೊಗೆಯಿಂದ ಕೂಡಿದ ಕೊಳ್ಳಿ. ಇದಕ್ಕೆ ಕುಜ ಶನಿಯೋಗ ಇದರ ಸಂಖ್ಯೆ ಮೂರು. ಈ ಕಾರಣ ಮೂರು (೩) ಆರು (೬) ಒಂಭತ್ತು (೯) ಒಂದೇವರ್ಗದ ಪ್ರಗತಿ ಪಥದ ಸಂಖ್ಯೆಗಳು.

## ಜೀವಿತದಲ್ಲಿ ಒಂಭತ್ತರ ಪ್ರಭಾವ

ಈ ಸಂಖ್ಯೆಯ ಗುಣ ಪ್ರಭಾವ. (೯) ಒಂಭತ್ತನೆಯ ತಾರೀಖಿನಲ್ಲಿ ಜನಿಸಿದವರಿಗೆ. ಒಂಭತ್ತನೆಯ ಗರ್ಭದಲ್ಲಿ ಜನಿಸಿದವರಿಗೆ ಒಂದು ಕೂಟದಲ್ಲಿ ಒಂಭತ್ತನೆಯವನಿಗೆ, ಹಾಗಿಲ್ಲ ಯಾವುದೇ ಸಂಸ್ಥೆಯಲ್ಲಿ ಆಡಳಿತಗಾರನಿಗೆ ಈ ಸಂಖ್ಯೆಯ ಪ್ರಭಾವ ಹೆಚ್ಚು.

ಈ ತಾರೀಖಿನಲ್ಲಿ ಭಾನುವಾರ ಜನನ. ಆಗ ಇನ್ನೂ ವಿಶೇಷ. ಇವರು ಶ್ರೀ ರಾಮ ನಂತೆ ಋಜು ಸ್ವಭಾವದವರು. ಸಮಯ ಅತಿ ಅಗತ್ಯ. ಆಗ ಸುಳ್ಳೂ ಹೇಳಿಯಾರು ಆದರೆ ಅನಂತರ ಇವರಿಗೆ. ತೀವ್ರ ಪಶ್ಚಾತ್ತಾಪ. ಇವರಿಗೆ ಅಭಿಮಾನ ಹೆಚ್ಚು. ಎಲ್ಲರೂ ತಮ್ಮ ಗುಣಗಾನ ಮಾಡಬೇಕು. ಈ ಬಯಕೆ. ಆ ರೀತಿಯ ಹೊಗಳುಭಟ್ಟರಿಗೆ ಇವರು ಉದಾರಿ ಗಳು. ಆದರೆ ಇವರಿಗೂ ದೋಷಗಳು ಇದ್ದೀತು. ಅದನ್ನು ಎತ್ತಿ ಆಡಬಾರದು. ಅಂತಹವ ರಿಗೆ ಇವರು ಕೃತಘ್ನರು! ಆದರೆ ಅದರ ಅರಿವು ಆಯಿತು. ತಮ್ಮನ್ನು ತಾವೇ ತಿದ್ದಿ ಕೊಂಡಾರು. ಇವರನ್ನು ಇತರರು ತಿದ್ದಬಾರದು. ಅಷ್ಟೇ ಇವರಿಗೆ ಬೇಕಾದ್ದು. ಕಾರಣ ಅದರಿಂದ ಅವರ ಅಹಂ ಮಾನಕ್ಕೆ ಪೆಟ್ಟು.

ಇವರು ದಕ್ಷ ಆಡಳಿತಗಾರರು. ಕಾಯಿದೆ, ಕಾನೂನು ಶಾಸನಗಳಂತೆ ನಡೆಯುವ ಮಂದಿ. ತುಂಬಾ ಹೊಗಳಿದರೆ ಅಡ್ಡದಾರಿ ಹಿಡಿದು ಸಹಾಯ ಮಾಡಿಯಾರು. ಇದರಿಂದ

ಅಪಖ್ಯಾತಿಯೂ ಬಂದೀತು. ಆಗ ತಮ್ಮ ಸ್ವಭಾವದ ನ್ಯೂನತೆಯ ಅರಿವು. ಆಗ ತಿದ್ದಿಕೊಳ್ಳಲು ಯತ್ನ. ಆದರೆ ಅದು ಆಳರೂಢಿಯ ಸ್ವಭಾವ. ಸರಿಪಡಿಸಲೂ ಆಗದು. ಮನೆಯಲ್ಲಿ ಇವರಿಗೆ ಜವಾಬ್ದಾರಿ ಇಷ್ಟ. ಎಲ್ಲರೂ ಇವರ ಮಾತನ್ನೇ ಕೇಳಲಿ ಎಂದೇ ಬಲವಾದ ಇಚ್ಛೆ. ಇದಕ್ಕೆ ಸುಖವನ್ನೂ ತ್ಯಾಗಮಾಡುವ ಮಂದಿ. ಇವರಿಗೆ ಕಾರ್ಯಗಳಲ್ಲಿ ಸಹಾಯಕ್ಕೆ (೬) ಆರು ಸಂಖ್ಯೆಯ ಜನಗಳು ಬೇಕು. ಸಖ್ಯವನ್ನು ಬೇಡರು. ಕಾರಣ ಸ್ವಾತ್ಮಾಭಿಮಾನ. ಮಂದಿಯನ್ನು ಕೇಳುವ ಬದಲು ದೇವರನ್ನು ಗುಟ್ಟಾಗಿಯೇ ಬೇಡಿಕೊಂಡಾರು!

ಗುರು ಅನುಕೂಲತೆ ಇವರಿಗೆ ಅಗತ್ಯ. ಗಣಪತಿಯ ಮತದಂತೆ ಈ (೯) ಒಂಭತ್ತನೆಯ ಸಂಖ್ಯೆಗೆ ರವಿ-ಗುರು ಸಂಯೋಗ ಎಂದರು. ಭಾನುವಾರ ಒಂಭತ್ತನೆಯ ತಾರೀಖು. ರವಿಯೂ ಉಚ್ಚರಾಶಿ (ಎಪ್ರಿಲ್-ಮೇ ತಿಂಗಳು). ಕೃತ್ತಿಕಾ ನಕ್ಷತ್ರ ರವಿ ದೇಶಾನಕ್ಷತ್ರ ಬೇರೆ. ಇಲ್ಲಿ ಗುರುವಿನ ಅಂಶ. ಆ ಗುರುವೂ ಉಚ್ಚರಾಶಿ. ಸೂರ್ಯನು ಬಲಿಯಾದ ನೇರ ಮಧ್ಯಾಹ್ನ ಜನನ. ಆಗ ಇವನು ಅಪ್ರಾಹತ ಆಜ್ಞಾಶಾಸಕನಾದ ರಾಜನೇ ಸರಿ!

ಗುರುವಿನ ಸಂಖ್ಯೆ ಐದು (೫). ಈ ಸಂಖ್ಯೆಯ ಜನಗಳಿಂದ ಇವರಿಗೆ ಸುಯೋಗವಿದೆ. ಹೆಚ್ಚು ಕಡಿಮೆ ಅವರ ಹಿತನುಡಿಯನ್ನು ಕೇಳುವ ಮಂದಿ ಇವರು. ಅವರ ಬಗ್ಗೆ ಇವರಿಗೆ ವಿಶ್ವಾಸ. ಗೌರವವೂ ಹೆಚ್ಚು. ಆದರೆ (೬) ಆರನೆಯ ಸಂಖ್ಯೆ ಜನ ಇವರಿಗೆ ಅಧೀನ. ಇವರು ಹೇಳಿದ್ದು ಅವರು ಕೇಳಬೇಕು. ಅದರಂತೆ ಅವರು ನಡೆಯಬೇಕು. ಇದೇ ಇವರ ನೀತಿ.

[illegible]ಗೆ ಮೂರು (೩) ಸಂಖ್ಯೆಯ ಜನಗಳ ಮೇಲೆ ಉಪೇಕ್ಷೆ . ಕಾರಣ ಅವರಿಂದ ಇವ[illegible] ಉಪಯೋಗವೂ ಇರದು. ಆದರೆ (೬) ಸಂಖ್ಯೆಯ ಜನಗಳ ಅಭಿಮಾನಕ್ಕಾಗಿ ಈ [illegible] ಸಂಖ್ಯೆಯ ಜನಗಳಿಗೆ ಆಶ್ರಯ ಕೊಟ್ಟಾರು. ಈ (೯) ಒಂಭತ್ತು ಸಂಖ್ಯೆ[illegible] ಸಾಧಾರಣವಾಗಿ ಸರಕಾರದ ಕೆಲಸಗಳಲ್ಲಿ ಜಯಶೀಲರು. ಅಧಿಕಾರಿಗಳಿಗೆ [illegible] ಸರಕಾರಕ್ಕೆ ಕಂಕಣಬದ್ಧ ಅಧಿಕಾರಿಗಳು.

[illegible] ೯-೩೦-೪೯-೪೯-೫೯ ವರ್ಷಗಳು ಯೋಗದಾಯಕ. ೧೩-೨೩-೩೩-೪೩- [illegible] ಅರಿಷ್ಟದ ಫಲ. ೩೦ನೆಯ ವರ್ಷ ಇವರಿಗೆ ಉತ್ತಮ [illegible] ವಾದದು. ಈ ಜನಗಳಿಗೆ ತುಲಾಮಾಸ (ಅಕ್ಟೋಬರ್) ಬಹುಕಷ್ಟದ ತಿಂಗಳು. ಇವರಿಗೆ ಆಯುಷ್ಯ ಹೆಚ್ಚು. ಅಂತ್ಯದಲ್ಲಿ ಜ್ವರ ಪೀಡೆಯಿಂದ ಮೃತ್ಯು.

## ಇತರ ಸಂಖ್ಯೆಗಳ ಪರಿಣಾಮ

ಒಂಭತ್ತನೆಯ ತಾರೀಖು ಮೊದಲನೆಯ ಗರ್ಭ. ಇಲ್ಲಿ ಒಂಭತ್ತು ಒಂದು. ಈ ಎರಡು ಸಂಖ್ಯೆಗಳ ಪರಸ್ಪರ ಪ್ರತಿಕ್ರಿಯೆ. ಹಾಗಿಲ್ಲ ಒಂಭತ್ತನೆಯ ಗರ್ಭ ಒಂದನೆಯ ತಾರೀಖು. ಈಗಿನ ಸರ್ಕಾರದ ಕಾಯಿದೆಗೆ ಇದು ವಿರೋಧ. ಆದರೂ ಈ ಸಂಖ್ಯೆಯ ಗರ್ಭದ ಜನನ ಅಲ್ಲಲ್ಲಿ ಕಂಡೀತು!

ಒಂಭತ್ತು ಸಂಖ್ಯೆಗೆ. ರವಿ. ಒಂದು ಶನಿ. ಇಲ್ಲಿ ರವಿ ಶನಿಯೋಗ. ಇದರಿಂದ ಅವಯೋಗ. ಹಿರಿಯ ಮಗನಿಗೆ ಇದು ಜವಾಬ್ದಾರಿಯ ಸಂಖ್ಯೆ. ಸಂಸಾರದ ಹೊಣೆ ಇವರಿಗೆ ಗುರುತರ ಗುರಿ. ಇವರಿಗೆ ಸುಖ ಅಲ್ಲ. ಸುಖದ ಆಸೆಯೂ ಅಲ್ಲ. ಎಲ್ಲಾ ಕೆಲಸಗಳಿಗೂ ಇವರು ಮೊದಲಿಗರು. ಆದರೆ ಶುಭ ಫಲದ ಅನುಭವಕ್ಕೆ ಮಾತ್ರ ಕೊನೆಯಾಳು!

ಉದ್ಯೋಗ ಕಾರಕ ರವಿ. ಈ ಕಾರಣ ಇವರಿಗೆ ಯಾವಾಗಲೂ ಕೆಲಸ. ಈ ಕೆಲಸ ಆ ಕೆಲಸ. ಇವರ ಕೆಲಸ. ಅವರ ಕೆಲಸ. ಇದರಿಂದ ಇವರು ಸಾರ್ವಜನಿಕ ವ್ಯಕ್ತಿಗಳು. ಆದರೆ ಮಾನೆಯಾಕೆಯ ಗಮನ ಮಾತ್ರ ಇರದು. ಆಕೆಗೆ ಇವರಿಂದ ನಿರಾಸೆ. ಮನೆಯಲ್ಲಿ ಸಂಬಳವಿಲ್ಲದ ದುಡಿಯಾಳು. ಇವರು ಯಜಮಾನರು. ಎಲ್ಲದಕ್ಕೂ ಇವರದೇ ತಲೆ. ರವಿಗೆ ಶುಭಯೋಗ, ಆಗ ಇದರಿಂದ ಕೀರ್ತಿ. ಆದರೆ ಹಿರಿಯ ಮಗನ ಯೋಗ ಶನಿಯದು. ಇದರಿಂದ ಇವರಿಗೆ ಕೀರ್ತಿಯ ಬದಲು ಅಪವಾದ. ಅಪಕೀರ್ತಿ ಕೆಲಸ ಆಗಬೇಕು. ಆಗ ಇವರು. ಕೆಲಸ ಆಯಿತು. ಆಗ ಇವರ ಹೆಸರಿಲ್ಲ!

ಆದರೆ ವೈದ್ಯವೃತ್ತಿ ಇವರಿಗೆ ಉತ್ತಮ. ಹಾಗಿಲ್ಲ ಇವರಿಗೆ ಉತ್ತಮ ವೈದ್ಯರ ಸಖ್ಯ. ರವಿಯ ಅವಯೋಗ ಇದ್ದರೂ ಕೀರ್ತಿ ಬರುವ ವೃತ್ತಿ ವೈದ್ಯನದು ನೌಕರಿ ಹಿಡಿಸದು. ಅಧಿಕಾರಿಯ ಟೀಕೆ ಇದಕ್ಕೆ ಕಾರಣ. ಜೀವಿತ ಕಾಲದಲ್ಲಿ ಇವರಿಗೆ ಅಪಕೀರ್ತಿ ಕಟ್ಟಿಟ್ಟ ಬುತ್ತಿ.

ಈ ಜನಗಳಿಗೆ ಸ್ತ್ರೀಸುಖ ಅಷ್ಟು ಮುಖ್ಯ ಇರದು. ಕಾರಣ ಸುಖ ಕಾರಕ ಶುಕ್ರ ಈ ಸಂಖ್ಯೆಯ ರವಿಗೆ ಶತ್ರು. ಮನೆಯಾಕೆಗೆ ತೀವ್ರ ಕಷ್ಟ. ಹಾಗಿಲ್ಲ ಅಲ್ಪಾಯು. ಈ ಕಾರಣ ಇವರಿಗೆ ಎರಡು ಸಂಸಾರದ ಯೋಗ. ಒಂದೇ ಸಂಬಂಧದಲ್ಲಿ ಮಧ್ಯ ವಯಸ್ಸಿನಲ್ಲಿ ಶ್ರೀಮತಿಗೆ ಕಷ್ಟ. ಇಲ್ಲ ಅಪಾಯ ಅನಂತರ ಬ್ರಹ್ಮಚಾರಿಯೋಗ. ಶ್ರೀರಾಮನಿಗೂ ಇದೇ ರೀತಿಯ ಯೋಗ. ಕೆಲವು ಸಂದರ್ಭಗಳಲ್ಲಿ ಮದುವೆಯಾದ ಸ್ತ್ರೀಯನ್ನು ಬಿಟ್ಟು ಒಂಟಿ ಬಾಳಿನವರೂ ಇದ್ದಾರು. ಮೊತ್ತದಲ್ಲಿ ಸ್ತ್ರೀಯರಿಗೆ ಈ ಸಂಖ್ಯೆಯ ಜನಗಳಿಂದ ಸುಖ ಇರದು.

ಈ ಸಂಖ್ಯೆಯ ಹೆಂಗಸರಿಗೆ ಸುಖದ ಸವಿ ಅಲ್ಪ. ಕೀರ್ತಿಗಾಗಿ ಇವರ ಬಾಳು. ತಾವು ಹಾಕದ ಗೆರೆ. ಪತಿಗೆ "ಲಕ್ಷ್ಮಣ ರೇಖೆ". ಅದನ್ನು ದಾಟಲು ಬಿಡರು. ಈ ಹೆಂಗಸರಿಗೆ ಮಕ್ಕಳು ಎಂದರೆ ಪ್ರೀತಿ. ಮಗನಿಂದ ಯೋಗವೂ ಇದ್ದೀತು.

## ೧೦

# ಹತ್ತು- ಕರ್ಮ ಸಂಖ್ಯೆ

ಈ ಪ್ರಪಂಚ ಒಂದಕ್ಕೆ ಅಲ್ಲ, ಎಲ್ಲಕ್ಕೂ ಪರಮಾತ್ಮನೇ ಸೃಷ್ಟಿಕರ್ತ. ಯಾವ ಶಕ್ತಿ ಈ ಸೃಷ್ಟಿಯಮೂಲ? ಆ ಶಕ್ತಿ ಅವನದು. ಅವನಿಗೆ ಒಂದು ಗುಣ ಇದೆ. ಅವನ ಪ್ರಭಾವದಿಂದ ಇತರ ಗುಣ ನಾಶ. ಈ ಗುಣ, ಸಂಖ್ಯೆಗಳಲ್ಲಿ ಶೂನ್ಯ (0) ಕ್ಕೆ ಮಾತ್ರ. ಈ ಶೂನ್ಯ (0) ಎಲ್ಲವನ್ನೂ ತನ್ನಂತೆ ಮಾಡುತ್ತೆ. ಈ ಶೂನ್ಯ ಈ ಕಾರಣ ಪರಮಾತ್ಮ. "ನರನಿಗೆ ನಾರಾಯಣ ಸಿಕ್ಕಿ ನರನು ನಾರಾಯಣ ಆದಾನು" ಎಂದರು.

ಎಲ್ಲ ಈ ಪರಮಾತ್ಮನಿಂದ. ಹಾಗೆಯೇ ಜೀವರಾಶಿಗಳು. ಈ ಜೀವನೂ ನಿರ್ಗುಣ ಆದರೆ ಇವನಿಗೆ ಕ್ರಿಯೆ ಇದೆ. ಆಗ ಆ ಕ್ರಿಯೆಯ ಗುಣ ಇವನಿಗೆ. ತನ್ನ ಗುಣವೇ ನಾಶ. ಇದು ಸಂಖ್ಯೆಗಳಲ್ಲಿ ಒಂದಕ್ಕೆ (೧) ಮಾತ್ರ. ಈ ಒಂದು ಎಲ್ಲಾ ಕ್ರಿಯೆಗಳಿಗೂ ಬದ್ಧ. ಆದರೆ ಕೊನೆಗೆ ಅದು ಶೂನ್ಯದಲ್ಲಿ ಲೀನ. ಈ ಕಾರಣ ಈ ಒಂದಕ್ಕೆ ಏನು ಕೆಲಸ? ಉಳಿದ ೯ (ಒಂಭತ್ತು) ಸಂಖ್ಯೆಗಳ ಕ್ರಿಯೆಗಳ ಅನುಭವ. ಆದರೆ ಅದರ ಗುರಿಮಾತ್ರ ಶೂನ್ಯ (0).

ಈ ಅನುಭವದ ದಾರಿ ಒಂದರಿಂದ (೧) ಒಂಭತ್ತರವರೆಗೆ. (೯). ೧-೨-೩-೪-೫-೬-೭-೮-೯ ಈ ಸಂಖ್ಯೆಗಳ ಹಾದಿ ಈ ಒಂದರ ಪಥ. ದಾರಿ. ಈ ಸಂಖ್ಯೆಗಳೇ ಆ ಪಥದ ನಿಲ್ದಾಣಗಳು. ಈ ದಾರಿಯ ನಡೆ ಒಂದು ನಮೂನೆ "ವಿಧಿ" ಕಾನೂನು. ಕಟ್ಟಳೆ. (೧) ರಿಂದ (೦) ಅಥವಾ ೧೦ ಹತ್ತು "ವಿಧಿ"ಯ ಸಂಖ್ಯೆ. ಈ ಪಥದ ನಡೆಯೇ ಒಂದು ಕೆಲಸ. ಈ ಕೆಲಸ. ಈ ನಡೆಗೆ "ಕರ್ಮ" ಎಂದರು. ಇದರಿಂದ ೧೦ ಸಂಖ್ಯೆ (ಹತ್ತು) ಕರ್ಮದ ಸಂಖ್ಯೆ ಎಂದರು. ಈ ಕಾರಣ ಜಾತಕದಲ್ಲಿ ಹತ್ತನೆಯ ಮನೆ. ಹತ್ತನೆಯ ರಾಶಿಗೆ ಕರ್ಮರಾಶಿ. ಕರ್ಮಭಾವ ಎಂದರು.

ಕರ್ಮ ಎಂದರೆ ವಿಧಿ. ಒಂದು ಕ್ರಮ "ಕಟ್ಟು" ಎಂದು ಅನೇಕರ ಮತ. ಆದರೆ ಅದು ಬದಲಾಗದು. ಎಂದಲ್ಲ. ಕೆಲವೆಡೆ ಬದಲೇ ಆಗದು ಆಗ ಅದು ಪ್ರಾರಬ್ಧ. ಕೆಲವು ಬದಲು ಆದೀತು. ಆಗ ಅದು ವಿಧಿಗೆ ವಿರುದ್ಧ ಆಗ ಅದರಿಂದ ಕಷ್ಟ. ಉದಾಹರಣೆಗೆ "ಚಿತ್ರಕೇತುಃ ಗತೋ ಕಷ್ಟಂ ವಿಧಿಲೋಪ ವಿಮಾರ್ಜನಾತ್" ಎಂದರು.

ಕಾಲದೇಶಾನುಗುಣ ಈ ಕರ್ಮ. ಉದಾಹರಣೆಗೆ ಸಂಸಾರ ಒಂದು ಪ್ರಾರಬ್ಧ. ಮದುವೆ ಆಯಿತು. ಅದು ಬಲವಾದ ಕಟ್ಟು. ಬಿಡಿಸಲಾಗದು. ಈ ವಿಧಿಗೆ ಒಂದು ಕಾಲ. ಆದರೆ ಈಗ ಆ ಕಾಲ ಇಲ್ಲ. ನ್ಯಾಯಾಂಗದಲ್ಲಿ ಆ ಕಟ್ಟು ಹರಿದೀತು. ಈಗ ಅದು ಪ್ರಾರಬ್ಧವೇ? ಅಲ್ಲ.

ಕರ್ಮ, ಜೀವನಿಗೆ ತನ್ನ ಗುರಿ ಮುಟ್ಟಲು ಸಿದ್ಧವಾದ ಪಥ. ಈ ಪಥ ಅವನ ಸನ್ನಿವೇಶಕ್ಕೆ ಅನುಗುಣ. ಅದಕ್ಕೆ ವಿರುದ್ಧದ ನಡೆ ಆ ಹಾದಿಗೆ ಅಡ್ಡಿ. ವ್ಯವಹಾರದಲ್ಲಿ ಕರ್ಮ ಎರಡು ವಿಧ. ಕರ್ಮ, ಎಂದರೆ ಕೆಲಸ. ಕರ್ಮಕ್ಕೆ ಪ್ರತಿಫಲವಿದೆ, ಆಗ ಅದು ಸಫಲ ಕರ್ಮ. ಕರ್ಮಕ್ಕೆ ಫಲ ಬಾರದು. ಆಗ ಅದು ಋಣದ ಕರ್ಮ. ಆದರೆ ಮಾಡದೇ ಇರಲಾಗದು. ಕೆಲವು ಸರಕಾರಿ ನೌಕರರ ಕರ್ಮ ಇದ್ದಂತೆ!

ಈಗ ಉದಾಹರಣೆಗೆ ಜೀವನಿಗೆ ಪರಮಾತ್ಮನ ಸಾನಿಧ್ಯ ಒಂದು ಗುರಿ. ಅವರ ಸಾಧನೆಯ ಬಗ್ಗೆ ಮಾಡುವುದೇ ಕರ್ಮ. ಆ ಕರ್ಮಕ್ಕೆ ಫಲ ಕೊನೆಯಲ್ಲಿ. ವ್ಯವಹಾರದಲ್ಲಿ ಅದರ ಫಲ ಹಂತ ಹಂತದಲ್ಲಿ ಕಾಣದು. ಇದು ಅವ್ಯಕ್ತ ಪರಿಪಾಕ.

ಎರಡನೆಯ ಕರ್ಮ, ಕೆಲಸ. ತಮ್ಮ ತಮ್ಮ ಸ್ವಭಾವದ ಪ್ರೇರಣೆಯಿಂದ ಮಾಡುವ ಕೆಲಸ. ಫಲ ಬರಲಿ ಬಿಡಲಿ ಅದು ಒಂದು ಮೋಹ, ಜೂಜು ಇದ್ದಂತೆ. ಮೊತ್ತದಲ್ಲಿ ಕರ್ಮ ಎಂದರೆ ಕೆಲಸ. ಈ ಕರ್ಮಕ್ಕೆ ಹತ್ತು (೧೦) ಸಂಖ್ಯೆ. ಈ ಸಂಖ್ಯೆಗೆ ಜೀವನು "ಗುರು" ಅಧಿಪತಿ. "ಗುರು" ಗ್ರಹದ ನಡೆ ಈ ಕರ್ಮದ ಹಾದಿ ಎಂದರ್ಥ.

## ಜೀವನದಲ್ಲಿ ಹತ್ತು (ಗುರು) ಸಂಖ್ಯೆ ಪ್ರಭಾವ

ಹತ್ತನೆಯ ತಾರೀಖು (೧೦) ಜನನ. ಹಾಗಿಲ್ಲ ಹತ್ತನೆಯ ಗರ್ಭ. ಈ ಜನನಕ್ಕೆ ಈ ಸಂಖ್ಯೆಯ ಪ್ರಭಾವ. ಈ ಮಂದಿ ದುಡಿಯುವ ಮಂದಿ. ತಮಗೆ ಕೆಲಸ ಇಲ್ಲ. ಆಗ ಅವರ ಇವರ ಕೆಲಸ ಮಾಡಿಯಾರು. ಸುಮ್ಮನೇ ಇರಲು ಆಗದು. ಗುರುವಿನ ಪ್ರಭಾವದಿಂದ ದೇವರ ಕೆಲಸ ಇವರಿಗೆ ಪ್ರಿಯ. ಅಷ್ಟೇ ಅಲ್ಲ. ಅದು ಒಂದು ಸ್ವಭಾವ. ಅದರ ಫಲ ಗುರಿಯತ್ತ ಪ್ರಗತಿ. ವ್ಯಾವಹಾರಿಕ ಫಲ ಇವರಿಗೆ ಅಷ್ಟು ಇರದು.

ಈ ಕರ್ಮಸ್ಥಾನ ಒಂದು ಕಂತೆ. ಇದನ್ನು ಕತ್ತರಿಸಲು ಒಂದು ಕತ್ತರಿ ಅಗತ್ಯ. ಅದಕ್ಕೆ ಕತ್ತರಿ ಗ್ರಹ "ಮಂಗಳ" ಕುಜ ಕತ್ತರಿ. ಖಡ್ಗ ಹಾಗಿಲ್ಲ. ಸುಡುವ ಬೆಂಕಿ. ಈ ಕಾರಣ ಈ ಹತ್ತನೆಯ ರಾಶಿಯಲ್ಲಿ ಈ ಮಂಗಳನಿಗೆ ಪ್ರಧಾನ ಫಲ. ಹತ್ತನೆಯ ರಾಶಿ ಮಕರ. ಕುಜನಿಗೆ ಬಲವಾದ "ಉಚ್ಚ" ಸ್ಥಾನ ಎಂದರು. ಇದರಿಂದ ಹತ್ತನೆಯ ತಾರೀಖಿನವರೆಗೆ ಕುಜನ ಸಂಖ್ಯೆ ಉಪಯುಕ್ತ. ಕುಜನಿಗೆ ಮೂರು (೩) ಅಶುಭ (೬) ಶುಭ. ಈ ಕಾರಣ ೬ನೆಯ ತಿಂಗಳಿನ ೧೦ನೇ ತಾರೀಖು ಶುಭ ಎಂದರು. ಹಾಗಿಲ್ಲ ಈ ಸಂಖ್ಯೆ ಮುಂದಿಗೆ (೬)ನೆಯ ಸಂಖ್ಯೆ ಮಂದಿ ಸಹಾಯಕರು. ಪ್ರತಿ ದಶಕದ ಆರನೆಯ ವರ್ಷ ಇವರಿಗೆ ಸುಯೋಗಕಾಲ, ಉದಾಹರಣೆಗೆ ೧೬, ೨೬, ೩೬, ೪೬, ೫೬, ೬೬, ೭೬ ಇತ್ಯಾದಿ ವರ್ಷಗಳು.

ಇದೇ ರೀತಿ (೯) ಒಂಭತ್ತನೆಯ ತಿಂಗಳಿನ (೧೦) ಹತ್ತನೆಯ ತಾರೀಖಿನ ಜನನದ ಫಲ. ಸೂರ್ಯನೂ ಈ ಕರ್ಮ ಕಳೆಯಲು ಶಕ್ತನು. (೯) ಒಂಭತ್ತು ಸಂಖ್ಯೆಯ ಜನ ಇವರಿಗೆ ಅನುಕೂಲರು. ಇದರಿಂದ ಜನ್ಮಾದಿ ೧೯, ೨೯, ೩೯, ೪೯, ೫೯, ೬೯ ವರ್ಷಗಳಲ್ಲಿ ಸುಯೋಗ. ಈ ವರ್ಷಗಳಲ್ಲಿ ದೇವತಾ ಪ್ರಸಾದ, ಉದ್ಯೋಗ, ಲಾಭ, ನೌಕರಿ ಬಡ್ತಿ ಇತ್ಯಾದಿ ರಾಜಯೋಗಗಳು ನಡೆಯುತ್ತವೆ.

ಹತ್ತು (೧೦) ಸಂಖ್ಯೆಯ ಜನಗಳು ದೇವತಾ ಭಕ್ತರು. ಪರಜನ ಉಪಕಾರಿಗಳು. ಕಷ್ಟಕಾಲದಲ್ಲಿ ಶ್ರಮದಾನ ಮಾಡುವುದು ಇವರಿಗೆ ಸ್ವಭಾವ. ಬ್ರಾಹ್ಮಣರಿಗೆ ಈ ಸಂಖ್ಯೆ ದೇವತಾ ಸಾಧನೆಯ ಜೀವನದ ಸಂಕೇತ. ಈ ಸಂಖ್ಯೆಗೆ ಧನಯೋಗ ಇರದು. ಬಂದರೂ ಉಳಿಯದು. ವ್ಯಾಪಾರಿಗಳಿಗೆ ಈ ಸಂಖ್ಯೆ ಪದೇ ಪದೇ ಧನದ ಬಿಕ್ಕಟ್ಟಿನ ಸಂಕೇತ. ಎಷ್ಟು ಹಣ ಬರಲಿ, ಅದು ಆ ವ್ಯಾಪಾರದ ಪ್ರಗತಿಗೇ ವಿನಿಯೋಗ. ಆದರೆ ಎಲ್ಲಾ ಜನಗಳಿಗೂ ಈ ಸಂಖ್ಯೆ ಧಾರ್ಮಿಕ ಮನೋಧರ್ಮವನ್ನು ಕೊಡುತ್ತೆ. ವೇದಾಂತ ಅಧ್ಯಯನದಿಂದ ಮನಸ್ಸಿಗೆ ನೆಮ್ಮದಿ. ಯತಿಗಳ ಹಿಂದೆ ಬೀಳುವವರಲ್ಲಿ ಈ ೧೦ (ಹತ್ತು) ಸಂಖ್ಯೆಯ ಮಂದಿಯೇ ಹೆಚ್ಚು.

ಈ ಜನಗಳು ವಿದ್ಯಾವಂತರು. ಹೆಚ್ಚಿನಂಶ ವಿದ್ಯಾ ಜೀವಿಗಳು, ವಿದ್ಯಾಪ್ರಗತಿಗಾಗಿ ಇವರದು ಶ್ರದ್ಧೆಯ ದುಡಿಮೆ. ವಿದ್ಯಾಶಾಲೆಯ ಸ್ಥಾಪಕರು, ದೇವಾಲಯದ ದುಡಿಮೆಗಾರರು, ದೇವತಾ ಉಪಾಸಕರು. ಆದರೆ ಇವರಿಗೆ ಜ್ಯೇಷ್ಠ ಪುತ್ರನಿಂದ ಸುಖ ಇರದು. ಕೊನೆಗಾಲದಲ್ಲಿ ಧನವೂ ಇರದು. ಇವರು ಕೀರ್ತಿಶಾಲಿಗಳು, ಧರ್ಮಿಷ್ಠರು, ಸೇವಾನಿರತರು. ಮೊತ್ತದಲ್ಲಿ ಇವರು ಸಜ್ಜನರು.

# ಹನ್ನೊಂದು - ಶುಕ್ರ ಶನಿಯೋಗ

"ಹನ್ನೊಂದು ನಿನಗಿನ್ನೊಂದು" ಇದು ಹುಡುಗರು ಆಟದಲ್ಲಿ ಎಣಿಸಿದಾಗ ಹೇಳುತ್ತಾರೆ. ಈ ಹನ್ನೊಂದು ಬಿಡಿಯಾಗಿ ನಿಲ್ಲದು. ಹನ್ನೆರಡನ್ನು ಬಯಸುತ್ತೆ. ಹನ್ನೆರಡು (೧೨) ಇದು ರಾಶಿಯಲ್ಲಿ ಸೂರ್ಯನ ಸಂಚಾರದಿಂದ ಉತ್ಪತ್ತಿ. ಈ ಕಾರಣ "ದ್ವಾದಶಾತ್ಮಾ ದಿವಾಕರಃ" ಎಂದರು ವರ್ಷದ ಕಾಲವನ್ನು ಸೂರ್ಯನು ಹನ್ನೆರಡು ರೂಪಗುಣಗಳಿಂದ ಭೋಗಿಸುವ ಸಂಖ್ಯೆ. ಇದು ಅವನ ಪಾಲಿಗೆ ಬಂದ ಕರ್ಮ. ಇದನ್ನು ಅನುಭವದಿಂದ ಕಳೆದುಕೊಳ್ಳುತ್ತಾನೆ. ಈ ಕರ್ಮ ಅವನ ಶತ್ರುವಾದ ಶುಕ್ರನಿಂದ ಬಂದದ್ದು. ಈ ಕಾರಣ ಈ ಹನ್ನೆರಡು ಸಂಖ್ಯೆಗೆ ಶುಕ್ರನು ಅಧಿಪತಿ. ಇದು ಭೋಗ ಸಂಖ್ಯೆ. ಸುಖಸಂಪತ್ತಿನ ಸಂಖ್ಯೆ. ಇದಕ್ಕೆ "ಶುಕ್ರಮಂಗಳ" ಯೋಗವಿರುತ್ತೆ. ಮಂಗಳನು ಭೋಗದ ಗ್ರಹ. "ಭುಂಕ್ತೇ ಭೌಮಾನ್ ಭೋಗಾನ್" ಎಂದರು.

ಈ ಹನ್ನೆರಡು ಸಂಖ್ಯೆಗೆ ಒಂದು ಕಡಿಮೆ. ಆಗ ಅದು ಹನ್ನೊಂದು ಆಗುತ್ತೆ. ಭೋಗವಿಲ್ಲದ ಸಂಖ್ಯೆ ಈ ಹನ್ನೊಂದು. ಈ ಊನ ಶನಿಯಿಂದ. ಈ ಕಾರಣ ಈ (೧೧) ಹನ್ನೊಂದು ಸಂಖ್ಯೆಗೆ ಶುಕ್ರ ಶನಿಯೋಗ ಎಂದರು. "ಸುಖಸ್ಯ ಮೂಲಂ ಸ್ತ್ರಿಯಃ" ಎಂದರು. ಇದಿಲ್ಲ. ಆಗ ಸ್ತ್ರೀ ಬಂಧ ಇರದು. ಮಾಯೆಯ ಬಂಧನ ಇರದು. ಸ್ತ್ರೀ ನಿಂದೆ. ಸಂಸಾರ ವೈರ ಇತ್ಯಾದಿ ಗುಣಗಳು ಸಹಜ. ಈ ಕಾರಣ ಈ ಸಂಖ್ಯೆಗೆ ವೇದಾಂತ ಸಂಖ್ಯೆ ಎಂದರು.

ಸುಖ ಶುಕ್ರನಿಂದ. ಶುಕ್ರ ಕಳತ್ರ ಕಾರಕ. ಭೋಗ ಭಾಗಿನಿ ಈ ಕಳತ್ರ. ಹೆಂಡತಿ. ಇದಿಲ್ಲ ಶುಕ್ರನ ಯೋಗ ಇಲ್ಲ ಎಂದರ್ಥ. ಶುಕ್ರಬಲ ಇಲ್ಲದ ಯೋಗ. ಆಗ ಅವನ ಶತ್ರುಗಳಿಗೆ ಬಲ ಹೆಚ್ಚು. ಶುಕ್ರನಿಗೆ ರವಿಶತ್ರು. ಗುರುಮತ್ತೊಬ್ಬ. ಗುರುಜ್ಞಾನಕಾರಕ, ರವಿ ರಾಜಕಾರಕ. ಕೀರ್ತಿ ಪ್ರಚಾರ ಜ್ಯೋತಿ ಎಲ್ಲವೂ ಸೂರ್ಯನಿಂದ. ಈ ಕಾರಣ ಈ ಸಂಖ್ಯೆಗೆ ಗುರು ರವಿಬಲ ಹಿರಿದು.

## ರಹಸ್ಯದ ರಾಶಿ-ಸಂಖ್ಯೆ

ಈ (೧೧) ಹನ್ನೊಂದು ಸಂಖ್ಯೆಗೆ ಜ್ಞಾನ ಯೋಗ ಎಂದರು. ಸಮಸ್ತ ವಿದ್ಯೆಗಳಿಗೆ ಗುರು ಈಶ್ವರನು " ಈಶ್ವರಃ ಸರ್ವವಿದ್ಯಾನಾಂ" ಎಂದರು. ಇದರಿಂದ ಈ ಸಂಖ್ಯೆಗೆ ಈಶ್ವರನು ಅಧಿದೇವತೆ. "ಏಕಾದಶರುದ್ರಾಃ" ಎಂದರು. ಜ್ಯೋತಿಷ್ಯ ಶಾಸ್ತ್ರದಲ್ಲಿ ಈ

ಹನ್ನೊಂದನೆಯ ರಾಶಿ ಕುಂಭ ರಾಶಿ. ಈ ರಾಶಿಯಲ್ಲಿ ಜನಿಸಿದ ದೇವರು ಈಶ್ವರನು. ಇದು ರಹಸ್ಯದ ರಾಶಿ. ಕುಂಭ ಎಂದರೆ ಮಡಿಕೆ. ಒಳಗೇನಿದೆ? ಇದು ತಿಳಿಯದು. ಈಶ್ವರನೂ ಒಂದು ರಹಸ್ಯ. "ಈಶ್ವರಾತ್ಮಕತ್ವಾತ್ ತತ್ರ ಮಹ್ಯಂತಿ ಜಂತವಃ" ಎಂದ ಕಾರಣವೂ ಇದೇ.

ಈ (೧೧) ಹನ್ನೊಂದು ಸಂಖ್ಯೆ ರಹಸ್ಯದ ಸಂಖ್ಯೆ. ಹನ್ನೊಂದನೆಯ ರಾಶಿ ರಹಸ್ಯದ ರಾಶಿ. ಇಲ್ಲಿ ಗುರುಯೋಗದಾಯಕನು ಎಂದರು. ಜ್ಞಾನಕಾರಕಗುರು. ರಹಸ್ಯ ರಾಶಿಯಲ್ಲಿದ್ದಾನೆ. ಆಗ ರಹಸ್ಯ ಜ್ಞಾನಿಯ ಯೋಗ. ರಹಸ್ಯ ದೈವಿಕ. ದೈವಿಕ ರಹಸ್ಯವನ್ನು ತಿಳಿದವನು ಎಂದರ್ಥ. ಇದರಿಂದ ಗುರುವಿಗೆ "ಕುಂಭೇ ಕರ್ಕಟವತ್ ಫಲಂ" ಎಂದರು. ಈ ಕುಂಭದಲ್ಲಿ ಉಚ್ಚ ರಾಶಿಯ ಫಲ ಎಂದರು. ರಹಸ್ಯ ಜ್ಞಾನ ಇದರ ಗುಣ. ಜ್ಞಾನವನ್ನು ರಹಸ್ಯವಾಗಿಡುವುದೂ ಇದರ ಗುಣ.

ದೇವರ ಅವತಾರ ಸ್ವರೂಪ ವೇದವ್ಯಾಸರು. ದೇವರ ಜ್ಞಾನ ಇವರಿಂದ ಪ್ರಚಾರ. ಇದಕ್ಕಾಗಿ ಅವರಿಂದ ರಚಿತವಾದದ್ದು ಪುರಾಣಗಳು, ವೇದಗಳು. ಈ ಗ್ರಂಥಗಳಲ್ಲಿ ಹನ್ನೊಂದನೆಯ ಭಾಗ ವೇದಾಂತಕ್ಕೆ ಮೀಸಲು. ಉದಾಹರಣೆಗೆ ಶ್ರೀಮತ್ ಭಾಗವತದ ಏಕಾದಶ ಸ್ಕಂದ.

ಈ ವಿಶಿಷ್ಟ ಜ್ಞಾನ ಮಾಯೆಯ ನಿರೋಧದಿಂದ ಉತ್ಪತ್ತಿ. ಈ ಮಾಯೆ ಅರಿವಿನಿಂದ ದೂರವಿಡುವ ಒಂದು ಕ್ರಿಯಾಶಕ್ತಿ. ಇದಕ್ಕೆ ಹೃದಯ ಗ್ರಂಥಿಯಲ್ಲಿ ಆಶ್ರಯ. ಗಂಡು ಹೆಂಗಳ ಭೋಗಭಾವ ಈ ಹೃದಯ ಗ್ರಂಥಿ. ಇದರ ಶೈಥಿಲ್ಯ ಜ್ಞಾನದ ಮೂಲ "ಭಿದ್ಯಂತೇ ಹೃದಯ ಗ್ರಂಥಿಃ ಕ್ಷೀಯಂತೇಃ ಸರ್ವ ಸಂಶಯಾಃ" ಎಂದರು. ಈ ಕಾರಣ ಈ ಹನ್ನೊಂದು ಸಂಖ್ಯೆಗೆ ಶುಕ್ರ-ಶನಿ ಯೋಗ ಎಂದರು. ಮೊತ್ತದಲ್ಲಿ ಇವರಿಗೆ ಹೆಂಗಳು ಬೇಡದವರು.

## ಗುರುವಿಗೇ ಬಲ ಹೆಚ್ಚು

ಹನ್ನೊಂದು ರಹಸ್ಯ ಸಂಖ್ಯೆ. ಇಲ್ಲಿ ರವಿ ಅಶುಭನು. ಹನ್ನೊಂದನೆಯ ರಾಶಿಕುಂಭ. ಈ ಕುಂಭ ರಾಶಿಯಲ್ಲಿ ರವಿಗೆ ಯೋಗ ಮಧ್ಯಮ. ಕಾರಣ ರವಿ ರಾಜಗ್ರಹ. ರಾಜ ರಹಸ್ಯ ಬಯಲು ಆದರೆ ಆಗ ಇವನ ಪ್ರಾಣಕ್ಕೆ ಕುತ್ತು. ಪ್ರಕಾಶಕ ಗ್ರಹ ರಹಸ್ಯ ರಾಶಿಯಲ್ಲಿ. ಆಗ ರಹಸ್ಯ ಪ್ರಕಾಶದಿಂದ ಅಶುಭ. ರಾಜನ ಗುಟ್ಟು ಅವನಿಗೇ ಸೀಮಿತ. ಇದರಿಂದ ಈ ಕುಂಭ ರಾಶಿಯಲ್ಲಿ ಗುರುವಿಗೆ ಮಾತ್ರ ಯೋಗ. ರವಿಗಲ್ಲ.

ಆದರೆ ಈ ಸಂಖ್ಯೆಯ ಮುಂದಿಗೆ ರವಿಯ ಕೆಲಸ ಹೆಚ್ಚು. ಸಾರ್ವಜನಿಕ ಸೇವೆಗೆ ಈ ಸಂಖ್ಯೆ ಉತ್ತಮ. ಆದರೆ ಇವರಿಗೆ ಸ್ತ್ರೀಸುಖ ಇರದು. ಅತ್ತ ಗಮನವೂ ಇರದು. ಕಾರಣ ಇವರು ಮನೆ ಸೇರುವುದೇ ಕಷ್ಟ. ಯಾವಾಗ ನೋಡಿ, ಈ ಕೆಲಸ ಆ ಕೆಲಸ. ಹೀಗೆ ಅಲೆದಾಡು ವುದೇ ಇವರಿಗೆ ಪ್ರಿಯ. ಆದರೆ ಇವರು ಎಷ್ಟು ದುಡಿಯಲಿ. ಮನ್ನಣೆ ಸಿಗದು. ಕಾರಣ ಪ್ರಕಾಶದ ಗ್ರಹ ರವಿ ಹನ್ನೊಂದರ ಸಂಖ್ಯೆಗೆ ವಿರೋಧ. ರಹಸ್ಯದ ವಿರೋಧವೇ ಇದಕ್ಕೆ ಕಾರಣ. ಇದರಿಂದ ಇವರು ಎಲೆ ಮರೆಯ ಕಾಯಿಯಂತೆ ದುಡಿದಾರು. ಇನ್ನೂ ಹಲವರಿಗೆ ಅಪಕೀರ್ತಿಯೂ

ಬಂದೀತು. ಈ ಹನ್ನೊಂದನೆಯ ಸಂಖ್ಯೆಗೆ ರವಿಯ ಬಲ ಇದ್ದರೂ ಅದರಿಂದ ಅಪಯೋಗವೇ ಸರಿ. ಈ ಕಾರಣ ಈ (೧೧) ಸಂಖ್ಯೆಗೆ ಗುರುವೇ ಪ್ರಧಾನ ಬಲಿ ಎಂದರೆ ತಪ್ಪಲ್ಲ.

"ರಹಸ್ಯ" ಎಂದರೇನು? ಎಷ್ಟು ತಿಳಿಯ ಹೇಳಿದರೂ ತಿಳಿಯದೇ ಹೋಗುವ ಜ್ಞಾನ. ಮರೆಸಿ ಭ್ರಮೆಯತ್ತ ಸೆಳೆಯುವ ಗುಣ. ನೀವು ಪ್ರಕಾಶ ಮಾಡಿ, ಆದರೂ ಅದು ಪ್ರಕಾಶಕ್ಕೆ ಬಾರದು. ಇದೇ ಆ "ರಹಸ್ಯ"ದ ಗುಣ. ಎಂದೆಂದಿಗೂ ರಹಸ್ಯವಾಗಿಯೇ ಉಳಿಯುವ ಒಂದು ಜ್ಞಾನ ವಿಶೇಷ. ಈ ಕಾರಣ ಈ ರಾಶಿಯ ಜನಗಳ ಮನಸ್ಸೇ ಒಂದು ನಮೂನೆ. ಯಾರಿಗೂ ಅರ್ಥ ಆಗದ ಒಂದು ವಿಶೇಷ ರೀತಿಯ ಮನೋಭಾವ.

## ಸ್ತ್ರೀ ವಿರೋಧ ಸಂಖ್ಯೆ

ಈ ಹನ್ನೊಂದು (೧೧) ಸಂಖ್ಯೆಗೆ ಶುಕ್ರ - ಶನಿಯೋಗ. ಸ್ತ್ರೀ ಇದಕ್ಕೆ ಪ್ರಬಲ ವಿರೋಧಿ. ಈ ಕಾರಣ ಇದು ಸ್ತ್ರೀಯರಿಗೆ ತುಂಬಾ ಕೆಟ್ಟ ಸಂಖ್ಯೆ. ಈ ಮಂದಿಗೆ ಸುಖತರುವ ಸಂಸಾರದ ಯೋಗ ಇರದು. ಕೆಲವರಿಗೆ ಮದುವೆಯೇ ಇಲ್ಲದೇ ಹೋದೀತು! ಆಯಿತು, ಆಗ ಹುಲ್ಲು ಕಡ್ಡಿಗಿಂತ ಕಡೆಗಾಣಿಸುವವಸ ಕೈ ಹಿಡಿಯುವ ಯೋಗ. ಸ್ತ್ರೀ ಪ್ರಭಾವಕ್ಕೆ ಸಿಲುಕದವನಲ್ಲಿ ಬಾಳುವೆ. ಇನ್ನು ಸುಖವೆಲ್ಲಿ?

ಇದರಿಂದ ಇವರಿಗೆ ಜ್ಞಾನಪ್ರಾಪ್ತಿ. ಓದುಗರಲ್ಲಿ ಮೊದಲಿಗರು. ವೇದಾಂತ ಪ್ರೇಮಿಗಳು. ನಿರಾಸೆಯಲ್ಲಿ ಶಾಂತಿ ಬಯಸುವ ಮಹಿಳೆಯರು. ಉದ್ವೇಗರಹಿತ ಶಾಂತಿ ಸಹನೆಗಳ ನೆಲೆ ಇವರು. ಶುಕ್ರನಿಂದ ವಿವಾಹ, ಆ ವಿವಾಹದ ವಯಸ್ಸಿನಲ್ಲಿ ಕಣ್ಣೀರು ಕರೆಯುವ ಮಂದಿ, ಕೆಲವರಿಗೆ ಚಿತ್ರ ವಿಚಿತ್ರ ಅಲಸ್ಯಗಳಿಂದ ನರಳಾಟ ಬೇರೆ. ಆ ಕಾಲದಲ್ಲಿ ಇವರಿಗೆ ಶನಿಯೋಗ. ವಯಸ್ಸು ಮೀರಿ ವಿವಾಹ ಆದೀತು.

ಆಗ ಸುಖ ಇಲ್ಲದ ಬಾಳ್ವೆ ಆದರೆ ಇವರಿಗೆ ಗುರು ಅನುಕೂಲನು. ಇದರಿಂದ ಮಗನಿಂದ ಸಹಾಯ, ಸುಯೋಗ. ಪತಿರಾಯನಿಂದ ತಾತ್ಸಾರವೇ ಉಡುಗೊರೆ. ಇನ್ನೂ ಮಿಗಿಲಾಗಿ ಅವರು ಅನ್ಯಸ್ತ್ರೀ ಅನುರಾಗಿಗಳು! ಹಾಗಿಲ್ಲ ವಿವಾಹ ನಂತರ ಅಲ್ಪಕಾಲದಲ್ಲಿಯೇ ಅಳಿದು ಹೋದಾರು. ಮದುವೆ ಆಗದವನಲ್ಲಿ ಅನುರಾಗದಿಂದ ಆ ವಯಸ್ಸಿನಲ್ಲಿ ಭಗ್ನ ಪ್ರೇಮಿಗಳು.

ಇದರಿಂದ ಸುಖದ ಬಯಕೆ ಸತ್ತು ಜ್ಞಾನದಲ್ಲಿ ವೇದಾಂತದಲ್ಲಿ ಶಾಂತಿ ಕಾಣುವ ಮಂದಿ. ಆದರೆ ಇವರಿಗೆ ವಿಧವಾಯೋಗ ಇರದು. ಮದುವೆಯ ಯೋಗವಿಲ್ಲದೆ ದುಡಿಮೆಯಿಂದ ಬಾಳುವ ಮಹಿಳೆಯರಿಗೆ ಈ ಹನ್ನೊಂದು ಸಂಖ್ಯೆ ಪ್ರಧಾನ.

## ಸಂಖ್ಯೆ ಹನ್ನೊಂದು ಜೀವಿತದಲ್ಲಿ ಪ್ರಭಾವ

ಹನ್ನೊಂದನೆಯ ಗರ್ಭ, ಪ್ರತಿ ತಿಂಗಳಿನ ಹನ್ನೊಂದನೆಯ ತಾರೀಖಿನಲ್ಲಿ ಜನನ ಎರಡಕ್ಕೂ ಈಸಂಖ್ಯೆಯ ಪ್ರಭಾವ ಸ್ಪಷ್ಟ. ಈ ಮಂದಿಗೆ ಸಂಸಾರ ಒಗ್ಗಿಬಾರದು. ಮದುವೆಯಲ್ಲಿಯೂ ವಿಘ್ನಗಳು. ಪುರಸ್ಕಾರವಿಲ್ಲದ ಪ್ರೀತಿ. ನಿರಾಸೆಯ ಬಾಳುವೆ ವೃಥಾ ಸಂದೇಹ ಇವುಗಳಿಂದ ಸುಖ ಇರದು. ಹಾಗಿಲ್ಲ, ಅತ್ತೆ ನಾದಿನಿಯರಿಂದ ದಾಂಪತ್ಯದಲ್ಲಿ ವಿರಸ.

ಗಂಡಸರಿಗೆ ಮದುವೆ ಎಂದರೆ ಕಷ್ಟ. ಇವರ ಪ್ರೀತಿ ಯೋಗ ಹೆಂಡತಿಗೆ ಅಪಮೃತ್ಯು. ದ್ವಿಕಳತ್ರಯೋಗ ಬೇರೆ.

ಈ ಸಂಖ್ಯೆಯವರು ಸ್ತ್ರೀದೇವತಾ ಉಪಾಸಕರು. ಇದರಿಂದ ಸ್ತ್ರೀ ದೋಷ ಪರಿಹಾರ. ಹೆಣ್ಣು ಎಂದರೆ ಒಂದು ನಮೂನೆ ಬೇಸರ, ನಿರಾಸೆಯಿಂದ ತಾತ್ಕಾರ ಪೂರ್ವಾರ್ಜಿತ ಕರ್ಮ, ಬೇಕು ಎಂದು ಮಾಡುವವರಲ್ಲ ಆದರೆ ಅದರ ಪರಿಣಾಮ ಮಾತ್ರ ಈ ರೀತಿ. ಇವರು ದೇವತಾಭಕ್ತರು. ಅದರಿಂದ ಮನಸ್ಸಿಗೆ ಶಾಂತಿ. ಕೊನೆಗೆ ದೇವರೇ ಆಸರೆ. ಕಾರಣ ಹನ್ನೊಂದು ಸಂಖ್ಯೆಗೆ ಶುಕ್ರ ಶನಿಯೋಗ. ಶುಕ್ರ ಎಂದರೆ ಪ್ರೀತಿ. ಈ ಪ್ರೀತಿಯೇ ಎಲ್ಲಾ ಕೆಟ್ಟದ್ದಕ್ಕೂ ಮೂಲ. ಯಾವ ಯೋಗ ಬೇಕಾದರೂ ಇದ್ದೀತು ಆದರೆ ಒಲವಿನ ಸಂಸಾರ ಮಾತ್ರ ಇರದು. ಕೆಲವರಿಗೆ ಎರಡು ಹೆಣ್ಣುಗಳ ಮಧ್ಯೆ ತಿಕ್ಕಾಟದ ಜೀವನ. ಹಲವರಿಗೆ ಭಗ್ನ ಪ್ರೇಮದಿಂದ ಬ್ರಹ್ಮಚಾರಿಯ ಜೀವನ. ಹಲವರಿಗೆ ಮದುವೆಯಾದ ಹೆಂಡತಿಯಿಂದ ದೂರ.

ಇವರು ವಿದ್ಯಾವಂತರು ಹಣವಂತರು. ಇವರಿಗೆ ಒಲವಿನ ಗೆಳತಿಯೂ ಇದ್ದಾರು ಆದರೆ ಮದುವೆ ಮಾತ್ರ ಇಲ್ಲ. ಆದರೆ ಹೆಂಡತಿಯಿಂದ ಕಷ್ಟ. ಅಷ್ಟೇ ಅಲ್ಲ, ದುರದೃಷ್ಟ ಬೇರೆ. ಕೆಟ್ಟದ್ದರ ಮೇಲೆ ಕೆಟ್ಟ ಫಲಗಳು ನಡೆಯುತ್ತವೆ ಇವರಿಗೆ ಸ್ತ್ರೀ ಸುಖ ಇರದು. ಉಳಿದಂತೆ ಜೀವನದಲ್ಲಿ ಸುಯೋಗ.

ಈ ಸಂಖ್ಯೆಯವರಿಗೆ (೫) ಸಂಖ್ಯೆಯ ಜನಗಳಿಂದ ಸಹಾಯ ಆಗುತ್ತೆ. ಆದರೆ ಹಣ ಖರ್ಚು. (೯) ಒಂಭತ್ತನೆಯ ಸಂಖ್ಯೆಯ ಜನಗಳೂ ಅನುಕೂಲರು. ಇವರಿಂದ ಕೀರ್ತಿ, ಉದ್ಯೋಗ ಪ್ರಗತಿ. ಈ ಜನಗಳಿಗೆ ಗಾಯನ ಶಾಸ್ತ್ರ, ವಾಹನ ಸಂಬಂಧ ಉದ್ಯಮ, ವೈದ್ಯ, ಉಪಚಾರ ವೃತ್ತಿ (Nursing) ಸ್ತ್ರೀ ದೇವತಾ ಉಪಾಸನೆ ಇತ್ಯಾದಿ ಕರ್ಮಗಳಿಂದ ಜೀವನ ಸುಖಮಯ. ಕೆಲವರು ಹೆಣ್ಣು ಮಕ್ಕಳ ವಿವಾಹಕ್ಕಾಗಿ ದುಡಿದಾರು. ಹೆಣ್ಣು ಎಂದರೆ ಇವರಿಗೆ ಕನಿಕರ. ಆದರೆ ಅವರಿಂದ ಸುಖ ಇವರಿಗೆ ಕನಸು.

ಇವರಿಗೆ ಪ್ರಾಯದಲ್ಲಿ ಕಷ್ಟ. ವಿವಾಹದ ವಯಸ್ಸು, ವಿವಾಹದ ಬಯಕೆ ಇರುವಷ್ಟು ಕಾಲ ಕೆಟ್ಟದ್ದು. ಆ ವಿಷಯ ಸುಖ ಬಿಡಿ. ಆ ಕ್ಷಣ ಇವರಿಗೆ ಸುಯೋಗ! ಈ ಜನಗಳಿಗೆ ಯಾವುದೇ ಶುಭ ನಡೆಯದು. ಹಾಗೆ ನಡೆದರೆ ಅದರ ಹಿಂದೆಯೇ ಅಶುಭವೂ ಕಾದಿರುತ್ತೆ. ಇದರಿಂದ ಇವರಿಗೆ ಸುಖದುಃಖಗಳ ಸಮದೃಷ್ಟಿ ಪ್ರಾಪ್ತಿ. ಉದ್ವೇಗ ಇವರಿಗೆ ಹಿಡಿಸದು. ಶುಭಾಶುಭ ಸಮಭಾವನೆಯನ್ನು ಸಾರುವ ಗೀತೆ ಇವರಿಗೆ ಪ್ರಿಯವಾದ ಗ್ರಂಥ. ಇವರು ಶಾಂತಿ ಪ್ರಿಯರು.

ಜೀವನದಲ್ಲಿ ೧೧, ೨೦, ೩೦, ೪೦, ೫೦, ೬೦ ಈ ವರ್ಷಗಳಲ್ಲಿ ಇವರಿಗೆ ಕಷ್ಟ. ೧, ೨೧, ೩೧, ೪೧, ೫೧, ೬೧ ಈ ವರ್ಷಗಳಲ್ಲಿ ಶುಭಯೋಗ ನಡೆಯುತ್ತೆ. ಜೀವನದಲ್ಲಿ ಇವರಿಗೆ ಸುಖ ಒಂದು ಬಿಂದು ಇದ್ದಷ್ಟು. ಕಷ್ಟ ಮಾತ್ರ ಪರ್ವತದಷ್ಟು. ಶುದ್ಧ ಹೃದಯ ಸಮಭಾವನೆಗಳ ಕಾರಣ ಸದ್ಗತಿಗೆ ಅರ್ಹರು ಆದಾರು. ಈ ಸಂಖ್ಯೆಯಲ್ಲಿ ಇದರಿಂದ ತ್ಯಾಗ ಶೀಲ ಮುನಿಗಳು ಬಹುಶಃ ಹೆಚ್ಚಿದ್ದಾರು.

# ಹನ್ನೆರಡು - ಶುಕ್ರ ಮಂಗಳ ಯೋಗ

ಕಷ್ಟ ಸುಖ ಎಲ್ಲರಿಗೂ ಸಹಜ. ಒಂದಲ್ಲ ಒಂದು ರೀತಿ ಕಷ್ಟ ಇದ್ದೇ ಇರುತ್ತೆ. ಕಷ್ಟ ನೀಗಿದ ಕ್ಷಣ. ಆಗುವ ಅನುಭವ ಸುಖ. ಈ ಕಾರಣ ಕಷ್ಟ ಯಾವ ಬಗೆ? ಸುಖವೂ ಅದಕ್ಕೆ ಅನುಗುಣ. ಅದರ ಪರಿಣಾಮ ಮಾತ್ರ ಒಂದೇ. ಮನಸ್ಸಿಗೆ ಅದು ಕೊಡುವ ನೆಮ್ಮದಿ. ಅದೇ ಸುಖ.

ಕಷ್ಟ. ನಿವಾರಣೆಗೆ ಎಷ್ಟೋ ಉಪಾಯಗಳು. ಅದರಲ್ಲಿ ಶಾಂತಿ ಆಚರಣೆ ಒಂದು ನಮೂನೆ. ದೇವತಾ ಬಿಂಬದ ಸೇವೆ. ಜಪತಪಾದಿಗಳು. ಯಂತ್ರ. ಮಂತ್ರ ಸಾಧನೆಗಳೇ ಶಾಂತಿಯ ಕ್ರಮ. ಇದಕ್ಕೆ ಒಂದು ರೀತಿ. ನೀತಿ ಅಗತ್ಯ. ಇದು ಮಂತ್ರ ಶಾಸ್ತ್ರದಲ್ಲಿ ಕಂಡೀತು.

ಪೂರ್ವಜರಿಂದ ಬಂದ ಆಚರಣೆ ಇದಕ್ಕೆ ಕಾಯಿದೆ. ಅವರ ಅನುಭವ ಇದಕ್ಕೆ ಪ್ರೋತ್ಸಾಹ. ದೇವಾಲಯಗಳಲ್ಲಿ ಇದರ ಅನುಭವ ಆದೀತು, ಕೆಲವರು ಕವಡೆಯನ್ನು ಎಣಿಸಿಕೊಂಡು ಪ್ರದಕ್ಷಿಣೆ ಹಾಕಿದರೆ ಹಲವರು ಬೆರಳುಗಳನ್ನು ಎಣಿಸುತ್ತಾರೆ. ಈ ಎಚ್ಚರದ ಕ್ರಮ ಪ್ರದಕ್ಷಿಣೆ ಜಾಸ್ತಿ ಆದೀತು ಎಂದಲ್ಲ.ಕಮ್ಮಿ ಆದೀತು ಎಂಬ ಭಯದಿಂದ.

ಪರೀಕ್ಷೆಯಲ್ಲಿ ನಪಾಸು. ಆಗ ಹಿರಿಯರು "ಹೋಗಪ್ಪ. ಗುರುಗಳಿಗೆ ಹನ್ನೆರಡು ನಮಸ್ಕಾರ ಮಾಡಪ್ಪ" ಎಂದು ಅಣತಿ ಕೊಟ್ಟಾರು. ಮತ್ತೆ ಕೆಲವರು ಹನ್ನೆರಡು ದಿನ ಸೇವೆ ಮಾಡಿ ಎಂದಾರು. ಇದು ಸಾಮಾನ್ಯದ ಅನುಭವ. ಇಲ್ಲಿ (೧೨) ಹನ್ನೆರಡು ಎನ್ನುವ ಸಂಖ್ಯೆ ಕನಿಷ್ಠ ಪ್ರಮಾಣ.

ಕಷ್ಟ ಎಂದರೆ ಶನಿಯ ಗುಣ. ಸುಖ ಎಂದರೆ ಶುಕ್ರನ ಗುಣ. ಸುಖಕ್ಕಾಗಿ. ಶುಭಕ್ಕಾಗಿ ಈ ಸಂಖ್ಯೆ. ಕಷ್ಟ ಪರಿಹಾರಕ್ಕಾಗಿ ಈ ಸಂಖ್ಯೆ. ಇದು ಭೋಗ ಸಂಖ್ಯೆ. ಸುಖದ ಭೋಗ ಎಂದರ್ಥ. ಈ ಭೋಗ ಎನ್ನುವುದು ಮಂಗಳಕರ. "ಭೌಮಾನ್ ಭೋಗಾನ್" ಎಂದರು. ಇದರಿಂದ ಈ ೧೨ ಸಂಖ್ಯೆಗೆ "ಶುಕ್ರ - ಮಂಗಳ" ಯೋಗ ಎಂದರು.

## ಕಷ್ಟ ಪರಿಹಾರ ಸಂಖ್ಯೆ

ಶನಿ ಎಂದರೆ "ಅನಿಷ್ಟ" ಎಂದು ರೂಢಿ ಸಂಚಿಕೆ. "ಅನಿಷ್ಟಕ್ಕೆ ಶನೀಶ್ವರ ಗುರು" ಗಾದೆಯೂ ಇದೆ. ಶನಿ ಇವನ ಕನಿಷ್ಟ ಫಲ ನಿದ್ರೆ. ಆಲಸ್ಯ. ಗರಿಷ್ಟ ಫಲ ಸಾವು. ಮೃತಿ. ಇದಕ್ಕೆ ಎದುರಿನ ಶಕ್ತಿ "ಅಮೃತ". ಈ ಅಮೃತದ ಗ್ರಹ - ಶುಕ್ರ. ಇಲ್ಲಿ ಶುಕ್ರನು ಆಯುಸ್ಸು ಹೆಚ್ಚು

ಮಾಡುವ ತತ್ವ. ಈ ಅಮೃತದ ದೇವರು ಶ್ರೀಕೃಷ್ಣ. ಈ ದೇವತಾ ಉಪಾಸನೆಗೆ "ದ್ವಾದಶಾಕ್ಷೀ ಮಂತ್ರ" ಪ್ರಸಿದ್ಧಿ. ಅಂದರೆ ಹನ್ನೆರಡು ಅಕ್ಷರಗಳಿಂದ ಕೂಡಿದ್ದು.

ಈ ಹನ್ನೆರಡು ಸಂಖ್ಯೆಗೆ ಸಾವನ್ನು ಎದುರಿಸಿ ಹೋರಾಡುವ ಅಮೃತದ ಸಂಖ್ಯೆ ಎಂದರು. "ಅಮೃತ" ಒಂದು ಪರ್ಯಾಯ ಶಬ್ದ. ಕಷ್ಟ ನೀಗುವ ತತ್ವ ಯಾವುದೇ ಇರಲಿ. ಅದಕ್ಕೆ ಈ ಶಬ್ದ ರೂಢಿ. ಈ ಕಾರಣ ರೋಗ ನೀಗುವ ಔಷಧಗಳನ್ನು ಕೊಡುವ ಧನ್ವಂತರಿಗೂ ಈ ಸಂಖ್ಯೆ ಪ್ರಿಯ. ಈ ಕಾರಣದಿಂದ ೧೯೧೨ ಇಸ್ವಿಯಲ್ಲಿ ವೈದ್ಯರ ಜನನಗಳು ಹೆಚ್ಚು ಇದ್ದೀತು.

ಮೊತ್ತದಲ್ಲಿ ಔಷಧಗಳಿಗೆ. ದೇವತಾ ಸೇವೆಗೆ. ಶಾಂತಿ ಆಚರಣೆ ಕಾಲಮಾನಕ್ಕೆ ಈ (೧೨) ಹನ್ನೆರಡು ತುಂಬಾ ಉಪಯುಕ್ತ ಸಂಖ್ಯೆ ಎಂದರು.

## ಜೀವಿತದಲ್ಲಿ (೧೨) ಹನ್ನೆರಡು ಸಂಖ್ಯೆಯ ಪ್ರಭಾವ

ಹನ್ನೆರಡು (೧೨) ಸಂಖ್ಯೆ - ಈ ತಾರೀಖಿನಲ್ಲಿ ಜನನ. ಹಾಗಿಲ್ಲ. ಹನ್ನೆರಡನೆಯ ಗರ್ಭವಾದರೂ ಸರಿ. ಈ ಸಂಖ್ಯೆಯ ಫಲ ನಡೆಯುತ್ತೆ.

ಈ ಮಂದಿ ಭೋಗಿಗಳು. ಮದುವೆಯ ನಂತರ ಇವರಿಗೆ ಸುಯೋಗ. ವಾಹನದಿಂದ ಅನುಕೂಲ. ಕಷ್ಟ ಎಷ್ಟೇ ಬರಲಿ. ಪರಿಣಾಮದಲ್ಲಿ ಸುಖವೇ ಆದೀತು. ಇವರು ಹುಟ್ಟಿದ ಮೇಲೆ ಮನೆಗೆ ಭಾಗ್ಯಪ್ರಾಪ್ತಿ. ಹನ್ನೆರಡು ವರ್ಷಗಳು ಈ ಸುಖಯೋಗ. ಹುಟ್ಟಿದ ವರ್ಷ ಮನೆಯಲ್ಲಿ ಮಂಗಳ ಕಾರ್ಯಗಳು ಬೇರೆ. ಅಲ್ಲದೆ. ಆಸ್ತಿ ಪಾಸ್ತಿಗಳಲ್ಲಿ ಅಭಿವೃದ್ಧಿ. ಹನ್ನೆರಡು ಶುಭ ಸಂಖ್ಯೆ. ಈ ಕಾರಣ ಈ ಜನನ ಶುಭ.

ಶುಕ್ರನು ಪ್ರೀತಿಯ ಗ್ರಹ. ಈ ಕಾರಣ ಈ ಸಂಖ್ಯೆಯವರು ಎಲ್ಲರಿಗೂ ಪ್ರಿಯರು. ಇದರಿಂದ ಇವರಿಗೆ ಒಲವಿನ ಗೆಳತಿಯರೂ ಇದ್ದಾರು. ಕಾಮವೂ ಹೆಚ್ಚು. ಹನ್ನೆರಡನೆಯ ತಾರೀಖು " ನಾಲ್ಕನೆಯ ತಿಂಗಳಾದರೆ "ಮದನಯೋಗ" ಎಂದರು. ನೋಡಲು ಅಂದ. ಆದರೆ ತೀವ್ರ ಕಾಮಿಗಳು.

### ಸುಖಮಯ ದಾಂಪತ್ಯ

ಇವರಿಗೆ ದಾಂಪತ್ಯ ಸುಖಮಯ. ಪತಿ ಪತ್ನಿಯರಲ್ಲಿ ಅನುರಾಗವೂ ಅತಿ. ಐದನೆಯ ತಿಂಗಳಲ್ಲಿ (ಮೇ) ಹನ್ನೆರಡನೆಯ ತಾರೀಖಿನ ಜನನದಲ್ಲಿ ದಾಂಪತ್ಯ. ಶುದ್ಧದ ಬಾಳುವೆ. ಆದರೆ ಮಕ್ಕಳು ಕಡಿಮೆ. ಆದರೂ ಜ್ಯೇಷ್ಠ ಪುತ್ರನಿಂದ ನಿರಾಸೆ. ಸಂಸಾರದಲ್ಲಿ ಖರ್ಚೂ ಅತಿ. ಇವರು ಮದುವೆಗಳಲ್ಲಿ ಓಡಾಡುವ ಮಂದಿ. ಇವರ ಮದುವೆ ಅವರ ಮದುವೆ ಆಗಲಿ. ಇವರೇ ಅದಕ್ಕೆ ಪ್ರಧಾನ ವ್ಯಕ್ತಿ. ಈ ಮಂದಿಗೆ ಮದುವೆಗೆ, ಮುನ್ನ ಖರ್ಚು. ಕಷ್ಟ. ನುದುವೆಯಿಂದ ಕಷ್ಟಗಳು ಪರಿಹಾರ. ಜೀವಿತ ಕಾಲದಲ್ಲಿ ಹನ್ನೆರಡು ವರ್ಷಗಳು ಶುಭ. ಹನ್ನೆರಡು ವರ್ಷ ಕಷ್ಟ. ಹೀಗೆ ಹನ್ನೆರಡು. ಹಾಗೆ ಹನ್ನೆರಡು ವರ್ಷದ ಯೋಗದ ಪಟ್ಟ.

ಈ ಜನಗಳಿಗೆ ಇನ್ನೊಂದು ಬಗೆಯ ಫಲ ನಡಿದೀತು. ಒಂದು ವರ್ಷದಲ್ಲಿ ಶುಭದ ಫಲ ನಡೆಯುತ್ತೆ. ಆಗ ಅದೇ ಫಲ ಅಲ್ಲಿಂದ ಹನ್ನೆರಡನೆಯ ವರ್ಷ ಮತ್ತೆ ನಡೆಯುತ್ತೆ. ಉದಾಹರಣೆಗೆ ೨೪ ವರ್ಷದಲ್ಲಿ ಮದುವೆ ಆಯಿತು. ೩೬ನೇ ವರ್ಷದಲ್ಲಿ ಮತ್ತೆ ಮದುವೆಯ ಯೋಗ. ಆದರೆ ಈ ಸಲ ಬೇರೆಯವರಿಗೆ ಮದುವೆ ಅಂತೆಯೇ ಸಾವು ನೋವಿನ ಫಲಗಳೂ ನಡೆಯುತ್ತೆ.

ಈ ತಾರೀಖಿನ ಮಂದಿಗೆ ಹೆಚ್ಚಿನಂಶ ಮೂರನೆಯ ಸಂಖ್ಯೆಯವರಿಂದ ಕಷ್ಟ. ಪ್ರತಿ ಮೂರನೆಯ ವರ್ಷ ಕಷ್ಟ, ೧೩, ೨೩, ೩೩, ೪೪, ೫೩ ಇತ್ಯಾದಿ ಪ್ರತಿ ಆರನೆಯ ವರ್ಷ ಈ ಕಷ್ಟ ನಿವಾರಣೆ. ಅಂದರೆ ೧೬, ೨೬, ೩೬, ೪೬, ೫೬ ಇತ್ಯಾದಿ ವರ್ಷಗಳಲ್ಲಿ ಅನುಕೂಲ. ಪೂರ್ಣ ಸಂಖ್ಯಾ ವರ್ಷಗಳಲ್ಲಿ ಜೀವನದಲ್ಲಿ ಅದಲು ಬದಲು ನಡೆಯುವ ಕಾಲ- ಉದಾಹರಣೆಗೆ ೧೦, ೨೦. ೩೦, ೪೦, ೫೦ ಇತ್ಯಾದಿ.

ಎರಡು, ನಾಲ್ಕು ಸಂಖ್ಯೆಗಳ ಜನಗಳು ಇವರಿಗೆ ಆತ್ಮೀಯರು. ಒಂಭತ್ತನೆಯ ಸಂಖ್ಯೆಯ ಜನಗಳು ಇವರಿಗೆ ಸಹಾಯಕರು, ಕಷ್ಟದಲ್ಲಿ ಆಗುವ ಮಂದಿ, ಆರನೆಯ ಸಂಖ್ಯೆಯ ಜನಗಳು ಪ್ರೀತಿ ಪಾತ್ರರು. ಈ ಸಂಖ್ಯೆಯ ಹೆಂಗಳ ಮೇಲೆ ಇವರಿಗೆ ಪಾಶದ ಬಿಗಿ ಹೆಚ್ಚು. ಐದನೆಯ ಸಂಖ್ಯೆಯ ಜನಗಳಿಂದ ಖರ್ಚು. ಈ ಸಂಖ್ಯೆಗೆ ಶುಕ್ರನ ಶತ್ರು ಗುರುವಿನ ಸಂಖ್ಯೆಯುವರು ಆಗರು. ಈ ಜನಗಳಿಗೆ ಈ ಕಾರಣ, ವಿದ್ಯಾಯೋಗ ಮಧ್ಯಮ. ಆದರೆ ಜೀವನದಲ್ಲಿ ಸುಖ, ಸಾಧನೆ ಎಲ್ಲವೂ ಅನುಕೂಲ. ದಾಂಪತ್ಯದಿಂದ ಅದೃಷ್ಟದ ಉದಯ.

# ಹದಿಮೂರು - ನತದೃಷ್ಟ ಸಂಖ್ಯೆ

ಈ ಸಂಖ್ಯೆ ಸಂಯುಕ್ತ ಸಂಖ್ಯೆ. ಇದರಲ್ಲಿ ಹತ್ತು (೧೦) ಮೂರು (೩) ಈ ಎರಡು ಸಂಖ್ಯೆಗಳಿವೆ. ಹತ್ತು ಸಂಖ್ಯೆಗೆ ಗುರು ಶನಿಯೋಗವಿದೆ. (೩) ಮೂರು ಸಂಖ್ಯೆಗೆ ಕುಜ ಶನಿಯೋಗ. ಇದರಿಂದ (೧೩) ಸಂಖ್ಯೆಗೆ ಗುರು-ಕುಜ-ಶನಿ ಯೋಗ ಎಂದರು.

ಕುಜ ಶನಿಯೋಗ-ಇದು ಮಂಗಳನ ದೋಷ ಲಕ್ಷಣ. ಇದು ದರಿದ್ರವನ್ನು ತೋರಿಸುತ್ತೆ. ಇದು ಒಂದು ರೀತಿ ಭಿಕ್ಷೆ ಎತ್ತುವ ಯೋಗ. ಗುರುವು ಧನ ಕೊಡುವ ಗ್ರಹ. ಈ ಗುರುವಿಗೆ ಈ ಕುಜ ಶನಿಯೋಗ. ಈ ಕಾರಣ, ದರಿದ್ರಯೋಗ. ಮಂಗಳ ಕಾರ್ಯಗಳಿಗೆ ಇದರಿಂದ ವಿಘ್ನ ಬೇರೆ.

ಗುರುವು ದೈವಿಕ ಗ್ರಹ. ಈ ದೈವಿಕ ಕೃಪೆಯ ಅಭಾವ ಸಂಖ್ಯೆಯ ಗುರುತು. ಈ ಕಾರಣ (೧೩) ಹದಿಮೂರು ನತದೃಷ್ಟ ಸಂಖ್ಯೆ. ಇದಕ್ಕೆ ಅಧಿದೇವತೆ ಈಶ್ವರ. ಸನ್ಯಾಸಿಗಳಿಗೆ ಈ ಸಂಖ್ಯೆ ಎತ್ತಿದ ಕೈ. ಈ ಸಂಖ್ಯೆ ಮಂದಿಗೆ ಈ ಸನ್ಯಾಸಿ ಗುರುವಿನ ಆರಾಧನೆ ಹಿತ.

## ಜೀವಿತದಲ್ಲಿ ಪ್ರಭಾವ

ಹದಿಮೂರನೆಯ ತಾರೀಖು ಹದಿಮೂರನೆಯ ಗರ್ಭ. ಹದಿಮೂರನೆಯ ಇಸ್ವಿ ಯಾವುದಾದರೂ ಸರಿ. ಅವರಿಗೆ ಈ ಸಂಖ್ಯೆ ಪ್ರಧಾನ ಸಂಖ್ಯೆ. ಇವರ ಪ್ರಭಾವ ಅವರಿಗೆ ಸ್ಪಷ್ಟ.

ಈ ಸಂಖ್ಯೆಯ ಅನಿಷ್ಟ ಫಲಗಳು ಯತಿಶಾಪದಿಂದ ಬಂದ ಬಳುವಳಿ. ಜ್ಯೇಷ್ಠ ಅಣ್ಣನಿಗೆ ಇದು ಬಹು ಅನಿಷ್ಟ. ಇವರೇ ಜ್ಯೇಷ್ಠರು. ಆಗ ಇವರಿಗೇ ಕಷ್ಟ. ಇದು ಧನಾರಿಷ್ಟ ಯೋಗ. ಯಾವ ಕೆಲಸ ಆಗಲಿ ಸಿದ್ಧಿ ಕಷ್ಟ. ಕಷ್ಟ ನಿಷ್ಠುರಗಳಿಗೆ ಇವರು ಸೂಜಿಗಲ್ಲು. ಹಣದ ಸಂಪಾದನೆ ಆದೀತು. ಆದರೆ. ಬೆನ್ನಿಗೆ ಬಿದ್ದ ಮಂದಿ ಹೆಚ್ಚು. ಇದರಿಂದ ಖರ್ಚೂ ಹೆಚ್ಚು.

ಈ ಮಂದಿ ಕುಜ-ಶನಿಗಳ ವಿದ್ಯೆಯಲ್ಲಿ ಕುಶಲರು. ಯಂತ್ರ ಶಿಲ್ಪ. ವಾಸ್ತುಶಿಲ್ಪ. ಅದಿರು ಶೋಧನೆ. ತೈಲಾಗಾರಗಳು. ನೀರಾವರಿ ಯೋಜನೆಗಳು. ಇವುಗಳಲ್ಲಿ ಇವರು ದಕ್ಷರು. ವಿದ್ಯೆಯಲ್ಲಿ ನಿರೀಕ್ಷೆಗೆ ಅನುಗುಣವಾಗಿ ಜಯ ಇರದು. "ಏನೋ ದೋಷ" ಎಂದು ಗೊಣಗಿಯಾರು. ಆದರೆ ಕೊನೆಯಲ್ಲಿ ದೈವಿಕ ಭಕ್ತಿ. ಯತಿ ಪಾದಸೇವೆಗಳಿಂದ ಇವರಿಗೆ ಧರ್ಮ ಪ್ರವೃತ್ತಿ ಸಹಜ. ಈ ಯತಿಸೇವೆಯಿಂದ ಈ ಅರಿಷ್ಟ ಇವರಿಗೆ ಬಿಡುತ್ತೆ. ಯತಿಗಳ ಅನುಗ್ರಹವೂ ಆಗುತ್ತದೆ. ಆಗ ಈ ದರಿದ್ರ ಹೊರಗೆ ನಿಲ್ಲುತ್ತೆ. ಅದು ಅರ್ಜನೆ ಇಲ್ಲದ

ಜನಗಳ ರೂಪಹೊಂದಿ ಇವರಲ್ಲಿ ಸೇರುತ್ತದೆ. ಅವರಿಗೆ ಊಟ ತಿಂಡಿ ವ್ಯವಸ್ಥೆ ಇವರದೇ ಆಗುತ್ತದೆ. ಈ ಔದಾರ್ಯದಿಂದ ಕೂಡಿಟ್ಟ ಹಣ ನಿಲ್ಲದು.

ಗುರುವಿಗೆ ಕುಜ ಶನಿಯೋಗ. ಇದರಿಂದ ಇವರಿಗೆ ಉಷ್ಣವಾತ ಪೀಡೆ. ಜೀರಕ ಗ್ರಂಥಿಗಳ ತೊಂದರೆ ಬೇರೆ. ಅಜೀರ್ಣ, ಇಲ್ಲ, ಆಮಶಂಕೆ ರೋಗಗಳು ಇದ್ದೇ ಇರುತ್ತವೆ. ಈ ದೋಷದಿಂದ ಊಟದ ವ್ಯವಸ್ಥೆ ಬೇರೆ ಚೆನ್ನಿರದು. ಹೋಟಲು ಊಟ ಕೆಲವರಿಗೆ ಅಗತ್ಯ.

ಈ ಸಂಖ್ಯೆಗೆ ಕುಜ ಶನಿ ಅರಿಷ್ಟ. ಇದು ಗುರುವಿಗೆ ಲತ್ತೆ. ಇದರಿಂದ ಇವರಿಗೆ ಸ್ವಂತ ಊರಿನಲ್ಲಿ ಪ್ರಗತಿ ಇರದು. ದೂರದ ಊರಿನಲ್ಲಿ ಇವರಿಗೆ ಜೀವನ. ದೇವೀಕ್ಷೇತ್ರದ ಊರಿನಲ್ಲಿ ಇವರಿಗೆ ಭಾಗ್ಯೋದಯ. ಮಹಾರಾಷ್ಟ್ರ ದೇಶ ಇವರಿಗೆ ಉತ್ತಮ. ಸ್ವಂತ ಊರಿನಲ್ಲಿ ಇವರಿಗೆ ಪ್ರಗತಿ ಇರದು. ಸ್ವಂತ ಜನಗಳಿಂದ ಆದರ ಇರದು. ಪ್ರೀತಿ, ಪ್ರೇಮ ಇವು ಇವರಿಗೆ ಊನಗಳು. ಗುರುವಿಗೆ ಕುಜ ಶನಿ ಅರಿಷ್ಟದ ಫಲ ಇದು.

ಗುರುವಿನ ಸಂಖ್ಯಾ ವರ್ಷಗಳು ಕಳೆದ ನಂತರ ಈ ದೋಷ ನಿವೃತ್ತಿ. ಗುರುವಿನ ಸಂಖ್ಯೆ ಎಂದರೆ ೨೦, ೨೧, ೨೨, ೨೩, ೨೪, ೨೫, ೨೬, ೨೭, ೨೮, ೨೯ ವರ್ಷಗಳು. ೨೩ ವರ್ಷದಲ್ಲಿ ಈ ಅರಿಷ್ಟ ಬಲ. ಇದರಿಂದ ಸ್ವಜನಗಳಿಂದ ದೂರ ಮಾಡುತ್ತೆ. ಕಾರಣ (೩) ಮೂರು ಸಂಖ್ಯೆ ಕುಜ ಶನಿ ಸಂಖ್ಯೆ. ೨೬ನೆಯ ವರ್ಷದ ನಂತರ ಈ ಕುಜನಿಂದ ಶುಭ ಉಂಟು. ಕಾರಣ (೬) ಆರನೆಯ ಸಂಖ್ಯೆಯಲ್ಲಿ ಈ ಕುಜನ ದೋಷ ನಿವೃತ್ತಿ. ೨೯ನೆಯ ವರ್ಷದಲ್ಲಿ ಈ ಗುರುವಿಗೆ ಸೂರ್ಯನ ಯೋಗದಿಂದ ಶುಭ ಯೋಗಗಳು ಉತ್ಪತ್ತಿ ಆಗುತ್ತೆ.

ವಿದೇಶ ಯಾತ್ರೆ ಕೆಲವರಿಗೆ ಯೋಗದಾಯಕ. ವಿದೇಶದಲ್ಲಿ ವಿದ್ಯೆ ಬೇರೆ. ಈ ಕಾರಣ ಪರದೇಶ. ಪರ ಜನಗಳಲ್ಲಿ ಪ್ರಗತಿ. ಸ್ವಂತ ಜನ, ಸ್ವಂತ ಯೋಗಗಳು ಅರಿಷ್ಟದಾಯಕ. ಇದು ಯತಿ ಯೋಗದ ಸಂಖ್ಯೆ. ಯತಿಗೆ ಸ್ವಜನ ಯೋಗವೆಲ್ಲಿ?

# ಹದಿನಾಲ್ಕು ಸಂಖ್ಯೆ

(೧೪) ಹದಿನಾಲ್ಕು, ಈ ಸಂಖ್ಯೆ ವನವಾಸದ ನೆನಪನ್ನು ಕೊಡುತ್ತೆ. ಇದು ಸಾಮಾನ್ಯವಾಗಿ ಕಷ್ಟ ಸಂಖ್ಯೆ. ಹತ್ತು (೧೦) ಮತ್ತು ನಾಲ್ಕು (೪) ಈ ಎರಡು ಸಂಖ್ಯೆಗಳ ಸಂಯುಕ್ತ ಸಂಖ್ಯೆ ಹದಿನಾಲ್ಕು. ಇದಕ್ಕೆ ಗುರು ಶನಿಯೋಗ (೧೦) ಮತ್ತು ಚಂದ್ರನ ಯೋಗ (೪), ಇಲ್ಲಿ ಗುರು ಚಂದ್ರಯೋಗಕ್ಕೆ ಶನಿಯ ಸಂಬಂಧ ತೋರಿಸುತ್ತದೆ. ಗುರು ಚಂದ್ರಯೋಗ ತಾಯಿಯ ಯೋಗ. ಇದಕ್ಕೆ ಶನಿ ಬೆರೆತರೆ ತಾಯಿಗೆ ಕಷ್ಟ. ತಾಯಿ ಸಮಾನಳಿಂದ ಚಿಂತೆ. ಈ ಕಾರಣದಿಂದ ಈ ಸಂಖ್ಯೆಯ ಜನಗಳಿಗೆ ತಾಯಿಯ ಸುಖ ಇರದು. ತಾಯಿ ಇದ್ದರೆ ತಾಯಿಗೆ ಬಹು ಕಷ್ಟ. ಆದರಿಂದ ಇವರಿಗೂ ಕಷ್ಟ.

ಪ್ರತಿತಿಂಗಳಿನ (೧೪) ಹದಿನಾಲ್ಕನೆಯ ತಾರೀಖಿನಲ್ಲಿ ಹುಟ್ಟಿದವರಿಗೆ ಈ ಸಂಖ್ಯೆ ಅನ್ವಯಿಸುತ್ತದೆ. ಈ ಸಂಖ್ಯೆಯ ಗರ್ಭ ಜನನ ಅಪರೂಪ. (೧೪) ಹದಿನಾಲ್ಕನೆಯ ಇಸವಿಯ ಜನನಕ್ಕೂ ಬಹುಶಃ ಅನ್ವಯ ಆದೀತು. ಇದು ಶೋಕದಾಯಕ ಸಂಖ್ಯೆ. ಈ ಜನಗಳು ತೀರ್ಥಯಾತ್ರಾ ಪ್ರಿಯರು. ಅಲೆದಾಟದಿಂದ ವ್ಯಾಪಾರಮಾಡಿ ಜೀವಿಸುವ ಮಂದಿ ಎಂದರೂ ತಪ್ಪಲ್ಲ. ಧನಯೋಗವೂ ಮಧ್ಯೆ ಮಧ್ಯೆ ತ್ರಾಸವನ್ನು ಕೊಟ್ಟೀತು.

ಈ ಜನಗಳು ಶುಚಿಪ್ರಿಯರು, ದೈವಭಕ್ತರು, ಕರುಣೆಯ ಸ್ವಭಾವದವರು. ಕಷ್ಟದಲ್ಲಿ ನೇರ ಬಂದು ಸಹಾಯ ಮಾಡುವ ಮಂದಿ. ಧರ್ಮ ಕರ್ಮ ನಿರತರು. ಇವರಿಗೆ (೨೦) ಇಪ್ಪತ್ತನೆಯ ವರ್ಷದಿಂದ (೧೪) ಹದಿನಾಲ್ಕು ವರ್ಷ ಕಾಲ ಕಷ್ಟಕಾಲ ಎನ್ನಬಹುದು. ಸಾಧಾರಣ ಇವರಿಗೆ ವಿದ್ಯೆಯಲ್ಲಿಯೂ ಕಷ್ಟ. ಸ್ವಪ್ರಯತ್ನದಿಂದ ವಿದ್ಯೆ ಸಾಧಿಸಿ ಜೀವನದ ಯೋಗವೂ ಇದೆ. ಇವರಿಗೆ ಸಮುದ್ರ ತೀರದಲ್ಲಿ ಪ್ರಗತಿ. ಸಮುದ್ರ ಸ್ನಾನದಿಂದ ಶುಭ ಯೋಗದ ಉದಯ. ಗುರು ಚಂದ್ರರ ಅರಿಷ್ಟದಿಂದ ಪುತ್ರರಿಂದ ಕಷ್ಟ ಆಗುತ್ತೆ. ಸುಖವೂ ಇರದು. ಕೊನೆಯವರೆಗೆ ಇವರು ಸ್ವತಂತ್ರ ಜೀವಿಗಳು. ಈ ಜನಗಳಿಗೆ ಬಾಲ್ಯದಲ್ಲಿ ಕಷ್ಟ. ನಲ್ವತ್ತು ವರುಷದ ನಂತರ ಸುಯೋಗ. ಐವತ್ತು ವರುಷದ ನಂತರ ಸುಯೋಗ ನಡೆದು ಸುದೈವಿಗಳು.

# ಹದಿನೈದು - ಚಂದ್ರನ ಪರಮಾವಧಿ ಸಂಖ್ಯೆ

ಚಂದ್ರನು ಸೂರ್ಯನನ್ನು ಬಿಟ್ಟು ಭೂಚಕ್ರದಲ್ಲಿ ಅತಿ ದೂರ ಹೋದಾಗ ಪೂರ್ಣಿಮೆ. ಇದಕ್ಕೆ ಚಂದ್ರನಿಗೆ ಹದಿನೈದು ದಿನ ಹಿಡಿಯುತ್ತೆ. ಇದನ್ನೇ ಹದಿನೈದು ತಿಥಿಗಳು ಎಂದರು. ಸೂರ್ಯ ಚಂದ್ರರ ಪರಮಾವಧಿ ಅಂತರವನ್ನು ಹದಿನೈದು ಭಾಗ ಮಾಡಿ, ಒಂದೊಂದಕ್ಕೂ ತಿಥಿ ಎಂದರು. ಮೊತ್ತದಲ್ಲಿ ಶುಕ್ಲಪಕ್ಷ, ಕೃಷ್ಣಪಕ್ಷ, ಒಂದು ಪಕ್ಷದಲ್ಲಿ ಹದಿನೈದು ತಿಥಿಗಳು. ಈ ತಿಥಿ ಕೇವಲ ಚಂದ್ರನಿಂದ. ಇದರಿಂದ ಈ (೧೫) ಸಂಖ್ಯೆಗೆ ಚಂದ್ರನು ಅಧಿಪತಿ.

ಇದಕ್ಕಿಂತ ಹೆಚ್ಚಿನ ಸಂಖ್ಯೆ ಚಂದ್ರನಿಗೆ ಬೇರೆ ಯಾವುದೂ ಇಲ್ಲ. ಈ ಕಾರಣ ಚಂದ್ರನಿಗೆ ಇದು ದೋಷ ರಹಿತ ಸಂಖ್ಯೆ. ಚಂದ್ರನಿಗೆ (೪) ನಾಲ್ಕು ಕನಿಷ್ಠ ಸಂಖ್ಯೆ. ಇದು ಚಂದ್ರನ ದೋಷದ ಸಂಖ್ಯೆ. ಚಂದ್ರನ ದೋಷವಿದ್ದರೆ ಅದು ಪಾರಾಗಲು (೧೫) ಹದಿನೈದು ದಿವಸಗಳು ಬೇಕು ಎಂದರ್ಥ. ಈ ಕಾರಣ ಈ ಸಂಖ್ಯೆಯ ಉಪಯೋಗ ಮಂತ್ರಶಾಸ್ತ್ರದಲ್ಲಿ ಹೆಚ್ಚು.

ಚಂದ್ರ ತಾಯಿ, ತಾಯಿ ಪಾರ್ವತಿ. ಈ ದೇವತಾ ಉಪಾಸನೆಗೆ (೧೫) ಹದಿನೈದು ಮುಖ್ಯ ಸಂಖ್ಯೆ ಮಂತ್ರವೂ ಸಹ ಹದಿನೈದು ಅಕ್ಷರದ್ದು. ಇದಕ್ಕೆ "ಪಂಚದಶೀ" ಎಂದರು. ಇದಲ್ಲದೆ ಚಂದ್ರನು ಪೂರ್ಣನಾಗಿ ಮತ್ತೆ ಕಳೆಗುಂದುವ ಮುನ್ನ ಒಂದು ಸೂಕ್ಷ್ಮ ಕಳೆ ಇದೆ. ಇದು ಅಗೋಚರ, ಕಾರಣ ಅತಿ ಸೂಕ್ಷ್ಮ. ಕಾಲ ಗಣನೆಗೂ ಸಿಗದಷ್ಟು ಸೂಕ್ಷ್ಮ. ಇದನ್ನು ಶೋಡಷ ಕಲೆ ಎಂದರು. ಇದನ್ನು ತಾಯಿಯ ಆವಾಸ ಸ್ಥಾನ ಎಂದರು.

ಚಂದ್ರನು ಮನಸ್ಸು, ಮನಸ್ಸು ವಿಕಾರಾತ್ಮಕ. ಇದು ದೋಷ. ಈ ದೋಷವಿಲ್ಲದ ನಿರ್ಮಲ ಸಂಖ್ಯೆ ಈ ಹದಿನೈದು (೧೫).

## ಹದಿನೈದು - ಮನೋ ಪ್ರಧಾನ ಸಂಖ್ಯೆ

ಈ ಸಂಖ್ಯೆಗೆ ಮನಸ್ಸೇ ಪ್ರಧಾನ. ಈ ಮಂದಿಯೂ ಅಷ್ಟೆ. ಮನ ಬಂದಂತೆ ನಡುವಳಿಕೆ. ಮನಸ್ಸು ಬಂತು, ಸರಿ. ಮನಸ್ಸಿಲ್ಲ ಅದು ಆಗದು. ಮಾನಸಿಕ ಪ್ರವೃತ್ತಿಗಳೂ ಪ್ರಬಲ. ಕಲ್ಪನೆಯ ಲೋಕ ಇವರಿಗೆ ಪ್ರಿಯ. ಕೆಲವರಂತೂ ವಾಸ್ತವಿಕದ ಹಂತವನ್ನು ಮೀರಿದ ಲಕ್ಷ್ಯವಾದಿಗಳು (Idealists). ಇವರ ನಿರ್ಣಯ ಮನಸ್ಸಿನ ಲಕ್ಷಣದ ಸ್ಥಿತಿ.

ತರ್ಕದ ವಿವೇಕವಿಲ್ಲ. ಕೆಲವರಿಗೆ ಒಂದು ಕಡಿಮೆ. ಎರಡು ಹೆಚ್ಚು. ಈ ರೀತಿಯ ಸೂಕ್ಷ್ಮ ಸ್ವಭಾವ.

ಈ ಮಂದಿ ಗಂಡಸರಾದರೆ ಹೆಣ್ಣಿನಂತೆ ಮನಸ್ಸು. ಕೋಮಲ ಮಧುರ ಭಾವನೆಗಳ ಬೀಡು. ಹೊಗಳಿಕೆ ಇವರಿಗೆ ಒಂದು ಹಿರಿಮೆ. ನಂಬಿದವರಲ್ಲಿ ಇವರಿಗೆ ಪ್ರಿಯ. ಬಂದವರಿಗೆ ಉಪಚಾರ ಇವರ ವೈಶಿಷ್ಟ್ಯ. ಇವರಿಗೆ ವೈಯುಕ್ತಿಕ ಟೀಕೆ ಹಿಡಿಸದು. ಆ ಜಾಗ ಬಿಟ್ಟು ಹೋದಾರು. ಹಾಗಿಲ್ಲ ಉದ್ವೇಗದಿಂದ ಕೋಪವೂ ಬಂದೀತು. ಅದು ಕಣ್ಣೀರಿನಲ್ಲಿ ಪರಿಣಾಮ. ಕಣ್ಣೀರು ಹೆಣ್ಮನದ ಮಹಾಸ್ತ್ರ ತಾನೇ!

## ಎಲ್ಲವೂ ಕ್ಷಣಿಕ

ತಾವು ತಮ್ಮವರು. ಈ ಚಡಪಡಿಕೆ ಹೆಚ್ಚು. ಗಡಿಬಿಡಿಯ ಮನೋಭಾವ ಬೇರೆ. ಕೋಪ ಆಗಲಿ. ತಾಪ ಆಗಲಿ ಎಲ್ಲವೂ ಕ್ಷಣಿಕ. ದೀರ್ಘ ದ್ವೇಷ ಇವರಿಂದಾಗದು. ವೈಯುಕ್ತಿಕ ಸೇಡಿನ ಸಾಧನೆಯೂ ಅಷ್ಟೇ. ಇವರು ಸರ್ವರಿಗೂ ಬೇಕಾದವರು. ಎಲ್ಲರನ್ನೂ ಒಂದೇ ಸಮನಾಗಿ ಪ್ರೀತಿ ಮಾಡುವ ಜನ. ಕಾರಣ ಈ ಚಂದ್ರ ಪ್ರೀತಿ. ಪ್ರೇಮದ ಗ್ರಹ.

ಹೆಣ್ಣನ್ನು ಕಂಡರೆ. ಆಗಲೇ ಪ್ರೇಮದ ಉದಯ. ಪ್ರೇಮದ ಬಲೆ ಇವರಿಗೆ ಹವ್ಯಾಸ. ಆ ಹೆಣ್ಣು. ಈ ವಿವೇಕ ಇಲ್ಲ. ಹೆಣ್ಣು ಎಂದರೆ ಇವರಿಗೆ ಪ್ರಿಯ. ಆ ಹೆಣ್ಣು ಕಣ್ಮರೆ, ಆ ಪ್ರೇಮವೂ ಕಣ್ಮರೆ. ಆದರೂ ಇವರಿಗೆ ಆ ರೀತಿಯ ಸ್ನೇಹ ಯಾವಾಗಲೂ ಪ್ರಿಯ. ಇವರೂ ಅಷ್ಟೆ. ಯಾರ ಮೇಲೆ ಆಗಲಿ ವಿಶ್ವಾಸ ಮೂಡಿತು. ಅವರು ಇವರಿಗೆ ವ್ಯಕ್ತಿ ಪೂಜೆ ಮಾಡಿಯಾರು.

# ಹದಿನೈದು - ನಿರ್ಮಲ ಸಂಖ್ಯೆ

ಈ (೧೫) ಹದಿನೈದು ನಿರ್ಮಲ ಸಂಖ್ಯೆ. ಈ ಕಾರಣ ಈ ಮಂದಿ ಶುಚಿ ಪ್ರಿಯರು. ಘಂಟೆಗೆ ಸಾಕಷ್ಟು ಸಲ ಬಟ್ಟೆ ಬದಲಿಸಿಯಾರು. ಆದರೆ ಸಾಕಷ್ಟು ಬಟ್ಟೆ ಇರಬೇಕು. ತಮ್ಮ ಮನೆ. ಅವರ ಮನೆ ಈ ಭೇದವಿರದು. ತಮ್ಮ ಮನೆಯಂತೆಯೇ ಇವರದು ನಡವಳಿಕೆ. ಪರಿಚಯವಾಯಿತು. ಹಲವೇ ಕ್ಷಣಗಳಲ್ಲಿ ಆತ್ಮೀಯರಂತೆ ತಮ್ಮ ಹೃದಯವನ್ನು ತೋಡಿಕೊಂಡಾರು.

ಇವರು ಮಾನಸಿಕ ಜೀವಿಗಳು. ಮನಸ್ಸು ಅಲೆದಾಡುವ ತತ್ವ. ಇವರಿಗೂ ಸಂಚಾರ ಎಂದರೆ ಪ್ರಿಯ. ಯಾತ್ರೆ ಮಾಡುವುದು ಇವರಿಗೆ ಹಿತ. ನದೀ ಸ್ನಾನ ಆಹ್ಲಾದಕರ. ಸಮುದ್ರ ದರ್ಶನವೂ ಪ್ರಿಯ. ಹೆಚ್ಚಾಗಿ ಸುತ್ತುವುದರಿಂದ ಆಗುವ ಜೀವನ ಇವರ ಕರ್ಮ. ವ್ಯಾಪಾರದಲ್ಲಿ ಇವರು ಜಯಶೀಲರು. ಮಾತಿನಲ್ಲಿ ಚತುರರು. ಉಪಚಾರದ ಮಾತು ಇವರ ಒಂದು ಅಸ್ತ್ರ.

ತಾಪ ಇವರಿಗೆ ಸಹಿಸದು. ಸೂರ್ಯನ ತಾಪವೂ ಅಷ್ಟೇ. ಸಂಜೆಯ ನಂತರ ಸಡಗರ ಹೆಚ್ಚು, ಚಟುವಟಿಕೆಯೂ ಹೆಚ್ಚು. ಮಧ್ಯಾಹ್ನದ ನಿದ್ರೆ ಇವರಿಗೆ ಅಗತ್ಯ. ನೀರು ಕುಡಿಯುವುದು ಹೆಚ್ಚು. ತಂಪಾದ ಪಾನೀಯದ ಅಗತ್ಯವೂ ಹೆಚ್ಚು. ಊಟ ಕಡಿಮೆ, ನೀರು ಜಾಸ್ತಿ.

ಜಲಾಶಯಗಳಿರುವಲ್ಲಿ ಇವರಿಗೆ ಭಾಗ್ಯೋದಯ. ತಮ್ಮ ನಲ್ವತ್ತನೆಯ ವರ್ಷದಿಂದ ಇವರಿಗೆ ಬದುಕು ಸುಖಮಯ. ಹದಿನೈದು ವರ್ಷಗಳು ಸುಯೋಗ ಕಾಲ.

ಇವರು ಮಾತೃಪ್ರೇಮಿಗಳು, ಮಾತೃದೇವತಾ ಉಪಾಸಕರು. ಕರುಣೆ ಇವರ ಪ್ರಧಾನ ಗುಣ. ತೀವ್ರದ ನಿರೀಕ್ಷೆಯಿಂದ ಇವರಿಗೆ ಆಗಾಗ್ಗೆ ನಿರಾಶೆ. ಆದರೆ ಇದು ಅಲ್ಪಾವಧಿಯ ಅತೃಪ್ತಿ. ತಾಯಿಯ ಸಿರಿ ಇವರಿಗೆ ಭಾಗ್ಯ. ಪ್ರೇಮದ ವಿವಾಹ ಇವರಿಗೆ ಇಷ್ಟ. ಆದರೆ ವಿವಾಹ ಜೀವನ ಗೊಂದಲಮಯ. ಕಾರಣ ದಂಪತಿಗಳ ಮಧ್ಯೆ ಸಂಶಯದ ಬಿರುಕು. ಇದು ಪರಸ್ಪರ ಶಂಕೆಯ ಫಲ. ಆದರೆ ಗಾಢ ಪ್ರೇಮಿಗಳೂ ಇವರೇ ಸರಿ.

ಇವರಿಗೆ ಜನ್ಮ ಪ್ರಾಯ ೪, ೧೫, ೩೪, ೪೪, ೫೪, ೭೪ ವಯಸ್ಸಿನಲ್ಲಿ ಸುಯೋಗ ನಡೆದೀತು. ಇವರಿಗೆ ಜಲರೋಗದಿಂದ ಅಪಾಯ. ಸಹಸ್ರ ಚಂದ್ರದರ್ಶನದ ಯೋಗವಿದ್ದು ೮೪ ವರ್ಷ ಇವರಿಗೆ ಪೂರ್ಣಾಯು. ೪೭ನೆಯ ವರ್ಷ ಪ್ರಾಣಗಂಡಯೋಗ. ಮಾತೃ ದೇವತಾ ಉಪಾಸನೆ ಇದಕ್ಕೆ ಪರಿಹಾರ.

# ಹದಿನಾರು - ವ್ಯವಹಾರ ವಿವಾದ ಸಂಖ್ಯೆ

ಪ್ರತಿ ತಿಂಗಳಿನ (೧೬) ಹದಿನಾರನೆಯ ತಾರೀಖು ಜನನ. ಕೆಲವು ವೇಳೆ ೧೬ನೆಯ ಇಸ್ವಿಯ ಜನನ. ಯಾವುದಾದರೂ ಸರಿ, ಈ ಸಂಖ್ಯೆ ಈ ಮಂದಿಗೆ ಪ್ರಧಾನ. ಈ ಸಂಖ್ಯೆ ಸಂಯುಕ್ತ ಸಂಖ್ಯೆ. ಇದರಲ್ಲಿ ಹತ್ತು (೧೦) ಆರು (೬) ಎರಡು ಸಂಖ್ಯೆಗಳಿವೆ. ಹತ್ತು (೧೦) ಸಂಖ್ಯೆ ಕರ್ಮ ಸಂಖ್ಯೆ. ಇದಕ್ಕೆ ಗುರು ಶನಿ ಯೋಗ. ಇದನ್ನು ಕತ್ತರಿಸಲು (೬) ಸಂಖ್ಯೆ. ಇದಕ್ಕೆ ಕುಜನ ಯೋಗ. ಇಲ್ಲಿ ಕುಜನು ಮಂಗಳನು ಫಲದಲ್ಲಿ ಶುಭನು. ಕಾರಣ ಇದೇ ಅವನ ಅತ್ಯಧಿಕ ಏಕಾಂಕ ಸಂಖ್ಯೆ. ಇವನ ಕನಿಷ್ಠ ಸಂಖ್ಯೆ (೩) ಈ ಆರನೆಯ (೬) ಸಂಖ್ಯೆಯ ಕುಜನ ಕರ್ಮ ಭೇದಮಾಡಿ ಶುಭಫಲವನ್ನು ಕೊಡುವ ಯೋಗ. ಈ ಕಾರಣ ಈ ಹದಿನಾರು ಪ್ರಗತಿಯತ್ತ ಒಯ್ಯುವ ಸಂಖ್ಯೆ.

ಮಾತಿನ ಗ್ರಹ

ಗುರು ಮಾತಿನ ಗ್ರಹ. ಈ ಮಾತಿನ ಲೋಪ ದೋಷ ಶನಿಯ ಸಂಬಂಧದಿಂದ. ಹಾಗಿಲ್ಲ ಗುರು ಶನಿಯೋಗ ಮಾತೇ ಇಲ್ಲದ ಮೌನಯೋಗ. ಇದನ್ನು ಆರು ಸಂಖ್ಯೆ ಕತ್ತರಿಸಿ ಮಾತನಾಡಿಸುವ ಸಂಖ್ಯೆ. ಕುಜ ತಿಕ್ಕಾಟದ ಗ್ರಹ. ಯೋಧ ಸಂಖ್ಯೆ. ಮಾತಿನ ತಿಕ್ಕಾಟದಿಂದ ವಾದ, ವಿವಾದ, ಈ ಕಾರಣ ಇದನ್ನು ತಾರ್ಕಿಕ ಸಂಖ್ಯೆ ಎಂದರು. ಈ ಮಂದಿಯೂ ಅಷ್ಟೆ. ತರ್ಕಪ್ರಿಯರು. (argumentative) ಯಾವುದೇ ಅಭಿಪ್ರಾಯ ಆಗಲಿ ಸುಮ್ಮನೆ ಒಪ್ಪಿಕೊಳ್ಳುವವರಲ್ಲ. ವಾದಿಸಿ ವಾದಿಸಿ ತಮಗೆ ಇದು ಸರಿ ಎಂದು ತೋರಿದರೇ ಅದನ್ನು ಒಪ್ಪುವರು. ಹಾಗಿಲ್ಲ ಕೊನೆಯವರೆಗೂ ವಾದಿಸುತ್ತಲೇ ಇರುತ್ತಾರೆ. ಇದರಿಂದೇನು? ಇವರು ಖಂಡಿತವಾದಿಗಳು. ಇವರಿಗೆ ಜನರಲ್ಲಿ ನಿಷ್ಠುರ ಸಾಮಾನ್ಯ. "ಖಂಡಿತವಾದೀ ಲೋಕ ವಿರೋಧೀ" ಎಂಬ ಮಾತು ಇವರಿಗೇ ಸರಿ.

ಈ ಮಂದಿ ತರ್ಕಪ್ರಿಯರು ನ್ಯಾಯಾಂಗ ಕ್ರಮ ಇವರಿಗೆ ಹಾದಿ. ನ್ಯಾಯಾಂಗ ವ್ಯವಹಾರಗಳಲ್ಲಿ ಇವರಿಗೆ ಪ್ರಥಮ ಸುಯೋಗ. ಜೀವಿತದಲ್ಲಿ ಮೌನ ಇವರ ಪ್ರಗತಿಗೆ ವಿಘ್ನ. ಈ ಕಾರಣ ಯಾರಾದರೇನು? ಇವರು ಬಿಡರು. ತಮ್ಮ ಹಕ್ಕು ಬಾಧ್ಯತೆಗಳಿಗೆ ಬಡಿದಾಡುವ ಮಂದಿ. ಇದರಿಂದ ನೌಕರಿಯಲ್ಲಿ, ವ್ಯವಹಾರದಲ್ಲಿ ಮುನ್ನಡೆ. ಹಿಮ್ಮೆಟ್ಟಿದರೆ ಸೋಲೇ ಸರಿ.

# ಧನ ವ್ಯವಹಾರ

ಗುರು ಧನದ ಗ್ರಹ. ಗುರು ಶನಿಯೋಗ ಧನಕಷ್ಟ ಯೋಗ. ಈ ಕಷ್ಟ ಪರಿಹಾರ ಕುಜನಿಂದ. ಗುರು ಶನಿ ಸಂಖ್ಯೆ ಹತ್ತು. ಕುಜನ ಸಂಖ್ಯೆ ಆರು. ಇದರಿಂದ ಧನಕಷ್ಟ ಕಳೆಯುವ ಲೇವಾದೇವಿ ವ್ಯವಹಾರಕ್ಕೆ ಹದಿನಾರು ಸಂಖ್ಯೆ ಪ್ರಬಲ. ತಡೆದು ಖರ್ಚು ಮಾಡುವ ಮಂದಿ. ಕೊಡಬೇಕಾದ ಹಣವನ್ನು ಕೂಡ ಕಂತುಗಳಲ್ಲಿ ತೀರಿಸುವ ಮಂದಿ. ಕಾರಣ ಕುಜನು ತುಂಡು ಮಾಡುವ ಗ್ರಹ.

ಧನ ವ್ಯವಹಾರದಲ್ಲಿ ಶನಿ ಸಂಶಯ ಮೂಡಿಸುವ ಗ್ರಹ. ಚಲಾವಣೆಯ ತೊಡಕುಗಳಿಗೂ ಈ ಶನಿಯೇ ಕಾರಣನು. ಈ ವ್ಯವಹಾರದಲ್ಲಿ ಎಲ್ಲಾ ದೇಶಗಳಲ್ಲಿಯೂ ಒಂದೇ ಮಾನ್ಯತೆ ಇರುವ ಹಣದ ರೂಪ "ಚಿನ್ನ". ಈ ಸ್ವರ್ಣಯೋಗಕ್ಕೆ ಕುಜ ಗುರು ಸಂಖ್ಯೆ ಹದಿನಾರು (೧೬) ಕಾರಣ. ಕುಜನು ಲೋಹ ಗ್ರಹ. ಈ ಗುರು ಉತ್ತಮತೆಯ ತತ್ವ. ಚಿನ್ನ ಉತ್ತಮ ಲೋಹ. ಗುರುವಿನ ಲೋಹ ಬೇರೆ ಚಿನ್ನ. ಈ ಕಾರಣ (೧೬) ಹದಿನಾರು ಸ್ವರ್ಣಗಳಿಕೆ, ಸ್ವರ್ಣ ಆಭರಣ ತಯಾರಿ. ಲೇವಣಿಗಳಿಗೆ ಪ್ರಧಾನ. ಚಿನ್ನದ ಕೆಲಸ, ಇಲ್ಲ, ಆದರ ವ್ಯಾಪಾರ ಮಾಡಿಯಾರು. ಸ್ವರ್ಣ ಸಂಬಂಧದ ವಿಶಿಷ್ಟ ವ್ಯವಹಾರ ಇವರಿಗೆ ಕರ್ಮ, ಲೇವಾದೇವಿಯ ವ್ಯವಹಾರವೂ ಸರಿ. ಆ ವ್ಯವಹಾರ ಮಾಡುವ ಬ್ಯಾಂಕುಗಳಲ್ಲಿ ಅಧಿಕಾರಿಗಳು.

ಈ ಮಂದಿಗೆ ಚಿನ್ನ ಇದ್ದರೆ ಚೆನ್ನ. ಮನಸ್ಸಿಗೂ ಒಂದು ಧೈರ್ಯ. ಸ್ವಭಾವತಃ ಚಿನ್ನ ಎಂದರೆ ಇವರಿಗೆ ಪ್ರಾಣ. ಮೈಮೇಲೆ ಚಿನ್ನದ ಒಡವೆಯಂತೂ ಇದ್ದೇ ಇರಬೇಕು. ಈ ಆಸೆ ಇವರಿಗೆ ಸಹಜ. ಈ ವರ್ಗದ ಹಿಂದಿನ ಸಂಖ್ಯೆ (೧೩) ಹದಿಮೂರು. ಈ ಸಂಖ್ಯೆಗೆ ಈ ಸ್ವರ್ಣಯೋಗ ಇರದು. ಯತಿ ಪ್ರಸಾದದಿಂದ ಈ ಹದಿಮೂರು ಹದಿನಾರಕ್ಕೆ ಮುನ್ನಡೆಯುತ್ತದೆ. ಆಗ ಈ ಸ್ವರ್ಣಾಭರಣ ಯೋಗ ಏರ್ಪಡುತ್ತದೆ. ಈ ಹದಿನಾರು ಸಂಖ್ಯೆಯ ಮಂದಿ ಇದ್ದ ಚಿನ್ನವನ್ನು ಕಳೆದರೆ ಆಗ ಇದು ಅವಯೋಗ. ಅಲ್ಲದೆ ಆಗ ಈ (೧೬) ಹದಿನಾರು ಸಂಖ್ಯೆ ಹದಿಮೂರು (೧೩) ಸಂಖ್ಯೆಯಂತೆ ಕೆಲಸ ಮಾಡುತ್ತದೆ. ಪುನಃ ಚಿನ್ನ ಮೈಮೇಲೆ ಬಂದಾಗ ಈ ಅವಯೋಗ ಪರಿಹಾರ ಆದೀತು. ಹಾಗಿಲ್ಲ, ಇಲ್ಲ. ಈ ಕಾರಣ ಈ (೧೬) ಸಂಖ್ಯೆಯವರು ಚಿನ್ನವನ್ನು ಕಳೆಯಬಾರದು.. ಮಾರಬಾರದು. ಇದು ಅನಿಷ್ಟ ಲಕ್ಷಣ.

# ಸಂಸಾರದಲ್ಲಿ ಜ್ಯೇಷ್ಠನ ಪ್ರತಿಷ್ಠೆ

ಗುರುವು ಹಿರಿತನದ ಗ್ರಹ. ಹಿರಿಯನ ಸ್ಥಾನ ಈ ಗುರುವಿನದು. ಕುಜನು ಸೋದರನು. (೧೬) ಹದಿನಾರು ಸಂಖ್ಯೆ ಈ ಎರಡರ ಸಂಯೋಗದ ಸಂಖ್ಯೆ. ಈ ಕಾರಣ ಇದು ಹಿರಿಯಣ್ಣನ ಯೋಗ. ದೊಡ್ಡ ಮಗ. ಜ್ಯೇಷ್ಠನ ಯೋಗ ಎಂದರ್ಥ. ಈ ಸಂಖ್ಯೆಯ ಮಂದಿ ಹಿರಿಯ ಮಗನಲ್ಲ. ಆದರೂ. ಹಿರಿಯಣ್ಣನ ಯೋಗ ಇವರಿಗೆ. ಕಾರಣ ಇವರದೇ ಪ್ರಭಾವ ಹೆಚ್ಚು. ಹಿರಿಯನನು ಬದಿಗೊತ್ತಿ ತಾನೇ ಹಿರಿಯನಂತೆ ವರ್ತಿಸುವ ಯೋಗ. ಇದರಿಂದ ಜ್ಯೇಷ್ಠನಿಗೆ ಅವಯೋಗ. ಈ ಗುರುಮಂಗಳರ ಅವಯೋಗ ಸಂಖ್ಯೆ ಹದಿಮೂರು (೧೩)

ಹಿರಿಯಣ್ಣನಿಗೆ ಸಲ್ಲುತ್ತೆ. ಇದರಿಂದ ದರಿದ್ರ ಯೋಗ. ಹಿರಿಯಣ್ಣನ ಜನ್ಮ ಸಂಖ್ಯೆ ಬೇರೆ. ಅಲ್ಲದೆ ಬಲಿಷ್ಠ ಸಂಖ್ಯೆಯೂ ಹೌದು. ಆಗ ಈ (೧೬) ಹದಿನಾರು ಸಂಖ್ಯೆಯ ಮಂದಿ ಬಂಡಾಯ ಮಾಡಿ ತಾವೇ ಸ್ವತಂತ್ರರಾಗಿ ದೂರ ಹೋದಾರು. ಕಾರಣ ಇವರಿಗೆ ಎಲ್ಲರಿಗಿಂತ ತಾನೇ ಹಿರಿಯ ಎನ್ನುವ ಪ್ರತಿಷ್ಠೆ ಬೇಕು. ಆಜ್ಞೆ ಮಾಡುವ ಸ್ಥಾನಮಾನಗಳು ಬೇಕು. ಹಾಗಿಲ್ಲ ಇವರು ಸಂಸಾರದಲ್ಲಿ ಇರುವುದು ಕಷ್ಟ.

## ಹದಿನಾರು ಸಂಖ್ಯೆಯ ವಿಚಿತ್ರ ಗುಣ

ಆದರೆ ಈ ಸಂಖ್ಯೆಯ ಮಂದಿ ಒಂಟಿ ಆದರೆ (೧೩) ಹದಿಮೂರರಂತೆ ಕೆಲಸ ಮಾಡುತ್ತೆ. ಇವರ ಜೊತೆಗೆ ಯಾವಾಗಲೂ (೧೩) ಸಂಖ್ಯೆಯ ಮಂದಿ ಇರಲೇಬೇಕು. ಆಗ ಇವರಿಗೆ ಆ ಸಂಖ್ಯೆಯ ದೋಷ ಪರಿಹಾರ. ಈ (೧೬) ಹದಿನಾರನೆಯ ಸಂಖ್ಯೆಯ ಪೂರ್ಣಯೋಗ ನಡೆದೀತು. ಹಾಗಿಲ್ಲ, ಆ ಜೊತೆ ಸಿಗುವವರೆಗೆ ಅವಯೋಗವೇ ಸರಿ. ಈ ಮಂದಿ ಯಾವಾಗಲೂ ಜ್ಯೇಷ್ಠನನ್ನು ಟೀಕಿಸುವ ಮಂದಿ. ಅವರಿಗಿಂತ ತಾವೇ ಲೇಸು ಎಂದೇ ಇವರ ಮತ. ಇವರು ವ್ಯವಹಾರದಲ್ಲಿ ಚತುರರು. ಹಿಂದೆ ಮುಂದೆ ಆಲೋಚಿಸಿ ನಡೆಯುವ ಮಂದಿ. ಯಾವುದನ್ನೂ ಹಾಗೆಯೇ ಒಪ್ಪಿಕೊಳ್ಳುವವರಲ್ಲ. ಸಂಶಯದ ಪ್ರಕೃತಿ ಎಂದಲ್ಲ. ವ್ಯವಹಾರದಲ್ಲಿ ಖಚಿತ ಇರಬೇಕು ಎನ್ನುವ ಗುಣ. ಸೋಲುವ ಮಂದಿ ಇವರಲ್ಲ.

ನ್ಯಾಯಾಂಗದಿಂದ ಇವರಿಗೆ ಸುಯೋಗ. ಧನ ಸಂಬಂಧ ಉದ್ಯೋಗ ಉದ್ಯಮ ಇವರಿಗೆ ಉತ್ತಮ. ಎಲ್ಲರೂ ಇವರ ಬಾಯಿಗೆ ಹೆದರಿ ದೂರ ಸರಿದಾರು. ಇವರು ಖಂಡಿತವಾದಿಗಳು. ನಟನೆ ಇವರಿಗೆ ಆಗದು. ನೇರ ಸ್ವಭಾವದ ನಡೆ, ನುಡಿ ಇವರಿಗೆ ಹಿತ, ಪ್ರಿಯ, ಕಟು ಟೀಕೆಗಳನ್ನು ತೆರೆದ ಮನಸ್ಸಿನಿಂದ ಸ್ವೀಕರಿಸುವ ಮಂದಿ. ಆದರೆ ವಾದದಲ್ಲಿ ಉದ್ವೇಗ ಹೆಚ್ಚು. ವೈಯಕ್ತಿಕವಾಗಿ ವಿಷಯವನ್ನು ಭಾವಿಸುವ ಜನ. ಈ ಕಾರಣ ಇವರು ಹೆಚ್ಚಿನಂಶ ಜನಪ್ರಿಯರಾಗರು. ಇವರ ಅನಗತ್ಯದ ಪ್ರತಿಷ್ಠೆಯೂ ಇತರರಿಗೆ ಆಗದು. ಇದು ಒಂದೇ ಈ ಸಂಖ್ಯೆಯ ಅವಗುಣ. ಉಳಿದದ್ದು ಚಿನ್ನದಂತೆ ಚಿನ್ನ. ನಂಬಿಕೆಗೂ ಅರ್ಹರು.

## ಸ್ತ್ರೀಯರ ಮೇಲೆ ಪ್ರಭಾವ

ಗುರು ಸಂತಾನಕ್ಕೆ ಆಧಾರ. ಇದಕ್ಕೆ ಮೂಲ ಹೆಣ್ಣಿನ ಹಿರಿತನ. ಈ ಹೆಣ್ತನದ ಉದಯ ಕುಜನಿಂದ. ಈ ಕಾರಣ ಈ ವಯಸ್ಸಿನಲ್ಲಿ ಋತುದರ್ಶನ, ಶುಭ. ಸುಗಮ ವಿವಾಹದಿಂದ ಐದು ವರ್ಷಗಳಲ್ಲಿ ವಂಶ ತಾರಕ ಪುತ್ರನ ಯೋಗ ಬೇರೆ. ಆದರೆ ಕೆಲವರು ಕೇವಲ (೧೩) ಹದಿಮೂರನೆಯ ವರ್ಷದಲ್ಲಿಯೇ ದೊಡ್ಡವರಾದಾರು. ಇದು ಕುಜ ದೋಷದ ಲಕ್ಷಣ. ವಿವಾಹವೂ ವಿಘ್ನ. ಪ್ರಥಮ ಗರ್ಭವೂ ಅಲ್ಪಾಯು. ಹಾಗಿಲ್ಲ, ಗರ್ಭಸ್ರಾವ ಆದೀತು. ಯತಿ ಸೇವೆ ನಂತರ ಯತಿಯ ಪ್ರಸಾದದಿಂದ ಸಂತಾನ ಲಾಭ.

ಈ ಸಂಖ್ಯೆಯ ಹೆಂಗಸರಿಗೆ ಚಿನ್ನದ ಮೇಲೆ ಆಸೆ. ಎಷ್ಟು ಒಡವೆಗಳಾದರೂ ಸಾಲದು. ಮಾತಿಗೆ ಮಾತು ಸೇರಿಸುವ ದೊಡ್ಡ ಗಂಟಲಿನ ವಾಚಾಳಿಗಳು. ಪತಿರಾಯನು ಅಡಗಿ

ಸುಮ್ಮನಿರಬೇಕು. ಆಗ, ಇವರ ಯೋಗದಿಂದ ಪತಿರಾಯನಿಗೆ ಪ್ರಗತಿ. ಧನಯೋಗವೂ ಸುಗಮ. ಗಂಡಸಿಗೆ ಈ ಸಂಖ್ಯೆ ಉತ್ತಮ. ಧನದಾಸೆ ಹೆಚ್ಚು. ವಾದ ವಿವಾದದಲ್ಲಿ ಜಯಿಸುವ ಹಂಬಲ. ಸಣ್ಣ ವಯಸ್ಸಿನಲ್ಲಿಯೇ ಇವರಿಗೆ ಸಂಪಾದನೆ ಪ್ರಾರಂಭ.

ಜನ್ಮಾದಿ ಪ್ರಾಯ (೨೬) ಇಪ್ಪತ್ತಾರನೆಯ ವರ್ಷದಿಂದ ಇವರಿಗೆ ರಾಜಯೋಗ. ಮಾತಿನಿಂದ ಬದುಕು ಉತ್ತಮ. ವ್ಯವಹಾರದಲ್ಲಿ ಚತುರತೆ ಬೇರೆ, ವೈಯಕ್ತಿಕ ದೃಷ್ಟಿ ಇರದು. ಕೇವಲ ಹಣದ ಮಾನವೇ ಇವರ ಅಳತೆಗೋಲು. ಇವರಿಗೆ ಮಗನಿಂದ ಸುಯೋಗ, ದೇವೀ ಪ್ರಸಾದದಿಂದ ಉತ್ತಮ ಭಾಗ್ಯವಿದೆ. ಬಂದ ಹಣವೂ ಪೋಲಾಗದು. ಆದರೆ, ವಿದ್ಯೆ ಸಾಮಾನ್ಯ. ಹಾಗಿಲ್ಲ ಮಧ್ಯೆ ಬಿಟ್ಟು ಮತ್ತೆ ವಿದ್ಯಾ ಯತ್ನ ಸುಗಮ.

# ಹದಿನೇಳು - ಸಂಚಯಶೀಲರು

ಹದಿನೇಳನೆಯ ತಾರೀಖು ಜನನ. ಹದಿನೇಳನೆಯ ಇಸ್ವಿ ಜನನ. ಇವರಿಗೆ ಈ ಸಂಖ್ಯೆಯ ಫಲ ನಡೆದೀತು. ಈ ಸಂಖ್ಯೆಯಲ್ಲಿ ಹತ್ತು (೧೦) ಏಳು (೭) ಎರಡು ಸಂಖ್ಯೆಗಳಿವೆ. ಹತ್ತು ಸಂಖ್ಯೆಗೆ ಗುರು. ಏಳು ಸಂಖ್ಯೆಗೆ ರಾಹು ಅಧಿಪತಿಗಳು. ಇದರಿಂದ ಈ ಹದಿನೇಳು ಗುರು ರಾಹುಗಳ ಸಂಯುಕ್ತ ಸಂಖ್ಯೆ ಅಂದರು.

ಈ ಸಂಖ್ಯೆಗೆ ಗುರು ರಾಹುಗಳ ಸಂಯುಕ್ತ ಯೋಗದ ಫಲ. ಆದರೆ ಹತ್ತು (೧೦) ಸಂಖ್ಯೆಗೆ ಗುರು ಶನಿಯೋಗ. ಈ ಕಾರಣ ಅಶುಭ ಫಲ. ರಾಹು ಗ್ರಹಣದ ಯೋಗ. ಗ್ರಹಣ ಎಂದರೆ ಹಿಡಿಯುವುದು. ಒಂದೆಡೆ ಹಿಡಿದುಹಾಕುವ ಯೋಗ. ಸಂಗ್ರಹ ಅಥವಾ ಸಂಚಯ ಯೋಗ ಎಂದರು. ಇದಕ್ಕೆ ಹತ್ತರ (೧೦) ಶನಿಯ ವೇಧೆ. ಒಂದು ವಿಘ್ನ. ದೈವಿಕ ಶಾಂತಿಯಿಂದ ಈ ವಿಘ್ನ ಪರಿಹಾರ.

ಉದಾಹರಣೆಗೆ ಗುರು ಸಂತಾನ ಗ್ರಹ. ಈ ಹದಿನೇಳು ಗುರು ರಾಹು ಯೋಗ. ಇದರಿಂದ ಸಂತಾನ ಗ್ರಹಣ ಎಂದರೆ ಗರ್ಭಧಾರಣ ಯೋಗ. ಈ ಸಂಖ್ಯೆಯಲ್ಲಿ ಹುಟ್ಟಿದ ಹೆಂಗಸರಿಗೆ ಗರ್ಭಧಾರಣೆ ಒಂದು ಸಮಸ್ಯೆ ಆದೀತು! ಹಾಗಿಲ್ಲ ಈ ಸಂಖ್ಯೆಯ ಪುರುಷರಿಗೆ ಮಕ್ಕಳು ಪಡೆಯುವ ಯೋಗ ಒಂದು ಸಮಸ್ಯೆ. ಈ ಸಮಸ್ಯೆಗೆ ಮೂಲ ಕಾರಣ ಹತ್ತು (೧೦) ಸಂಖ್ಯೆಯ ಗುರು ಶನಿಯೋಗ. ಇದಕ್ಕೆ ಮಾರುತಿ ಸೇವೆ ಒಂದು ಸೂಕ್ತ ಶಾಂತಿ. ಇದರಿಂದ ಈ ಶನಿಯ ಪ್ರಭಾವ ಕುಗ್ಗಿ ಸಂತಾನ ಅಭಿವೃದ್ಧಿ ಆಗುತ್ತದೆ. ಗರ್ಭ ಕೋಶ ಸಂಬಂಧದ ನ್ಯೂನತೆಗಳೂ ಗುಣಮುಖ. ವಂಶಕುಡಿಗೆ ಅವಕಾಶ ಆಗುತ್ತದೆ. ಈ ಶಾಂತಿಯ ದೆಸೆಯಿಂದ ಈ ಹದಿನೇಳು ಸಂಖ್ಯೆಯ ಫಲ ಇಪ್ಪತ್ತೇಳು (೨೭) ಸಂಖ್ಯೆಗೆ ಬದಲು ಆಗಿ ಸುಯೋಗ ಉಂಟಾಗುವುದು.

ಗುರುವು ಧನದ ಗ್ರಹ. ಈ ಹದಿನೇಳು ಪುರುಷರಿಗೆ ಧನ ಸಂಗ್ರಹ ಯೋಗವನ್ನು ತೋರಿಸುತ್ತದೆ. ಈ ಯೋಗ ಎರಡು ನಮೂನೆ. ಒಂದು ಬಂದ ಹಣವನ್ನು ಕೂಡಿಡುವುದು. ಎರಡನೆಯದು ಕೂಡಿಟ್ಟ ಹಣವನ್ನು ಖರ್ಚು ಮಾಡಲು ತಕರಾರು. ಮೊತ್ತದಲ್ಲಿ ಇವರು ಜಿಪುಣರು! ಈ ಯೋಗದಲ್ಲಿಯೂ ಶನಿಯ ಪ್ರಭಾವ ಇದ್ದೇ ಈ ಸುಗುಣ ಅವರ ನಷ್ಟಗಳಿಗೆ ಕಾರಣ ಆದೀತು. ಕಾಸಿನಿಂದ ಆಗುವ ಕೆಲಸಕ್ಕೆ ರೂಪಾಯಿ ಖರ್ಚು ಮಾಡಿದರೂ ಆ ಕೆಲಸ ಆಗದಂತೆ ಆದೀತು. (Pennywise Pound foolish)

ಈ ಮಂದಿಗೂ ಆಂಜನೇಯನ ಸೇವೆ ಉತ್ತಮ. ಇದರಿಂದ ಇವರಿಗೆ ಲೇವಾದೇವಿ ಉದ್ಯಮ ಅನುಕೂಲ ಆಗುವುದು, ಕಾಸು ಬಡ್ಡಿಯನ್ನೂ ಬಿಡದೇ ವಸೂಲಿ ಮಾಡಿಯಾರು. ಆದರೆ, ಇವರು ಕೋರ್ಟು ಹತ್ತುವ ಮಂದಿ ಅಲ್ಲ! ಕಾರಣ ನ್ಯಾಯಾಂಗ ಯೋಗ ಗುರು ಮಗಂಳ ಯೋಗ. ಹದಿನೇಳು ಸಂಖ್ಯೆಗೆ ಗುರು ರಾಹು ಯೋಗ. ನ್ಯಾಯಾಂಗ ಕ್ರಮ ಹಿಡಿದರೆ ಆಗ ಕುಜ ರಾಹುಗಳ ಯೋಗ ಆಗುತ್ತೆ. ಇದರಿಂದ ದ್ವೇಷವೇ ಫಲ. ಇದರಿಂದ ಹಾನಿ ಆದೀತು. ಈ ಭಯದಿಂದ ಕೋರ್ಟು ಹತ್ತರು. ಆದರೆ, ತಾಳ್ಮೆಯಿಂದ ಒಂದಲ್ಲ ಹತ್ತು ಬಾರಿ ಅಲೆದಾಡಿ ವಸೂಲಿ ಮಾಡಿಯಾರು. ದೈವಿಕ ಪ್ರಸಾದ ಇಲ್ಲ, ಆಗ ಇವರಿಗೆ ಜಿಪುಣತನದಿಂದ ಎಲ್ಲೆಡೆ ಕಷ್ಟ-ನಷ್ಟಗಳು ಹೆಚ್ಚು.

## ದಾನ - ಧರ್ಮ ನಿಷ್ಠೆ

ದೈವಿಕ ಗ್ರಹ ಗುರು. ಹದಿನೇಳು (೧೭) ಸಂಖ್ಯೆಗೆ ಗುರು - ಶನಿ - ರಾಹು ಯೋಗ. ಇದರಿಂದ ಇವರು ದೈವ ಭಕ್ತರು. ಆದರೆ ಸೇವೆಗಾಗಿ ಹಣ ಖರ್ಚು ಮಾಡುವವರಲ್ಲ. ದೈಹಿಕ ಸೇವೆ ಎಷ್ಟಾದರೂ ಸರಿ, ಸತತವಾಗಿ ಮಾಡುತ್ತಾರೆ. ಧರ್ಮ, ನ್ಯಾಯ, ಇವರಿಗೆ ಇಷ್ಟ. ಇತರರಿಗೆ ಸಹಾಯ ಮಾಡುವುದೂ ಇವರಿಗೆ ಇಷ್ಟ. ಆದರೆ, ಆ ಸಹಾಯ ಹಣದ ಮೂಲಕ ಆಗದು. ಶಿಫಾರಸು ಮಾಡುವುದು, ಕೆಲಸ ಕಾರ್ಯಗಳನ್ನು ಕೊಡಿಸುವುದು, ದೇವಸ್ಥಾನಗಳಲ್ಲಿ ಆಡಳಿತ ವರ್ಗದ ಕಾರುಬಾರು ಮಾಡುವುದು. ಆ ಧನದ ವಿನಿಯೋಗದಲ್ಲಿ ನೈತಿಕ ನಿಷ್ಠೆ ಇವರ ಗುಣಗಳು. ಆದರೆ, ತಾವೇ ಧನ ದಾನ ಮಾಡಲು ಹಿಂದೇಟು! ಮರ್ಯಾದೆಗಾಗಿ, ಕೀರ್ತಿಗಾಗಿ ಇವರು ಧನವನ್ನು ದಾನ ಮಾಡಿಯಾರು. ಇತರರಿಂದ ಚಂದಾ ವಸೂಲಿ ಮಾಡಬೇಕು. ಆಗ ಇವರು ಅದಕ್ಕೆ ತಕ್ಕ ಜನ ಎಂದರೆ ತಪ್ಪಲ್ಲ.

ಗುರು ಜನ್ಮದಾತನು. ಶನಿ ರಾಹು ಮೃತ್ಯು. ಈ ಜನ್ಮ ಮೃತ್ಯುಗಳ ರಹಸ್ಯ ಜ್ಞಾನ ವೇದಾಂತ. ಈ ಹದಿನೇಳು ಸಂಖ್ಯೆ ಈ ವೇದಾಂತ ಸಂಖ್ಯೆ. ಇದರಿಂದ ಈ ಮಂದಿಗೆ ವೇದಾಂತ ಇಷ್ಟ. ವೇದಾಂತ ಉಪನ್ಯಾಸಗಳೂ ಇಷ್ಟ. ವೇದಾಂತ ಗ್ರಂಥ ಅಧ್ಯಯನ ಇನ್ನೂ ಇಷ್ಟ. ಇದೇ ಜನ್ಮ ಮೃತ್ಯು ಉದ್ಯಮವಾದ ವಿಮಾ ಯೋಜನೆ, ವಿಮಾ ಏಜೆನ್ಸಿ ಇವರಿಗೆ ಸೂಕ್ತ ಉದ್ಯಮಗಳು.

### ವಿದೇಶ ವಿಜ್ಞಾನ

ಈ ಜನಗಳಿಗೆ ಶನಿ-ರಾಹು ವಿದ್ಯೆ ಉತ್ತಮ. ವೈದ್ಯದ ಕಲಿಕೆ ಇವರಿಗೆ ಚೆನ್ನ. ವಿಶೇಷ ವಿಜ್ಞಾನವೂ ಪ್ರಾಪ್ತಿ. ವಿದೇಶದಲ್ಲಿಯೂ ಕೀರ್ತಿ. ಈ ವಿದ್ಯೆ ಇವರ ಜ್ಯೇಷ್ಠ ಪುತ್ರನಿಗೆ ಪ್ರಾಪ್ತಿ ಆದೀತು. ಆದರೆ, ಜ್ಯೇಷ್ಠ ಪುತ್ರನ ಸುಯೋಗ ಇವರ ಜೊತೆ ಇದ್ದಾಗ ನಡೆಯದು. ಇವರಿಂದ ಮಗ ದೂರ ಇದ್ದಾನೆ, ಆಗ ಅವನಿಗೆ ಸುಯೋಗ. ಇದರಿಂದ ಇವರಿಗೆ ಜ್ಯೇಷ್ಠನಿಂದ ಸುಖ ಇರದು. ಅತೃಪ್ತಿ ಸಾಕಷ್ಟು. ಆದರೆ ವೇದಾಂತದಲ್ಲಿ ಇವರಿಗೆ ಸಮಾಧಾನ.

ಈ ಮಂದಿಗೆ, ಕಲಿಕೆ, ಗಳಿಕೆಗೆ ಸಾಕಷ್ಟು. ಆದರೆ ಉನ್ನತ ವಿದ್ಯೆ ಓದುವವರಲ್ಲ. ಕಾರಣ ವಿದ್ಯಾ ಪೂರ್ತಿ ಕಾಲದಲ್ಲಿ ಕಷ್ಟಗಳು, ಪರಾವಲಂಬನೆ ಬೇರೆ. ಆದರೆ ಇವರು ಕೆಲಸದಲ್ಲಿ ಅನುಭವಿಗಳು. ಈ ಅನುಭವದ ಯೋಗ ಹತ್ತು (೧೦) ಸಂಖ್ಯೆಯ ಗುರು ಶನಿಯ ಯೋಗದಿಂದ ಬಂದದ್ದು.

### ಸಿರಿಯ ಒಲುಮೆ

ಈ ಮಂದಿಗೆ ಲಕ್ಷ್ಮಿಯ ಕೃಪೆ ಸಹಜ. ಕಾರಣ ಹಣ ಇವರ ದೇವರು. ವ್ಯಕ್ತಿ ವ್ಯಕ್ತಿ ಮರ್ಯಾದೆ ಎರಡನೆಯದು. ಹಣವನ್ನು ಜೋಪಾನ ಮಾಡಲು ಹೆಣಗುವ ಮಂದಿ. ಇದರಿಂದ ಇವರಿಗೆ ಈ ಧನಲಕ್ಷ್ಮಿಯ ಒಲುಮೆ. ಆದರೆ, ವೃದ್ಧಾಪ್ಯದಲ್ಲಿ ಈ ಶನಿಯ ದೋಷ ನಿವೃತ್ತಿ. ಅಲ್ಲದೆ, ತಾ ಮಾಡಿದ ತಪ್ಪಿಗೆ ತನ್ನದೇ ಪಶ್ಚಾತ್ತಾಪ. ಆಗ ಮನೋಶಾಂತಿಗಾಗಿ ಅಪಾರ ಧನ ದಾನ ಮಾಡಿಯಾರು. ಧರ್ಮ ಮಾಡಿ ಕೀರ್ತಿವಂತರೇ ಆದಾರು. ಇವರಿಗೆ ಸಾವಿನಿಂದ ಕೀರ್ತಿ ಸಂಪಾದನೆ!

## ಜೀವಿತದಲ್ಲಿ ಪ್ರಭಾವ

ಹದಿನೇಳನೆಯ ಇಸ್ವಿ, ಹದಿನೇಳನೆಯ (೧೭) ತಾರೀಖು ಜನಿಸಿದ ಮಂದಿಗೆ ಈ ಸಂಖ್ಯೆಯ ಪ್ರಭಾವ ಪೂರ್ಣ ಸ್ಪಷ್ಟ. ಹಾಗಿಲ್ಲ, ಈ ಸಂಖ್ಯೆಯ ಫಲ, ಗುಣಾವಗುಣ ಆಯಾ ತಿಂಗಳು, ಇಸ್ವಿ ಸಂಖ್ಯೆಯ ಫಲದ ಜೊತೆ ನಡೆಯುತ್ತದೆ. ಇತರ ಸಂಖ್ಯೆಗಳ ಫಲದಿಂದ ಈ ಹದಿನೇಳರ ಫಲ ಉತ್ತಮಗೊಂಡೀತು, ಇಲ್ಲ ಊನವೇ ಆದೀತು. ಆದರೆ ಇಸ್ವಿಯೂ ಹದಿನೇಳು (೧೭) ತಾರೀಖು (೧೭) ಆದರೆ, ಆಗ ಈ ಸಂಖ್ಯೆಯ ಫಲ ಗೋಚರ ಶುದ್ಧ ಎನ್ನಬಹುದು.

ಇವರು ದೇವರ ಭಕ್ತರು ಹೌದು, ಅಲ್ಲ. ಆದರೆ, ದೇವಸ್ಥಾನಗಳಲ್ಲಿ ಮಾತ್ರ ಇವರಿಗೆ ಶುದ್ಧವಾದ ಭಕ್ತಿ. ಯಾವಾಗಲೂ ದೇವರ ಬೆನ್ನು ಹತ್ತುವ ಮಂದಿಯಂತೂ ಇವರಲ್ಲ. ದೇವರ ಶಕ್ತಿಯ ಅಸ್ತಿತ್ವದಲ್ಲಿ ಇವರಿಗೆ ಶಂಕೆ ಇಲ್ಲ. ಆದರೆ ದೈನಂದಿನ ವ್ಯವಹಾರಗಳಲ್ಲಿ ಅವನನ್ನು ಎಳೆದು ಸತಾಯಿಸುವುದನ್ನು ನಂಬರು. ಆಚಾರ ವಿಚಾರಗಳಲ್ಲಿ ಕಾನೂನು ಪಾಲನೆಯಂತೆ ನಡೆದಾರು. ಆದರೆ, ಅದರ ಪರಿಣಾಮ ವ್ಯವಹಾರದಲ್ಲಿ ಬೀರುವುದಕ್ಕೆ ಅಲ್ಲ ಎಂದೇ ಇವರ ನಂಬಿಕೆ.

### ಧನಾರ್ಜನೆ ಏರು ಪೇರು

ಇವರಿಗೆ ಬಾಲ್ಯದಲ್ಲಿ ಕಷ್ಟ ಇದ್ದೀತು. ವಿದ್ಯಾ ಕಾಲದಲ್ಲಿ ಪರರ ಪೋಷಣೆ ಇವರಿಗೆ ಧನಾರ್ಜನೆ ಸ್ವಲ್ಪ ಏರು ಪೇರು. ಹಿರಿಯರ ಆಸ್ತಿ ಇದ್ದೀತು. ಅವರಿವರ ಹಣ ಸೇರಿಸಿ ಉದ್ಯಮ ಮಾಡಿಯಾರು. (Co-operative venture) ಆದರೆ ದತ್ತವಾದ ಹಣವನ್ನು

ಪ್ರೋಲು ಮಾಡರು. ಆದಷ್ಟು ಕಡಿಮೆ ವೆಚ್ಚದಲ್ಲಿ ಉತ್ತಮ ಕೆಲಸ ಮಾಡುವ ಮಂದಿ. ಇವರು ನಿಷ್ಠಾವಂತ ಕೆಲಸಗಾರರು. ದಕ್ಷ ಆಡಳಿತಗಾರರು. ಧನ ವ್ಯವಹಾರದಲ್ಲಿ ಸೂಕ್ತ ವಿವೇಚನೆಯಿಂದ ನಡೆಯಲು ಯತ್ನಿಸುವ ಮಂದಿ.

ಇವರಿಗೆ ಮಕ್ಕಳು ಆಗುವುದು ಕಷ್ಟ. ಶಾಂತಿಯಿಂದ ಇಳಿವಯಸ್ಸಿನಲ್ಲಿ ಮಕ್ಕಳು ಆದಾವು. ಹಲವೆಡೆ ದತ್ತ ಪುತ್ರಯೋಗವೂ ಇದ್ದೀತು. ಇವರಿಗೆ ೧೭ ವರ್ಷ ಕಳೆಯುವವರೆಗೆ ಕಷ್ಟ. ೨೭ ವರ್ಷದ ನಂತರ ಉದ್ಯಮ ನಿರತರು. ಹಾಗಿಲ್ಲ ಉದ್ಯೋಗಿಗಳು. ಇವರಿಗೆ ೫೭ ವರ್ಷದಲ್ಲಿ ಧನಿಕಯೋಗ. ಇವರಿಗೆ ಋಣ ಇರದು.

ಇವರು ಬಹುಕಾಲ ಬದುಕುವ ಮಂದಿ. ಆದರೆ, ಬಾಲ್ಯದಲ್ಲಿ ಗಂಡಯೋಗವಿದ್ದು ಪರಿಹಾರ. ಆದರೆ ಈ ಯೋಗ ನಡೆಯುತ್ತೆ. ಹೆಂಗಸರಿಗೆ ಪ್ರಸವಕಾಲದಲ್ಲಿ ಬಹುಕಷ್ಟ. ಪ್ರಾಣಗಂಡವೇ ಆದೀತು. ಆದರೆ, ದೈವಿಕ ಶ್ರದ್ಧೆಯಿಂದ ಅದು ಪಾರು. ಆದರೂ ಆ ಕಾಲದಲ್ಲಿಯೇ ಹಾನಿ ಆದೀತು. ವಿಷ್ಣು ಭಕ್ತಿ ಇವರಿಗೆ ಸರಿ. ಅವತಾರಗಳಲ್ಲಿ ಶ್ರೀರಾಮ ನರಹರಿಗಳು ಉತ್ತಮ ಉಪಾಸನಾ ಮೂರ್ತಿಗಳು ಇವರಿಗೆ ಕ್ಷೇತ್ರಗಳಲ್ಲಿ, ಹಾಗಿಲ್ಲ, ಯಾತ್ರೆಯಿಂದ ಬಂದ ಮೇಲೆ ಮೃತ್ಯುಯೋಗ ನಡೆದೀತು.

# ಹದಿನೆಂಟು-ಪುರಾಣದ ಪುರಾತನ ಮಹಿಮೆ

ವೇದವ್ಯಾಸರು ಶ್ರೀಹರಿಯ ಒಂದಂಶ. ಇದರ ಪ್ರಭಾವದಿಂದ ಅವರಿಗೆ ಮೂಲ ಸ್ವರೂಪದ ಅರಿವು ಸ್ಪಷ್ಟ ಬೇರೆಯವರಿಗೆ ಸ್ಪಷ್ಟ ಇರದು. ಕಾರಣ ಮಾಯೆಯ ಪ್ರಾಬಲ್ಯ. ಅರಿವಿನ ಭಂಡಾರ ವನ್ನು ನಮಗೆ ಇಳುವರಿಯಾಗಿ ಕೊಟ್ಟವರೂ ಆ ಮಹರ್ಷಿಗಳೇ ಸರಿ. ವೈಶಿಷ್ಯಪೂರ್ಣ ಜ್ಞಾನದ ಪ್ರಚಾರಕ್ಕಾಗಿ ಅವರು ಪುರಾಣಗಳನ್ನು ರಚಿಸಿದರು.

ಈ ಮಹಾತ್ಕಾರ್ಯದಲ್ಲಿ ವೇದವ್ಯಾಸರು ಈ (೧೮) ಹದಿನೆಂಟು ಸಂಖ್ಯೆಯನ್ನು ಬಳಸಿದರು. ಈ ಸಂಖ್ಯೆಗೆ ವ್ಯಾಪ್ತಿ ಅಣುವಿನಿಂದ ಆಕಾಶದವರೆಗೆ ಎಂದರು ಈ ವ್ಯಾಪ್ತಿ ಈ ಸಂಖ್ಯೆಗೆ ಒಂದು ವಿಶೇಷ.

ಸಂಖ್ಯೆಗಳು ೧. ೨. ೩. ೪. ೫. ೬. ೭. ೮. ೯ ಇತ್ಯಾದಿ ಈ ಶ್ರೇಣಿಯಲ್ಲಿ(೯) ಅತಿ ಹೆಚ್ಚು ಇದರಲ್ಲಿ ಎಲ್ಲಾ ಸಂಖ್ಯೆಗಳೂ ಅಡಗಿವೆ. ಈ ಮಹತ್ತಮ ಏಕಾಂಕ ಸಂಖ್ಯೆ ಯಾವ ಎರಡು ಸಂಖ್ಯೆಗಳಿಗೆ ಮೊತ್ತ? ಅಲ್ಲದೆ ಆ ಎರಡು ಸಂಖ್ಯೆಗಳಲ್ಲಿ ಒಂದು ಅತಿ ಚಿಕ್ಕದು ಮತ್ತೊಂದು ಅತಿ ದೊಡ್ಡದು? ಆ ಎರಡು ಸಂಖ್ಯೆಗಳಲ್ಲಿ ಒಂದು (೧) ಮೊದಲನೆಯದು ಎಂಟು (೮) ಎರಡನೆಯದು. ಈ ೧+ ೮ = ೯ ಒಟ್ಟಿನಲ್ಲಿ ಕನಿಷ್ಠ ಗರಿಷ್ಠ ಸಂಖ್ಯೆಗಳ ಮೊತ್ತ ಏಕಾಂಕ ಮಹತ್ತಮ ಸಂಖ್ಯೆ ಆಗುತ್ತೆ ಈ ಕಾರಣ ಈ (೧೮) ಹದಿನೆಂಟು ಸಂಖ್ಯೆಯಲ್ಲಿ ಒಂದರ ಸಣ್ಣನ ಎಂಟರ ಮಹತ್ವ ಎರಡೂ ಸೇರಿವೆ. ಈ ಕಾರಣ ಈ ೧೮ ಸಂಖ್ಯೆಯನ್ನು ವೇದವ್ಯಾಸರು ಬಳಸಿದರು. ಜಗದ್ವ್ಯಾಪಿ ಶಕ್ತಿಯ ಅರಿವು ಮೂಡಿಸಲು ಈ ಸಂಖ್ಯೆ ಸಂಕೇತವಾಯಿತು. ಇದು ಕೆಲವರ ಅಭಿಪ್ರಾಯ ಉದಾಹರಣೆಗೆ ೧೮ ಪುರಾಣಗಳು ೧೮ ಪರ್ವಗಳು ಇತ್ಯಾದಿ.

## ಗುರು ಬುಧರ ದೋಷ ಗುಣಸಂಖ್ಯೆ

ಹದಿನೆಂಟು ಇದರಲ್ಲಿ ಹತ್ತು (೧೦) ಮತ್ತು ಎಂಟು (೮) ಈ ಎರಡು ಸಂಖ್ಯೆಗಳಿವೆ. ಹತ್ತು ಸಂಖ್ಯೆಗೆ ಗುರು ಶನಿಯೋಗ ಎಂಟು ಸಂಖ್ಯೆಗೆ ಬುಧ ಶನಿಯೋಗ ಇಲ್ಲಿ ಬುಧನಿಗೂ ಶನಿಯೋಗದ ದೋಷ ಗುರುವಿಗೂ ಇದೇ ದೋಷ. ಆದರೆ ಯಾವುದೇ ನಿರ್ದಿಷ್ಟ ಕಾಲದಲ್ಲಿ ಎರಡು ಗ್ರಹಗಳಿಗೂ ಒಂದೇ ದೋಷ ಹಿಡಿಯದು. ಇದರಿಂದ ಬುಧನಿಗೆ ದೋಷ ಇದ್ದರೆ ಗುರುವಿಗೆ ಇರದು. ಗುರುವಿಗೆ ಶನಿಯೋಗ ಇದೆ ಆಗ ಬುಧನಿಗೆ ಇರದು.

ಉದಾಹಾರಣೆಗೆ ಬುಧನಿಗೆ ದೋಷವಿದೆ ಆಗ ಬುದ್ಧಿಗೆ ಮಂಕು ಬಡಿಯುತ್ತೆ. ಈ ಮಂಕುತನಕ್ಕೆ ಗುರುವೇ ಪರಿಹಾರ . ಹಾಗೆಯೇ ಗುರುವಿಗೆ ದೋಷ ಮೂಡಿದರೆ ಆಗ ಗುರುವಿಗೆ ಬುಧನೇ ಆಶ್ರಯ. ಬುಧನ ಅಧಿದೇವತೆ ವಿಷ್ಣುವೇ ಅಶ್ರಯ. ಈ ಕಾರಣ ಗುರು ಬುಧರ ದೋಷ ಪರಸ್ಪರ ಅದಲು ಬದಲಿನ ಯೋಗದಲ್ಲಿ ನಡೆಯುತ್ತೆ.

ಹೆಚ್ಚಿನ ದೋಷ ಇದರಲ್ಲಿ ಯಾವುದು? ಗುರು ಕರ್ಮ ಗ್ರಹವಾಗಿ ಗುರುವಿನ ದೋಷವೇ ಹೆಚ್ಚು. ಗುರು, ಜೀವ ಇವನಿಗೆ ಸಂಸಾರ ಕರ್ಮದಿಂದ ಪ್ರಾಪ್ತಿ. ಸಂಸಾರ ಎಂದರೆ ಹುಟ್ಟು ಸಾವುಗಳ ಮಧ್ಯೆ ತಿರುಗುವುದು ಎಂದರ್ಥ. ಈ ಗುರುವಿನ ಕರ್ಮ ದೋಷವನ್ನು ತೆಗೆಯಲು ಈ ದೋಷವನ್ನು ಬುಧನ ಮೇಲೆ ಹೇರಿದರು! ಈ ಬುಧನ ಅದಿಧೇವತೆ ಶ್ರೀಹರಿ, ಶ್ರೀಹರಿಯ ಅವತಾರದ ಮಹಿಮೆ ಆ ಅಂಶದಲ್ಲಿ ಹುಟ್ಟಿ ಮೆರೆದ ರಾಜರು, ಋಷಿಗಳು ಇತ್ಯಾದಿ ಮಹನೀಯರ ಕತೆಗಳನು ಬರೆದು ಈ ದೋಷವನ್ನು ಹೋಗಲಾಡಿಸಿದರು.

ಈ ಕತೆಗಳಲ್ಲಿ ಕರ್ಮ ಹೇಗೆ ಬರುತ್ತೇ? ಅದರ ಫಲವೇನು? ಪರಿಹಾರ ಎಂತು? ಈ ವಿಧಾನಗಳ ವಿವರಣೆ ಇದೆ,ಈ ಮಹತ್ವದ ಕೆಲಸ ಮಾಡಿ ಶ್ರೀ ವೇದವ್ಯಾಸರು ವಂದ್ಯರಾದರು.

ಬುಧ ಬರೆಯುವವನು, ಬರೆದ ಗ್ರಂಥವೂ ಅವನೇ. ಆ ಗ್ರಂಥಗಳ ಪಾರಾಯಣದಿಂದ ಗುರುವಿನ ದೋಷ ಪರಿಹಾರ ಆಗುತ್ತೆ.

ಹಾಗೆಯೇ ಬುಧನಿಗೆ ದೋಷವಿದೆ. ಆಗ ಈ ದೋಷವನ್ನು ಗುರುವಿನ ಮೇಲೆ ಹೇರಿದರು, ಆಗ ಜಗದ್ಗುರುವಾದ ಸದಾಶಿವನ ಮಹಿಮೆಯನ್ನು ಕೊಂಡಾಡಿದರು. ಆ ದೇವನ ಮಹಿಮೆ ಅವನ ಭಕ್ತರ ಮಹಿಮೆಗಳ ಕತೆಗಳನ್ನು ಬರೆದರು. ಇದರಿಂದ ಬುಧನ ದೋಷವನ್ನು ಪರಿಹಾರ ಮಾಡಿದರು.

ಈ ಹದಿನೆಂಟು (೧೮) ಹತ್ತು ಮತ್ತು ಎಂಟು ಸಂಖ್ಯೆಗಳ ಪರಸ್ಪರ ಪ್ರತಿಕ್ರಿಯೆ ಸಂಖ್ಯೆ ದೇವತಾ ಮಹಿಮೆಯ ಸಂಖ್ಯೆ ಪುರಾತನ ಸಂಸ್ಕೃತಿಯ ಪ್ರತಿಭೆಯ ಪ್ರಕಟನೆ ಈ ಸಂಖ್ಯೆಯ ವಿಶೇಷ

## ಜೀವಿತದಲ್ಲಿ ಪ್ರಭಾವ

ಪ್ರತಿತಿಂಗಳಿನ ಹದಿನೆಂಟನೆಯ ತಾರೀಖು ಹಾಗಿಲ್ಲ ಸ್ಥೂಲವಾಗಿ ಹದಿನೆಂಟನೆಯ ಇಸ್ವಿಯ ಜನನಗಳಿಗೆ ಈ ಸಂಖ್ಯೆಯ ಫಲ ಕಂಡುಬರುವುದು.

ಈ ಜನಗಳಿಗೆ ದೇವತಾ ಭಕ್ತರ ಕತೆಗಳಲ್ಲಿ ಶ್ರದ್ಧೆ ಅಪಾರ. ಶಿಶುಗಳ ಬುದ್ಧಿ ವಿಕಾಸದತ್ತ ಕೆಲಸ ಮಾಡುವ ಉದ್ಯೋಗ ಇವರದು. ಪುರಾತನ ಗ್ರಂಥಗಳ ಅಧ್ಯಯನ ಇವರಿಗೆ ಪ್ರಿಯ. ಆಚರಣೆಯ ಮಹತ್ವವನ್ನು ತಿಳಿದ ಈ ಮಂದಿಗೆ ಅದರಲ್ಲಿ ಶ್ರದ್ಧೆ ಹೆಚ್ಚು. ಪುರಾತನ ಶಾಸನಗಳ ಅಧ್ಯನವೂ ಇದರಿಗೆ ಒಂದು ಹವ್ಯಾಸ. ಇವರು ಸಂಸ್ಕೃತ ಭಾಷೆಯಲ್ಲಿ ನಿಷ್ಣಾತರು. ಅಷ್ಟೇ ಏನು? ಒಂದಕ್ಕಿಂತ ಹೆಚ್ಚು ಭಾಷೆಗಳಲ್ಲಿ ನುರಿತವರೂ ಇದ್ದಾರು. ಈ

ಜನಗಳಿಗೆ ಶಾಸ್ತ್ರಗಳಲ್ಲಿ ಅಪಾರ ನಂಬಿಕೆ. ಪೂರ್ವಿಕರ ಧ್ಯೇಯಗಳಲ್ಲಿ ನಂಬಿಕೆ ಶ್ರದ್ಧೆ. ಈ ಕಾಲದಲ್ಲಿ ಇವರಿಗೆ ಇದರಿಂದ "ಕಂದಾ ಚಾರದವರು" ಎಂಬ ಅಪವಾದ.

ಇವರು ಉತ್ತಮ ಲೇಖಕರು. ಆದರೆ ಅದರ ಹತ್ತರಷ್ಟು ಓದುಗರೂ ಹೌದು. ಹಾಗಿಲ್ಲ ಆ ರೀತಿಯ ಬುದ್ಧಿ ಜೀವಿಗಳಲ್ಲಿ ಅಭಿಮಾನಿಗಳು ಮತ್ತು ಪೋಷಕರು, ಕ್ರಾಂತಿ ಇವರಿಗೆ ಆಗದು. ವೇದ ವೇದಾಂತ ಮಂತ್ರಶಾಸ್ತ್ರಗಳ ಮಹತ್ವದ ಪ್ರಚಾರ ಇವರಿಗೆ ಇಷ್ಟ. ಪೂರ್ವಿಕರ ಮಹಿಮೆಯನ್ನು ಕೊಂಡಾಡುವುದು ಇವರಿಗೆ ಒಂದು ಹಿರಿಮೆ. ದೇವತಾ ಶ್ರದ್ಧೆ ವ್ರತಾಚಾರ ನಿಯಮಗಳು ಇವರಿಗೆ ಇಷ್ಟ. ಇವರು ಉತ್ತಮ ವಾಚಾಳಿಗಳು ಆದರೆ ಅದಕ್ಕೆ ಗ್ರಂಥಾಧಾರ ಇರುತ್ತೆ.

ಬಂಧುಗಳಲ್ಲಿ ಇವರಿಗೆ ಗೌರವ ಇದ್ದೀತು. ಹಾಗಿಲ್ಲ. ಹಳೆಯ ಕಾಲದವರು ಎಂದು ನಗೆಯಾಡಿಯಾರು. ಆದರೆ ಇವರಿಗೆ ಅದರ ಪರಿವೆ ಇರದು. ಇವರ ಜಾಡು ಮಾತ್ರ ಒಂದೇ। ಆದರೂ ಇವರು ವಿದ್ಯಾಸಂಸ್ಕೃತಿಯ ಪ್ರಚಾರಕರು.

ಇವರಿಗೆ ಹದಿನೆಂಟು ವರ್ಷ ಕಷ್ಟ. ೨೮ ವಯಸ್ಸಿನಿಂದ ಇವರ ಉದ್ಯಮಕ್ಕೆ ಪ್ರಗತಿ. ಪುಸ್ತಕ ಲೇಖನ ಪ್ರಕಾಶನಗಳಿಂದ ಮುನ್ನಡೆ ಇದೆ. ಏರಿಳಿತಗಳಿಲ್ಲದ ಜೀವನ, ಉದ್ವೇಗ ಇಲ್ಲದ ಮನಸ್ಸು, ಶಾಂತಿ ಬಾಳುವೆಯ ಜೀವನ ಇವರಿಗೆ ದೈವದತ್ತ. ೫೦ ನೆಯ ವಯಸ್ಸಿನಿಂದ ಸನ್ಮಾನ ಗೌರವಗಳು ಸಿಗುತ್ತವೆ.

ಇವರಿಗೆ ಪಿತ್ತ ಉದ್ರೇಕದಿಂದ ಆಗಾಗ ಆಲಸ್ಯ ಇದ್ದರೂ ದೀರ್ಘ ಜೀವಿಗಳು. ೫೮ನೆಯ ವಯಸ್ಸಿನಲ್ಲಿ ಗಂಡವಿದ್ದು ಪಾರಾದರೆ ೮೫ ವರ್ಷ ಪರಮಾಯು.

# ಹತ್ತೊಂಭತ್ತು- ಜ್ಞಾನ ಪ್ರಚಾರ ಸಂಖ್ಯೆ

ಹತ್ತೊಂಭತ್ತು (೧೯) ಸಂಖ್ಯೆ. ಸಂಖ್ಯೆಯಲ್ಲಿ ಹತ್ತು (೧೦) ಮತ್ತು ಒಂಭತ್ತು (೯) ಈ ಎರಡು ಸಂಖ್ಯೆಗಳಿವೆ. ಹತ್ತು (೧೦) ಸಂಖ್ಯೆಗೆ ಗುರು-ಶನಿಯೋಗವಿದೆ, ಇದನ್ನು ಕರ್ಮ ಸಂಖ್ಯೆ ಎಂದರು. ಜ್ಞಾನ ಗ್ರಹ ಗುರುವಿಗೆ ಶನಿ ವೇಧೆ. ಇದರಿಂದ ಅಜ್ಞಾನ ಅವಿವೇಕ. ಗುರುವಿನ (೧೦) ಸಂಖ್ಯೆಯ ಈ ದೋಷವನ್ನು ಪರಿಹರಿಸಲು ತೇಜಸ್ಸಿನ ತತ್ವ ಅಗತ್ಯ. ತೇಜಸ್ಸಿನ ಗ್ರಹ ಸೂರ್ಯನ ಸಂಖ್ಯೆ ಒಂಭತ್ತು (೯) ಗುರುವಿನ ಹತ್ತು (ಕರ್ಮ) ಸಂಖ್ಯೆಗೆ ಒಂಭತ್ತು ಸೇರಿದಾಗ ಕರ್ಮನಾಶಕ ಜ್ಞಾನದ ಉತ್ಪತ್ತಿ. ಕಾರಣ (೧೯) ಹತ್ತೊಂಭತ್ತು ಸಂಖ್ಯೆಗೆ ಗುರು ರವಿಯೋಗ, ಇದನ್ನು ಜ್ಞಾನ ಸಂಖ್ಯೆ ಎಂದರು. ಕರ್ಮ (ಶನಿ) ದೋಷ (೧೯) ಹತ್ತೊಂಭತ್ತರಿಂದ ಪರಿಹಾರ.

ಹತ್ತೊಂಭತ್ತು (೧೯) ಸಂಖ್ಯೆಗೆ ಗುರು - ರವಿಯೋಗ. ಇದು ಉಪಾಧ್ಯಾಯರ ಯೋಗ ಈ ಸಂಖ್ಯೆ ಜ್ಞಾನ ಪ್ರಚಾರ ಸಾಧನೆಯ ಸಂಖ್ಯೆ. "ಜ್ಞಾನವೇ ಜೋತಿ" ಗುರುಧನ ಗ್ರಹ ಹಾಗೆಯೇ ಅರ್ಥಗ್ರಹ. ಬುಧನು ಪದಗಳನ್ನು ತೋರಿಸುತ್ತಾನೆ. ಗುರು ಆ ಪದದ ಅರ್ಥವನ್ನು ತೋರಿಸುತ್ತಾನೆ.' ಇದರಿಂದ ಜ್ಞಾನವೃದ್ಧಿ. ಈ ಜ್ಞಾನ ಕಿವಿಯಿಂದ ಕಿವಿಗೆ ಪ್ರಚಾರ ಆಗುತ್ತದೆ.

ಈ ಸಂಖ್ಯೆಯ ವಯಸ್ಸು (೧೯ನೆಯ ವರ್ಷ) ಬರುವುದರಲ್ಲಿ ಪೂರ್ಣ ವ್ಯವಹಾರದ ಅರಿವು ಆಗಿರುತ್ತದೆ. ಈ ಕಾರಣ ಈ (೧೯) ಹತ್ತೊಂಭತ್ತನೆಯ ವರ್ಷದಲ್ಲಿ ವಯಸ್ಕ ಎಂದರು (attained majority). ಇಲ್ಲಿಂದ ಅವನ ಜೀವನದ ಹೊಣೆಗಾರಿಕೆ ಅವನದೇ ಸರಿ. ನಿರ್ಣಯದ ಹೊಣೆಯೂ ಅಷ್ಟೆ. ಇದರಿಂದ ಈ ಹತ್ತೊಂಭತ್ತು (೧೯) ಪೂರ್ಣ ಪರಿಪಾಕದ ಸಂಖ್ಯೆ ಎಂದರೆ ಸರಿ ಆದೀತು.

ಈ ಸಂಖ್ಯೆ ಗುರು ದರ್ಶನದ ಸಂಖ್ಯೆ, ಜ್ಞಾನ ಸೂಚಕ ಸಂಖ್ಯೆ. ಬಾಲ್ಯದ ಮೌಢ್ಯ ಪರಿಹಾರದ ಸಂಖ್ಯೆ. ವಿದ್ಯಾ ಪ್ರಚಾರಕ ಸಂಸ್ಥೆಗಳಿಗೂ ಈ ಸಂಖ್ಯೆ ಪ್ರಧಾನ.

### ವಿದ್ಯಾ ಪ್ರಗತಿ

ಈ ಹತ್ತೊಂಭತ್ತು ಸಂಖ್ಯೆ (೧೯) ಗೆ ಹಿಂದಿನ ಸಂಖ್ಯೆಗಳು ಹದಿಮೂರು (೧೩) ಮತ್ತು ಹದಿನಾರು (೧೬). ಈ ಮೂರು ಸಂಖ್ಯಾ ವರ್ಷಗಳು ವಿದ್ಯಾ ಪ್ರಗತಿಯ ಹಂತಗಳು (L.S., S.S.L.C., Degree) ಸಾಧಾರಣ ಹದಿಮೂರನೆಯ ವರ್ಷದಲ್ಲಿ ಗಾಯಿತ್ರಿ

ಮಂತ್ರ ಉಪದೇಶ ಉತ್ತಮ ಎಂದರು. ಹದಿಮೂರನೆಯ ವರ್ಷ ವಿವೇಕದ ಉದಯದ ವರ್ಷ. ಹದಿನಾರು (೧೬) ತರ್ಕದ ಉದಯ ಸಂಖ್ಯೆ (೧೯) ಹತ್ತೊಂಭತ್ತು ನಿರ್ಣಯದ ಪರಿಪಾಕದ ವರ್ಷ.

ಈ ಸಂಖ್ಯೆಯ ಜನಗಳು ವಿದ್ಯಾ ಪಟುಗಳು, ಗೌರವ ಇವರಿಗೆ ಧನ, ಇವರು ಹದಿಮೂರು-ಹದಿನಾರು ಸಂಖ್ಯೆಯ ಜನಗಳಿಗೆ ಆಶ್ರಯದಾತರು. ಉತ್ತಮ ಆಡಳಿತಗಾರರು, ನ್ಯಾಯಾಧೀಶರುಗಳಿಗೆ ಈ ಸಂಖ್ಯೆ ಉತ್ತಮ.

ಈ ಹತ್ತೊಂಭತ್ತು ತಾರೀಖಿನ ದಿನ ಅಧಿಕಾರ ಸ್ವೀಕಾರ ಉತ್ತಮ, ವಿದ್ಯಾಸಂಸ್ಥೆಗಳ ಸ್ಥಾಪನೆಯೂ ಜಯಪ್ರದ, ಮೊತ್ತದಲ್ಲಿ ಈ ಸಂಖ್ಯೆ ದೋಷರಹಿತ ಜೀವ ಪೋಷಕ ಸಂಖ್ಯೆ ಎನ್ನಬಹುದು.

## ಜೀವಿತದಲ್ಲಿ ಪ್ರಭಾವ

ಪ್ರತಿಮಾಹೆ ಹತ್ತೊಂಭತ್ತನೆಯ ತಾರೀಖು ಇಲ್ಲ. ಹತ್ತೊಂಭತ್ತನೆಯ ಇಸ್ವಿ ಜನನ, ಇವರಿಗೆ ಈ ಸಂಖ್ಯೆಯ ಫಲ ಕಂಡು ಬಂದೀತು.

ಈ ಮಂದಿಗೆ ವಿದ್ಯೆಯಲ್ಲಿ ಶ್ರದ್ಧೆ ಹೆಚ್ಚು, ಅಭ್ಯಾಸದಲ್ಲಿ ಎಡವಿ ಬೀಳುವುದೂ ಇಲ್ಲ, ಕಾರಣ ಇವರಿಗೆ ಗುರುಗಳು ಎಂದರೆ ಪ್ರಿಯ, ವಿದ್ಯೆಯ ಕಾಲ ಬೇರೆ. ಯಾವ ಕೆಲಸಕ್ಕೂ ಇಲ್ಲ, ಪುಸ್ತಕಗಳನ್ನು ಓದಿ ಕಲಿಯುವುದು ಸಾಮಾನ್ಯ. ಆದರೆ ಕಿವಿಯಾರೆ ಗುರು ಮುಖದಿಂದ ಕೇಳಿದ್ದೇ ಇವರಿಗೆ ಸರಿ. ಅದನ್ನು ಎಂದಿಗೂ ಮರೆಯರು. ಗುರುವನ್ನು ಮುಂದೆ ಇಟ್ಟು ಕೆಲಸ ಮಾಡುವ ಮಂದಿ ಇವರು. "ಮುಂದೆ" ತೋರಿಸುವ ಗ್ರಹ ಸೂರ್ಯ. ಹಿಂದೆ ತೋರಿಸುವ ಗ್ರಹ ಶನಿ. ಇವರಿಗೆ ಗುರು-ರವಿಯೋಗ ಇದರಿಂದ ಗುರುವಿಗೆ ಅಗ್ರಸ್ಥಾನ.

ವಿದ್ಯಾಕವಲುಗಳು ಎರಡು, ಪ್ರಾಚೀನ ಪರಂಪರೆಯಲ್ಲಿ ಬಂದ ವಿದ್ಯೆ, ದೇವತಾ ಕೃಪೆಯನ್ನು ಸಾಧಿಸುವ ಮಂತ್ರ ವಿದ್ಯೆ ಉದಾಹರಣೆಗೆ ಶ್ರೀ ವಿದ್ಯಾ ಇತ್ಯಾದಿ ಎರಡನೆಯದು ಧನ ಸಂಪತ್ತು ಸಾಧಿಸುವ ಲೋಕದ ವ್ಯವಹಾರ ವಿದ್ಯೆ. ಉದಾಹರಣೆಗೆ ಬಿ. ಎ., ಬಿ. ಇ., ಬಿ.ಎಸ್.ಸಿ. ಇತ್ಯಾದಿ. ಮೊದಲಿನದಕ್ಕೆ ಗುರು ಶುಶ್ರೂಷೆ ವಿದ್ಯೆಯ ಸಾಧನೆಗಿಂತ ಮಿಗಿಲು. ಎರಡನೆಯದಕ್ಕೂ ಗುರು ಅಗತ್ಯ. ಈಗಂತೂ ಗುರುಗಳಿಗೆ ಶಿಷ್ಯರೇ ಅಗತ್ಯ!

### ಗುಣ ವಿಶೇಷ

ಇವರು ಮಾತಿನಲ್ಲಿ ಚತುರರು, ಉಪದೇಶ ಮಾಡುವುದರಲ್ಲಿ ನಿಸ್ಸೀಮರು. ವಿದ್ಯಾ ಪ್ರಚಾರವೇ ಅನೇಕರಿಗೆ ಉದ್ಯೋಗ, ಹಲವರಿಗೆ ಉದ್ಯಮ. ಗುರುವು ಇವರಿಗೆ ಶುಭನಿದ್ದು ಜ್ಯೇಷ್ಠ ಪುತ್ರನಿಂದ ಸುಯೋಗ. ಮಗನೂ ಸಹ ಇವರು ಜೀವಂತ ಇರುವಾಗಲೇ ಆಡಳಿತದಲ್ಲಿ ಅಧಿಕಾರಿ ಆದಾನು.

ಜೀವಿತ ಕಾಲದಲ್ಲಿ ಇವರಿಗೆ ಇಪ್ಪತ್ತನೆಯ ವರ್ಷದಿಂದ ಉದ್ಯೋಗ ಆದೀತು. ಐವತ್ತರಿಂದ ಸುಯೋಗ ನಡೆಯುತ್ತದೆ. ಇವರಿಗೆ ಪರಮ ಆಯುಷ್ಯ ತೊಂಭತ್ತು ವರ್ಷ. ಮಧ್ಯಗಂಡಕಾಲ ಅರವತ್ತೊಂಭತ್ತು ವರ್ಷಗಳು.

ಇವರು ಗೌರವ ಪ್ರಧಾನ ಜೀವಿಗಳು, ಜೀವಿತ ಕಾಲದಲ್ಲಿಯೇ ಕೀರ್ತಿ ಸಾಧನೆ ಆಗುತ್ತದೆ. ಮಕ್ಕಳಿಂದ ಇವರು ಸುಖಿಗಳು. ಜ್ಞಾನ ಧನದಿಂದ ಆಢ್ಯರು. ದೇವತಾ ಶ್ರದ್ಧೆಯಿಂದ ಕಷ್ಟಗಳು ಕಡಿಮೆ. ಇವರು ಉತ್ತಮ ಆಡಳಿತಗಾರರು. ಉತ್ತಮ ನ್ಯಾಯಾಧೀಶರು, ಹಣದ ಖಾತೆಯ ಅಧಿಕಾರಿಗಳೂ ಆದಾರು.

# ಇಪ್ಪತ್ತು - ಗುರುವಿನ ಶುದ್ಧ ಸಂಖ್ಯೆ

ಐದು (೫) ಗುರುವಿನ ಸಂಖ್ಯೆ ಹತ್ತು (೧೦) ಕೂಡ ಗುರುವಿನ ಸಂಖ್ಯೆ. ಆದರೆ ಹತ್ತು ಕರ್ಮ ಸಂಖ್ಯೆ. ಇದಕ್ಕೆ ಗುರು ಶನಿಯೋಗ. ಇದು ದೋಷದ ಸಂಖ್ಯೆ. ಕರ್ಮ ಮಾಡಿ ಅದನ್ನು ಕಳೆದುಕೊಳ್ಳಬೇಕು. ಆಗ ಬರುವುದು ಗುರುವಿನ ಶುದ್ಧ ಸಂಖ್ಯೆ ಇಪ್ಪತ್ತು (೨೦). ಇದು ಎಲ್ಲ ಕರ್ಮ, ದೋಷಗಳನ್ನು ತೊಳೆಯುವ ಜಲಸಂಖ್ಯೆ. ಪಾವನವಾದ ಜಲಗಂಗೆ ಈ ಸಂಖ್ಯೆ. ಇದೇ ಸಂಖ್ಯೆ ವಿದ್ಯಾ ಸಂಖ್ಯೆಯೂ ಹೌದು. ಈ ವಿದ್ಯೆಯೂ ಸಹ ಕರ್ಮ ತೊಳೆಯುತ್ತೆ. ಈ ಸಂಖ್ಯೆಯ ಅಧಿದೇವತೆ ಈ ಕಾರಣ ವಿದ್ಯಾದೇವಿ ಸರಸ್ವತಿ. ಈ ಸಂಖ್ಯೆಯ ವರ್ಷದಲ್ಲಿ ವಿದ್ಯೆ ಸಿದ್ಧಿ ಆದೀತು.

ಸಿದ್ಧಿ ಸಂಖ್ಯೆ

ಯಾವುದೇ ವಿದ್ಯೆ ಆಗಲಿ ಪ್ರಾರಂಭದಿಂದ ಇಪ್ಪತ್ತು ವರ್ಷಗಳ ನಂತರ ಆ ವಿದ್ಯೆ ಸಿದ್ಧಿ ಆಗುತ್ತದೆ. ಪ್ರಥಮ ಹತ್ತು ವರ್ಷಗಳಲ್ಲಿ ಈ ವಿದ್ಯೆಯಲ್ಲಿ ಅಜ್ಞಾನ, ಅವಿವೇಕ ಇತ್ಯಾದಿ ತೊಡಕುಗಳು. ಉಳಿದ ಹತ್ತು ವರುಷಗಳಲ್ಲಿ ಒಂದೊಂದಾಗಿ ಈ ತೊಡಕುಗಳು ನೀಗಿ ಅರಿವು ಮೂಡೀತು. ಹತ್ತೊಂಭತ್ತನೆಯ ವರುಷದಲ್ಲಿ ಈ ವಿದ್ಯೆಗೆ ಕಾರಣನಾದ ಗುರುವಿನ ದರ್ಶನ ಗುರುವಿನ ಪ್ರಸಾದ. ಅನಂತರ ಇಪ್ಪತ್ತನೆಯ ವರುಷದಲ್ಲಿ ಆ ವಿದ್ಯಾಭಿಮಾನಿ ದೇವತೆಯ ಕೃಪೆ, ಆಗ ಆ ವಿದ್ಯೆ ಇವರಿಗೆ ಸಿದ್ಧಿ. ಆ ವಿದ್ಯೆಯ ಸಾಧನೆಯಿಂದ ಜನತೆಯ ಕಷ್ಟಕಾರ್ಪಣ್ಯಗಳನ್ನು ನೀಗುವ ಸಾಮರ್ಥ್ಯ ಆಗ ಬಂದೀತು. ಇದು ವಿದ್ಯಾ ಸಿದ್ಧಿ ಸಂಖ್ಯೆ.

ಜನತೆಯ ಕಷ್ಟ ನೀಗಲು ಹೃದಯದಲ್ಲಿ ಅನುಕಂಪ ಅಗತ್ಯ. ಸ್ವಾರ್ಥ ಇರುವವರೆಗೆ ಇತರರಿಗೆ ಸುಖ ನೀಡುವ ಬಯಕೆ ಬಾರದು. ಆದರೆ ಈ ಸಂಖ್ಯೆಯ ವರುಷ ಬರುವ ಹೊತ್ತಿಗೆ ಈ ವಿದ್ಯೆಯ ಬಲದಿಂದ ಸ್ವಾರ್ಥ ಕಳೆದೀತು. ವಿಶಾಲ ಮನೋಭಾವ ಬೆಳೆದೀತು. ಹೃದಯ ನಿರ್ಮಲವಾಗಿ ಕರುಣೆ ಮೂಡಿ ಬಂದೀತು. ಆ ವಿದ್ಯೆಯ ಸಿದ್ಧಿ, ಉದಾರ ಸಂಕಲ್ಪಕ್ಕೆ ಹಾದಿಯಾದರೆ ಆಗ ಆ ವಿದ್ಯೆಗೆ ಬೆಳಕು, ಉಪಯೋಗ. ಈ ಸಂಖ್ಯೆ ಕರುಣೆಯ ಸಂಖ್ಯೆ. ಪರರ ಆಗು ಹೋಗುಗಳಲ್ಲಿ ತನ್ನ ಸಹಾಯ ಏನಿದ್ದರೂ ಮಾಡಲು ಹಿಂದೆಗೆಯದ ಔದಾರ್ಯ ಈ ಸಂಖ್ಯೆಯ ಪಾವನ ಗುಣ. ಇದು ದೈವಿಕ ಗುಣ. ದೈವ ಪ್ರಸಾದಿಂದ ಈ ಗುಣ ಪ್ರಾಪ್ತಿ. ಆ ದೈವಿಕ ಪ್ರಸಾದಕ್ಕಾಗಿ ಈ ಇಪ್ಪತ್ತು ವರುಷಗಳ ದುಡಿಮೆ. ಈ ಇಪ್ಪತ್ತು ವರುಷಗಳು ವಿದ್ಯೆ ಇವರಿಗೆ ಆಶ್ರಯ. ನಂತರ ಆ ವಿದ್ಯೆಗೆ ಇವರೇ ಆಶ್ರಯ.

# ಜೀವಿತದಲ್ಲಿ ಐದರ ಪ್ರಭಾವ

ಪ್ರತಿ ಮಾಹೆ (೨೦) ಇಪ್ಪತ್ತನೆಯ ತಾರೀಖು ಅಥವಾ ಇಪ್ಪತ್ತನೆಯ ಇಸ್ವಿ ಜನನಗಳಿಗೆ ಈ ಸಂಖ್ಯೆಯ ಫಲ ನಡೆಯುವುದು. ಐದನೆ. ಗರ್ಭ(೫) ದ ಜನನಗಳಿಗೂ ದೇವತಾಸೇವೆ, ವಿದ್ಯಾ ಸಾಧನೆಯಿಂದ ಈ ಫಲ ಪ್ರಾಪ್ತಿ ಆದೀತು.

ಈ ಜನಗಳಿಗೆ ಸಾಧಾರಣವಾಗಿ ಗುರು ಚಂದ್ರಯೋಗ ಇರುತ್ತೆ. ಇವರು ವಿದ್ಯಾಜೀವಿಗಳು, ಅರ್ಥಗರ್ಭಿತ ಮಾತುಗಾರರು. ಧರ್ಮಶೀಲರು, ಸದಾಚಾರಿಗಳೂ ಹೌದು. ಚಂದ್ರನ ವ್ಯಾಪಾರ ತತ್ವದಿಂದ ಬೃಹತ್ ವ್ಯಾಪಾರಿಗಳೂ ಈ ಯೋಗದಲ್ಲಿ ಹುಟ್ಟಿಯಾರು. ಇವರಿಗೆ ಜಲತತ್ವ ಪ್ರಧಾನ. ಇದರಿಂದ ವರ್ತುಲ ಸ್ಥೂಲಕಾಯ ಪ್ರಾಪ್ತಿ. ಅಲ್ಲದೇ ವಿಶೇಷ ಕರುಣಾಳುಗಳು. ಕೋಪ ತಾಪಗಳು ಇವರಿಗೆ ಅತ್ಯಲ್ಪ. ಮನಸ್ಸಿನ ನಿರ್ಣಯದಂತೆ ಇವರು ನಡೆದು ಕೊಳ್ಳುವ ಮಂದಿ. ಈ ನಿರ್ಣಯ ದೈವ ಪ್ರೇರಣೆ ಎಂದೇ ಇವರ ನಂಬಿಕೆ. ಕಂಡ ಕಂಡ ಸಾಧುಗಳಲ್ಲಿ ಇವರಿಗೆ ನಂಬಿಕೆ. ದೇವ ಕ್ಷೇತ್ರಗಳ ಯಾತ್ರೆ ಇವರಿಗೆ ಪ್ರಿಯವಾದ ಹವ್ಯಾಸ. ದೈವ ಪ್ರಸಾದ ಇವರಿಗೆ ಸಹಜ. ನಿರ್ಮಲ ಹೃದಯಿಗಳಾಗಿ ಪರೋಪಕಾರ್ಯಶೀಲರೂ ಹೌದು.

ಇವರಿಗೆ ಹತ್ತು (೧೦) ಸಂಖ್ಯೆಯ ಜನಗಳ ಸಖ್ಯವಿರುತ್ತದೆ. ಧನ ಸೌಲಭ್ಯ ಇವರಿಗೆ ದೈವದತ್ತ. ಕರ್ಮ(೧೦) ಸಂಖ್ಯೆಯ ಕಷ್ಟ ಜೀವಿಗಳಿಗೆ ಇವರ ಆಶ್ರಯ ಇರುತ್ತದೆ. ಫಲ ನಿರೋಧಕ್ಕಾಗಿ ಇವರಿಗೆ ಆ ಸಂಖ್ಯೆ ಜನಗಳ ಸಹವಾಸ. ಒಂಟಿಯಾಗಿ ಜೀವನ ಇವರಿಗೆ ಬೇಸರ. ಸರ್ವದಾ ಸ್ನೇಹ ಪ್ರಿಯರು. ಕರುಣಾಳುಗಳಾದ ಕಾರಣ ಇವರಲ್ಲಿ ಮಂದಿ ಬೆರೆಯುವುದು ಸುಲಭ. ಇವರಿಗೆ (೫) ಐದು ಸಂಖ್ಯೆ ಜನಗಳಲ್ಲಿ ವಿಶ್ವಾಸ, ಆದರ ಗೌರವಗಳು ಹೆಚ್ಚು.

ವಿದ್ಯೆ ಶುರುವಾದ ಇಪ್ಪತ್ತು ವರುಷಗಳಿಗೆ ವಿದ್ಯೆ ಪೂರ್ತಿ ಆಗುತ್ತದೆ. ಉದ್ಯೋಗವೂ ವಿದ್ಯೆಯಿಂದಲೇ ನಡೆದೀತು. ಉದ್ಯೋಗದಲ್ಲಿಯೂ ಸಹ, ಸೇರಿದ ಇಪ್ಪತ್ತನೆಯ ವರ್ಷದಲ್ಲಿ ಸುಯೋಗ ನಡೆಯುತ್ತದೆ. ಬೃಹತ್ ವ್ಯಾಪಾರಿಗೆ ಇದೇ ವರ್ಷದಲ್ಲಿ ಮಕ್ಕಳಿಗೆ, ಮರಿಮಕ್ಕಳಿಗೆ ಸಾಕಾಗುವಷ್ಟು ಧನವೂ ಬರುತ್ತೆ.

ಈ ಜನಗಳಿಗೆ ಗುರು ಶುಭ. ಇದರಿಂದ ಮಕ್ಕಳಿಂದ ಸುಯೋಗ ನಡೆಯುತ್ತದೆ. ಪ್ರಥಮ ಗರ್ಭಧಾರಣೆ ಕಾಲದಿಂದ ಯೋಗ ಪ್ರಾರಂಭ. ಈ ಮಗನಿಗೆ ಇಪ್ಪತ್ತು ವರುಷ ನಡೆಯುವಾಗ ಇವರಿಗೆ ಸುಯೋಗ ನಡೆಯುತ್ತದೆ. ಇದು ಬಹು ಪುತ್ರಯೋಗ ಎಂದು ಕೆಲವರ ಮತ. ಆದರೆ ಈಗ ಅದು ಸೂಕ್ತ ಇರದು. ಇದರಿಂದ ಇವರಿಗೆ ನಾಲ್ಕು ಐದು ಮಕ್ಕಳ ಯೋಗ ಎಂದರೆ ಸರಿ ಆದೀತು. ಇವರಿಗೆ ಮಕ್ಕಳು ಎಂದರೆ ಪ್ರೀತಿ, ಅವರ ಪ್ರಗತಿ ಇವರಿಗೆ ಒಂದು ವ್ರತ. ಇದರಿಂದ ಮಕ್ಕಳಿಗೆ ಉತ್ತೇಜನ ಹೆಚ್ಚು.

ಇವರಿಗೆ ಜನ್ಮಾದಿ ಪ್ರಾಯ ೨೦, ೨೫, ೩೫, ೪೫, ೫೦, ೫೪ ಇತ್ಯಾದಿ ವರುಷಗಳಲ್ಲಿ ಸುಯೋಗ ನಡೆಯುತ್ತದೆ. ಇವರು ಧರ್ಮಶೀಲರು, ಸದಾಚಾರಿಗಳು,

ಕರುಣಾಳುಗಳು. ಇವರಿಗೆ ಆಯುಷ್ಯ ಪರಿಮಿತಿಯೂ ಹೆಚ್ಚು. ಸಹಸ್ರ ಚಂದ್ರ ದರ್ಶನ ಯೋಗವಿದೆ. ಸಹಸ್ರ ಪೂರ್ಣಿಮೆಗಳನ್ನು ನೋಡುವ ಯೋಗ ಎಂದರೆ ೮೪ ವರ್ಷ ಆಯುಷ್ಯ ಪರಿಮಿತಿ.

ಇವರದು ಪೂರ್ಣ ಜೀವನ. ಕುಂದು ಕೊರತೆಗಳಿಲ್ಲದ ಸುಖದ ಬಾಳ್ವೆ. ಹಣದ ಚಿಂತೆ ಇವರಿಗಿಲ್ಲ. ತೊಡಕು ಬಂದಾಗ ಪರಿಹಾರವೂ ಜೊತೆಗೇ ಇರುತ್ತದೆ. ನಿರ್ಮಲ ಹೃದಯಿಗಳು. ಶುದ್ಧ ಚಾರಿತ್ರಗಳ ಕಾರಣ ನೆಮ್ಮದಿಯಿಂದ ಬಾಳುವ ಮಂದಿ.

# ಇಪ್ಪತ್ತೊಂದು – ನಿರ್ಮಲೀಕರಣ ಸಂಖ್ಯೆ

ಇಪ್ಪತ್ತೊಂದು ಸಂಖ್ಯೆ (೨೧). ಇದರಲ್ಲಿ ಎರಡು ಸಂಖ್ಯೆಗಳಿವೆ. ಮೊದಲನೆಯದು (೨೦) ಇಪ್ಪತ್ತು, ಜಲ ಸಂಖ್ಯೆ. ಇದರ ಉಪಯೋಗ ಇಷ್ಟು ಎನ್ನುವಂತಿಲ್ಲ. ತೊಳೆಯುವ ಗುಣ ಇದರ ಒಂದು ವೈಶಿಷ್ಟ್ಯ. ಕೊಳೆ, ಮಲ ಶನಿಯ ತತ್ವ. ಇವನ ಸಂಖ್ಯೆ ಒಂದು (೧). ಈ ಎರಡು ಸಂಖ್ಯೆಗಳ ಸಂಯುಕ್ತ ಸಂಖ್ಯೆ ಇಪ್ಪತ್ತೊಂದು (೨೧). ಇದರಿಂದ ಈ ಸಂಖ್ಯೆಗೆ ಕೊಳೆ ತೊಳೆಯುವ ಗುಣ. ಈ ಕಾರಣ ಈ ಸಂಖ್ಯೆ (೨೧) ಯನ್ನು ಶುಚೀಕರಣ ಸಂಖ್ಯೆ ಎಂದರು.

ಕೊಳೆ, ಶನಿಯ ತತ್ವ. ಮುಖ್ಯವಾಗಿ ಈ ಕೊಳೆ ಕರ್ಮ, ಪ್ರಾಚೀನ ಪ್ರಾರಬ್ಧ. ಅದೂ ದುಃಖ ಪ್ರಾರಬ್ಧ ಇದನ್ನು ತೊಳೆಯುವ ಸಾಧನೆಯ ಸಂಖ್ಯೆ (೨೧). ಪಾಪವನ್ನು ತೊಳೆಯುವ ಗಂಗೆಗೆ ಈ (೨೧) ಸಂಖ್ಯೆ. ಕರ್ಮ ತೊಳೆಯುವ ಆ ಸಾಧನೆಗಳೆಷ್ಟು? ಯಾವ ಯಾವ ನಮೂನೆ? ಏನೇ ಇರಲಿ, ಎಲ್ಲವೂ ಈ ಸಂಖ್ಯೆಯ ಪರಿಮಿತಿಯಲ್ಲಿ ಬರುತ್ತವೆ.

### ಶುಚಿ ಕ್ರಿಯಾ ಸಂಖ್ಯೆ

ಕನಿಷ್ಠ ದರ್ಜೆಯಲ್ಲಿ ಈ ಕಾರ್ಯ "ಸ್ನಾನ"ವನ್ನು ತೋರಿಸುತ್ತೆ. ಮೈ ಕೊಳೆ ತೊಳೆಯುವುದೇ ಈ "ಸ್ನಾನ". ಕರ್ಮ ಫಲ ತೊಳೆಯುವ "ತೀರ್ಥಸ್ನಾನ"ವೂ ಅಷ್ಟೆ. ತೀರ್ಥ ಎಂದರೆ ದೈವತತ್ವ ಸಂಬಂಧ ಹೊಂದಿದ ಜಲ, ಈ "ತೀರ್ಥ". ಮಂತ್ರಿಸಿ ಕೊಟ್ಟದ್ದೂ "ತೀರ್ಥ" ದೇವ ಬಿಂಬಕ್ಕೆ ಅಭಿಷೇಕ ಮಾಡಿಕೊಟ್ಟದ್ದೂ "ತೀರ್ಥ". ಚಂದ್ರ ನೀರು ಗುರುದೈವ ತತ್ವ. ಇದರ ಸಂಯೋಗ ಗುರು ಚಂದ್ರಯೋಗ. ಗುರು ಜೀವ ಚಂದ್ರ ಜಲ. ಇದರ ಸಂಯೋಗ ಜೀವ ಜಲಗಳು, ಈ ಜೀವ ನದಿಗಳ ಸ್ನಾನವೂ ಸಹ "ತೀರ್ಥಸ್ನಾನ". ಇದರಿಂದ ಮೈ ಮನಗಳ ಕೊಳೆ ಶುದ್ಧವಾಗುತ್ತದೆ. ಈ ಸಂಖ್ಯೆ ಕೇವಲ ಶುದ್ಧೀಕರಣ ಕ್ರಿಯೆಯನ್ನು ತೋರಿಸುತ್ತದೆ.

ಈ ಕ್ರಿಯೆಗೆ ಅಗತ್ಯದ ಕೊಳೆಯೂ ಇದಕ್ಕೆ ಅಂಟಿದಂತೆ ಇರುತ್ತದೆ. ಮೊದಲು ಆತ್ಮ, ತನ್ನನ್ನು ಶುದ್ಧಿ ಮಾಡಿಕೊಳ್ಳುವುದು. ಅನಂತರ ಕೊಳೆ ಇರುವಲ್ಲಿ ಹೋಗಿ ಆ ಕೊಳೆಯನ್ನು ಶುದ್ಧಿ ಮಾಡುವುದು, ಈ ಕ್ರಿಯೆ ಈ ಸಂಖ್ಯೆಗೆ ಸತತವಾದ ಗುಣ.

ಕೊಳೆಯನ್ನು ತೊಳೆಯುವುದೇ ಈ ಸಂಖ್ಯೆಯ ಕೆಲಸ. ಇದರಿಂದ ಈ ಕ್ರಿಯಾ ರೂಪಕವಾದ ಎಲ್ಲಾ ಕೆಲಸಗಳೂ ಇದರ ಪರಿಮಿತಿಯಲ್ಲಿ ಬರುತ್ತವೆ. ಉದಾಹರಣೆಗೆ ಸ್ನಾನ ಗೃಹಗಳು, ಅಗಸರ ವೃತ್ತಿ. ಇವರಿಗೆ ಸತತವಾಗಿ ಮೈಲಿಗೆ ಬಟ್ಟೆಗಳನ್ನು ಶುದ್ಧಿ ಮಾಡುವುದೇ ವೃತ್ತಿ. ಆರೋಗ್ಯ ಶಾಖೆಯ ಶುದ್ಧೀಕರಣ ಸಾಧನೆಗಳಿಗೂ ಈ ವೃತ್ತಿಯಲ್ಲಿರುವ ಮುಂದಿಗೂ ಇದೇ ಸಂಖ್ಯೆ ಅಧಿಪತಿ.

ಕರ್ಮ ಒಂದು ಕೊಳೆ. ಪ್ರಗತಿಯ ಹಾದಿಗೆ ಅಡ್ಡಗಲ್ಲು. ಜೀವನಿಗೆ ದೇಹ ಪ್ರಾಪ್ತಿ ಆದಾಗ ಕರ್ಮ ಇತ್ತೊ ಇಲ್ಲವೋ ಅನಂತರ ಮಾಡುವ ಕರ್ಮಗಳಿಗಂತೂ ಅದು ಅಂಟಿ ಬರುತ್ತೆ. ಕರ್ಮ ಮಾಡದೇ ಇರಲೂ ಅಸಾಧ್ಯ. ಕಾರಣ ಅದು ಅದರ ಸಹಜ ಗುಣ. ಈ ಕಾರಣ ಇದನ್ನು ತೊಳೆಯುವುದೆಂತು? ಮುಂದೆ ಮಾಡುವ ಕರ್ಮ ನಿಲ್ಲುವುದೆಂತು? ಎರಡೂ ಒಂದೇ ಸಾಧನೆಯಿಂದ ಸಾಧ್ಯವೆ? ವಿಶ್ವ ಪ್ರೇಮಿಯಾದ ಪರಮಾತ್ಮನು ಸಾಧನೆಯನ್ನು ಕೊಟ್ಟೇ ಇದ್ದಾನು. ಆದರೆ ಅದರ ಅರಿವು ನಮಗಿಲ್ಲ. ಇದಕ್ಕಾಗಿ ಮಹರ್ಷಿಗಳು ಪರಮಾತ್ಮನ ಆದೇಶದಂತೆ ನಮಗೆ ಆ ಸಾಧನೆಯನ್ನು ನೀಡಿದ್ದಾರೆ. ಆ ಸಾಧನೆಯೇ ಸದಾಚಾರ, ದೇವತಾರಾಧನೆ. ಅದು ಅಂದಿನ ಪಾಪವನ್ನೂ ಕಳೆಯುತ್ತೆ, ಹಿಂದಿನ ಕರ್ಮವನ್ನೂ ತೊಳೆಯುತ್ತೆ. ಈ ತೊಳೆಯುವ ವಿಚಿತ್ರ ಸಾಧನೆಗೂ ಈ (೨೧) ಸಂಖ್ಯೆ ಅಧಿಪತಿ.

## ದೇವತಾ ಶ್ರದ್ಧೆ – ದಾನ ದಯಾಪರರು – ಧರ್ಮ ಪ್ರಚಾರಕರು

ಈ (೨೧) ಸಂಖ್ಯೆಯ ಜನಗಳು ಈ ಕಾರಣ ಸದಾಚಾರ ಶೀಲರು. ದೇವತಾ ಶ್ರದ್ಧೆಯುಳ್ಳವರು. ಇಷ್ಟಾರ್ಥ ಸಾಧನೆ, ಪರಲೋಕ ಸಾಧನೆಗಳೂ ಇದರಿಂದ ಸಾಧ್ಯ. ಈ ನಂಬಿಕೆಯ ಕಾರಣ ಏನಾದರೂ ಸೇವೆ ಮಾಡಬೇಕು. ಆಗ ಆ ದೇವತಾ ಬಿಂಬವನ್ನು ಇಪ್ಪತ್ತೊಂದು (೨೧) ದಿನಗಳು ಸೇವೆ ಮಾಡುತ್ತಾರೆ. ಇಪ್ಪತ್ತೊಂದು (೨೧) ಸಲ ಪ್ರದಕ್ಷಿಣೆ ಮಾಡುತ್ತಾರೆ. ದೇವತೆಗಳಲ್ಲಿ ಅಗ್ರಪೂಜ್ಯನಾದ ಗಣಪತಿಗೆ ಈ ಸಂಖ್ಯೆ ಬಹುಪ್ರಿಯ. ಅವನಿಗೆ ಈ ಸಂಖ್ಯಾ ಪ್ರಮಾಣದಲ್ಲಿ ಕಡಬುಗಳನ್ನು ನಿವೇದನ ಮಾಡುತ್ತಾರೆ. ಈ ಸಂಖ್ಯೆಯಷ್ಟು ತೆಂಗಿನಕಾಯಿ ಗಳನ್ನು ಒಡೆಯುತ್ತಾರೆ. ಇದರಿಂದ ಅವರಿಗೆ ಕರ್ಮಶುದ್ಧಿ, ಇಷ್ಟಾರ್ಥಸಿದ್ಧಿ ಎರಡೂ ಆದೀತು.

ಈ ಸಂಖ್ಯೆಯ ಜನಗಳು ದೇವತಾರ್ಚನಾ ಶೀಲರು. ಕೆಲವರಿಗಂತೂ ಅದೇ ವೃತ್ತಿ. ತಮ್ಮ ಕರ್ಮವನ್ನೂ ಕಳೆದುಕೊಂಡು ಇತರರ ಕರ್ಮವನ್ನೂ ಕಳೆಯಲು ಸಹಾಯಕ ಈ ವೃತ್ತಿ. ಈ ಕಾರಣ ಅರ್ಚನಾ ವೃತ್ತಿಯ ಜನಗಳಲ್ಲಿ ಮಂದಿಗೆ ಅದರ, ಅಭಿಮಾನ, ಗೌರವ. ಇವರಿಗೆ ಅರ್ಚಕರು ಎಂದರು. ಆ ವೃತ್ತಿಯಲ್ಲಿ ಹಾಯಾಗಿರಲು ಅವರಿಗೆ ಧನಧಾನ್ಯಗಳನ್ನು ಕೊಡುತ್ತಾರೆ. ಈ ಸಂಖ್ಯೆಯನ್ನು ದಾನ ಧರ್ಮ ಸಂಖ್ಯೆ ಎಂದರು. ಈ ಸಂಖ್ಯೆಯ ಜನಗಳೂ ಅಷ್ಟೆ. ದಾನ, ಧರ್ಮ, ದಯಾಪರರು.

ಇನ್ನು ಕೆಲವರು ತಮ್ಮ ಕರ್ಮ ತೊಳೆದರೂ, ಆ ಕರ್ಮ ಕೊಳೆ ಇರುವ ಜಾಗವನ್ನೇ ಅರಸಿ ಹೋದಾರು. ಅಲ್ಲಿ ಅದನ್ನು ತೊಳೆಯಲು ಧರ್ಮ ಸಂದೇಶ. ಸದಾಚಾರಗಳನ್ನು ಪ್ರಚಾರ ಮಾಡಿಯಾರು. ಇದೂ ಅವರ ವೃತ್ತಿಯೇ ಆದೀತು. ಇವರೇ ಮಠಾಧಿಪತಿಗಳು. ಶಿಷ್ಯರಲ್ಲಿ ಹೋಗಿ ಅವರ ದೈನಂದಿನ ಕರ್ಮ ಕಳೆಯಲು ಸಹಾಯ ಮಾಡುತ್ತಾರೆ.

ಈ (೨೧) ಇಪ್ಪತ್ತೊಂದು ಸಂಖ್ಯೆಗೆ ಗುರು ಚಂದ್ರ ಶನಿಯೋಗ. ಇದು ತೊಳೆಯುವ ಕ್ರಿಯಾರೂಪಕ ಸಂಖ್ಯೆ, ಜ್ಞಾನ ಸಂಖ್ಯೆಯಾದರೂ ಶುಚಿ ಕ್ರಿಯೆಯೇ ಇದಕ್ಕೆ ಪ್ರಧಾನ. ವೇದಾಂತದಲ್ಲಿ ಕರ್ಮ ಒಂದು ಅವಗುಣ. ಆದರೆ ಈ ಸಂಖ್ಯೆ ಶ್ರದ್ಧೆ ಸದಾಚಾರ ದೇವತಾಕರ್ಮ ಸಂಖ್ಯೆ. ವೇದಾಂತಕ್ಕೆ ಗುರು ಶನಿ ಯೋಗ (೧೦+೧) ಹನ್ನೊಂದು. ಅದಕ್ಕೆ ಕರ್ಮವೇ ಒಂದು ದೋಷ.

ಆದು ನಿಷ್ಕರ್ಮ ಯೋಗ ಸಂಖ್ಯೆ. ಕರ್ಮವೇ ಮಾಡದ ಜಡಯೋಗ ಸಂಖ್ಯೆ. ಆದರೆ (೨೧) ಇಪ್ಪತ್ತೊಂದು ಹಾಗಲ್ಲ ಅರಿವು ಇರಲಿ ಬಿಡಲಿ ಕರ್ಮದಿಂದ ಕರ್ಮವನ್ನು ತೊಳೆಯುವ ಸಂಖ್ಯೆ.

ಅರ್ಚಕರು, ಉಪಾಸಕರು, ಭಕ್ತರು, ಪುರೋಹಿತರು, ತೀರ್ಥಯಾತ್ರೆ ಮಾಡುವ, ಮಾಡಿಸುವ ಮಂದಿ ಈ ಸಂಖ್ಯೆಯ ಪರಿಮಿತಿಯಲ್ಲಿ ಬರುತ್ತಾರೆ. ಯಾತ್ರಾ ಕ್ಷೇತ್ರಗಳಲ್ಲಿ, ಸಮುದ್ರ ತೀರಗಳಲ್ಲಿ ಯಾತ್ರಿಕರಿಗೆ ಅರ್ಚನೆ ಮಾಡಿಸುವ ಮಂದಿಗೂ ಇದೇ ಸಂಖ್ಯೆ ಪ್ರಧಾನ.

### ಬೃಹತ್ ವ್ಯಾಪಾರ ಯೋಗ

ವ್ಯವಹಾರದಲ್ಲಿ ಈ ಮಂದಿ ದೊಡ್ಡ ವ್ಯಾಪಾರಿಗಳು. ಆದರೆ ಒಂದು ನಮೂನೆ ಅಲೆಮಾರಿಗಳು, ವ್ಯಾಪಾರ ವ್ಯವಹಾರಗಳ ಕಾರಣ ದೇಶವೆಲ್ಲಾ ಸುತ್ತಿಯಾರು. ಆ ಸುತ್ತಾಟದಲ್ಲಿ ಕ್ಷೇತ್ರದರ್ಶನ, ತೀರ್ಥಸ್ನಾನ ಇತ್ಯಾದಿಗಳನ್ನೂ ಸಾಧಿಸಿಯಾರು. ಆದರೆ ಇವರು ಕೇವಲ ಬೃಹತ್ ವ್ಯಾಪಾರಿಗಳು. ಉದ್ಯಮಗಾರರಲ್ಲ (only traders and not Industrialists) ಅವರಿಗೆ ಇದರಿಂದ ಉತ್ತಮ ಧನಯೋಗವಿದೆ. ಇಲ್ಲಿ ಶನಿಗೆ ಗುರು ಚಂದ್ರಯೋಗ ಒಂದಾದರೆ ಗುರುವಿಗೆ ಶನಿ ಚಂದ್ರಯೋಗ ಎರಡು. ಈ ಎರಡನೆಯ ಕಾರಣದಿಂದ ಇವರು ವ್ಯಾಪಾರ ವ್ಯವಹಾರ ಕುಶಲರು. ಚಂದ್ರ ಶನಿ ಯೋಗದಿಂದ ಸಂಚಾರಿಗಳು, ಸಮುದ್ರ ಜಲಾಶಯಗಳ ತೀರದಲ್ಲಿ, ವೃತ್ತಿ ಮಾಡುವ ಮಂದಿ. ಹಾಗೆಯೇ ಮೂರನೆಯ ಯೋಗ ಚಂದ್ರನಿಗೆ ಗುರು ಶನಿಯೋಗ. ಇದರಿಂದ ಮನಸ್ಸಿಗೆ ಧಾರ್ಮಿಕ ಬುದ್ಧಿಯೋಗ, ವ್ಯಾಪಾರದಲ್ಲಿ ಧನದ ಯೋಗ.

ಈ ಮಂದಿ ಎಷ್ಟೇ ವ್ಯವಹಾರದಲ್ಲಿದ್ದರೂ ಸದಾಚಾರಿಗಳು, ದೇವತಾ ಶ್ರದ್ಧೆ ಯುಳ್ಳವರು, ಧಾರ್ಮಿಕ ಪ್ರವೃತ್ತಿಯವರು. ಗುರುಜನಗಳಲ್ಲಿ ಇವರಿಗೆ ಆದರ ಗೌರವ. ಧರ್ಮಪ್ರವಚನ, ಧರ್ಮ ಸಂದೇಶ ಪ್ರಚಾರ ಸಂಸ್ಥೆಗಳಿಗೆ ಪೋಷಕ ವರ್ಗದವರು ಬೇರೆ.

## ಜೀವನದಲ್ಲಿ ಪ್ರಭಾವ

ಪ್ರತಿ ಮಾಹೆ (೨೧) ಇಪ್ಪತ್ತೊಂದನೆಯ ತಾರೀಖು, ಇಪ್ಪತ್ತೊಂದನೆಯ ಇಸ್ವಿಯಲ್ಲಿ ಜನನವಾದವರಿಗೆ ಈ ಸಂಖ್ಯೆಯ ಫಲ ಪ್ರಾಪ್ತಿ ಆಗುವುದು.

ಇವರಿಗೆ ಕರ್ಮಭಯ. ಇದರಿಂದ ಪಾಪಭೀರುಗಳು, ಧರ್ಮಶೀಲರು, ಸದಾಚಾರಿಗಳು. ಇವರು ಉತ್ತಮ ಪ್ರಚಾರಕರು. ನಿರ್ದೇಶಕರೂ ಹೌದು. ಆಡಿದ್ದು ಒಂದು ಮಾಡುವುದು ಮತ್ತೊಂದು ಇರದು. ಆಡಿದ್ದು ಮಾಡುವ ಮಂದಿ. ಯಾತ್ರಾ ಪ್ರಿಯರು, ದೇವತಾಭಕ್ತರು. ಶುಚಿ ಕರ್ಮದಿಂದ ಶುಚಿಯಾದ ಮನಸ್ಸು, ಹೃದಯ ಉಳ್ಳವರು. ನಾಲ್ಕು ಜನಕ್ಕೆ ಸಮಯಕ್ಕೆ ಒದಗುವ ಮಂದಿ.

ಗುರುವಿಗೆ ಚಂದ್ರ ಶನಿಯೋಗ, ಇದರಿಂದ ಇವರಿಗೆ ಗಂಡು ಮಗನ ಅಭಿವೃದ್ಧಿಯ ಚಿಂತೆ. ಹಾಗಿಲ್ಲ ಪುತ್ರಸಂತಾನವಿಲ್ಲದೆ ಚಿಂತೆ. ಹಾಗೆಯೇ ವಿದ್ಯೆಯೂ ಒಂದು ಚಿಂತೆ ಅನೇಕರಿಗೆ ವಿದ್ಯೆ

ಪೂರ್ತಿ ಇರದು. ಪೂರ್ಣ ವಿದ್ಯೆ ಇದ್ದರೂ ಉಪಯೋಗಕ್ಕೆ ಬಾರದು. ಆದರೆ ಧರ್ಮ ಶ್ರದ್ಧೆ ಇವರಿಗೆ ಪೂರ್ಣರಕ್ಷೆ.

### ಚೇತನದ ಜೀವನ

ಈ ಜನಗಳಿಗೆ ಜನ್ಮಾದಿ ಪ್ರಾಯ ಇಪ್ಪತ್ತೊಂದು ವರ್ಷ ಪರ್ಯಂತ ಕಷ್ಟ. ಆ ನಂತರ ಚೇತನದ ಜೀವನ. ಈ ಸಂಖ್ಯೆಯ ವ್ಯಕ್ತಿಗಳಲ್ಲಿ ಮುನ್ನಡೆ ಬೇರೆ. ವ್ಯವಹಾರ ವ್ಯಾಪಾರ ಉದ್ಯೋಗ ಏನೇ ಇರಲಿ ದೇವರನ್ನು ಮುಂದಿಟ್ಟು ನಡೆಯುವ ಮಂದಿ. ಹತ್ತು ಸಂಖ್ಯೆ ಜನಗಳಿಗೆ ಇವರು ಆಶ್ರಯದಾತರು. ಉತ್ತಮ ಧನಾರ್ಜನೆ ಇದ್ದು ಅರ್ಧ ಧನವನ್ನು ದೇವತಾ ಕಾರ್ಯಗಳಿಗೆ ಉಪಯೋಗಿಸುವ ಮಂದಿ. ವಿದ್ಯಾ ಸಂಸ್ಥೆಗಳು, ಧರ್ಮ ಸಂಸ್ಥೆಗಳಿಗೆ ಒಡೆಯರು ಇಲ್ಲ ಪೋಷಕರು. ಈ ಮಂದಿಗೆ ೨೧, ೨೫, ೨೬, ೨೯ ವರ್ಷಗಳು ಪ್ರಗತಿದಾಯಕ. ೧೩, ೨೩ ಕಷ್ಟದ ವರ್ಷಗಳು. ೫೦ನೆಯ ವರ್ಷದಿಂದ ಇವರಿಗೆ ರಾಜಯೋಗ, ಧನಯೋಗ, ಜೀವಿತದ ಕೊನೆಯವರೆಗೆ ಸುಯೋಗಿಗಳು ಇವರಿಗೆ ಪರವಾಯು ೭೫ ವರ್ಷಗಳು. ತೀರ್ಥ ಕ್ಷೇತ್ರಗಳಲ್ಲಿ, ಆ ಯಾತ್ರೆ ಮಾಡಿ ಮರಳಿದ ಮೇಲೆ ಇವರಿಗೆ ಮೃತ್ಯುಯೋಗವು. ಇವರಿಗೆ ಧನ ಚಿಂತೆ. ಪುತ್ರ ಚಿಂತೆ ಮೃತ್ಯುವಿಗೆ ಕಾರಣ. ಅಜೀರ್ಣ, ಭೇಧಿ ರೋಗದಿಂದ ಮೃತ್ಯು. ಆದರೆ ಅಂತಕನ ಸನ್ನಿಧಿ ಹೊತ್ತಿಗೆ ದೇವತಾ ಧ್ಯಾನ, ಭಕ್ತಿ ಪ್ರಾಪ್ತಿ. ಇದರಿಂದ ಇವರಿಗೆ ಶುಭ ಲೋಕ ಪ್ರಾಪ್ತಿ.

ಈ ಸಂಖ್ಯೆ ಜನಗಳು ಆಶ್ರಯದಾತರು, ಉತ್ತಮ ಉದಾತ್ತ ಜೀವಿಗಳು. ಇವರ ಸಾವು ಅನೇಕರಿಗೆ ದುಃಖಾಶ್ರು ತಂದೀತು. ಚಿರಸ್ಮರಣೆಯ ಧನ್ಯರು ಎಂದರೆ ತಪ್ಪಲ್ಲ.

೨೨

# ಇಪ್ಪತ್ತೆರಡು-ವಿದ್ಯಾಪ್ರಗತಿ ಸಂಖ್ಯೆ

(೨೨) ಇಪ್ಪತ್ತೆರಡು ಸಂಖ್ಯೆ. ಇದು ಸಂಯುಕ್ತ ಸಂಖ್ಯೆ. ಇದರಲ್ಲಿ ಎರಡು ಸಂಖ್ಯೆಗಳಿವೆ. (೨೦) ಇಪ್ಪತ್ತು, ಇದು ಗುರುವಿನ ಶುದ್ಧ ಸಂಖ್ಯೆ. ಇದು ಎರಡನೆ ಭಾಗದ ಸಂಖ್ಯೆಯ ಗುಣವನ್ನು ವೃದ್ಧಿಗೊಳಿಸುತ್ತೆ. ಅಲ್ಲದೆ ಆ ಸಂಖ್ಯೆಯ ದೋಷವನ್ನು ಪೂರ್ಣವಾಗಿ ಶುದ್ಧಿ ಮಾಡುತ್ತೆ. ಇಲ್ಲಿ ಉತ್ತರಾರ್ಧ ಸಂಖ್ಯೆ ಎರಡು (೨). ಈ ಎರಡು (೨) ಸಂಖ್ಯೆಯಲ್ಲಿ ದೋಷ ಇಲ್ಲ. ಇದರಿಂದ ಆದರ ಗುಣವನ್ನು ಬಲಗೊಳಿಸುತ್ತೆ. ಇದು ಈ ಸಂಖ್ಯೆಯ (೨೨) ಗುಣ. ಇದನ್ನೇ ವಿದ್ಯಾ ಮಾಧವೀಯದಲ್ಲಿ "ನಿಶ್ಶೇಷ ದೋಷಹರಣೇ ಶುಭವರ್ಧನೇ ಚ ವೀರ್ಯಂ ಗುರೋರಧಿಕ ಮಸ್ತ್ಯಖಿಲ ಗ್ರಹೇಭ್ಯಃ! ತದ್ವೀರ್ಯ ಪಾದದಲ ಶಕ್ತಿ ಭೃತಾಜ್ಞ ಶುಕ್ರಾ ಚಾಂದ್ರಂ ಬಲಂ ಹಿ ನಿಖಿಲ ಗ್ರಹ ವೀರ್ಯ ಬೀಜಮ್" ಎಂದರು. ಈ ಗುರುವಿನ ಗುಣ ಆ ಇಪ್ಪತ್ತು (೨೦) ಸಂಖ್ಯೆಗಿದೆ.

ಇಲ್ಲ ಪೂರ್ವಾರ್ಧ ಸಂಖ್ಯೆ (೨೦) ಇಪ್ಪತ್ತು ಉತ್ತರಾರ್ಧ ಸಂಖ್ಯೆ (೨) ಎರಡು. ಈ (೨) ಎರಡು ಸಂಖ್ಯೆಗೆ ಬುಧ-ಗುರು ಯೋಗ. ಇದು ಬುದ್ಧಿ ಕೌಶಲ್ಯದ ಸಂಖ್ಯೆ. ಈ ಕಾರಣ ಸಂಖ್ಯೆ (೨೨) ಇಪ್ಪತ್ತೆರಡು, ವಿದ್ಯಾತತ್ವಕ್ಕೆ ಪೋಷಣೆ ಕೊಡುವ ಸಂಖ್ಯೆ.

ಬಾಲಕರಿಗೆ ವಿದ್ಯೆಯನ್ನು ಕಲಿಸುವ ಹೊಣೆ, ಬುದ್ಧಿವಂತ ವಿದ್ಯಾರ್ಥಿಗಳಿಗೆ ಸದವಕಾಶ ವನ್ನು ಕಲ್ಪಿಸಿ ಸಹಾಯ ಮಾಡುವ ಹೊಣೆ ಈ ಸಂಖ್ಯೆಗೆ ಸೇರಿದ್ದು. ಬುಧ-ಗುರು ಯೋಗ ಶಾಸ್ತ್ರಸಂಖ್ಯೆ. ಈ ಶಾಸ್ತ್ರಗಳ ಅಧ್ಯಯನ, ಅಭ್ಯಾಸ ಈ ಸಂಖ್ಯೆ ಗುಣ. ಮೂಲೆಗೆ ಬಿದ್ದು ಕೊಳೆ ಯುತ್ತಿರುವ ಶಾಸ್ತ್ರ ಪ್ರತಿಗಳನ್ನು ಹುಡುಕುವುದು, ಆ ಪ್ರತಿಗಳನ್ನು ಸಂಸ್ಕಾರ ಮಾಡುವುದು, ಆ ಸುಧಾರಿತ ಪ್ರತಿಗಳನ್ನು ಓದುಗ ಪಂಡಿತರಿಗೆ ಸುಲಭವಾಗಿ ಸಿಗುವಂತೆ ಮಾಡುವುದು, ಈ ರೀತಿ ಕಣ್ಮರೆಯಾಗುತ್ತಿದ್ದ ಅರಿವಿನ ಸುಧಾರಣೆಗೆ ಶ್ರಮದಿಂದ ದುಡಿಯುವುದು ಈ ಸಂಖ್ಯೆಯ ವಿಶೇಷಗುಣ.

## ಸಾಹಿತ್ಯ ಸೇವೆ

ಪ್ರಾಚೀನ ಭಾಷೆಗಳಲ್ಲಿ ಬರೆದಿದ್ದ ಜ್ಞಾನ ಗ್ರಂಥಗಳನ್ನು ಹುಡಿಕಿ ಜೋಪಾನ ಮಾಡುವುದು. ಪಂಡಿತರ ಸಹಾಯದಿಂದ ಆ ಗ್ರಂಥಗಳನ್ನು ದೈನಂದಿನ ಬಳಕೆಯ ಶ್ರೀಸಾಮಾನ್ಯನ ಭಾಷೆಗೆ ಇಳಿಸುವುದು. ಆ ಭಾಷಾಂತರದ ಗ್ರಂಥಗಳನ್ನು ಮುದ್ರಣ ಮಾಡುವುದು. ಅಗ್ಗದ ಬೆಲೆಗೆ ಎಲ್ಲರಿಗೂ ದಕ್ಕುವಂತೆ ಮಾಡುವುದು ಈ ರೀತಿಯ ಪಾವನ ಸಾಹಿತ್ಯ ಸೇವೆ ಈ ಸಂಖ್ಯೆಯ ಇನ್ನೊಂದು ಮಹತ್ತರ ಗುಣ.

ಭಾರತದ ಹಿರಿಮೆ ಅದರ ಗತ ಸಂಸ್ಕೃತಿ. ಆ ಸಂಸ್ಕೃತಿ ಹಬ್ಬಿ ನೆಲೆಸಿದ ನಿಲುವನ್ನು ತೋರಿಸುವುದೇ ಪ್ರಾಚೀನ ಗ್ರಂಥಗಳು. ಆ ಕಾಲದ ಭಾಷೆಯ ಗ್ರಂಥಗಳು ಒಂದು ಸಿರಿ. ಆ ಗ್ರಂಥಗಳಲ್ಲಿ ಅಡಕವಾದ ಜ್ಞಾನವನ್ನು ಜನಗಳಿಗೆ ತಿಳಿಯ ಹೇಳುವ ಕೆಲಸ ಈ ಸಂಖ್ಯೆಯ ಹೊಣೆ. ಅಲ್ಲದೆ ಆ ಬಗ್ಗೆ ಊರು ಊರಿಗೆ ಹೋಗಿ ಉಪನ್ಯಾಸಗಳ ಮೂಲಕ ಆ ಜ್ಞಾನವನ್ನು ಪ್ರಚಾರ ಮಾಡುವ ಪ್ರವೃತ್ತಿಯೂ ಈ (೨೨) ಇಪ್ಪತ್ತೆರಡು ಸಂಖ್ಯೆಗೇ ಸೇರಿದ್ದು.

ಪುರಾಣಗಳ ಪ್ರವಚನಗಳು, ಅದನ್ನೇ ವೃತ್ತಿಯಾಗಿ ಹೊಂದಿದ ಪಂಡಿತರಿಗೂ ಈ ಸಂಖ್ಯೆಯೇ ಆಶ್ರಯ. ಮೂಲ ಭಾಷೆಗಳಿಗೆ ಟೀಕೆ ಟಿಪ್ಪಣಿಗಳನ್ನು ಬರೆದು ಅರ್ಥ ವಿವರಣೆ ಮಾಡುವ ಜವಾಬ್ದಾರಿಯ ಗುಣ ಈ ಸಂಖ್ಯೆಗಿದೆ.

ಪ್ರಾಚೀನ ಕಾಲದ ಶಾಸನಗಳನ್ನು ಓದುವ ಹವ್ಯಾಸ, ಉದ್ಯೋಗ ಉದ್ಯಮಗಳು ಅದಕ್ಕೆ ಅಗತ್ಯವಾದ ಲಿಪಿ ಶಾಸ್ತ್ರದ ಅರಿವು, ಅದನ್ನು ಓದಿ ತಿಳಿದು ಅರ್ಥ ಹೇಳುವ ಚಾಕಚಕ್ಯತೆ ಈ ಸಂಖ್ಯೆಯ ಜನಗಳಿಗೆ ದೈವದತ್ತ ಗುಣ. ಲಿಪಿಗಳ ಸುಧಾರಣೆ, ಬೆಳವಣಿಗೆಯ ಅಭ್ಯಾಸ ಮಾಡಿಸುವ ತಂತ್ರಗಳ ಅರಿವು ಬೇರೆ.

ಬಾಲಕರಿಗೆ ವಿಜ್ಞಾನದ ತತ್ವಗಳು ಅರಿವಾಗುವಂತೆ ಅತಿ ಸುಲಭ ಸರಳ ಶೈಲಿಯಲ್ಲಿ ಚಿತ್ರ ಗಳ ಸಹಾಯದಿಂದ ಸಣ್ಣ ಸಣ್ಣ ಗ್ರಂಥಗಳನ್ನು ರಚಿಸುವ ಜನಗಳಿಗೂ ಈ ಸಂಖ್ಯೆಯೇ ಆಶ್ರಯ. ಪಠ್ಯ ಪುಸ್ತಕಗಳಿಗೆ ಸುಲಭ ಅರ್ಥ ಸಹಿತ ಮಾಹಿತಿ ಮಾಡಿ ಕೊಟ್ಟು ಪರೀಕ್ಷೆಯಲ್ಲಿ ತೇರ್ಗಡೆ ಹೊಂದಲು (Notes) ಪುಸ್ತಕಗಳನ್ನು ಬರೆದು ಪ್ರಕಾಶ ಮಾಡುವುದೂ ಅಷ್ಟೆ.

ಈ (೨೨) ಸಂಖ್ಯೆಯ ಮಹಿಮೆ ಇಷ್ಟು ಅಷ್ಟು ಎನ್ನುವಂತಿಲ್ಲ. ಈ ಸಂಖ್ಯೆಯ ಮೂಲ ಗುಣದ ಆಧಾರದ ಮೇಲೆ ಅವರವರ ಮನೋಧರ್ಮಕ್ಕೆ ಅನುಗುಣವಾಗಿ ಅದರ ಫಲಗಳ ಗುಣ ಕಥನವನ್ನು ಮಾಡಿಯಾರು.

## ಜೀವಿತದಲ್ಲಿ ಪ್ರಭಾವ

ಪ್ರತಿಮಾಹೆ ೨೨ನೆಯ ತಾರೀಖು, ಇಪ್ಪತ್ತೆರಡನೆಯ ಇಸ್ವಿ (೧೯೨೨) ಜನನದ ಮಂದಿಗೆ ಈ ಸಂಖ್ಯೆ ಫಲ ಸ್ಪಷ್ಟ ಆದೀತು.

ಈ ಜನಗಳು ಬುದ್ಧಿವಂತರು. ಶಾಸ್ತ್ರಗಳ ಅಧ್ಯಯನ ಇದರ ವೃತ್ತಿ, ಅವರ ಅಭ್ಯಾಸ. ಕೆಲವರಿಗೆ ಹವ್ಯಾಸ. ಯಾವಾಗ ನೋಡಿ. ಅವರ ಕೈಯಲ್ಲಿ ಒಂದು ಪುಸ್ತಕ ಇದ್ದೇ ಇರುತ್ತೆ. ಓದುವುದರಲ್ಲಿ ಇವರಿಗೆ ಬೇಸರಬಾರದು. ಇರುವ ಬೇಸರ ಹೋದೀತು. ಹಳೆಯ ಪುಸ್ತಕಗಳ ಅಂಗಡಿಗಳು ಇವರು ಸುತ್ತಾಡುವ ಜಾಗಗಳು. ಪುಸ್ತಕ ವಾಚಾನಾಲಯಗಳೂ ಇವರಿಗೆ ಪ್ರಿಯ.

ವಿಷಯ ವಿಮರ್ಶೆ, ವಿಷಯ ತಿಳಿಯ ಬಯಸುವ ಮಂದಿಗೆ ಇವರು ಪ್ರಿಯರು. ಮಾತು ಮಾತಿಗೆ ಆ ಪುಸ್ತಕ ಈ ಪುಸ್ತಕದ ವಿಷಯಗಳನ್ನು ಉದಾಹರಿಸಿ ಪಾಠಹೇಳುವಂತೆ ಇವರ ಸಂಭಾಷಣೆ. ಬೇಜವಾಬ್ದಾರಿ ಮಾತು ಇವರಿಗೆ ಹಿಡಿಸದು. ಜೀವನದುದ್ದಕ್ಕೂ ಇವರು ವಿದ್ಯಾರ್ಥಿಗಳು.

## ಲಿಪಿ ವಿದ್ಯೆ

ಲಿಪಿ ವಿದ್ಯೆಯಿಂದ ಕೆಲವರಿಗೆ ಜೀವನ. ಹಲವರಿಗೆ ವಿದ್ಯೆಗೆ ಸಹಾಯ ಮಾಡುವ ಗ್ರಂಥ ರಚನೆಯೇ ವೃತ್ತಿ. ಶಿಶು ಸಾಹಿತ್ಯ ಬೇರೆ. ಪುಸ್ತಕ ಲೇಖನ, ಪುಸ್ತಕ ಪ್ರಕಾಶನ ಯಾವುದೇ ಆದರೂ ಸರಿ ವೃತ್ತಿ ಆದೀತು. ಕೆಲವರು ಅಕ್ಷರಗಳನ್ನು ತುಂಬುವ ಚಕ್ರ ಬಂಧ ಹವ್ಯಾಸ ಉಳ್ಳವರು. ಅಂಕಗಣಿತ, ಲಿಪಿ ಚಕ್ರದಿಂದ ಧನಯೋಗಕ್ಕೆ ಹಾತೊರೆಯುವ ಮಂದಿ ಕೆಲವರು (Crossword Puzzles)

ಅಂತೂ ಎಲ್ಲರೂ ವಿದ್ಯೆಯ ಸೇವಕರು ಇಲ್ಲ ಸಾಧಕರು. ವಿದ್ಯಾರ್ಥಿಗಳಿಗೆ ಸಹಾಯಕರು ಇಲ್ಲ ಪೋಷಕರು. ಇವರು ಪ್ರಭಾವದ ವ್ಯಕ್ತಿಗಳು. ಕೇವಲ ವಾಕ್ ಸಹಾಯವೇ ಸಾಕಷ್ಟು ಕೆಲಸ ಮಾಡೀತು. ಜೀವನದಲ್ಲಿ ಇವರು ಇಪ್ಪತ್ತು ವರುಷಗಳ ನಂತರ ಸುಖಿಗಳು. ಮಿತ್ರರ ಪ್ರಭಾವ ಉತ್ತಮ. ಇದರ ಫಲ ಇವರ ವೃತ್ತಿಗೆ ಸಹಾಯಕ.

ಭಾಷೆಯಲ್ಲಿ ಆಸಕ್ತಿ, ಭಾಷಾಂತರದಿಂದ ಧನ, ಕೆಲವರಿಗೆ ಲಿಪಿ ಶಾಸ್ತ್ರ ಜ್ಞಾನದಿಂದ ಶಾಸನಗಳನ್ನು ಓದಿ ಅರ್ಥ ಮಾಡುವಿಕೆಯಿಂದ ಸುಲಭ ಜೀವನ.

ಸಾಧಾರಣ ಇವರಿಗೆ ನಲ್ವತ್ತರ ನಂತರ ಯೋಗ ಪ್ರಾಪ್ತಿ. ಪ್ರಾಯವರ್ಷ ೨೨, ೨೪, ೨೮. ೩೪, ೪೦, ೪೨, ೪೪, ೪೮ ವರ್ಷಗಳಲ್ಲಿ ಆಗಾಗ ಆಶಾದಾಯಕ ಘಟನೆಗಳಿವೆ. ಆದರೆ ಜನ್ಮ ಪ್ರಾಯ ೫೦ ವರ್ಷದ ನಂತರ ಸುಯೋಗವೇ ಸರಿ. ಸರ್ವಜನ ಪ್ರೀತಿ ಇವರ ಆಶಯ. ಸಾರ್ವಜನಿಕ ಸೇವೆ ಇವರಿಗೆ ಮಹತ್ಕಾರ್ಯ. ಕರುಣಾಳುಗಳಾಗಿ ದೀನ ದಲಿತರಿಗೆ ವಿದ್ಯಾ ಸಹಾಯ ಮಾಡುವುದರಲ್ಲಿ ಇವರಿಗೆ ಸಂತಸ.

ಇವರು ಪೂರ್ವಾಚಾರದಲ್ಲಿ ನಂಬಿಕೆಯುಳ್ಳವರು. ಕೊನೆಕೊನೆಗೆ ತಾವೂ ಆಚಾರ ಶೀಲರಾಗಿ ಉತ್ತಮ ದೇವಕೃಪೆಗೆ ಪಾತ್ರರಾಗುವ ಸಜ್ಜನರೆಂದರೆ ಇವರೇ ಸರಿ. ಗುಣಗಳಿಗೆ ಹೆಸರಾಗಿ ಜನಗಳಿಗೆ ಆಸರೆಯಾಗಿ ಇವರ ಬಾಳು ಉದಾತ್ತಮಯ.

# ಇಪ್ಪತ್ತಮೂರು-ದ್ರರಿದ್ರಹರ ಸಂಖ್ಯೆ

ಇಪ್ಪತ್ತಮೂರು (೨೩) ಈ ಸಂಖ್ಯೆ ಬಹು ವಿಶೇಷ. ಇದರಲ್ಲಿ ಪೂರ್ವಸಂಖ್ಯೆಇಪ್ಪತ್ತು (೨೦). ಉತ್ತರಾರ್ಧ ಏಕಾಂಕ ಸಂಖ್ಯೆ ಮೂರು (೩) ಪೂರ್ವಾರ್ಧದ ಇಪ್ಪತ್ತು (೨೦) ಶುದ್ಧೀಕರಣ ಸಂಖ್ಯೆ. ಇದು ಪುಣ್ಯ ಸಂಖ್ಯೆ. ಇದಕ್ಕೆ ಗುರು ಚಂದ್ರ ಯೋಗ. ಇದು ಕರ್ಮ ಸಂಖ್ಯೆಯ ಹತ್ತು (೧೦) ದೋಷವನ್ನು ಮೀರಿ ಪ್ರಸಾದ ಕೊಡುವ ಸಂಖ್ಯೆ. ಇದು ಉತ್ತರಾರ್ಧ ಸಂಖ್ಯೆಯ ದೋಷವನ್ನು ಪರಿಹಾರ ಮಾಡುತ್ತೆ. ಆ ಉತ್ತರಾರ್ಧ ಸಂಖ್ಯೆಯ ಮಂದಿಯನ್ನು ಉದ್ಧಾರ ಮಾಡುವ ಗುಣ ಇದರ ವಿಶೇಷ.

ಇಲ್ಲಿ ಉತ್ತರಾರ್ಧ ಸಂಖ್ಯೆ ಮೂರು (೩) ಇದಕ್ಕೆ ಕುಜನ ದೋಷ. ಕಾರಣ ಕುಜ-ಶನಿಯೋಗ, ಈ ಯೋಗ ಪಾಪದ ಫಲವನ್ನು ಕೊಡುತ್ತೆ. "ಪಾಪ" ಎಂದರೆ ಮತ್ತೊಬ್ಬರಿಗೆ ಹಿಂಸೆ ಮಾಡುವುದು. "ಪಾಪಾಯ ಪರಪೀಡನಂ" ಎಂದರು. ಇದರಿಂದ ಫಲ ಅಪಜಯ. ಜೀವನದಲ್ಲಿ ಸೋತು ದುಃಖ, ದಾರಿದ್ರ್ಯ. ಸಕಲ ವಿಧಗಳಲ್ಲಿಯೂ ಇದು ಅನಿಷ್ಟ ಸಂಖ್ಯೆ. ಮಂಗಳನ ದೋಷದಿಂದ ಈ ಸಂಖ್ಯೆ " ಅಮಂಗಳಕರ " ಎಂದರು.

ಈ ಮೂರು ಸಂಖ್ಯೆಯ ಅವಗುಣ ಇಷ್ಟಲ್ಲ ಅಷ್ಟಲ್ಲ. ರಕ್ತ ಬಂಧುಗಳಿಂದ ದೂರ ಕೊಂಡೊಯ್ಯುತ್ತೆ. ವೀರ್ಯನಷ್ಟದಿಂದ ಕ್ಷಯರೋಗ ತರುತ್ತದೆ. ದೇಶದಾದ್ಯಂತ ವ್ಯಥಾ ಅಲೆತ. ವ್ಯಥಾನಿಂದೆ. ಆದರೂ ಇದರ ಪರಿವೆ ಅವರಿಗೆ ಇರದು. ಕೆಲವರಿಗೆ ವಿದೇಶ ಯಾತ್ರೆ ಯಿಂದ ಅನುಕೂಲವಿದ್ದರೂ ಬೇಸರ.

ಈ ಮೂರು (೩) ಸಂಖ್ಯೆಯ ದೋಷಗಳು ಸರ್ವರಿಗೂ ಸಾಮಾನ್ಯ. ಇದು ಸಾರ್ವಜನಿಕ ಕಷ್ಟದ ಸಂಖ್ಯೆ. ಈ ಸಂಖ್ಯೆ ದೋಷ ಪರಿಹಾರ ಮಾಡಲು ಪರಮ ಪಾವನ ಸಂಖ್ಯೆಯಾದ ಇಪ್ಪತ್ತರ (೨೦) ಸಂಯೋಗ ಒಂದು ಪುಣ್ಯ ವಿಶೇಷ. ಈ (೨೩) ಇಪ್ಪತ್ತುಮೂರು ಸಂಖ್ಯೆ ಮೂರು(೩) ಸಂಖ್ಯೆಯ ಸಕಲ ದೋಷಗಳನ್ನೂ ಪರಿಹಾರ ಮಾಡುತ್ತದೆ.

## ಸಾರ್ವಜನಿಕ ಸೇವಕರು

ಕುಜನು ಊಟ ಉಪಚಾರ ಗ್ರಹ. ಮೂರು ಸಂಖ್ಯೆಗೆ ಇದು ಒಂದು ಊನ. ಅನ್ನವಿಲ್ಲದೆ ಉಪವಾಸ ಮಾಡಿಸುವ ಸಂಖ್ಯೆ. ಆದರೆ, ಇಪ್ಪತ್ತಮೂರು ಇದನ್ನು ಪರಿಹಾರ ಮಾಡುತ್ತೆ. "ಅನ್ನದಾನ" ಮಾಡುವ "ಅನ್ನಪೂರ್ಣೆ" ಈ ಸಂಖ್ಯೆಗೆ ಅಭಿಮಾನಿ ದೇವತೆ.

ಮಂಗಳನ ಅಮಂಗಳತ್ವವನ್ನು ಪರಿಹಾರ ಮಾಡುತ್ತದೆ. ಮದುವೆಯೇ ಆಗದೆ ಉಳಿಯುವ ಕನ್ಯಾಮಣಿಗಳ ಕಷ್ಟವನ್ನು ನೀಗುತ್ತದೆ. ಅವಿವಾಹಿತರಿಗೆ ವಿವಾಹವನ್ನು ಮಾಡಿಸುವ ಸಾರ್ವಜನಿಕ ಸೇವೆ ಇದರ ಫಲ. (Social work) ಈ ಅಮಂಗಳತ್ವವನ್ನು ಪರಿಹಾರ ಮಾಡುವ ಶ್ರೀ ಚಂಡಿಕಾಂಬೆಯೂ ಇದಕ್ಕೆ ಅಭಿಮಾನಿ ದೇವತೆ.

ಗೊತ್ತು ಗುರಿ ಇಲ್ಲದೆ ಊರು ಊರು ಅಲೆದು ಜೀವನ ಮಾಡುವ ಮಂದಿಗೆ ಈ ದೋಷ. ಆದರೆ ಈ (೨೩) ಸಂಖ್ಯೆ ಮಂದಿಗೆ ತೀರ್ಥಯಾತ್ರೆ ಮಾಡಿಸಿ ದೇವತಾ ಪ್ರಸಾದ ಮಾಡಿಸುವ ಯಾತ್ರಾ ಉದ್ಯಮ ಅನುಕೂಲ. ಹಾಗಿಲ್ಲ ಕ್ಷೇತ್ರದಲ್ಲಿ ಅನ್ನದಾನ ಮಾಡಿಸುವ ಪುಣ್ಯ ಸಂಖ್ಯೆ.

ಕುಜನು ಭೂಗ್ರಹ. ಬೆಂಗಾಡು, ಕಲ್ಲು ಭೂಮಿಗೆ ಕುಜ ಶನಿಯೋಗ. ಇದರ ದೋಷವನ್ನು ತೆಗೆಯುವ ನೀರಾವರಿ ಕಾಮಗಾರಿಕೆ ಈ ಸಂಖ್ಯೆಯ ಉದ್ಯಮ. ದಣಿದು ಬಂದವರಿಗೆ ಊಟ ಉಪಚಾರ ಮಾಡುವ ಹೋಟೆಲು ಗಳ ಉದ್ಯಮವೂ ಅಷ್ಟೆ. ಆದರೆ, ಈ ಸಂಖ್ಯೆ ಐಶ್ವರ್ಯ ದಾನ ಮಾಡದು! ಭೂತ ತೃಪ್ತಿಗಾಗಿ ಶ್ರಮದಾನ, ಅನ್ನದಾನ, ಫಲ, ಫಲಹಾರ ದಾನ ಮಾಡುತ್ತದೆ.

ವಿದ್ಯೆಯಲ್ಲಿ ಇದು ಕುಜನ ಶನಿಯೋಗದ ಇಂಜನಿಯರಿಂಗ್ ಭಾಗವನ್ನು ತೋರಿಸುತ್ತೆ. ಅಲ್ಲಿಯೂ ವಿದೇಶದಲ್ಲಿ ಇವರಿಗೆ ಮನ್ನಣೆ, ನೌಕರಿ ಎಲ್ಲವೂ ದಕ್ಕುತ್ತದ. ಅಂದರೆ, ಸ್ವದೇಶದಲ್ಲಿ ಮನ್ನಣೆ ಅಷ್ಟು ಇರದು.

ಮೊತ್ತದಲ್ಲಿ ಕುಜನ ಊನ ಗುಣ ಏನೇ ಇರಲಿ. ಅದನ್ನು ನಿವಾರಣೆ ಮಾಡಿ ಪುಣ್ಯ ಸಾಧನೆ ಮಾಡುವ ಸಂಖ್ಯೆ (೨೩) ಎಂದರೆ ತಪ್ಪಲ್ಲ.

## ಜೀವಿತದಲ್ಲಿ ಪ್ರಭಾವ

ಈ ಸಂಖ್ಯೆಯ ಫಲ ಪ್ರತಿಮಾಹೆ ೨೩ನೆಯ ತಾರೀಖು ಹುಟ್ಟಿದವರಿಗೆ ನಡೆಯುತ್ತದೆ. ಇಪ್ಪತ್ತಮೂರು ಇಸ್ವಿಯ ಜನನದ ಮಂದಿಗೂ ನಡೆದೀತು. ಹಾಗಿಲ್ಲ ಐದನೆಯ ಗರ್ಭಜನನವಾಗಿ ಬದುಕಿದವರಲ್ಲಿ ಮೂರನೆಯ ಮಗನಿಗೂ ನಡೆದೀತು. ಸಾಧಾರಣವಾಗಿ ಈ ಮಂದಿ ಅನ್ನದಾನ ಮಾಡುತ್ತಿದ್ದ ಕುಟುಂಬದಲ್ಲಿ ಹುಟ್ಟುತ್ತಾರೆ. ಆದರೆ ಇವರ ಕಾಲಕ್ಕೆ ಆ ದಾನ ನಿಂತು ಬಾಲ್ಯದಲ್ಲಿ ಕಷ್ಟಗಳು ಇದ್ದೀತು. ಆದರೆ, ಇಪ್ಪತ್ತು ವರ್ಷಗಳ ನಂತರ ಇವರಿಗೆ ಸೋದರರಾಗಿ ಹೆಸರು ಪಡೆದ ದೇವರ ಪ್ರಸಾದ ಆಗುತ್ತದೆ. ಉದಾಹರಣೆಗೆ ರಾಮ, ಲಕ್ಷ್ಮಣ, ಪಾಂಡವರಲ್ಲಿ ಒಂದು ಹೆಸರು. ಹಾಗಿಲ್ಲ ಈಶ್ವರನ ಕೃಪೆಯಿಂದ ಧನಯೋಗವು ನಡೆಯುತ್ತದೆ. ಆಗ ಇವರು ಉತ್ತಮರು. ಅತಿಥಿ ಮಿತ್ರರಿಗೆ ಆಗಾಗ ಭೋಜನ ಹಾಕುವ ಮಂದಿ. ಇವರ ಮನೆಯಲ್ಲಿ ಯಾವಾಗಲೂ ಯಾರಾದರೂ ನೆಂಟರಿಷ್ಟರು ಇದ್ದೇ ಇರುತ್ತಾರೆ. ಇವರಲ್ಲಿ ಕಾಸು ಸಿಗದಿ

ದ್ದರೂ, ಊಟ ತಿಂಡಿಗಳ ಉಪಚಾರಕ್ಕೇನೂ ಕೊರತೆ ಇರದು. ಆದರೆ ಇವರೇ ಅಲ್ಲಿ ಇಲ್ಲಿ ಊಟ ಮಾಡುವ ಅಭ್ಯಾಸ ಮಾಡಿಕೊಂಡರೆ ಅವಯೋಗ ನಡೆದು ದರಿದ್ರ ಕಾಲು ಹಾಕೀತು.

ಮೂರು ಸಂಖ್ಯೆಗೆ ಕುಜ ಶನಿಯೋಗ. ಈ ಯೋಗದ ಉದ್ಯಮ, ವೃತ್ತಿ, ಉದ್ಯೋಗದಲ್ಲಿ ಇವರಿಗೆ ಪ್ರಗತಿ ಇದೆ. ಯಂತ್ರಾಲಯದ ಉದ್ಯಮ, ಇಂಜನಿಯರಿಂಗ್ ವೃತ್ತಿ ಮತ್ತು ಆ ಸಂಬಂಧ ನೌಕರಿ ಉತ್ತಮ. ಬೆವರು ಸುರಿಸಿ ದುಡಿಯುವ ಮಂದಿಯ ಮೇಲ್ವಿಚಾರಣೆ, ಆ ತೆರನಾದ ದುಡಿಮೆಯಿಂದ ನಡೆಯುವ ಕೆಲಸಗಳೇ ವೃತ್ತಿ ಇತ್ಯಾದಿ.

ಕುಜ ಶನಿಯೋಗದ ಪರಿಹಾರ ೨೦ ಸಂಖ್ಯೆಯ ಗುರು ಚಂದ್ರರಿಂದ. ಇಲ್ಲಿ ಬೆಂಗಾಡು ಪ್ರದೇಶದಲ್ಲಿ ನೀರಾವರಿ ಮಾಡುವ ಯೋಜನೆಗಳ ಮೂಲಕ ಇವರಿಗೆ ಜೀವನ. ಹಾಗಿಲ್ಲ, ಹಸಿವು ಬಾಯಾರಿಕೆಗಳನ್ನು ತಣಿಸುವ ಫಲಹಾರ ಮಂದಿರಗಳ ಉದ್ಯಮದಿಂದ ಜೀವನ. ಹಾಗಿಲ್ಲ, ಕಲ್ಲಿನ ಕೆಲಸ, ಕಲ್ಲಿಗೆ ಸಂಬಂಧಿಸಿದ ಉದ್ಯಮಗಳಿಂದ ಅನುಕೂಲ.

ಕುಜ ಶನಿಯೋಗ ದರಿದ್ರನ ಯೋಗ. ಇದನ್ನು ಪರಿಹಾರ ಮಾಡುವ ಸಾರ್ವಜನಿಕ ಸಂಸ್ಥೆಗಳ ಮೇಲ್ವಿಚಾರಣೆ ಇತ್ಯಾದಿ. ಉದಾಹರಣೆಗೆ ಅಶಕ್ತ ಪೋಷಕ ಸಭೆ, ಅಬಲಾಶ್ರಮ ಇತ್ಯಾದಿ. ಸಣ್ಣ ಸಣ್ಣ ಕೈಗಾರಿಕೆಗಳಿಗೆ ಹಣ ಒದಗಿಸಿ ಅದರಿಂದ ಲಾಭ ಪಡೆಯುವುದೂ ಈ ಸಂಖ್ಯೆಗೆ ಸೇರಿದ್ದು.

ಇನ್ನೂ ಹಲವರಿಗೆ ವಿವಾಹ ಅನುಕೂಲಕರ. ಸಹಕಾರ ಸಂಘದ ಚಟುವಟಿಕೆಗಳಿಂದ ಜೀವನ ಇಲ್ಲ ಹವ್ಯಾಸ (Matrimonial bureau)ಮದುವೆಗಳಾಗದೇ ಉಳಿದ ಕನ್ಯೆಯರ ಮಾಂಗಲ್ಯ ಸೌಲಭ್ಯಕ್ಕಾಗಿ ಇವರ ಯತ್ನ. ಮುರಿದುಬಿದ್ದ ದಾಂಪತ್ಯದ ಬೆಸಗೆ ಹಾಕುವ ಪುಣ್ಯ ಇವರಿಗೇ ಮೀಸಲು. ಇದು ಒಂದು ನಮೂನೆ ಸಮಾಜ ಸುಧಾರಣೆ ಮಾಡಲು ಹೊರಟ ಸಂಖ್ಯೆ.

ಭಿಕ್ಷುಕರನ್ನು ವೃತ್ತಿಯಿಂದ ಬಿಡಿಸಿ, ಉತ್ತಮಗೊಳಿಸಿ, ಸುಧಾರಿತ ನೌಕರಿಗಳನ್ನು ಕೊಡಿಸುವುದು ಈ ಮಂದಿಯ ಗುಣ, ಕೆಲವರಿಗೆ ಆ ಭಿಕ್ಷುಕರಿಂದಲೇ ಜೀವನ ನಡೆಸುವ ಹವ್ಯಾಸವೂ ಇದ್ದೀತು ! ಭಿಕ್ಷುಗಳ (ಸನ್ಯಾಸಿಗಳು) ಸೇವೆ ಮಾಡುವ ಹವ್ಯಾಸ ಕೆಲವರಿಗೆ, ಇವರಿಗೆ ೩,೧೨ ಸಂಖ್ಯೆಯ ಜನಗಳ ಸಹವಾಸ ಇದ್ದೇ ಇರುತ್ತದೆ. ಅವರಿಗೆ ಇವರಿಂದ ಸಹಾಯವೂ ಇದೆ.

ಕುಜ ಶನಿಯೋಗ ವಿದೇಶದ ಯೋಗ. ಈ ಕಾರಣ ಇವರಿಗೆ ಸ್ವದೇಶಕ್ಕಿಂತ ವಿದೇಶದಲ್ಲಿ ಪ್ರಗತಿ ಆಗುತ್ತೆ. ಈ ಉದ್ದೇಶವೂ ಅವರಿಗೆ ಸುಲಭವಾಗಿ ಸಾಧ್ಯ ಆದೀತು. ವಿದೇಶದಲ್ಲಿ ವಾಸ, ವಿದ್ಯಾರ್ಜನೆ, ಉದ್ಯೋಗ ಎಲ್ಲದರಿಂದ ಇವರಿಗೆ ಧನಯೋಗವಿದೆ. ಹಾಗಿಲ್ಲ, ಸ್ವದೇಶದಲ್ಲಿ ಸುತ್ತಾಡುವುದೇ ಒಂದು ವೃತ್ತಿ (Toursim) ಯಾತ್ರಾ ವಿಹಾರ ಸಂಸ್ಥೆಗಳನ್ನು ನಡೆಸಿ ಇವರಿಗೆ ಧನಯೋಗ ಎನ್ನಬಹುದು.

ಇವರು ಯತಿ ಸೇವಾ ಶೀಲರು. ದೈವ ಭಕ್ತರು. ಕ್ಷೇತ್ರ ಯಾತ್ರಾ ಪ್ರಿಯರು. ದಾನ ಧರ್ಮಗಳಲ್ಲಿ ಶ್ರದ್ಧೆ ಉಳ್ಳವರು. ಕಾಲಾಕಾಲ ವಿವೇಚನೆಗೆ ತೊಡಗದೆ ಮುನ್ನುಗ್ಗಿ ಸಹಾಯ ಮಾಡುವ ಉದಾರಿಗಳೂ ಇವರೇ ಸರಿ. ಇವರಿಗೆ ಮನೆ ಕೆಲಸಕ್ಕಿಂತ ಮಂದಿ ಕೆಲಸ ಮಿಗಿಲು!

ಇವರಿಗೆ ಬಾಲ್ಯದಲ್ಲಿ ಕಷ್ಟ. ವಿದ್ಯಾರ್ಜನೆಯೂ ಪರಾಶ್ರಯದಿಂದ ಸಾಧ್ಯ ಇಪ್ಪತ್ತು ವರುಷಗಳ ನಂತರ ಅನುಕೂಲ. ೨೬ನೆಯ ವರುಷದಲ್ಲಿ ಸುಯೋಗ, ೨೩, ೩೩, ೪೩, ೫೩, ವರ್ಷದಲ್ಲಿ ಧನಹಾನಿ. ದೀನ ಸಹಾಯದ ಯೋಗ, ೨೬, ೩೬, ೫೬, ವರ್ಷಗಳು ಸುಯೋಗದ ವರ್ಷಗಳು. ಈ ಮುಂದಿಗೆ ಐವತ್ತು (೫೦) ವರ್ಷದ ನಂತರ ಹೆಚ್ಚಿನ ಧನಯೋಗ. ದಾನ ಧರ್ಮ ಶ್ರದ್ಧೆಯಿಂದ ಕೀರ್ತಿ. ರಾಜಕೀಯದಲ್ಲಿ ಬಿರುದುಗಳಿಂದ ಮನ್ನಣೆ ಇತ್ಯಾದಿ ಯೋಗಗಳಿವೆ. ಇವರಿಗೆ ಆಯುಷ್ಯ ಒಂದು ಅರವತ್ತು ವರ್ಷದ ವೃತ್ತ ಮುಗಿದು ಎರಡನೆಯ ಬಾರಿ ಜನನ ವರ್ಷದಿಂದ ಹದಿಮೂರನೆಯ ವರ್ಷ ಪ್ರಾಣಗಂಡಕಾಲ (೬೦ + ೧೩, = ೭೩ ವರ್ಷಗಳು. ಎರಡನೆಯ ಬಾರಿ ಜನನ ವರ್ಷ ಬಂದಾಗಲೂ ಕಷ್ಟ.

ಎಲ್ಲಾ ಕಾಲಗಳಲ್ಲಿಯೂ, ಎಲ್ಲಾ ವರ್ಷಗಳಲ್ಲಿಯೂ ಯತಿ ಸೇವೆ ಇವರಿಗೆ ಸುಯೋಗದಾಯಕ. ಇದರಿಂದಲೇ ಇವರಿಗೆ ಕಷ್ಟವೂ ಪರಿಹಾರ.

# ಇಪ್ಪತ್ತನಾಲ್ಕು -ಬುಧನ ಪ್ರಬಲ ಸಂಖ್ಯೆ

ಸಂಖ್ಯೆ (೨೪) ಇಪ್ಪತ್ತನಾಲ್ಕು - ಇದಕ್ಕೆ ಮೂಲ ಸಂಖ್ಯೆ ಎಂಟು (೮). ಈ ಎಂಟು (೮) ಸಂಖ್ಯೆ ಬುಧನ ದೋಷ ಸಂಖ್ಯೆ. ಇದು ಬುದ್ಧಿಗೆ ಮೋಹ ಕವಿಯುವ ತತ್ವ. ಈ ಮೋಹ ಕತ್ತಲು. ಈ ಕತ್ತಲು ಒಂದು ನಮೂನೆ ಮಂಕುತನ. ಇದಕ್ಕೆ ಶನಿಯೇ ಕಾರಣ. ಈ ಎಂಟು (೮) ಸಂಖ್ಯೆಗೆ ಬುಧ-ಶನಿಯೋಗ.

ಈ ಮೂಲ ಸಂಖ್ಯೆ (೮) ಎಂಟರ ದೋಷ ನೀಗಲು ಮೂರು ದರ್ಜೆಗಳು. ಮೊದಲನೆಯದು ಕತ್ತಲಿನ ಎಂಟನೆಯ ಸಂಖ್ಯೆ. ಇದು ತಮಸ್ಸು. ಇದನ್ನು ನೀಗಲು ಬೆಂಕಿ. ದೀಪ ಅಗತ್ಯ. ಈ ದೀಪ ಬುದ್ಧಿಯ ತರ್ಕ ಮಾಡುವ ಗುಣ. ಅದ ಕುಜನ ಗುಣ. ತರ್ಕಕ್ಕೆ ಗುರು ಮಂಗಳ ಯೋಗ. ಇದರ ಎರಡನೆಯ ದರ್ಜೆಯ ಸಂಖ್ಯೆ(೧೬) ಹದಿನಾರು. ಆದರೆ ಇದು ಗುರುವಿನ ಒಂದು ಪ್ರಕಾರದ ಸಂಖ್ಯೆ ಈ ಕಾರಣ ಈ ಪ್ರಗತಿಯ ಹಾದಿಯಲ್ಲಿ ಇದು ಎದ್ದು ಕಾಣದು. ಸಂಗೀತದ ಲುಪ್ತ ಸ್ವರ ಇದ್ದಂತೆ ಈ ಎರಡನೆಯ ಮೆಟ್ಟಲು ಸುಪ್ತ. ಈ ಅಗ್ನಿಯ ವಿಜೃಂಭಣೆಯೇ ಬೆಳಕು. ಈ ಬೆಳಕು, ಪ್ರಕಾಶಕ್ಕೆ ಸೂರ್ಯನು ಅಧಿಪತಿ. ಇದು ಮೂರನೆಯ ದರ್ಜೆ. ಇದಕ್ಕೆ ಬುಧ ರವಿಯೋಗವಿದೆ. ಈ ಮೂರನೆಯ ದರ್ಜೆಯ ಸಂಖ್ಯೆ (೨೪) ಇಪ್ಪತ್ತ ನಾಲ್ಕು. ಇಲ್ಲಿ ಈ ರವಿಗೆ ಅಂತರಾಳದಲ್ಲಿ ಗುರು ರವಿಯೋಗ ಇರುತ್ತೆ. ಕಾರಣ ಇದು (೧೬) ಹದಿನಾರು ಸಂಖ್ಯೆಯ ಗುರು ಮಂಗಳಯೋಗದ ಮುಂದಿನ ಪ್ರಗತಿಯ ಹಂತ. ಈ ಕಾರಣ ಗುರು ಮಂಗಳ ಯೋಗ ಗುರು ರವಿಯೋಗಕ್ಕೆ ತೇರ್ಗಡೆ ಹೊಂದುತ್ತೆ. ಆದರೆ ವ್ಯವಹಾರದಲ್ಲಿ ಇದು ಕೇವಲ ರವಿಯ ತತ್ವ ಎಂದರು. ಇದರಿಂದ ಈ (೨೪) ಸಂಖ್ಯೆಗೆ ಬುಧ ರವಿಯೋಗ ಆಗುತ್ತೆ. ಇದು ಬುದ್ಧಿಯ ಪ್ರಕಾಶದ ಒಂದು ಸ್ಥಿತಿ. ಈ ಸಂಖ್ಯೆಯಲ್ಲಿ ಬುಧನಿಗೆ ವಿಶೇಷ ಪ್ರಾಬಲ್ಯವಿರುತ್ತದೆ.

## ಅಸಾಧಾರಣ ಪ್ರತಿಭೆ

ಈ ಬುಧ ರವಿಯೋಗ ಬುದ್ಧಿ ಪ್ರಕಾಶ ಯೋಗ. ಇದನ್ನೇ ಸ್ಫೂರ್ತಿ, ಪ್ರತಿಭೆ ಎಂದರು. ಆದರೆ ಇದು ಅಸಾಧಾರಣ. ಈ ಬುದ್ಧಿ ಮಾಂದ್ಯದ (೮) ಸಂಖ್ಯೆಗೆ ಅತಿಚಾರದಿಂದ ಮಧ್ಯದ ಎರಡನೆಯ ಸ್ಥಾನವನ್ನು ಹಾರಿ ಮೂರನೆಯ ದರ್ಜೆಯನ್ನು ಹೊಂದುತ್ತದೆ. ಒಂದು ನಮೂನೆ ಡಬ್ಬಲ್ ಪ್ರಮೋಷನ್ ಇದ್ದಂತೆ. ಎರಡನೆಯ ದರ್ಜೆಯ ಪ್ರಗತಿ ಕಾಣದಷ್ಟು ವೇಗದಲ್ಲಿ ಹಾರಿಬಿಡುತ್ತೆ. ಈ ಕಾರಣ ಮಂಕುತನ ಹಠಾತ್ತನೆ ಪ್ರಕಾಶವನ್ನು ಹೊಂದುತ್ತದೆ. ಈ ಅತಿವೇಗದ

ಗತಿಯ ವೈಶಿಷ್ಟ್ಯವೇ ಪ್ರತಿಭೆ. ಅಸಾಧಾರಣ ಪ್ರತಿಭೆ ಅಂದರೆ ಬುದ್ಧಿಗೆ ಮಿಂಚಿನ ಹೊಳಪು (Intellectual flash) ಬಡಿದಂತೆ ಭಾಸ ಆಗುತ್ತದೆ.

ಆದರೆ ಈ ಸಂಖ್ಯೆಯಲ್ಲಿ ಕಾಣುವುದು ಎರಡೇ ದರ್ಜೆಗಳು ! ಒಂದು ಬುದ್ಧಿ ಮಾಂದ್ಯ. ಎರಡು ತೀವ್ರ ಪ್ರತಿಭೆಯ ಸ್ಥಿತಿ. ಈ ಕಾರಣ ಇದು ವಿಚಿತ್ರದಂತೆ ಕಾಣುತ್ತದೆ. ಇನ್ನೊಂದು ವಿಶೇಷ ಬೇರೆ. ಈ ಸಂಖ್ಯೆಗೆ ಮೂಲ ಸಂಖ್ಯೆ (೮) ಎಂಟು. ಇದೇ ಬುದ್ಧಿಮಾಂದ್ಯದ ಸಂಖ್ಯೆ. ಇದೇ ಮೂಲಗುಣ. ಈ (೨೪) ಇಪ್ಪತ್ತನಾಲ್ಕರ ಪ್ರತಿಭೆ ಅಗತ್ಯ ಬಿದ್ದಾಗ ಮಾತ್ರ ಕಂಡೀತು. ಉಳಿದಂತೆ (೮) ಎಂಟರ ಮಂಕುತನವೇ ಸಹಜ ಗುಣದಂತೆ ಭಾಸವಾದೀತು. ಈ ಕಾರಣ ಈ ಸಂಖ್ಯೆಯ ಮಂದಿಗೆ ಅಕಸ್ಮಾತ್ ಪ್ರಗತಿಗೆ ಬಂದವರು ಎಂದು ಅಪವಾದ ಬಂದೀತು (Upstarts).

ನೋಡಲು ಈ ಮಂದಿಯ ಬುದ್ಧಿಗೆ ಮಂಕೇ ಹೆಚ್ಚು. ಇದನ್ನೇ ಮರೆವು ಎಂದರು. ಆದರೆ, ಕೆಣಕಲು ಹೋದರೆ ಥಟ್ಟನೆ ನೆನಪು ಬಂದು ನಿಮಗೇ ಅಚ್ಚರಿಯ ಸೋಲು ! ಒಂದು ನಮೂನೆ ಇತರರನ್ನು ಮೋಸಗೊಳಿಸಲು ದೈವ ಕೊಟ್ಟ ಒಂದು ವರ. ಈ ಮರೆವು ! ಈ ಕಾರಣ ಈ ಮಂದಿ ಹಠಾತ್ತಾಗಿ ಬೆಳಕಿಗೆ ಬರುವವರು ಎಂದರೆ ತಪ್ಪಲ್ಲ. ಇದನ್ನು "ನೀಚ ಭಂಗ ಯೋಗ" ಎಂದರು.

## ಜೀವಿತದಲ್ಲಿ ಪ್ರಭಾವ

ಪ್ರತಿ ಮಾಹೆ (೨೪) ಇಪ್ಪತ್ತನಾಲ್ಕನೆಯ ತಾರೀಖು, ಇಪ್ಪತ್ತನಾಲ್ಕನೆಯ ಇಸ್ವಿಯ ಜನನಗಳಿಗೆ ಈ ಸಂಖ್ಯೆಯ ಪ್ರಭಾವ ಸ್ಪಷ್ಟ. ಇದರ ಮೂಲ ಸಂಖ್ಯೆಯಾದ ಎಂಟನೆಯ ಗರ್ಭ ಜನನಗಳಿಗೂ ಇದರ ಫಲ ಅನ್ವಯ ಆಗುತ್ತದೆ.

ಈ ಮಂದಿ ಬುದ್ಧಿವಂತರು. ಆದರೆ ಇವರ ಬುದ್ಧಿವಂತಿಕೆ ಮಾನ್ಯಗಳಿಸುವಷ್ಟು ಪ್ರಖ್ಯಾತವಲ್ಲ. ಮೂಲ ಸಂಖ್ಯೆ (೮) ಎಂಟರ ಪ್ರಭಾವ ಇದ್ದೀತು. ಬಹುಶಃ ಅನೇಕರಿಗೆ ವಿದ್ಯೆಯೂ ಮೊಟಕೇ ಇದ್ದೀತು. ಸಹಾಯಕರಿಲ್ಲದೇ ಈ ಸ್ಥಿತಿ ಆದೀತು. ಅಂತೂ ಈ ಸಂಖ್ಯೆಯ ಮಂದಿಯಲ್ಲಿ ಪ್ರೌಢ ವಿದ್ಯೆ ಸ್ವಲ್ಪ ವಿರಳವೇ ಎನ್ನಬಹುದು. ವಿದ್ಯೆಯ ಊನ ಏನೇ ಇರಲಿ, ಇವರು ಬುದ್ಧಿವಂತರು. ಸ್ಫೂರ್ತಿ ಪ್ರತಿಭೆಗಳ ತವರು ಬೇರೆ. ಆದರೆ, ಈ ಬುದ್ಧಿವಂತಿಕೆ ಸರ್ವಕಾಲದಲ್ಲಿಯೂ ಒಂದೇ ಸಮ ಇರದು. ಕಾರಣ ಇವರಿಗೆ ಚಪಲತೆ ಹೆಚ್ಚು. ಪಾದ ರಸದಂತೆ ಇಲ್ಲಿ ಅಲ್ಲಿ ಅಲೆದಾಡುವ ಸ್ವಭಾವ. ಕೇಂದ್ರೀಕರಣ ಶಕ್ತಿ ಬುದ್ಧಿಗೆ ನಿಲುಕದು. (lack of concentration). ಇದರಿಂದ ಇವರ ಬುದ್ಧಿಗೆ ಏಕರೂಪ ಮಾನ್ಯತೆ ಸಿಗುವುದು ಕಷ್ಟ. ಆದರೆ ಮಂಕು ಎಂದರೆ ಅದು ತಪ್ಪು. ಅನಿರೀಕ್ಷಿತ ಸಮಯದಲ್ಲಿ ಅಪ್ರತಿಮ ಪ್ರತಿಭೆ ಯನ್ನು ತೋರುವ ಮಂದಿ ಇವರು. ಈ ಕಾರಣ ಇವರದು ವಿಚಿತ್ರದ ಸ್ವಭಾವ. ಆದರೆ ಉತ್ತಮ ಬರಹಗಾರರು. ನೂತನ ಶೈಲಿ, ನೂತನ ವಿಷಯಗಳ ಅರಿವು, ಇವರಿಗೆ ಸಹಜವಾದ ಸ್ವಭಾವ ಎಂದರೆ ತಪ್ಪಲ್ಲ. ಗ್ರಾಮ್ಯ ಶಬ್ದಗಳು ಇವರಿಗೆ ಪ್ರಿಯ. ಪ್ರತಿಭೆಯ ಲೇಖನಗಳಿಗೆ ಇವರು ಹೆಸರುವಾಸಿ. ವಿಚಿತ್ರ ತಂತ್ರ ಉಪಾಯ ಯುಕ್ತಿಗಳಿಂದ ಇವರ ಬುದ್ಧಿ, ಬರಹಗಳು

ಶೀಘ್ರವಾಗಿ ಜನಪ್ರಿಯರನ್ನಾಗಿ ಮಾಡೀತು. ಅಕಸ್ಮಾತ್ ಸುಯೋಗ ಪ್ರಾಪ್ತಿ ಆಗುತ್ತದೆ. ಉನ್ನತ ಪದವಿಗಳೂ ಸಿಗುತ್ತವೆ. ಆದರೆ ಜನಗಳು. ಸಹಚಾರಿಗಳಿಗೆ ಇವರಲ್ಲಿ ಅಸೂಯೆ. ಅದೃಷ್ಟ, ಅದೃಷ್ಟ ಎಂದು ಗೊಣಗಿಕೊಳ್ಳುವರು. ಅಕಸ್ಮಾತ್ ಯೋಗದಿಂದ ಮೂಲ ಸಂಖ್ಯೆ (೮) ಎಂಟು ಇಪ್ಪತ್ತ ನಾಲ್ಕು (೨೪) ಕ್ಕೆ ಪ್ರಗತಿಯನ್ನು ಹೊಂದುತ್ತದೆ. ಇದರಿಂದ ಸಮಾನರಲ್ಲಿ ಉತ್ತಮ ಪದವಿ ದೊರಕುತ್ತದೆ. ಇದರಿಂದ ಅವರಿಗೆ ಅಸೂಯೆ. ಅತೃಪ್ತಿ ಸಹಜ ಎಂದರೆ ತಪ್ಪಲ್ಲ.

ಬುಧನ ಯೋಗ ಇವರಿಗೆ ಪ್ರಬಲ. ಇವರು ಹಾಸ್ಯಪ್ರಿಯರು. ಸದಾ ನಗು ಮೊಗದ ಸ್ವಭಾವ ಬೇರೆ. ಸ್ನೇಹಕ್ಕೆ ಮಣಿಯುವ ಮಂದಿ. ಸ್ನೇಹಿತರಿಗೊದಗಿ ಬರುವ ಜನ ಎಂದರೆ ಇವರೆ ಸರಿ. ತಂಟೆ ಕೋರತನ. ಕೀಟಲೆಯ ಸ್ವಭಾವ. ಆದರೆ ಇವರಿಗೆ ಯಾವುದೇ ಆಗಲಿ. ನೆನಪಿನಲ್ಲಿ ಉಳಿಯದು. ಕೆಟ್ಟದ್ದಾದರೂ ಸರಿ. ಒಳ್ಳೆಯದಾದರೂ ಸರಿ. ಎರಡೂ ನೆನಪಿನಲ್ಲಿಡದ ಸ್ವಭಾವ. ಅದೇ ಒಂದು ದೈವಿಕ ವರ. ಇದರಿಂದ ಇವರಿಗೆ ಔದಾರ್ಯ ತಾನಾಗಿ ಒಲಿಯುತ್ತದೆ. ಎದುರು ಬದುರು ಬಂದಾಗ ಮಾತ್ರ ತಾನಾಗಿ ಕನ್ನಡಿಯಂತೆ ಸ್ಪಷ್ಟ ನೆನಪು. ಅದಿಲ್ಲ ಆ ವಿಷಯವೂ ಮರೆತೀತು.

ಬುಧನ ಬಲ ಲೇಖಕನಿಗೆ ಅಗತ್ಯ. ಈ (೨೪) ಇಪ್ಪತ್ತು ನಾಲ್ಕು ಸಂಖ್ಯೆಗೆ ಬುಧನ ದೋಷ ಇರದು. ಆದರೆ ಬುಧನ ದೋಷ ಹಿನ್ನೆಲೆಯಲ್ಲಿ ನಿಂತಿರುತ್ತದೆ. ಉದಾಹರಣೆಗೆ ಮೂಲ ಸಂಖ್ಯೆಯ (೮) ಎಂಟರ ಗುಣ ಗ್ರಾಮ್ಯ ಬುದ್ಧಿ, ಗ್ರಾಮ್ಯ ಜೀವನ ಇವರಿಗೆ ಪ್ರಿಯ ನಗರದಲ್ಲಿದ್ದರೂ ಈ ಪ್ರೀತಿಗಾಗಿ ಹಳ್ಳಿಗಳಿಗೆ ಆಗಾಗ ಹೋಗಿಬರುವ ಹವ್ಯಾಸ ಇದ್ದೀತು. ಗ್ರಾಮ್ಯ ಭಾಷೆಯ ಬಳಕೆಯೂ ಅಷ್ಟೇ. ಆದರೆ ಈ ದೋಷ ಇವರಿಗೆ ಅಂದದ ಆಭರಣವಿದ್ದಂತೆ.

ಬುಧನು ಮಿತ್ರನು. ಇದರಿಂದ ಇವರಿಗೆ ಎಲ್ಲರೂ ಮಿತ್ರರು. ಆತ್ಮೀಯತೆ ಇವರಿಗೆ ಸಹಜ ಬಳುವಳಿ. ಆದರೆ ಇದರ ಹಿನ್ನೆಲೆಯಲ್ಲಿ ಬುಧನ ದೋಷ ಇರುತ್ತೆ. ಇದರಿಂದ ಇವರಿಗೆ ಯಾರಿಂದಲೂ ಉಪಕಾರ ಇರದು. ಏಕಮುಖ. ಬಾಂಧವ್ಯ. ಮೈತ್ರಿ ಎಂದರೆ ತಪ್ಪಲ್ಲ. ಸದ್ಯಕ್ಕೆ ಅಪಕಾರ ಆಗದಿದ್ದರೆ ಇವರ ಸುದೈವ.

## ಮುದ್ದು ಪ್ರಾಣಿಪ್ರಿಯರು

(೨೪) ಇಪ್ಪತ್ತನಾಲ್ಕು ಬುಧನ ಗುಣ ಬಾಹುಳ್ಯದ ಸಂಖ್ಯೆ. (೮)ರ ಎಂಟು ಇದಕ್ಕೆ ಬುಧ-ಶನಿಯೋಗವಿದೆ. ಇದೇ ಯೋಗ ಪ್ರಾಣಿಗಳಿಗೂ ಇದೆ. ಇದರಿಂದ ಮುದ್ದು ಪ್ರಾಣಿಗಳ ಹವ್ಯಾಸ ಇವರಿಗೆ. ಮುದ್ದು ಮುದ್ದು ಮಾತಿನ ಬಾಲಕರು ಎಂದರೆ ಇವರಿಗೆ ಪ್ರಾಣ. ಉತ್ತಮ ಬುದ್ಧಿ ಜೀವಿಗಳೂ ಎಂದರೂ ಇಷ್ಟ. ಆದರೆ ಇವರು ತಮ್ಮ ಒಲವನ್ನು ತೋರಿ ಅದರಿಂದ ಮಂದಿ ಮೈಮೇಲೆ ಏರಿ ಬರುವ ಅವಕಾಶ ಹೆಚ್ಚು. ಆದರೂ ಸಹನೆ ಇವರಿಗೆ ಸಹಾಯಕ. ಯಾರನ್ನೂ ಎದುರು ಹಾಕಿಕೊಳ್ಳುವವರಲ್ಲ. ಸಂತಸದ ಸಂದರ್ಭ ಎಂದರೆ ಇವರು ಮುಂದಾಳು. ಕಿರಿ ಕಿರಿ ಎಂದರೆ ಇವರಿಗೆ ಆಗದು. ಇಷ್ಟಾದರೂ ಜನರಿಗೆ ಕೇಡು ಮಾಡುವವರಲ್ಲ।

ಇವರಿಗೆ ಹರಿಭಕ್ತಿ, ಗುರುಭಕ್ತಿ, ಸೂಕ್ತ. ಆದರೆ ಇವರಿಗೆ ಅದರಲ್ಲಿ ಗೌರವ ಅಷ್ಟೇ ಸರಿ. ಆಚರಣೆಯಲ್ಲಿ ಬಾರದು. ಆದರೆ ಆ ಜನಗಳಲ್ಲಿ ಆದರ ಹೆಚ್ಚು. ಉತ್ತಮ ಸ್ವಭಾವದ ಸರಳ ಜೀವನಕ್ಕೆ ಇವರನ್ನು ನೆನೆಯಬೇಕು.

## ಯೋಗ ಕಾಲಗಳು

ಮೂಲ ಸಂಖ್ಯೆ (೮) ಎಂಟು. ಇದರಿಂದ ಇವರಿಗೆ ಬಾಲ್ಯದಲ್ಲಿ ಕಷ್ಟ ಜೀವನ. ಬುಧನೇ ಸೋದರಮಾವ. ಇವರಿಂದ ಸಹಾಯ ಆದೀತು. ಕೆಲವರಿಗೆ ಬಾಲ್ಯದಲ್ಲಿ ಕೃಷ್ಣನಿಗೆ ಆದಂತೆ ಪ್ರಾಣಗಂಡಗಳು. ಆದರೆ ಎಲ್ಲವನ್ನೂ ಕಳೆದು ವಯಸ್ಸಿನಲ್ಲಿ ಸುಖಿಗಳು. ಬುದ್ಧಿ ಶಕ್ತಿಯೂ ಅಷ್ಟೆ. ಬಾಲ್ಯದಲ್ಲಿ ಮಂದಗತಿ. ಕಾರಣ ಮರೆವು ಹೆಚ್ಚು. ಆದರೆ ಸ್ವಂತ ಬುದ್ಧಿ ಇವರಿಗೆ ಸೂಕ್ತ. ಬರಬರುತ್ತಾ ಇವರ ಬುದ್ಧಿ ಪ್ರಕಾಶವಾಗಿ ಹೆಸರು ಮಾಡಿಯಾರು. ಬುಧನ ಶಾಸ್ತ್ರ ಗಣಿತ. ಈ ಗಣಿತದ ಅರಿವು ಇವರಿಗೆ ಪೂರ್ಣ. ಆದರೆ, ಅದರಲ್ಲಿ ಶ್ರದ್ಧೆ ಕಡಿಮೆ. ಬೇಸರ ಹೆಚ್ಚು ಈ ಕಾರಣ ಇವರಿಗೆ ವಯಸ್ಸಿನಲ್ಲಿ ಹಣದ ದುರ್ವ್ಯಯ ಆಗುತ್ತೆ. ಸುಲಲಿತ, ಸುಲಭದ ಕೆಲಸ ಇವರಿಗೆ ಪ್ರಿಯ. ಇದರಿಂದ ಇವರಿಗೆ ಇತರರ ಸ್ನೇಹ ಸಹಾಯ ಅಗತ್ಯ ಈ ಕಾರಣ ಇವರಿಗೆ ಎಲ್ಲರಲ್ಲಿಯೂ ಆತ್ಮೀಯತೆ. ಇವರಿಗೆ ಒಂಟಿತನ ಆಗದು. ಯಾರಾದರೂ ಜೊತೆಗೆ ಬೇಕೇ ಬೇಕು. ತಿಂಡಿ, ಊಟ, ಅಲೆತ, ಪ್ರಯಾಣ, ವಿಹಾರ ಏನಾದರೂ ಸರಿ, ಯಾರಾದರೂ ಸಂಗಡಿಗರು ಅಗತ್ಯ. ಅದಕ್ಕಾಗಿ ಖರ್ಚು, ಆದರದ ಆತಿಥ್ಯ ಇವರ ಸ್ವಭಾವ. ಇವರಿಗೆ ಸಿಹಿ ಪ್ರಿಯ. ಸಿಹಿ ಹಂಚುವುದೂ ಪ್ರಿಯ. ಆದರೆ ಮುದಿತನದಲ್ಲಿ ಅದನ್ನು ದೂರ ಸರಿಸುವ ಕಾಯಿಲೆ ಬಂದೀತು.

ಇವರಿಗೆ ಇಪ್ಪತ್ತನಾಲ್ಕು ವರ್ಷಗಳ ನಂತರ ಪ್ರಕಾಶ, ಸುಯೋಗವೂ ಅಷ್ಟೇ. ಮೂವತ್ತೆಂಟು ವರ್ಷದ ನಂತರ ಪ್ರಗತಿ. ನಲ್ವತ್ತು ವರ್ಷಗಳ ನಂತರ ರಾಜಯೋಗ, ಎಲ್ಲರೂ ಅಸೂಯೆಯಿಂದ ಕರುಬುವ ಯೋಗ. ಆದರೆ, ಇವರು ಎಲ್ಲರನ್ನೂ ನಂಬುವ ಮಂದಿ. ಶತ್ರುಗಳೂ ಇವರೆದುರು ಮಿತ್ರರಂತೆ ಬದಲಿಸುವ ಮೈತ್ರಿ ಇವರದು. ಇವರು ಸಹೃದಯರು. ಆದರೆ ಇವರಲ್ಲಿ ತಪ್ಪು ತಿಳಿಯುವ ಮಂದಿಯೇ ಹೆಚ್ಚು. ಹೃದಯ ರೋಗದ ಭಯ ಇವರಿಗೆ ಸಹಜ.

ಇವರಿಗೆ ಎಂಭತ್ತು ವರ್ಷ ಆಯುಃಪ್ರಮಾಣ. ಆದರೆ ೧೮, ೨೮, ೩೮, ೫೮ ೬೮, ೭೮ ಈ ವರ್ಷಗಳು ಅನಿಷ್ಟದಾಯಕ ವರ್ಷಗಳು. ೪೮ನೆಯ ವರ್ಷದಲ್ಲಿ ಜೀವನದಲ್ಲಿ ಮಹತ್ತರ ಬದಲಾವಣೆಯಾಗಿ ಇವರು ಸುದ್ದೈವಿಗಳು. ಇವರು ಹೋದರೂ ಇವರ ಕೃತಿ ಕಾರ್ಯಗಳು ಶಾಶ್ವತ ನೆನೆಹು ಗಲ್ಲುಗಳು ಎಂದರೆ ಸರಿ.

# ಸಂಖ್ಯೆ ಇಪ್ಪತ್ತೈದು – ಜ್ಞಾನ ಸಂಸ್ಕರಣ

ಸಂಖ್ಯೆ (೨೫) ಇಪ್ಪತ್ತೈದರಲ್ಲಿ ಇಪ್ಪತ್ತು (೨೦) ಪೂರ್ವಾರ್ಧ ಸಂಖ್ಯೆ. (೫) ಐದು ಉತ್ತರಾರ್ಧ ಸಂಖ್ಯೆ. ಸಂಖ್ಯೆ (೫) ಐದಕ್ಕೆ ಅಧಿಪತಿ ಗುರು. ಈ ಗುರುವಿಗೆ ದೋಷಪ್ರಾಪ್ತಿ. ಆದರೆ ಆಗ ಅದನ್ನು ನೀಗಲು ಈ ಪೂರ್ವಾರ್ಧದ ಸಂಖ್ಯೆ (೨೦) ಅಗತ್ಯ. ಕಾರಣ ಅದು ಶುದ್ಧೀಕರಣ ಸಂಖ್ಯೆ.

ಗುರು-ಖಚಿತ ಜ್ಞಾನಿ. ಕಾಲ ಯಾವುದೇ ಆಗಲಿ ಇವನ ಅರಿವು ಮಾತ್ರ ಖಚಿತ. ಎಂದೆಂದಿಗೂ ಅದಲು ಬದಲಾಗದ ಸತ್ಯ. ಈ ಜ್ಞಾನದ ಸ್ವರೂಪ. ಇಂದ್ರಿಯ ಪ್ರಜ್ಞೆಯ ಸಾಕ್ಷಿಗಳಿಂದ ಸಿದ್ಧವಾದದ್ದು. ಈ ಜ್ಞಾನ. ವಿಚಾರ. ವಸ್ತುಧ್ಯಾನ ಏನೇ ಆಗಲೀ. ಅದರ ಸ್ಥಿತಿ ಸ್ವಭಾವ ಗುಣಶೀಲಗಳ ಪೂರ್ಣ ಅರಿವೇ ಈ ಗುರುವಿನ ತಿಳಿವಳಿಕೆ. ಇಷ್ಟೆ ಅಲ್ಲ. ಆ ತಿಳಿಯನ್ನು ಉದಾರ ವಾಗಿ ಶಿಷ್ಯರಿಗೆ ಹಂಚುವ ಕಾರ್ಯ ಇವನ ದೈನಂದಿನ ಧರ್ಮ. ಈ ಅರಿವಿನ ಬಲವೇ ಅವನ ತೇಜಸ್ಸು. ಈ ತೇಜಸ್ಸಿನಿಂದ ಈ ಗುರುವು ಎಲ್ಲ ದೋಷಗಳನ್ನೂ ಪರಿಹಾರ ಮಾಡಲು ಸರ್ವ ಶಕ್ತನು.

ಗುರು ಇಷ್ಟು ಬಲಿ. ಆದರೆ ಅವನಿಗೂ ಒಂದೊಂದು ಸಲ ದೋಷ ಪ್ರಾಪ್ತಿ ಆಗುತ್ತೆ. ಅವನಿಗೂ ಕಷ್ಟ ಬಂದೀತು. ಈ ಕಷ್ಟ ಏಕೆ ? ತನ್ನ ಗುರುವಿನ ನಿಂದೆಯಿಂದ ತಾನೇ ಗುರುವಾದಾಗ ಈ ದೋಷ ತನಗೇ ತಟ್ಟುತ್ತೆ ! ಆಗ ಇದರ ಪರಿಹಾರವೆಂತು? ಆಗ ಈ ಇಪ್ಪತ್ತರ (೨೦) ಪ್ರಭಾವ ಅಗತ್ಯ.

ಗುರು ಜ್ಞಾನಿ ಮತ್ತು ಜ್ಞಾನದಾನಿ. ಗುರುವಿಗೆ ದೋಷ. ಆಗ ಈ ಜ್ಞಾನಕ್ಕೂ ಲೋಪ. ಆ ಅರಿವಿಗೂ ಇವನ ಗುಣ ಧರ್ಮಗಳ ದೋಷ ತಟ್ಟುತ್ತೆ. ಅಲ್ಲದೆ ಪೂರ್ವಜರಿಂದ ನಿರ್ಣಯ ವಾದ ಜ್ಞಾನ. ಕಾಲ. ದೇಶಗಳ ಪ್ರಭಾವದಿಂದ ಹಳೆಯದಾಗುತ್ತೆ. ಸಂಸ್ಕಾರ ಆಗ ಅದಕ್ಕೆ ಅಗತ್ಯ. ಇಲ್ಲಿ ಜ್ಞಾನ ವಿಜ್ಞಾನದ ಹಾದಿ ಹತ್ತುತ್ತದೆ. ಈ ಕೆಲಸ ಮಾಡುವ ಏಕೈಕ ಸಂಖ್ಯೆ ಎಂದರೆ ಈ ಇಪ್ಪತ್ತೈದು (೨೫). ಇದು ಜ್ಞಾನ ಸಂಸ್ಕರಣದ ಸಂಖ್ಯೆ (Reorientation and Research).

## ಜೀವಿತದಲ್ಲಿ ಪ್ರಭಾವ

ಪ್ರತಿ ಮಾಹೆ (೨೫) ಇಪ್ಪತ್ತೈದನೆಯ ತಾರೀಖು. ಪಂಚಮ ಗರ್ಭ ಹಾಗಿಲ್ಲ. ಇಪ್ಪತ್ತೈದನೆಯ ಇಸ್ವಿಗಳಲ್ಲಿ ಜನನ. ಆಗ ಈ ಸಂಖ್ಯೆಯ ಫಲ ಸ್ಪಷ್ಟ ಕಂಡೀತು. ಇಸ್ವಿ. ತಾರೀಖು. ಎರಡೂ ಇದೇ ಸಂಖ್ಯೆ. ಆಗ ಫಲ ಇನ್ನಷ್ಟು ಹೆಚ್ಚು.

ಈ ಸಂಖ್ಯೆ ಗುರುವಿನದು. ಆದರೂ ಈ ಮಂದಿ ಗುರುಗಳಲ್ಲ. ಆದರೆ ಗುರುವಿಗೆ ಸಹಾಯಕರು. ಗುರುವಿಗೆ ವ್ಯವಹಾರದಲ್ಲಿ ತೊಡಕುಗಳು ಬಂದರೆ ಇದರಿಂದ ಅವು ನಿವಾರಣೆ. ಗುರುವಿಗೆ ಭಕ್ತಿ ಪೂರ್ವಕ ನಡೆಯುವ ಮಂದಿ ಎಂದರ್ಥ. ಗುರು ವಿದ್ಯಾಗ್ರಹ. ಗುರುದತ್ತ ವಿದ್ಯೆಯನ್ನು ಪ್ರಗತಿಯತ್ತ ಸಾಧಿಸುವ ಮಂದಿ. ಗುರು ಎಂದರೆ ಜ್ಞಾನಿ. ಕಲಿಯಬೇಕಾದ್ದು ಅವನಲ್ಲ. ವಿದ್ಯೆಯನ್ನು ಕಲಿಸುವವನೇ ಈ ಗುರು. ಗುರುವು ಬಲಪೂರ್ಣನಾಗಿದ್ದಾನೆ. ಆಗ ಅವನ ವಿದ್ಯೆ ಅಪಾರ. ಅವನ ಬಲ ಕಡಿಮೆ. ಆಗ ಆ ವಿದ್ಯೆಯೂ ಸೀಮಿತ. ಆದರೆ ಈ ಮಂದಿ ಈ ಗುರುವಿನಲ್ಲಿ ಕಲಿತರೂ ಆ ವಿದ್ಯೆಯನ್ನು ಇನ್ನೂ ಸಾಧಿಸಿ ತಮ್ಮ ಪ್ರಗತಿಯನ್ನು ಆ ಗುರುವಿಗೇ ಕಾಣಿಕೆಯಾಗಿ ಕೊಡುವ ಮಂದಿ.

ವಿದ್ಯೆ ಅದರ ಪ್ರಚಾರ. ಇದೂ ಗುರುವಿನ ಕೆಲಸವೇ. ಈ ಕೆಲಸದಲ್ಲಿ ಗುರುವಿಗೆ ಉತ್ತೇಜನ ಕೊಡುವ ಮಂದಿ ಇವರು. ಧನ ಸಹಾಯ, ಶ್ರಮದಾನ ಇತ್ಯಾದಿಗಳಿಂದ ನೆರವು ನೀಡುವ ಮಂದಿ ಎಂದರ್ಥ. ಕಾರಣ ವಿದ್ಯಾಗುರುವಿಗೆ ವಿದ್ಯೆಯೇ ಆಸ್ತಿ. ವಿದ್ಯೆಯೇ ಜೀವನ. ಅವರಲ್ಲಿ ಇನ್ನೇನೂ ಇರದು. ಅವರ ಇತರ ಅಗತ್ಯಗಳ ಪೂರೈಕೆ ಇವರ ಕರ್ತವ್ಯ.

## ಶಿಶುವೈದ್ಯರು

ಗುರು ವಿದ್ಯೆಯ ಗ್ರಹ ಅಂತೆಯೇ ಮಕ್ಕಳ ಗ್ರಹವೂ ಹೌದು. ಗುರುವಿಗೆ ಬಲ ಕಡಿಮೆ. ದೋಷ ತಟ್ಟಿದೆ ಆಗ ಮಕ್ಕಳಿಗೆ ಕೇಡು. ಆಲಸ್ಯ ಆದೀತು, ಹಾಗಿಲ್ಲ ಹೆರಿಗೆಗಳು ತ್ರಾಸ ಆದೀತು.

ಈ ತೊಡಕುಗಳಿಗೆ ಸಕಾಲದ ಪರಿಹಾರ ನೀಡುವ ಉದ್ಯೋಗ ಇವರಿಗೆ ಸರಿ ಆದೀತು. ಶಿಶು ಚಿಕಿತ್ಸೆಯಲ್ಲಿ ವಿಶೇಷ ಅಧ್ಯಯನದಿಂದ ಸಾಧಿಸಿದ ಪ್ರಾವೀಣ್ಯ ಇವರದು. ಈ ಕಾರಣ ಇವರು ಉತ್ತಮ ಶಿಶು ವೈದ್ಯರು. ಹಾಗಿಲ್ಲ ಅನಾಥ ಮಕ್ಕಳಿಗೆ ಆಶ್ರಯ ಕೊಡುವ ಸಾರ್ವಜನಿಕ ಸಂಘ ಸಂಸ್ಥೆಗಳ ಪೋಷಕರೂ ಆದಾರು. ಬಡವಿದ್ಯಾರ್ಥಿಗಳ ವಿದ್ಯೆಗೆ ನೆರವಾಗುವ ಧನದತ್ತಿಗಳನ್ನು ಕೊಡುವ ಮಂದಿ ಆದಾರು. ಈ ರೀತಿ ಮಕ್ಕಳಿಗೆ ಬರುವ ನಾನಾ ರೀತಿ ತೊಡಕುಗಳಿಗೆ ಈ ಮಂದಿಯೇ ನೆರವು, ಇವರೇ ಪರಿಹಾರ.

## ನ್ಯಾಯಮೂರ್ತಿಗಳು

ಸಮಾಜ ಎಂದ ಮೇಲೆ ನೀತಿ, ಅನೀತಿ, ರೀತಿ ಅನ್ಯಾಯಗಳು ಇದ್ದೇ ಇರುತ್ತವೆ. ಇವರಿಗೆ ನಾನಾ ಹಂತಗಳಲ್ಲಿ ನ್ಯಾಯ ವಿತರಣೆ ನಡೆಯುತ್ತೆ. ಸರ್ವದಾ ನ್ಯಾಯವೇ ದೊರೆಯಬೇಕು ಎನ್ನುವುದು ಆದರ್ಶವಾದ. ಇವರಿಗೆ ನ್ಯಾಯ ದೊರಕಬೇಕು, ಆಗ ಮೇಲಿನ ಹಂತದ ನ್ಯಾಯಮೂರ್ತಿಗಳಲ್ಲಿ ಮೊರೆ ಇಡುತ್ತಾರೆ. ಆಗ ಇವರಿಗೆ ಅವರಿಂದ ಪರಿಹಾರ ಸಿಕ್ಕೀತು. ಎಲ್ಲಿಯೂ ಸಿಗದು, ಆಗ ಉಚ್ಚ ನ್ಯಾಯಮೂರ್ತಿಗೆ ಮೊರೆ ಇಟ್ಟಾರು. ಈ ನ್ಯಾಯ ವಿತರಣೆಯನ್ನು ಪರಿಶೀಲಿಸಿ ನ್ಯಾಯವನ್ನು ನಿರ್ಣಯ ಮಾಡುವ ತತ್ತ್ವ ಈ ಸಂಖ್ಯೆಯ ಮಂದಿಗೆ ಸೇರಿದ್ದು (Appellate Court) ಹಾಗಿಲ್ಲ ಆ ನ್ಯಾಯಾಲಯದ ವಕೀಲರು ಈ ಮಂದಿ ಎನ್ನಬಹುದು.

ಗುರುವೂ ಧನಗ್ರಹವೂ ಹೌದು. ಇದರ ವ್ಯವಹಾರಗಳೂ ಇವನದೇ ಕಾರ್ಯ ಇಲ್ಲಿ ಗುರುವಿಗೆ ದೋಷವಿದೆ. ಈ ವ್ಯವಹಾರಗಳಲ್ಲಿ ಬಿಕ್ಕಟ್ಟು ತೀವ್ರ. ಆಗ ಸಹಾಯ ಮಾಡುವವರು ಯಾರು? ಇದಕ್ಕೆ ನಾನಾ ರೀತಿಯ ಸಹಕಾರ ಸಂಸ್ಥೆ, ಸಂಘಗಳು, ಬ್ಯಾಂಕುಗಳು ರೂಪುಗೊಂಡಿವೆ. ಈ ಸಂಸ್ಥೆಗಳಲ್ಲಿ ಆಡಳಿತ ಮಾಡುವ ಯೋಗ ಈ ಮಂದಿಗೆ ಮೂಡುತ್ತೆ. ಹಾಗಿಲ್ಲ ನೌಕರಿಯಾದರೂ ಇರುತ್ತೆ. ಇನ್ನೂ ಇದೇ ರೀತಿಯ ಗುರುವಿನ ದೋಷ ಪರಿಹಾರ ಮಾಡುವ ಯೋಜನೆಗಳಲ್ಲಿ ಈ ಮಂದಿಗೆ ಶ್ರದ್ಧೆ. ಅಷ್ಟೇ ಏನು? ಜೀವನದ ಆಧಾರ, ಆದರ್ಶಗಳೂ ಹೌದು.

## ಜೀವನ ಕ್ರಮ

ಈ ಸಂಖ್ಯೆಯ ಮಂದಿಗೆ ಎರಡು ಯೋಗಗಳು ಇರುತ್ತವೆ. ಮೊದಲನೆಯದಾಗಿ ಗುರುವಿಗೆ ದೋಷದ ಯೋಗ, ಎರಡೆಯದು ಅದರ ಪರಿಹಾರದ ಯೋಗ. ಇದರಲ್ಲಿ ಮೊದಲನೆಯ ಯೋಗ ಬಾಲ್ಯದಲ್ಲಿ ಕೆಲ ವರ್ಷಗಳು ಇವರಿಗೇ ನಡೆಯುತ್ತದೆ. ವಯಸ್ಸು ಬಂದ ಮೇಲೆ ಇವರಿಗೆ ಗುರು ಕೃಪೆ ತಾನಾಗಿ ಪ್ರಾಪ್ತಿ ಆಗುತ್ತದೆ. ಮೊದಲು ಕಲಿತ ವಿದ್ಯೆಯಲ್ಲಿ ವಿಘ್ನ. ಬೇರೆ ವಿದ್ಯೆಯು ಒಲಿದು ಬಂದು ಅದರಲ್ಲಿ ಪೂರ್ಣ ಜ್ಞಾನ ಪ್ರಾಪ್ತಿ ಆಗುತ್ತದೆ. ಇದರಿಂದ ಇವರಿಗೆ ಕೀರ್ತಿ.

ಈ ಗುರು ದೋಷ ಪರಿಹಾರದಿಂದ ಗುರುಕೃಪೆ ಆಗುತ್ತೆ. ಇದರಿಂದ ಇವರಿಗೆ ಆಚಾರ ಶುದ್ಧಿ ಆಗುತ್ತೆ. ದೈವ ಶ್ರದ್ಧೆ, ಧರ್ಮ ಬುದ್ಧಿ, ಭಕ್ತಿಗಳು ಪ್ರಾಪ್ತಿ ಆಗುತ್ತೆ. ಈ ಕರ್ಮಾಚರಣೆಯಿಂದ ಇವರು ಗುರು ಭಕ್ತರು.

ಗುರುವಿನ ಅಸಲು ದೋಷದಿಂದ ಇವರಿಗೆ ವಿದ್ಯಾಲಯಗಳಿಂದ ದತ್ತ ವಿದ್ಯಾರ್ಹತೆ ಇರುವುದು ಅಪರೂಪ. ಆದರೆ ಇವರು ವಿದ್ಯಾಪತಿಗಳಲ್ಲಿ ಸಾಹಸಿಗಳು. ಸ್ವಪ್ರಯತ್ನದಿಂದ ಇವರು ವಿದ್ಯಾ ಪ್ರವೀಣರು ಆದಾರು. ವಿದ್ಯಾ ಗುರುಗಳೂ ಇವರ ಸಾಹಸವನ್ನು ಕೊಂಡಾಡುವಷ್ಟು ಪ್ರಗತಿ ಇವರದು. ಅಸಾಧಾರಣ ಪ್ರತಿಭೆ, ವಿದ್ಯೆಗಾಗಿ ಮಿಸಲಾದ ಶ್ರದ್ಧೆ ಇವರ ಹುಟ್ಟುಗುಣಗಳು. ಇಳಿವಯಸ್ಸಿನಲ್ಲಿ ಇದನ್ನು ವಿದ್ಯಾಲಯಗಳು ಕಂಡು ಇವರಿಗೆ ಪ್ರಶಸ್ತಿಗಳನ್ನು ಕೊಟ್ಟಾರು.

ಗುರುವಿನ ತತ್ವಗಳು ನಾನಾಮುಖ. ವಿದ್ಯೆ, ಧನ ವ್ಯವಹಾರ, ನ್ಯಾಯ ವಿತರಣೆ, ದೇವತಾ ಉಪಾಸನೆ ಇತ್ಯಾದಿಗಳು. ಆಯಾ ಮಾರ್ಗದಲ್ಲಿ ಬಾಲ್ಯದಲ್ಲಿ ಇವರಿಗೆ ಅರಿಷ್ಟ. ಉತ್ತರಾರ್ಧ ಜೀವನ ಉತ್ತಮ.

ಕೆಲವರಿಗೆ ಬಾಲ್ಯ ಕಠಿಣವೇ ಇದ್ದೀತು. ಧನದ ಅಭಾವ, ವಿದ್ಯೆಯಲ್ಲಿ ವಿಘ್ನ, ಉನ್ಮಾದದ ತರ್ಕ, ದೇಷನಿಂದೆ ಇತ್ಯಾದಿ ಅರಿಷ್ಟಗಳು, ಇದರಿಂದ ಬಾಲ್ಯದಲ್ಲಿ ನಿರಾಸೆ. ಆದರೆ ಗುರುಕೃಪೆಯ ನಂತರ ಇವರಿಗೆ ಪೋಷಕರು ಸಿಕ್ಕುತ್ತಾರೆ. ಇದರಿಂದ ವಿದ್ಯೆಯಲ್ಲಿ ಅಸಾಧಾರಣ ಪ್ರಗತಿ. ವ್ಯವಹಾರಗಳಲ್ಲಿ ಮುನ್ನಡೆ. ವ್ಯಾಪಾರ ಉದ್ಯಮಗಳಲ್ಲಿ ಸಹಾಯ, ದೇವತಾ ಶ್ರದ್ಧೆಗಳಲ್ಲಿ ಗುರು ದರ್ಶನ ಇತ್ಯಾದಿ ಉತ್ತೇಜನಕಾರಿ ಸಾಧಕಗಳು ಏರ್ಪಡುತ್ತದೆ.

ಇವರಿಗೆ ಈ ದೋಷ ಪರಿಹಾರ ಆಯಿತು. ಆಗ ಆ ದೋಷ ಪೀಡಿತ ಜನಗಳಿಗೆ ಇವರಿಂದ ಸಹಾಯದ ಯೋಗ. ಇದರಿಂದ ಇವರಿಗೆ ಧರ್ಮಶ್ರದ್ಧೆ, ದಾನದ ಮನಸ್ಸು, ಕರುಣೆ ಎಲ್ಲವೂ ಸ್ವಭಾವದಲ್ಲಿ ಸಹಜವಾಗಿ ಮೂಡಿ ಬರುತ್ತವೆ. ಆದರೆ, ಈ ದೋಷದ ಕಾರಣ ಜ್ಯೇಷ್ಠನಿಂದ ನಿರಾಸೆ ಇದೆ. ಕಾರಣ ಹಿರಿಯ ಮಗನೇ ಗುರು. ಈ ಕಾರಣ ಹಿರಿಯ ಮಗು ಹೆಣ್ಣು ಆದೀತು. ಹಾಗಿಲ್ಲ, ಕೇವಲ ಹೆಣ್ಣಳೇ ಮಕ್ಕಳಾದಾವು. ಇನ್ನು ಕೆಲವೆಡೆ ಮಕ್ಕಳೇ ಆಗದು. ಶಾಂತಿ ಆಚರಣೆಗಳಿಂದ ಒಂದು ಸಮಯ ಗಂಡು ಮಗುವಾದರೆ ಅವನಿಂದ ಇವರಿಗೆ ನಿರಾಸೆ, ಅತೃಪ್ತಿ, ಹಲವೆಡೆಗಳಲ್ಲಿ ದುಃಖವೂ ಆದೀತು.

### ಯೋಗ ಕಾಲ

ಸಾಧಾರಣವಾಗಿ ಇವರಿಗೆ ಯೋಗ ಕಾಲ. ಈ ದೋಷ ಪರಿಹಾರದ ನಂತರವೇ ಸರಿ. ಗುರುಭಕ್ತಿ ಎಂದು ಪ್ರಾಪ್ತಿ. ಅಂದಿನಿಂದಲೇ ಯೋಗಕಾಲ. ಗುರುದರ್ಶನ ಎಂದು ? ಅಂದೇ ಈ ಯೋಗ ಪ್ರಾರಂಭ. ಗುರು ಭಕ್ತಿ ಎಲ್ಲಿಯವರೆಗೆ ? ಅಲ್ಲಿಯವರೆಗೆ ಈ ಯೋಗ ಕಾಲ. ಈ ಕಾರಣ ಈ ಮಂದಿ ಆಚಾರ ವಿಚಾರಗಳಲ್ಲಿ ಲೋಪ ಬಾರದಂತೆ ಎಚ್ಚರವಿರುವುದು ಲೇಸು. ಅಲ್ಲದೆ ಗುರುಗಳ ವಿಚಾರದಲ್ಲಿ ಟೀಕೆ. ಸರ್ವದಾ ಸರ್ವಥಾ ವರ್ಜ್ಯ.

ಸಹಜ ಸ್ವಭಾವದಿಂದ ವಯಸ್ಸು ಹೆಚ್ಚುತ್ತಾ ಸ್ವಶಕ್ತಿ ಕಡಿಮೆ ಆಗುತ್ತೆ. ದೈವಕ್ಕೆ ಶರಣು ಹೋಗುವುದೂ ಹೆಚ್ಚು. ಈ ಕಾರಣ ಇವರಿಗೆ ಮುದಿತನ ಸುಖಪ್ರದ, ಯೋಗಪ್ರದವೂ ಹೌದು. ಮಕ್ಕಳ ಮೇಲೆ ನಿರಾಸೆಯಿಂದ ನಿರೀಕ್ಷೆಯೂ ಕಡಿಮೆ. ಆದರೆ ಹಿರಿಯನಲ್ಲದೆ ಇತರ ಹೆಣ್ಣು ಮಕ್ಕಳಿಂದ ಸುಖ ಉಂಟು.

೨೬

# ಸಂಖ್ಯೆ ಇಪ್ಪತ್ತಾರು

# ದೇವೀ ಪ್ರಸಾದಿಂದ ಪ್ರಗತಿ

ಸಂಖ್ಯೆ ಇಪ್ಪತ್ತಾರು. ಇದರಲ್ಲಿ ಪೂರ್ವಾರ್ಧ ಇಪತ್ತು (೨೦) ಉತ್ತರಾರ್ಧ ಆರು (೬) ಈ ಆರು ಸಂಖ್ಯೆಯ ದೋಷ ಪೂರ್ವಾರ್ಧದ ಇಪ್ಪತ್ತರಿಂದ ನಿವಾರಣೆ. ಆರು ಸಂಖ್ಯೆಗೆ ಮಂಗಳನು ಅಧಿಪತಿ. ಆರು ಮುಖಗಳ ಕುಮಾರನು ಅಧಿದೇವನು. ಆದರೆ ಇಪ್ಪತ್ತು ಸಂಖ್ಯೆಗೆ ಗುರು ಚಂದ್ರ ಯೋಗ. ಇದು ಜಲಯೋಗ. ಹಾಗೆಯೇ ಜನನಿಯ ಯೋಗ. ಈ ಕುಮಾರನ ತಾಯಿ ಪಾರ್ವತೀ ದೇವಿಯೇ. ಈ ಇಪ್ಪಾತ್ತಾರು (೨೬) ಸಂಖ್ಯೆಗೆ ಅಧಿದೇವತೆ. ಈ ಕಾರಣ ಈ ಸಂಖ್ಯೆಯ ಮಂದಿ ಸಾಧಾರಣ ದೇವೀ ಆರಾಧಕರು. ಇವರಿಗೆ ಈ ಭಕ್ತಿಸಹಜ ಗುಣ. ಫಲದ ಆಸೆಯಿಂದ, ಇತರರ ಪ್ರೇರಣೆಯಿಂದ ಅಥವಾ ಬಲವಂತಕ್ಕೆ ಮಾಡುವ ಪೂಜೆ ಶಾಂತಿಯಂತಲ್ಲ ಇವರ ಭಕ್ತಿ. ಅದು ಅವರಿಗೆ ತಾಯಿಯ ಮನೆಯ ಕಡೆಯಿಂದ ಬಂದ ಇಳುವರಿ ಗುಣ. ಇದರಿಂದ ಇವರಿಗೆ ಜೀವನ ಸುಗಮ. ಈ ಉಪಾಸನೆಗೆ ಅಂಟಿ ಬಂದ ಔದಾರ್ಯ ಅನುಕಂಪ ಎಲ್ಲವೂ ಇವರಿಗೆ ಸಹಜ.

### ರಾಜಯೋಗ

ಹಲವರ ಮತದಂತೆ ಇದು ರಾಜಯೋಗ ಸಂಖ್ಯೆ. ಇದನ್ನು ಚಂದ್ರ ಮಂಗಳ ಯೋಗ ಎಂದರು. ಅಂದದ ಕೆಂಪು ರೋಜಾ ಹೂ ಬಣ್ಣ ಮೈ. ವಿಶಾಲ ಬಟ್ಟಲುಗಣ್ಣುಗಳ ಮುಖ, ಜೀವನದ ಎಲ್ಲಾ ಅಗತ್ಯಗಳು ಹುಟ್ಟಿನಿಂದಲೇ ಪೂರೈಕೆ ಆಗುವ ಅದೃಷ್ಟ, ಈ ಯೋಗದ ಕೊಡುಗೆಗಳು.

ಈ ಮಂದಿ ಉದಾರಿಗಳು ಆದರೆ ಶೀಘ್ರಕೋಪಿಗಳು. ಈ ಕೋಪ ಅಷ್ಟೇ ಬೇಗ ತಾನಾಗಿಯೇ ತಣ್ಣಗಾಗುತ್ತದೆ. ಈ ಕಾರಣ ಹೃದಯ ನಿರ್ಮಲ ಇರುತ್ತದೆ. ಮಾತೂ ಅಷ್ಟೇ. ನೇರ ಮಾತಿನಿಂದ ಇವರಿಗೆ ನಿಷ್ಠುರ ತಪ್ಪದು. ಆದರೂ ಇವರು ವಾಚಾಳಿಗಳು. ವಾದ ಪ್ರಿಯರು. ಕೆಲವರಂತೂ ಮಾತಿಗಾಗಿ ಹಾತೊರೆಯುತ್ತಿರುತ್ತಾರೆ. ಇದರಿಂದ ಇವರನ್ನು ಒಂದು ನಮೂನೆ "ನ್ಯೂಸ್ ರೀಲ್" ಎಂದು ಹಾಸ್ಯ ಮಾಡಿಯಾರು.

ಇವರು ಒಳ್ಳೆಯ ದುಡಿಮೆಗಾರರು. ಹಾಗೆಯೇ ಉತ್ತಮ ಭೋಜನ ಪ್ರಿಯರು. ಅಷ್ಟೇ ಅಲ್ಲ. ತಮ್ಮ ಜೊತೆಗಾರರಿಗೂ ತಿನ್ನಿಸುವ ಮಂದಿಯೂ ಹೌದು.

ಕೆಲವರು ಈ ಬಾಬಿನ ಉದ್ಯಮದಲ್ಲಿ ಹೇರಳ ಸಂಪಾದನೆಯನ್ನೂ ಮಾಡಿಯಾರು. ಧನ ವ್ಯವಹಾರಗಳಲ್ಲಿ ಇವರು ಪ್ರವೀಣರು. ನ್ಯಾಯಾಲಯಗಳೂ ಇವರಿಗೆ ನಿತ್ಯದ ಹವ್ಯಾಸದ ನೆಲೆಗಳಾದಾವು. ಕೆಲವರಿಗೆ ಲೇವಾದೇವಿಯೇ ಒಂದು ಉದ್ಯಮ.

## ದೋಷರಹಿತ ಸಂಖ್ಯೆ

ಈ ಸಂಖ್ಯೆಯು ಗುರು ಮಂಗಳಯೋಗದ ದೋಷರಹಿತ ಸಂಖ್ಯೆ. ಈ ಕಾರಣ ಇವರಿಗೆ ಅದರ ಹಿಂದಿನ ಸಂಖ್ಯೆಗಳ ಫಲವೂ ಬಾಲ್ಯವಸ್ಥೆಯಲ್ಲಿ ಅನುಭವ ಆದಿತು. ಉದಾಹರಣೆಗೆ ೧೩, ೧೬, ೨೩, ಈ ಸಂಖ್ಯೆಗಳ ಫಲ ಇವರಿಗೆ ಬಾಲ್ಯದಲ್ಲಿ ನಡೆದಿರುತ್ತೆ. ಅನಂತರ ಆ ಸಂಖ್ಯೆಯ ಮುಂದಿಗೆ ಆಶ್ರಯ ನೀಡುವ ಯೋಗ.

ಬಾಲ್ಯದಲ್ಲಿ ಇವರಿಗೆ (೧೩) ಹದಿಮೂರು ವರ್ಷಗಳ ಪರ್ಯಂತ ಕಷ್ಟ. ಧನವೂ ಅಭಾವ. ವಿದ್ಯೆಯಲ್ಲಿಯೂ ವಿಘ್ನ. ಅಜೀರ್ಣದ ವ್ಯಾಧಿಗಳಿಂದ ಪೀಡೆ ಬೇರೆ. ಆದರೆ ಆಗ ಅವರಿಗೆ ಯದೃಚ್ಛೆವಾಗಿ ಯತಿ ಪ್ರಸಾದವಾಗಿ ಸುಖ ಉಂಟಾಗುತ್ತದೆ. (೧೬) ಹದಿನಾರು ವರ್ಷಗಳ ನಂತರ ಸುಖದ ಯೋಗ ಉದಯವಾಗುತ್ತದೆ. ಧನದ ಸೌಲಭ್ಯಗಳು ಬೇರೆ. ಆರೋಗ್ಯವೂ ಉತ್ತಮ. ಆದರೆ, ಈ ವಯಸ್ಸಿನಲ್ಲಿ ಪೌರುಷದ ಉದಯವಾಗಿ ಅದರ ಚಟದಿಂದ ಆಗಾಗ ಕಾಯಿಲೆಯೂ ಆದೀತು. ದೇವೀ ಪೂಜೆಯಿಂದ ಈ ಊನವು ಮನಸ್ಸಿನಲ್ಲಿ ಜಯಕ್ಕೆ ಒಂದು ನೆಮ್ಮದಿ ಆಗುತ್ತೆ. ಆದರೆ ಹೆಣ್ಣು ಮಕ್ಕಳಿಗೆ ಹಿರಿತನ ಒಂದೊಡನೆ ಅವರಿಗೂ ಇದು ತಪ್ಪಿದ್ದಲ್ಲ. ಸೊಂಪಿನ ಬೆಳವಣಿಗೆಯ ಅವರ ಮೈ ದಿನೇ ದಿನೇ ಕರಗಿ ಕಂದಿದ ಹೂವಿನಂತೆ ಆದೀತು. ಅದೂ ಅಲ್ಲದೆ ಕೆಲವರಿಗೆ ಹೊರಗಿನ ದಿನಗಳಲ್ಲಿ ತೀವ್ರ ಉದರ ಶೂಲೆಯಿಂದ ನರಳಾಟ ಬೇರೆ. ಆದರೆ ದೇವಿಯ ಆರಾಧನೆಯಿಂದ ಇವರಿಗೆ ಈ ಮನೋದೌರ್ಬಲ್ಯ ಜಯಿಸಿ ವಿವಾಹಾದಿ ಶುಭ ಕಾರ್ಯಗಳು ನಡೆದಾವು.

### ಹತ್ತೊಂಭತ್ತರ ನಂತರ

(೧೯) ಹತ್ತೊಂಭತ್ತು ವಯಸ್ಸಿನ ನಂತರ ಇವರಿಗೆ ತೇಜಸ್ಸು ಕೂಡಿ ಬರುತ್ತದೆ. ಮುಖದಲ್ಲಿ ನಿಗಿನಿಗಿಯೆನ್ನುವ ಕಳೆಯೂ ಮೂಡುತ್ತೆ. ಕಣ್ಣುಗಳಲ್ಲಿ ಬೆಳಕೂ, ಚೇಷ್ಟೆಯ ನೋಟಗಳೂ, ಬೆಡಗು ಬಿನ್ನಾಣಗಳೂ ಸೇರಿ ನೋಡಲು ಅಂದದ ಸುಂದರಿಯರಂತೆ ಕಾಣುತ್ತಾರೆ. ಸಾಧಾರಣ ಈ (೨೬) ಇಪ್ಪತ್ತಾರು ಸಂಖ್ಯೆಯ ಮುಂದಿಗೆ ಈ ವಯಸ್ಸಿನಲ್ಲಿ ಕಲ್ಯಾಣ ನಡದೇ ನಡೆದೀತು. ಉತ್ತಮ ವರ್ಗದ ಕುಲೀನ ಬಂಧುತ್ವ ಏರ್ಪಡುವುದೂ ಸಹಜ. ಧನ, ಕನಕ, ವಸ್ತು, ವಾಹನ ಇತ್ಯಾದಿಗಳ ಸಮೃದ್ಧಿಯ ಮನೆಗೆ ಬೆಳಕಿನ ನಂದಾದೀಪವಾಗಿ ಹೋಗಿ ಸೇರುವ ಅದೃಷ್ಟದ ಕುವರಿಯರು ಇವರೇ ಸರಿ.

### ದೋಷ ಪರಿಹಾರ

ಇಲ್ಲಿ ಇನ್ನು ಒಂದು ವಿಶೇಷ. ಇವರಿಗೆ ಹದಿನಾರು ವಯಸ್ಸು ಬಂದರೆ (೧೩) ಹದಿಮೂರನೆಯ ಸಂಖ್ಯೆಯ ದೋಷ ಪರಿಹಾರ ಆಗುತ್ತೆ. ಆಗ ಈ ಹದಿಮೂರು ಸಂಖ್ಯೆ

ಬೇರೆಯವರನ್ನು ತೋರಿಸುತ್ತೆ. ಇವರಿಗೆ ಹದಿಮೂರು ವಯಸ್ಸಿನ ತಂಗಿ ಇದ್ದಾಳು. ಹಾಗಿಲ್ಲ (೧೩) ಹದಿಮೂರು ಸಂಖ್ಯೆಯ ಜನ ಯಾರಾದರೂ ಮನೆಗೆ ಬಂದು ಸೇರಿಕೊಂಡಾರು. ಹಾಗೆಯೇ (೧೯) ಹತ್ತೊಂಭತ್ತು ವಯಸ್ಸು ಆದಾಗ ಇದರ ಹಿಂದಿನ ಸಂಖ್ಯೆಯಾದ (೧೬) ಹದಿನಾರರ ದೋಷ ಪರಿಹಾರ. ಆಗ ಆ ಹದಿನಾರನೆಯ (೧೬) ಸಂಖ್ಯೆಯ ಮಂದಿ ಬಂದು ಸೇರುವರು ಎಂದರ್ಥ. ಒಂದು ಒಂದು ಸಲ ಯಾರೂ ಬಾರರು. ಆಗ ಆ ದೋಷ ಹೋಗದು. ಆಗ ಆ ಸಂಖ್ಯೆಯ ದೇವತೆಯ ಆರಾಧನೆಯನ್ನು ಮಾಡಬೇಕು. ಉದಾಹರಣೆಗೆ (೧೩) ಹದಿಮೂರು ಸಂಖ್ಯೆಗೆ ಯತಿಸೇವೆ (೧೬) ಹದಿನಾರು ಸಂಖ್ಯೆಗೆ ದೇವೀ ಪೂಜೆ. ಈ ಶಾಂತಿ ಮಾಡಿದರೆ ಆಗ ಆಯಾ ಸಂಖ್ಯೆಯ ಮಂದಿ ಸೇರಿ ಇವರಿಗೆ ಆ ಸಂಖ್ಯೆಯ ಫಲದ ಋಣ ತೀರುತ್ತೆ. ಈ ಮಂದಿ ಹೆಂಗಸರಾದರೂ ಸರಿ, ಗಂಡಸರಾದರೂ ಸರಿ ಆಯಾ ದೋಷದ ಪರಿಹಾರ ಆಗುತ್ತೆ.

## ಆರೋಗ್ಯ – ವಿದ್ಯೆ

ಇದೇ ಮಂದಿ ಗಂಡಸರಾದರೆ (೧೬) ಹದಿನಾರನೆಯ ವಯಸ್ಸಿನಿಂದ ಆರೋಗ್ಯ ಉತ್ತಮ. ವಿದ್ಯೆಯೂ ಕೂಡಿ ಬರುತ್ತೆ. (೧೯) ವಯಸ್ಸಿಗೆ ಉನ್ನತ ವಿದ್ಯಾಲಯದ ಯೋಗವು ಪ್ರಾರಂಭ ಆಗುತ್ತದೆ. (೨೩) ಇಪ್ಪತ್ತುಮೂರು ವಯಸ್ಸಾದಾಗ ಇವರಿಗೆ ಮೂರು (೩) ಸಂಖ್ಯೆಯ ದೋಷ ದಿಂದ ಯಂತ್ರವಿದ್ಯೆ ಪ್ರಾಪ್ತಿ ಆಗುತ್ತೆ. ಅಲ್ಲದೆ ಬೇರೆ ನಗರದಲ್ಲಿ ವಿದ್ಯೆಯ ಅಭ್ಯಾಸವು ನಡೆದೀತು. ಮತ್ತೆ ಹಲವರಿಗೆ ವಿದೇಶ ಯಾತ್ರೆಯೂ ಆದೀತು. (೨೬) ಇಪ್ಪತ್ತಾರನೆಯ ವಯಸ್ಸಿಗೆ ಪೂರ್ಣ ವಿದ್ಯಾ ಪ್ರಾಪ್ತಿ ಆಗುತ್ತೆ. ಕೆಲವರಿಗೆ ಧನಯೋಗವೂ ಪ್ರಾರಂಭ ಆದೀತು. ಹಲವರಿಗೆ ಕುಜ ಚಂದ್ರಯೋಗದಿಂದ ಬೇಸಾಯದ ವಿದ್ಯೆಯಲ್ಲಿ ಪ್ರಗತಿ ಆಗುತ್ತದೆ. ಮೊತ್ತದಲ್ಲಿ. ಇವರು ಎಲ್ಲಿಯೇ ಇರಲಿ, ಇವರ ಸುತ್ತ ಹಿಂದಿನ ಸಂಖ್ಯೆಗಳಾದ ೧೩, ೧೬, ೧೯, ೨೩ ಸಂಖ್ಯೆಗಳ ಮಂದಿ ಇದ್ದೇ ಇರುತ್ತಾರೆ. ಹಾಗಿಲ್ಲ, ಅದರ ಹಿಂದಿನ ಸಂಖ್ಯೆಯ ಮಂದಿಯಾದರೂ ಇದ್ದೇ ಇರುತ್ತಾರೆ. ಈ ಅಂಶ ಗಮನಿಸಬೇಕಾದ್ದು. ಅವರಿಗೆ ಈ (೨೬) ಸಂಖ್ಯೆಯ ಮಂದಿಯೇ ಆಶ್ರಯದಾತರು.

ಹೆಂಗಸರಿಗೆ (೨೩) ಇಪ್ಪತ್ತುಮೂರು ವಯಸ್ಸಿನಲ್ಲಿ ಗರ್ಭಧಾರಣೆ ಆಗುತ್ತೆ. ಕಾರಣ ಗುರು ಗಂಡಸರಿಗೆ ವಿದ್ಯೆಯನ್ನು ತೋರಿಸಿದರೆ ಹೆಂಗಳಿಗೆ ಸಂತಾನ ಯೋಗವನ್ನು ತೋರಿಸುತ್ತಾನೆ. ಆದರೆ ಇಲ್ಲಿ (೨೩) ಸಂಖ್ಯೆಯಲ್ಲಿನ ಮೂರು ಸಂಖ್ಯೆಯ ಕುಜದೋಷದಿಂದ ಗರ್ಭಪಾತದ ಯೋಗ ನಡೆದೀತು. ಹಾಗಿಲ್ಲ ಪ್ರಸೂತಿ ಕಷ್ಟವಾಗಿ ತೀವ್ರ ಕಾಯಿಲೆ ಆದೀತು. (೨೬) ಇಪ್ಪತ್ತಾರು ವಯಸ್ಸು ಬಂದಮೇಲೆ ಈ ದೋಷ ನಿವೃತ್ತಿ ಆಗುತ್ತದೆ. ಅನಂತರ ಪೂರ್ಣ ಆರೋಗ್ಯ ಪ್ರಾಪ್ತಿ. ಅಲ್ಲದೆ (೨೯) ಇಪ್ಪತ್ತೊಂಭತ್ತು ವಯಸ್ಸಿನಲ್ಲಿ ಸಂತಾನ ಯೋಗವಿದ್ದು ಸುಖ ಪ್ರಸವದಿಂದ ರಾಜಯೋಗ ನಡೆಯುತ್ತದೆ. ಇವರಿಗೆ ಮೂವತ್ತರ ನಂತರ ಸಂತಾನ ಯೋಗ ನಿಲ್ಲುತ್ತದೆ.

## ಸ್ತ್ರೀತ್ವ ಪ್ರಧಾನ ಸಂಖ್ಯೆ

ಈ ಸಂಖ್ಯೆಯ ಮಂದಿಗೆ ರಾಜಯೋಗ ನಡೆಯುತ್ತೆ. ಆ ಕಾಲದಲ್ಲಿ ಇವರು ಇವರ ಹಿಂದಿನ ಸಂಖ್ಯೆಗಳ ಮಂದಿಯ ಮಧ್ಯದಲ್ಲಿ ಇರುತ್ತಾರೆ. ಇವರು ಜನಪ್ರಿಯರು. ಸೋದರಿಯಲ್ಲಿ ಸೋದರ ರಲ್ಲಿ ವಿಶೇಷ ಅಭಿಮಾನ ಇರುತ್ತೆ. ಇವರು ಬಹುಶಃ ದೊಡ್ಡ ಸಂಸಾರದವರು. ಇಲ್ಲ, ದೊಡ್ಡ

ಸಂಸಾರದ ಮನೆಯನ್ನು ಸೇರುವ ಮಂದಿ. ಅಲ್ಲದೆ ಅಲ್ಲಿಯೂ ಹಿರಿಮೆಯ ಸ್ಥಾನವನ್ನು ಹೊಂದುವ ಮಂದಿ ಎಂದರ್ಥ.

ಸಂಖ್ಯೆ (೨೬) ಇಪ್ಪತ್ತಾರು ಮೂಲತಃ ಜನನಿಯಾದ ಪಾರ್ವತಿಯ ಸಂಖ್ಯೆ ಈ ಕಾರಣ ಈ ಮಂದಿ ಇರುವೆಡೆ ಸ್ತ್ರೀಯರಿಗೆ ಪ್ರಧಾನ ಪಾತ್ರ ಇರುತ್ತದೆ. ಹೆಂಗಸರಿಗೆ ಈ ಸಂಖ್ಯೆ ಶುಭದ ಅದೃಷ್ಟದಾಯಕ ಸಂಖ್ಯೆ. ಗಂಡಸರಿಗೆ ಈ ಸಂಖ್ಯೆ ಸ್ತ್ರೀ ಸ್ವಭಾವವನ್ನು ಕೊಡುತ್ತದೆ. ಕೋಮಲ ಮೈ ಮನಗಳನ್ನು ಕೊಡುತ್ತದೆ. ಅಲ್ಲದೆ ತೀವ್ರ ಉದ್ವೇಗದ ಅಬ್ಬರಗಳನ್ನು ಕೊಟ್ಟೀತು. ಏನೇ ಊನ ಗುಣ ಇರಲಿ ಈ ಮಂದಿಗೆ ಯಾವುದೂ ಲೆಕ್ಕ ಇರದು. ಕಾರಣ ಇವರು ಅದೃಷ್ಟದಾಳು ಗಳು. ದೇವೀ ಪೂಜೆ, ನಿಯಮ, ಶ್ರದ್ಧೆಗಳಿಂದ ಬಂದ ಭಕ್ತಿಯ ಸಹಜ ಗುಣ ಬೇರೆ.

ಈ ಮಂದಿ ಹೆಂಗಸರಂತೆ ಅಲಂಕಾರ ಪ್ರಿಯರು. ಉದ್ದ ಕೂದಲ ನೇರ ಬೈತಲೆ ಇವರಿಗೆ ಶೃಂಗಾರ ಸಾಧಕ. ಪೂಜೆ ಮಾಡಿದ ಕುಂಕುಮ ಫಾಲ ಫಲಕದಲ್ಲಿ ಶೋಭಿಸುತ್ತದೆ. ಎಲ್ಲರಲ್ಲಿ ನಯ ವಿನಯಗಳಿಂದ ನಡೆದುಕೊಳ್ಳುವ ಮಂದಿ. ಇದು ಹೊಸತರಲ್ಲಿ ಮಾತ್ರ. ಅನಂತರ ತೀರಾ ಆತ್ಮೀಯ ಸಲಿಗೆ ಬೆಳೆಯುತ್ತೆ.

ಇದು ಸ್ತ್ರೀ ಗುಣವೇ ಸರಿ. ಕೆಲವರಂತೂ ಮೈ ಕೈ ಮುಟ್ಟಿ ಮುಟ್ಟಿ ಮಾತಾಡಿಸುವ ಚಟ ಬೇರೆ. ಹಾಗಿಲ್ಲ ಮಾತು ಮಾತಿಗೆ ಹೆಗಲ ಮೇಲೆ ತೋಳನ್ನಿರಿಸಿ ಸಲಿಗೆಯ ಪ್ರೀತಿ ಮಾತಾಡುವ ಹವ್ಯಾಸ ಬೇರೆ. ಬಾಲ್ಯದಿಂದ ಇಂದ್ರಿಯ ಸುಖ ಇವರಿಗೆ ಪ್ರಿಯ. ಮಾತು ಮಾತಿಗೆ ಕಾಮೋದ್ದೀಪಕ ಶಬ್ದಗಳ ಸಂಸ್ಕೃತ ಭಾಷೆಯ ಲಹರಿ ಬೇರೆ. ಚೇಷ್ಟೆ ಚಲನ ವಲನಗಳಲ್ಲಿಯೂ ಇವರಿಗೆ ಸುಖ ಲಾಲಸೆ ಪ್ರಧಾನ.

## ಯೋಗ ಕಾಲಗಳು

(೨೬) ಇಪ್ಪತ್ತಾರು ಸಂಖ್ಯೆ ಗುರು ಮಂಗಳ ಚಂದ್ರ ಯೋಗದ ಸಂಖ್ಯೆ. ಗುರು ಮಂಗಳ ಯೋಗ ತರ್ಕಯೋಗ. ಇದರಿಂದ ಇವರು ನ್ಯಾಯಾಂಗದ ನೌಕರಿ ವೃತ್ತಿಗಳಿಂದ ನ್ಯಾಯಾಲಯದ ವ್ಯವಹಾರಗಳಲ್ಲಿ ಹೆಸರು ಮಾಡುವವರು. ಇದೇ ಯೋಗ ಸ್ವರ್ಣ ವ್ಯಾಪಾರದಲ್ಲಿಯೂ ಯೋಗಿ ಸುತ್ತೆ. ಚಿನ್ನ ಬೆಳ್ಳಿ ವ್ಯಾಪಾರ ಮಾಡುವ ಮಂದಿಗೆ ಈ ಸಂಖ್ಯೆ ಉತ್ತಮ. ಇದೇ ರೀತಿ ಚಂದ್ರ ಮಂಗಳ ಯೋಗವೂ ನಡೆಯುತ್ತೆ. ಇದರ ವ್ಯವಸಾಯದ ಯೋಗ. ಈ ಕಾರಣ ಕೃಷಿರಂಗದಲ್ಲಿ ಇವರಿಗೆ ಹೇರಳ ಲಾಭ ಆಗುತ್ತದೆ. ನೀರಾವರೀ ಯೋಜನೆಗಳಿಂದ ಇವರಿಗೆ ಸಿರಿಪ್ರಾಪ್ತಿ ಆಗುತ್ತದೆ.

ಜನ್ಮ ಪ್ರಾಯ (೨೬) ಇಪ್ಪತ್ತಾರನೆಯ ವರ್ಷದಿಂದ ಇವರಿಗೆ ಸುಯೋಗ ನಡೆಯುತ್ತದೆ. ಹಿರಿ ಮಗಳ ಜನನದ ನಂತರವೂ ಈ ಯೋಗ ಪ್ರಬಲ ಆಗುತ್ತದೆ. ಈ ಯೋಗ ಕಾಲ ಹದಿನಾರು ವರ್ಷಗಳು ನಡೆಯುತ್ತದೆ. ಕಷ್ಟ ಕಾಲ ಬಂದಾಗ ದೇವಿ ಆರಾಧನೆ ಉದ್ಧಾರ ಮಾಡುತ್ತದೆ. ಇವರಿಗೆ ಎಪ್ಪತ್ತೈದು ವರ್ಷ ಪರಮಾಯು ಪ್ರಮಾಣ.

ಈ ಮಂದಿಗೆ (೧೬) ಹದಿನಾರು ಸಂಖ್ಯೆಯ ಮಂದಿ ಸಹಾಯಕರು. ಹದಿಮೂರು (೧೩) ಸಂಖ್ಯೆಯ ಮಂದಿಗೆ ಇವರು ಆಶ್ರಯದಾತರು. ಧನ ಸಹಾಯ, ಧಾನ, ಧರ್ಮಗಳಲ್ಲಿ ಅಭಿರುಚಿಯುಳ್ಳವರು ಮತ್ತು ನಿಷ್ಕಾಮದ ದೇವೀ ಭಕ್ತರು.

# ಇಪ್ಪತ್ತೇಳು ಸಂಖ್ಯೆ - ಮನೋವಿಕಾಸ

ಸಂಖ್ಯೆ ಇಪ್ಪತ್ತು (೨೦) ಪೂರ್ವಾರ್ಧದ ಗುಣದ ಸಂಖ್ಯೆ. ಏಳು (೭) ಉತ್ತರಾರ್ಧದ ದೋಷ ಸಂಖ್ಯೆ. ಈ ಏಳು (೭) ಸಂಖ್ಯೆಗೆ ರಾಹು ಅಧಿಪತಿ. ಈ ರಾಹುವಿಗೆ ಅಧಿದೇವತೆ "ಮೃತ್ಯು". ಈ ಸಂಖ್ಯೆಯೂ ಅಷ್ಟೆ ಮೃತ್ಯುವಿನ ಸಂಖ್ಯೆ. ಇದಕ್ಕೆ ಆಂಗ್ಲರು "ಏಳು - ಸ್ವರ್ಗ" (Seven is Heaven). ಇದು ದೋಷವಾದಾಗ ಮೃತ್ಯುವಿನಿಂದ ದೋಷವಾಗುತ್ತೆ. ಸತ್ತರೂ ಸಾಯದೇ ಮನೋದೇಹವಿದ್ದು ಸಂಚರಿಸುವುದು ಎಂದರ್ಥ. ಗ್ರಾಮ್ಯ ಭಾಷೆಯಲ್ಲಿ "ಗಾಳಿ ಸಂಚಾರ" ಎನ್ನುತ್ತಾರೆ. ಈ ದೋಷವನ್ನು ಪರಿಹಾರ ಮಾಡಲು ಉಪಾಸನೆ ಅಗತ್ಯ. ಈ ಉಪಾಸನೆ ಗುರು ಚಂದ್ರಯೋಗದ ತಾಯಿ ಸರಸ್ವತಿ ಉಪಾಸನೆ. ಈ ಸಂಖ್ಯೆಯ ಮಂದಿ ಸಾಧಾರಣ ವಾಗಿ ಈ ತಾಯಿ, ದೇವಿಯ ಉಪಾಸಕರು. ಇದರಿಂದ ಮನಸ್ಸಿಗೆ ಕವಿದ ಈ ದೋಷ ನಿವೃತ್ತಿ ಯಾಗಿ ಮನಸ್ಸು ಪ್ರಫುಲ್ಲವಾಗಿ ವಿಕಾಸ ಆಗುತ್ತದೆ. ಸೂಕ್ಷ್ಮ ಜ್ಞಾನದ ಅರಿವೂ ಆಗುತ್ತದೆ. ವಿಶೇಷದ ಜ್ಞಾನಕ್ಕೂ ಈ ಸಂಖ್ಯೆಯೇ ಕಾರಣ ಎಂದರೆ ತಪ್ಪಲ್ಲ.

ಈ ಮಂದಿ ಆಚಾರ ಶೀಲರು. ಮೃತ್ಯುವಿನ ದೋಷ ಪರಿಹಾರ ಮಾಡುವ ಸದ್ಗ್ರಂಥಗಳ ಸಪ್ತದಿನ ಪಾರಾಯಣ, ಹಾಗಿಲ್ಲ ಸಪ್ತ ಸರ್ಗೀಯ ಪಾರಾಯಣ ಮಾಡುವುದು ಇವರಿಗೆ ದಿನಚರಿ. ಸಪ್ತ ಶತ ಶ್ಲೋಕಗಳಿರುವ ಭಗವದ್ಗೀತೆ, ಶ್ರೀದೇವೀ ಸಪ್ತಶತೀ ಇತ್ಯಾದಿ ಗ್ರಂಥ ಗಳ ಪಾರಾಯಣ ಶೀಲರು. ಗರ್ಭ ಮೃತ್ಯು, ಜೀವ ಬ್ರಹ್ಮಾದಿಗಳ ಸ್ವರೂಪ ತಿಳಿಸುವ ಸೂತ್ರಗಳ ಅರಿವು ಇವರಿಗೆ ಹವ್ಯಾಸ. ಇದನ್ನು "ಬ್ರಹ್ಮ ಸೂತ್ರ" ಎಂದರು.

ರಾಹುವು ತಿರುಗಣೆ ಚಾಲನೆಯನ್ನು ತೋರಿಸುತ್ತದೆ. (Rotory movement) ಜೀವ ಎಂದರೆ ಗುರು. ಈ ಜೀವನಿಗೆ ರಾಹು ಯೋಗದಿಂದ ತಿರುಗಿ ತಿರುಗಿ ಮೃತ್ಯು ತರುವ ಗರ್ಭ ಸಂಭವ ಆಗುತ್ತದೆ. ಇದನ್ನೇ ಸಂಸಾರ ಎಂದರು. ಇದರಿಂದ ಇದಕ್ಕೆ ಪುನರ್ಜನ್ಮ ಸಂಖ್ಯೆ ಎಂದೂ ಕರೆದರು. ಈ ಸಂಖ್ಯೆಯ ಮಂದಿ ಪುನರ್ಜನ್ಮ ತಾಳಿದವರು ಎಂದರ್ಥ. ಉದಾಹರಣೆಗೆ ಒಂದು ಮಗು ಶಿಶುವಾಗಿದ್ದಾಗಲೇ ಸತ್ತು ಪುನಃ ಅನತಿ ಕಾಲದಲ್ಲಿಯೇ ಹುಟ್ಟುವುದು ಎಂದರ್ಥ. ಹಾಗಿಲ್ಲ, ತಾತನನ್ನು ತೋರಿಸುವ ಈ ರಾಹು ಪುನಃ ಹುಟ್ಟುವುದು. ತಾತನು ಸತ್ತ ವರ್ಷದಲ್ಲಿ ಈ ಜನನ ಎಂದರ್ಥ. ಅಂದರೆ ಪೂರ್ವಜನ್ಮದಲ್ಲಿ ಇವರು ತಾತನಾಗಿದ್ದರು ಎನ್ನಬಹುದು.

## ಗರ್ಭಧಾರಣೆ ಯೋಗ

ಗುರು ಚಂದ್ರಯೋಗ ಜನನ ಕೊಡುವ ತಾಯಿಯ ಯೋಗ. ರಾಹು ಗ್ರಹಣ ಮಾಡುವ ಛಾಯಾಗ್ರಹ. ಗುರು ಚಂದ್ರ ರಾಹು ಯೋಗದಿಂದ ತಿರುಗಿ ತಿರುಗಿ ಶೀಘ್ರದಲ್ಲಿಯೇ ತಾಯಿಯಾಗುವ ಯೋಗ. ಬಹು ಸಂಖ್ಯೆಯ ಮಕ್ಕಳನ್ನು ಪಡೆಯುವ ಯೋಗ. ಕೆಲವು ಸಲ ಅವಳಿ

ಜನನ ಯೋಗವೂ ಆದೀತು. ಈಗಿನ ಕಾಲಕ್ಕೆ ಈ ಯೋಗ ಸರಕಾರದ ಮತದಲ್ಲಿ ಹೆಂಗಳಿಗೆ ಶುಭವಲ್ಲ ಎಂದರು. ಕಾರಣ ಕುಟುಂಬ ಯೋಜನೆಯ ಕಾಯಿದೆ.

ಈ ಸಂಖ್ಯೆಯ ಮಂದಿಗೆ ಸೂಕ್ಷ್ಮದ ಮನಸ್ಸು, ಸೂಕ್ಷ್ಮದ ಜ್ಞಾನ ಬೇರೆ. ಇದರಿಂದ ಇವರಿಗೆ ಒಂದು ಹೇಳಿದರೆ ಕಡಿಮೆ, ಎರಡು ಹೇಳಿದರೆ ಹೆಚ್ಚು. ಇಷ್ಟು ಸೂಕ್ಷ್ಮ. ಇದರಿಂದ ಇತರರಿಗೆ ಇವರ ಹತ್ತಿರ ಏಗುವುದು ಕಷ್ಟ. ಪದೇ ಪದೇ ಬದಲು ಬದಲು ಆಗುವ ಮನಸ್ಸು ಎನ್ನಬಹುದು. ಆದರೆ ಶಾರದಾ ಉಪಾಸನೆಯಿಂದ ಈ ಊನ, ಗುಣವಾಗಿ ಮಾರ್ಪಾಟಾಗುತ್ತದೆ. ಉನ್ನತ ಮಟ್ಟದ ವಿದ್ಯಾ ಕೀರ್ತಿಯನ್ನು ಕೊಡುತ್ತದೆ. ಈ ಸಾರಸ್ವತ ಯೋಗ ಕೇವಲ ಭಾಷಾ ಶಾಸ್ತ್ರಕ್ಕೆ ಸೀಮಿತ ಎಂದು ಕೆಲವರ ಮತ. ಇತರರ ಮತದಂತೆ ಈ ಮಂದಿಗೆ ದೈವದತ್ತ ಸ್ಫೂರ್ತಿ ಸಹಜ ಗುಣ ಎಂದರು. ಕಲಾವಿಲಾಸಿಗಳು ಸಂಶೋಧನಾ ಶೀಲರು ಮಾತಿನ ಗೂಢ ಮಹಾತ್ಮೆಯನ್ನು ತಿಳಿಯುವ ಪದ, ಪದದ, ಅರ್ಥ ಶಾಸ್ತ್ರದ ಅಧ್ಯಯನ ಶುಭ ಎಂದರು. ತರ್ಜುಮೆ ಇಲ್ಲ, ಮೂಲ ಗ್ರಂಥಗಳಿಗೆ ಭಾಷ್ಯ ರಚನೆ ಮಾಡಿ ಸುಲಭದ ಅರಿವನ್ನು ಪ್ರಚಾರ ಮಾಡುವ ಮಂದಿ. ಈಗೀಗ ಪಠ್ಯಪುಸ್ತಕಗಳಿಗೆ ಅರ್ಥ ಟಿಪ್ಪಣಿಗಳನ್ನು (Notes) ಬರೆದು ಪ್ರಚಾರ ಮಾಡುವ ಉದ್ಯಮ ಎನ್ನಬಹುದು.

ಕಷ್ಟವಾದ ಬೃಹತ್ ಗ್ರಂಥಗಳನ್ನು ಸಂಗ್ರಹಿಸಿ ಸಣ್ಣ ಸಣ್ಣದಾಗಿ ಸುಲಭವಾಗಿ ಅರ್ಥವಾಗುವಂತೆ ಬರೆದು ವಿದ್ಯೆಯನ್ನು ಪ್ರಚಾರ ಮಾಡುವ ಸಂಖ್ಯೆ ಈ ಇಪ್ಪತ್ತೇಳು ಎಂದರು. ಇತರ ಭಾಷೆಗಳ ಮೂಲ ಗ್ರಂಥಗಳನ್ನು ಭಾಷಾಂತರ ಮಾಡುವ ಕೆಲಸವೂ ಈ ಸಂಖ್ಯೆಗೇ ಸೇರಿದ್ದು. ಮೊತ್ತದಲ್ಲಿ ಈ ಸಂಖ್ಯೆ ವಿದ್ಯೆಯ ಸಾರ್ಥಕ ಸಾಧನೆಗಾಗಿ ಶ್ರಮಿಸುವ ಸಂಖ್ಯೆ.

## ಜಲಾಶಯ ಖಾತೆ ಉದ್ಯಮ

ಗುರು ಚಂದ್ರ ನಿರ್ಮಲವಾಗಿ ತೊಳೆಯುವ ನೀರಿನ ಸಂಖ್ಯೆ. ರಾಹು ಗ್ರಹಣದ ತತ್ವ ಈ ನೀರನ್ನು (ಗ್ರಹಣ ಮಾಡುವ) ಸಂಗ್ರಹಿಸಿಡುವ ಜಲಾಶಯಗಳನ್ನು ತೋರಿಸುತ್ತೆ. (Water Reservoirs) ಈ ಸಂಬಂಧದ ಕಾರ್ಯಶಾಖೆಯಲ್ಲಿ ನೌಕರಿ ಉದ್ಯಮ ಇತ್ಯಾದಿಗಳಲ್ಲಿ ಈ ಮಂದಿಗೆ ಸುಯೋಗ ನಡೆದೀತು. ನಿರ್ಮಲವಾದ ನೀರು ಸರಬರಾಜು ಮಾಡುವ ಸರಕಾರದ (ಅಥವಾ ಖಾಸಗಿ) ಶಾಖೆ ಎಂದರು. (Water Supply Department) ಹಾಗಿಲ್ಲ ಬೃಹತ್ ಜಲಾಶಯಗಳಿರುವ ಊರುಗಳಲ್ಲಿ ಊರ್ಜಿತವಾಗುವ ಮಂದಿ ಎಂದರು.

ಕರ್ಮ ತೊಳೆಯುವ ಸಪ್ತ ಜೀವನದಿಗಳಲ್ಲಿ ಸ್ನಾನ ಕಾರ್ಯದಿಂದ ಅಭಿವೃದ್ಧಿ ಆಗುತ್ತಾರೆ. ಹಾಗಿಲ್ಲ, ಆ ನದಿಗಳ ಹತ್ತಿರವಿರುವ ಊರುಗಳಲ್ಲಿ ಉದ್ಯಮ ವ್ಯವಹಾರ ವ್ಯಾಪಾರ ಮಾಡುವ ಮಂದಿಗೂ ಈ ಸಂಖ್ಯೆ ಕಾರಣ. ಬೃಹತ್ ವ್ಯವಹಾರಗಳನ್ನು ಜಲಾಶಯಗಳ ಮೂಲಕ ಮಾಡುವ ರಫ್ತು, ಇತ್ಯಾದಿಗಳಿಂದ ಭಾಗ್ಯ ಕೊಡುವ ಸಂಖ್ಯೆ ಈ ಇಪ್ಪತ್ತೇಳು ಆದೀತು.

# ಭಿನ್ನ ಮತದಿಂದ (೨೭) ಇಪ್ಪತ್ತೇಳು ಸೂರ್ಯನ ಸಂಖ್ಯೆ

ಚಂದ್ರಕಲಾ ನಾಡಿಗಳಲ್ಲಿ ಅಲ್ಲಲ್ಲಿ ಸೂರ್ಯನ ಯೋಗವನ್ನು ಹೇಳುವಾಗ ಇಪ್ಪತ್ತೇಳು ಸಂಖ್ಯೆಯನ್ನು ಉಪಯೋಗಿಸಿದ್ದಾರೆ. ಸೂರ್ಯನ ಸಂಖ್ಯೆ ಒಂಭತ್ತು (೯) ಇದರ ಗುಣ ಸಂಖ್ಯೆ (೯ × ೩ = ೨೭) ಇಪ್ಪತ್ತೇಳು. ಉದಾಹರಣೆಗೆ ಬುಧನ ಪ್ರಬಲ ಸಂಖ್ಯೆ (೮ × ೩ = ೨೪) ಇಪ್ಪತ್ತನಾಲ್ಕು ಇದ್ದಂತೆ. ಆದರೆ ಇಲ್ಲಿ ಅದು ಸಲ್ಲದು. ಕಾರಣ ಬುಧನಿಗೆ ಎಂಟು ಪ್ರಬಲ ದೋಷ ಸಂಖ್ಯೆ. ಕಾರಣ ಎಂಟು ಸಂಖ್ಯೆಗೆ ಬುಧ ಶನಿಯೋಗ ಇರುತ್ತೆ. ಆದರೆ ಸೂರ್ಯನ ಈ ಒಂಭತ್ತು ಸಂಖ್ಯೆಗೆ ಶನಿಯ ವೇಧೆ ಇರದು. ಕಾರಣ ಶನಿಯ ದೋಷವನ್ನು ತೊಳೆಯುವ ಶುದ್ಧ ಸತ್ವಪ್ರಕಾಶದ ಸಂಖ್ಯೆ. ಈ ಒಂಭತ್ತು ಇದರಿಂದ ತಮ, ರಜ, ಸತ್ವದ ತ್ರಿಗುಣಗಳಿಗೆ ಈ ಸಂಖ್ಯೆ ಅತೀತ. ಇದರಿಂದ ಈ ಮತಕ್ಕೆ ಅಷ್ಟು ಪುಷ್ಟಿ ಸಿಗದು.

## ಜೀವನ ಕ್ರಮದಲ್ಲಿ ಪ್ರಭಾವ

ಈ ಮಂದಿಗೆ ಮನಸ್ಸು ಬಹಳ ಸೂಕ್ಷ್ಮ. ಚಂದ್ರ ರಾಹು ಯೋಗ ಇದಕ್ಕೆ ಕಾರಣ. ಗುರು ಚಂದ್ರಯೋಗ ದೈವಿಕ ಪ್ರಸಾದ ಯೋಗ. ಇದರಿಂದ ಈ ಸಂಖ್ಯೆಯ ಮಂದಿ ವರ ಪ್ರಸಾದಿಗಳು. ಮಕ್ಕಳಾಗಲು ದೇವತಾ ಸೇವೆಯನ್ನು ಮಾಡಿ ಅದರಿಂದ ಹುಟ್ಟಿದವರು. ಸರ್ಪಶಾಂತಿ ಇತ್ಯಾದಿ ಸಂತಾನ ಪ್ರದಾಯಕ ಶಾಂತಿ ಎಂದರು.

ಇವರಿಗೆ ಬಾಲ್ಯದಲ್ಲಿ ರಾಹುವಿನ ದೋಷವಿರುತ್ತೆ. ಈ ವಿಷದ ಯೋಗದಿಂದ ಗಂಡಗಳು ಆದೀತು. ಆದರೆ ಅದು ಪಾರಾಗಿ ಇವರಿಗೆ ಆಯುಷ್ಯ ಪ್ರಾಪ್ತಿ ಆಗುತ್ತೆ. ರಾಹು ಕೇತು ಪೂರ್ಣ ದೇಹದ ಯೋಗ. ರಾಹು ಅರ್ಧ ದೇಹದ ಗ್ರಹ. ಇನ್ನರ್ಧ ಜೊತೆಯಿರುವ ಗ್ರಹದ ದೇಹ. ಇದು ಮಿಶ್ರಣ ಯೋಗ. ಮಿಶ್ರ ಜಾತಿಯ ದಾಂಪತ್ಯದ ಸಂತಾನ ಫಲ ಎನ್ನಬಹುದು. ಒಳ ಜಾತಿಗಳ ಮಿಶ್ರಣ ಎನ್ನಲೂ ಬಹುದು.

ಇಪ್ಪತ್ತು ವರುಷಗಳ ನಂತರ ಇವರಿಗೆ ವಿಜ್ಞಾನದ ವಿದ್ಯೆಯ ಪ್ರಾಪ್ತಿ ಆಗುತ್ತದೆ. ನಿರಂತರ ದೈವತಾ ಭಕ್ತಿ ಇವರಿಗೆ ಸಹಜ ಗುಣ. ಇದರಿಂದ ವಿದ್ಯೆಗೆ ಉತ್ತೇಜನ ಸಿಗುತ್ತೆ. ಇವರು ಪ್ರಮುಖವಾಗಿ ಭಾಷಾ ಜೀವಿಗಳು. ಆದರ್ಶ ಉದ್ದೇಶ ಉಳ್ಳವರು. ಅಂತರ್ಮುಖವಾದ ದೇವತಾ ಶ್ರದ್ಧೆ ಉಳ್ಳವರು.

ಬಹುಶಃ ಈ ಸಂಖ್ಯೆ ವಿಜ್ಞಾನಕ್ಕೆ (Science) ಬೆಂಬಲ ಕೊಟ್ಟೀತು. ಇಲ್ಲ, ಆದರೆ, ಕಲೆಯ ವಿಜ್ಞಾನ ವಿದ್ಯೆಯಲ್ಲಂತೂ ಪ್ರಗತಿಯನ್ನು ತೋರಿಸುತ್ತದೆ. ಇವರು ಉತ್ತಮ ವಿದ್ಯಾ ಜೀವಿಗಳು. ವಿದ್ಯೆಯ ಅಧ್ಯಯನ, ಪ್ರಚಾರ, ಉಪದೇಶ ಇತ್ಯಾದಿಗಳಿಂದ ಇವರಿಗೆ ಜೀವನ ಕ್ರಮ ಸೂಕ್ಷ್ಮ.

ಈ ಮಂದಿಗೆ ಇಪ್ಪತ್ತು ವರುಷಗಳ ನಂತರ ಸುಯೋಗ, ವಿದ್ಯಾ ಯೋಗವೂ ಪ್ರಗತಿ. ನಲ್ವತ್ತು ವರುಷಗಳ ನಂತರ ವಿಶೇಷ ಅಭಿವೃದ್ಧಿ. ೨೭, ೩೭, ೪೭, ೫೭, ೭೭ ವರುಷಗಳಲ್ಲಿ ಇವರ ಜೀವನದಲ್ಲಿ ತಿರುಗು ಮುರುಗುಗಳಾಗುತ್ತವೆ. ಆದರೂ ಪರಿಣಾಮ ಮಾತ್ರ ಪ್ರಗತಿಯತ್ತ ನಡೆಯುತ್ತದೆ. ಇವರಿಗೆ ಸ್ತ್ರೀ ಸಂತಾನದ ಮೇಲೆ ಮಮತೆ ಹೆಚ್ಚು. ಮಗಳ ಮಗನಲ್ಲಿ ಇವರಿಗೆ ಅತಿಯಾದ ಪ್ರೇಮ. ಅವನ ಶುಶ್ರೂಷೆ ಅಂತ್ಯ ಕಾಲದಲ್ಲಿ ಇವರಿಗೆ ಸುಖ ನೀಡುತ್ತದೆ. ಇವರಿಗೆ ಏಳನೆಯ ವರ್ಷದಲ್ಲಿ ಜಲಗಂಡ. ಅರವತ್ತೇಳನೆಯ ವರ್ಷದಲ್ಲಿ ಶಸ್ತ್ರಗಳಿಂದ ಅಪಮೃತ್ಯು. ತಪ್ಪಿದಲ್ಲಿ ಎಪ್ಪತ್ತೈದು ವರುಷದ ಪೂರ್ಣಾಯುಗಳು.

೨೮

# ಇಪ್ಪತ್ತೆಂಟು - ವಿದ್ಯಾಬೋಧಕ ಸಂಖ್ಯೆ

ಸಂಖ್ಯೆ ಇಪ್ಪತ್ತೆಂಟು (೨೮) ಇದರಲ್ಲಿ ಪೂರ್ವಾರ್ಧ ಶುದ್ಧೀಕರಣ ಸಂಖ್ಯೆ. (೨೦) ಇಪ್ಪತ್ತು. ಉತ್ತರಾರ್ಧದ ದೋಷ ಸಂಖ್ಯೆ ಎಂಟು (೮). ಈ ಎಂಟು (೮) ಸಂಖ್ಯೆಗೆ ಬುಧ ಶನಿಯೋಗವಿದೆ ಬುದ್ಧಿಗೆ ಬುಧ. ಇವನಿಗೆ ಮಂದಗತಿಯ ಮಂದ. ಶನಿಯ ವೇಧೆ. ಇದರಿಂದ ಬುದ್ಧಿಗೆ ಮಂಕು ಹಿಡಿಯುವ ಸ್ಥಿತಿ. ಈ ಬುದ್ಧಿಯ ಮಂಕುತನವನ್ನು ತೊಳೆದು ಸ್ಫೂರ್ತಿ ನೀಡಲು ಗುರುಪ್ರಸಾದ ಅಗತ್ಯ. ಈ ಗುರು ಚಂದ್ರಯೋಗವೇ ಈ ಗುರುಪ್ರಸಾದದ ಯೋಗ. ಈ ಕಾರಣ ಈ ಸಂಖ್ಯೆ ಬೋಧಕ ಸಂಖ್ಯೆ ಎಂದರು.

ಈ ಬುದ್ಧಿಯ ಮಂಕುತನಕ್ಕೆ ನಾನಾ ಕಾರಣಗಳು. ಮೊದಲನೆಯದು ಬಾಲ್ಯ. ಎರಡನೆಯದು ಮರೆವು. ಮೂರನೆಯದು ನಿದ್ರೆ. ನಾಲ್ಕನೆಯದು ಸಂದೇಹ. ಇದನ್ನು ನಿವಾರಿಸಲು ವಿದ್ಯೆ ಅಗತ್ಯ. ಈ ವಿದ್ಯೆ ಗುರುವಿನಿಂದ ಪ್ರಾಪ್ತಿ. ಇದಕ್ಕೆ ಗುರುಪ್ರಸಾದ ಅಗತ್ಯ. ಈ ಗುರು ಪ್ರಸಾದವೇ ಗುರು ಚಂದ್ರಯೋಗ. ಬಾಲ ಬುದ್ಧಿಗೆ ವಿಕಾಸ ಮೂಡಿಸುವುದು ಬಹಳ ಕಷ್ಟ. ಇದಕ್ಕೆ ಮನೋ ಶಾಸ್ತ್ರಜ್ಞರು ನಾನಾ ರೀತಿಯ ತಂತ್ರಗಳನ್ನು ಕಂಡು ಹಿಡಿದಿದ್ದಾರೆ. ಉದಾಹರಣೆಗೆ ದೃಶ್ಯ ಮಾರ್ಗ. ವಸ್ತುಗಳನ್ನು ಯಥಾ ಸ್ಥಿತಿ ಕಣ್ಣಿಗೆ ಕಾಣಿಸುವಂತೆ ಹಿಡಿದು ಅದರ ಸ್ವಭಾವ ಗುಣಶೀಲಗಳನ್ನು ತೋರಿಸುವುದು. ಇದರ ಅಭಾವದಲ್ಲಿ ವಸ್ತು, ಪ್ರಾಣಿ ಇತ್ಯಾದಿ ಚಿತ್ರಗಳನ್ನು ಬರೆದು ಇದರಿಂದ ವಸ್ತು ಸಾದೃಶ್ಯವನ್ನು ಸಾಧಿಸಿ ಬೋಧಿಸುವುದು. ಇದು ಚಿತ್ರಕಲೆಯು ಸಾಧನೆ. ಇದರಲ್ಲಿ ಛಾಯಾ ಚಿತ್ರವೂ ಒಂದು ಮಾರ್ಗ. ಈ ಕಾರ್ಯಕರ್ತರಿಗೆ ಕಲೆಯಲ್ಲಿ ಪ್ರೌಢಿಮೆ ಅಗತ್ಯ. ಈ ವಿದ್ಯೆಗೂ ಇಪ್ಪತ್ತೆಂಟು ಸಂಖ್ಯೆ ಕಾರಣ. ಇದರಲ್ಲಿ ಅಡಕವಾಗಿರುವ ಇತರ ವಿಧಾನಗಳ ತಂತ್ರಗಳಿಗೂ ಈ ಸಂಖ್ಯೆಯೇ ಸರಿ. ಇದು ವಿದ್ಯಾತಂತ್ರ ತತ್ವಜ್ಞಾನವನ್ನು ತೋರಿಸುತ್ತದೆ.

## ಸಂಖ್ಯೆ ಇಪ್ಪತ್ತೆಂಟು (೨೮) - ಉಪಾಸನೆ ಯೋಗ

ಗುರು ಜ್ಞಾನ ಗ್ರಹ. ಇದಕ್ಕೆ ಸಾಧಕ, ಗ್ರಂಥಗಳು. ಈ ಗ್ರಂಥಗಳಿಗೆ ಬುಧನೇ ಸರಿ. ಎಂಟು ಸಂಖ್ಯೆಯ ಬುಧ ಶನಿಯೋಗದಲ್ಲಿ ಈ ಗ್ರಂಥಗಳಿಗೆ ಲತ್ತೆ. ಇದರಿಂದ ವಿದ್ಯಾರ್ಥಿಗೆ ಪುಸ್ತಕ ಕೈಗೆ ಬಂದರೆ ನಿದ್ರೆ ಹತ್ತಿದಂತೆ ಆಗುತ್ತೆ. ಹಾಗಿಲ್ಲ, ಬೇಸರ ಬಂದು ಕೆಳಗಿಡುವಂತೆ ಆಗುತ್ತದೆ. ಅನೇಕ ಸಲ ಬುದ್ಧಿವಂತರಿಗೂ ಈ ರೀತಿಯ ಅನುಭವ ಆಗಿಂದಾಗ್ಗೆ ಆದೀತು. ಇದು ಕೇವಲ ಕರ್ಮದ ದೋಷ. ಹಾಗಿಲ್ಲ, ಗ್ರಂಥ ಅಧ್ಯಯನ ಕಾಲದಲ್ಲಿ ಬುಧನಿಗೆ ಶನಿಯ ವೇಧೆ ಇರುತ್ತದೆ. ಈ

ದೋಷದ ಪರಿಣಾಮ ಅಧ್ಯಯನಕ್ಕೆ ವಿಘ್ನಕಾಗಿಯೂದ ಬೇಸರ, ಇಲ್ಲ ನಿದ್ರೆ. ಈ ಕರ್ಮದೋಷ ಬುಧನ ಅರಿಷ್ಟದಿಂದ ಪ್ರಾಪ್ತಿ. ಇದರ ನಿವಾರಣೆಗೆ ಶಾಂತಿ ಅಗತ್ಯ. ಇದಕ್ಕಾಗಿ ಮಂತ್ರಶಾಸ್ತ್ರದ ಉದಯ. ಈ ಮಂತ್ರ ಜಪವೇ ತಪಸ್ಸು. ಈ ಮಂತ್ರದ ಶ್ರದ್ಧೆಯೇ ಉಪಾಸನೆ. ಈ ಮಂತ್ರ ಉಪಾಸನೆ ಯಿಂದ ಈ ದೋಷ ಪರಿಹಾರ. ಇದರಿಂದ ಗ್ರಂಥದ ಅಧ್ಯಯನ ಕಾಲದಲ್ಲಿ ಶ್ರದ್ಧೆ ಮೂಡಿ ಬುದ್ಧಿಗೆ ವಿಕಾಸ ಆಗುತ್ತದೆ. ಈ ಬುದ್ಧಿಗೆ ವಿಕಾಸ ಕೊಡುವ ಉಪಾಸನೆಯ ಶಾಸ್ತ್ರ ಗಳಿಗೆ ಈ ಇಪ್ಪತ್ತೆಂಟು (೨೮) ಕಾರಕ ಸಂಖ್ಯೆ.

ಎಂಟು (೮) ಸಂಖ್ಯೆಗೆ ಬುಧ ಶನಿಯೋಗ. ಗುರುವು ಅರ್ಥವನ್ನು ತೋರಿಸುವ ತತ್ವ. ಬುಧನು ಪದವನ್ನು ತೋರಿಸುವ ತತ್ವ. ಬುಧನಿಗೆ ದೋಷವಿದ್ದರೆ ಪದಗಳ ಅಭಾವ. ಪದ, ಉಚ್ಚಾರಣೆ ಇಲ್ಲದ ತಿಳಿವಳಿಕೆ ಕೊಡುವ ಮಾರ್ಗ. ಇದು ನಾನಾ ರೀತಿ. ಇದು ಮೂಕ ಭಾಷೆ. ಅಭಿನಯವೂ ಇದರಲ್ಲಿ ಒಂದು. "ನಯ" ಎಂದರೆ ತರುವುದು "ಅಭಿನಯ" ಎಂದರೆ ಎದುರಿಗೆ ತರುವುದು. ಪದಾರ್ಥ, ವ್ಯಕ್ತಿ ಕ್ರಿಯೆಗಳ ಸಾದೃಶ್ಯವನ್ನು ಎದುರಿಗೆ ತರುವುದು. ಈ ಶಾಸ್ತ್ರ. ಈ "ಅಭಿನಯ" ಶಾಸ್ತ್ರ ಒಂದು ಕಲೆ. ಚಿತ್ರ ವಿಚಿತ್ರವಾದ. ಆದರೆ ಸೂಕ್ಷ್ಮ ಅಂಗ. ಅಂಗಾಂಗ ವಿನ್ಯಾಸ, ಮುಖಭಂಗಿ, ಭಾವ ವಿನ್ಯಾಸಗಳಿಂದ ಮನೋಗತವಾಗುವಂತೆ ವಿಷಯ ತಿಳಿಸು[illegible]. ಈ ಕಲೆ ನೃತ್ಯ. ಈ ತರನಾದ ಕಲೆಗಳಿಗೆ ಈ ಇಪ್ಪತ್ತೆಂಟು ಸಂಖ್ಯೆ ಪೋಷಕ.

### ರಹಸ್ಯ ಭಾಷೆ

ಜ್ಞಾನ ಎಂದರೆ ವಿಷಯದ ಯಥಾರ್ಥವಾದ ಅರಿವು. ಈ ಅರಿವು ಎಲ್ಲರಿಗೂ ಇರದು. ಇವರನ್ನು ಬೆರಳುಗಳಲ್ಲಿ ಎಣಿಸಬಹುದು. ಇವರಿಗೆ ಅದನ್ನು ಸತ್ಪಾತ್ರದಲ್ಲಿ ಹಂಚುವ ಆಸೆ. ಅದೇ ಸಮಯದಲ್ಲಿ ಅದು ದುಷ್ಟ ಧ್ಯೇಯದವರಿಗೆ ಬಿದ್ದೀತು ಎಂಬ ಭಯ ಬೇರೆ. ಇದಕ್ಕಾಗಿ ಅವರು ಈ ಜ್ಞಾನವನ್ನು ತಿಳಿಯ ಹೇಳುವ ಬಗೆ ಒಂದು ನಮೂನೆ. ಈ ರೀತಿಯಿಂದ ಆ ಯೋಗ್ಯತೆ ಇರುವವರಿಗೆ ಮಾತ್ರ ತಿಳಿಯುತ್ತೆ. ಜ್ಞಾನದ ಪ್ರಚಾರಕ್ಕೆ ಭಾಷೆ ಅಗತ್ಯ. ಈ ಭಾಷ ಕಿವಿಯಾರ ಕೇಳುವ ಭಾಗ್ಯ ಎಲ್ಲರಿಗೂ ಅಸಾಧ್ಯ. ಇದಕ್ಕಾಗಿ ಅವರು ಇದನ್ನು ಬರೆದಿಡುತ್ತಿದ್ದರು. ಆ ಬರಹಗಳಲ್ಲಿ ಬಳಸುವ ಭಾಷೆ ಒಂದು ನಮೂನೆ. ಓದಿದರೆ ಯಾರಿಗೂ ಗೊತ್ತಾಗದು. ಇದನ್ನು "ಅಡಕ ಭಾಷೆ" ಎಂದರು. ಅರ್ಥ, ಪದಗಳ ಹಿಂದೆ ಅಡಗಿ ಕೂತಿರುತ್ತೆ. ಪದಗಳಲ್ಲಿಯೇ ಕಾಣದು. ಇದನ್ನು ರಹಸ್ಯ ಭಾಷೆ ಎಂದರು. ಈ ಭಾಷೆಗೆ ಬುಧ ಶನಿ ಸಂಯೋಗದ ಎಂಟು ಸಂಖ್ಯೆಕಾರಕ. ಇದನ್ನು ಬಿಡಿಸಿ ಹೇಳುವ ಹೊಣೆ ಇಪ್ಪತ್ತು (೨೦) ಸಂಖ್ಯೆಗೆ ಸೇರಿದ್ದು. ಈ ಕಾರಣ ಇಪ್ಪತ್ತೆಂಟು (೨೮) ಸಂಖ್ಯೆ ಎರಡರ ಸಮನ್ವಯ ಕ್ರಿಯೆಗೆ ಮೂಲ ಎಂದರು.

ಯುದ್ಧದ ಕಾಲದಲ್ಲಿ, ರಹಸ್ಯಗಳನ್ನು ರವಾನಿಸಲು ಈ ನಮೂನೆ ಭಾಷೆಯನ್ನು ಬಳಸುತ್ತಾರೆ. ಈ ಭಾಷೆಯ ಲಿಪಿ ತರಹೆವಾರಿ. ಸಂಖ್ಯೆಗಳಿಗೆ ಅಕ್ಷರಗಳನ್ನು ಹೊಂದಿಸಬಹುದು. ಹೀಗೆ ಎಷ್ಟೋ ನಮೂನೆಗಳು. ಇದನ್ನು ಸಂಕೇತ ಭಾಷೆ ಎಂದರು (Code Language). ಇದನ್ನು ಬಿಡಿಸಿ ಹೇಳುವ ಮಂದಿ ಈ ಸಂಖ್ಯೆಯವರು.

ಕೆಲಸ ಕಾಲಕ್ಕೆ ಹೊಂದಿಕೊಂಡಿರುತ್ತೆ. ಆಗ ಅದರ ಬಗ್ಗೆ ಯಾರಿಗೂ ಕುತೂಹಲ ಇರದು. ಈ ತತ್ವಗಳಿಗೆ ಹೊಂದಿಕೆ ಇಲ್ಲ. ಆಗ ಎಲ್ಲರೂ ಹುಬ್ಬು ಏರಿಸಿ ಚಿಂತೆ ಮಾಡುತ್ತಾರೆ. ಇಷ್ಟು ಹೊತ್ತಿನಲ್ಲಿ ಇಲ್ಲಿ! ಇದು ಸಂದೇಹಕ್ಕೆ ಒಂದು ಉದಾಹರಣೆ. ಮಾತಿಗೆ ಮಾತು ಹೊಂದಿಕೊಂಡು ನಿಖರವಾದ ಒಂದೇ ಅರ್ಥ ಕೊಡುವ ಶೈಲಿ ಬಹು ಉತ್ತಮ. ಆದರೆ ಹಲವಾರು ಸಂದರ್ಭಗಳಲ್ಲಿ ಮಾತು, ಮಾತು, ಇಲ್ಲ. ಪದಗಳ ಹೊಂದಿಕೆ ಒಂದು ನಮೂನೆ ಇರುತ್ತೆ. ಇದರಿಂದ ಒಂದಲ್ಲ, ಹತ್ತು ಅರ್ಥಗಳು ಹುಟ್ಟುತ್ತವೆ. ಇದೂ ಒಂದು ಸಂದೇಹದ ಲಕ್ಷಣ. ಪೂರ್ವದ ಋಷಿಗಳು ಬರೆದು ಬಿಟ್ಟ ಅನೇಕ ಗ್ರಂಥಗಳು ಈ ರೀತಿಯವು. ಅದು ಕೇವಲ ಅರಿವನ್ನು ಅಡಗಿಸಿಡುವ ಧ್ಯೇಯ ವಷ್ಟೇ ಸರಿ. ಆದರೆ, ಇದರಿಂದ ಸಂದೇಹ ಮೂಡಿ ಒಬ್ಬರಿಗೆ ಒಂದು ಅರ್ಥ, ಮತ್ತೊಬ್ಬರಿಗೆ ಇನ್ನೊಂದು ಅರ್ಥ ಆಗುತ್ತೆ. ಅವರ ಅರ್ಥ ಸರಿ ಎಂದು ಅವರು, ಇವರದು ಸರಿ ಎಂದು ಇವರು. ಪರಸ್ಪರ ಬುದ್ಧಿ, ಕೌಶಲ್ಯದ ವಾದ. ನಿರ್ಣಯಗಳಿಂದ ಅವರವರ ಅರ್ಥವನ್ನು ಪ್ರತಿಪಾದನೆ ಮಾಡಿಯಾರು. ಬಹುಶಃ ಈಕಾರಣದಿಂದ ನಾನಾ ರೀತಿ ಪಂಥಗಳು ಭಾರತ ಜನತೆಯಲ್ಲಿ ಮೂಡಿ ಬಂದಿವೆ. ಆದರೆ ಇವರೆಲ್ಲರಿಗೂ ಆಧಾರ ಒಂದೇ ಗ್ರಂಥ ಇದ್ದೀತು. ಈ ನಮೂನೆಗೆ ಸೇರಿದ ಗ್ರಂಥಗಳಲ್ಲಿ ಗೀತಾ, ಭಾಗವತ, ಬ್ರಹ್ಮಸೂತ್ರ ಮುಂತಾದವು. ಈ ಸಂದೇಹದ ಅರ್ಥ ಅರಿವಿನ ಗಣಿಗಳಾದ ಈ ಗ್ರಂಥಗಳು (೮) ಎಂಟು ಸಂಖ್ಯೆಗೆ ಸೇರಿದ್ದು. ಇದರ ಅರ್ಥ ಮಾಡಿ ಅರಿವು ಕೊಡುವುದು ಪೂರ್ವಾರ್ಧದ (೨೦) ಇಪ್ಪತ್ತು ಸಂಖ್ಯೆಗೆ ಸೇರಿದ್ದು. ಈ ಕೆಲಸ ಮಾಡುವ ಮಂದಿ ಈ (೨೮) ಇಪ್ಪತ್ತೆಂಟು ಸಂಖ್ಯೆಯವರು.

## ಮನೋವೃತ್ತಿ ಸೂಚಕ ಚಿಹ್ನೆಗಳು

ಮನಸ್ಸು ಪ್ರಧಾನವಿದ್ದು ಮನುಷ್ಯ ಎಂದರು. ಈ ಮನಸ್ಸು ಯಾವ ರೀತಿ, ಗುಣ ಧರ್ಮಗಳ ರೂಪ ರೇಖೆಗಳು ಹೇಗೆ? ಈ ವಿಷಯಗಳನ್ನು ತಿಳಿಯುವ ಸಾಧನೆಗಳು ಹಲವಾರು. ಅಂಗಾಂಗಗಳಿಂದ ಪತ್ತೆ ಆಗಬಹುದು. ಬೆರಳುಗಳ ಸ್ವರೂಪ ಅದರ ಮೇಲಿರುವ ಚಿಹ್ನೆಗಳಿಂದ ತಿಳಿದೀತು. ಅಂಗೈ ಸ್ವರೂಪ ಇತ್ಯಾದಿ ಅನೇಕಾನೇಕ ಸಾಧನೆಗಳಿವೆ. ಈ ಸಾಧನೆಗಳ ತಿಳಿವಳಿಕೆ ಕೊಟ್ಟು ಅದನ್ನೇ ವೃತ್ತಿಯಾಗಿ ಪ್ರಗತಿ ಸಾಧಿಸುವ ಮಂದಿ ಈ ಇಪ್ಪತ್ತೆಂಟು (೨೮) ಸಂಖ್ಯೆ ಯವರು ಎಂದರೆ ತಪ್ಪಲ್ಲ. ಆ ವೃತ್ತಿಯಿಂದ ನಾಲ್ಕಾರು ಜನಗಳಿಗೆ ಸಹಾಯ ಮಾಡುವುದ ರಿಂದ ಧನ ಕೀರ್ತಿ ಇವರಿಗೆ ಸಹಜ.

ಇಪ್ಪತ್ತೆಂಟು (೨೮) ಸಂಖ್ಯೆ. ಇದರ ಉತ್ತರಾರ್ಧ ಎಂಟು (೮) ಇದಕ್ಕೆ ಬುಧ ಶನಿಯೋಗ. ಶನಿ ಸೇವಾ ವೃತ್ತಿಯ ಗ್ರಹ. ತಮ್ಮನ್ನೇ ನಂಬಿ ತಮ್ಮ ಸೇವೆಯಲ್ಲಿಯೇ ಜೀವನ ನಡೆಸುವ ಮಂದಿ. ಈ ಸೇವಕರಿಗೆ ಸಹೃದಯರಾಗಿ ಕಷ್ಟಕಾಲದಲ್ಲಿ ಅವರಿಗೆ ಸಹಾಯ ಮಾಡುವ ಹೊಣೆ ಪೂರ್ವಾರ್ಧದ ಇಪ್ಪತ್ತು (೨೦) ಸಂಖ್ಯೆಗೆ ಸೇರಿದ್ದು. ಈ ಕಾರಣ ಈ ಇಪ್ಪತ್ತೆಂಟು (೨೮) ಸಂಖ್ಯೆಯವರು ಸೇವಕರ ಕಷ್ಟಗಳನ್ನು ಪರಿಹಾರ ಮಾಡುವ ಜನ. ಅಷ್ಟೇ ಅಲ್ಲ, ಅವರ ಹಿತಾಸಕ್ತಿಗಳನ್ನು ಕಾಯುವ ಮಂದಿ. ಕೆಲವರಿಗೆ ಅದೇ ಒಂದು ಹವ್ಯಾಸ, ಹಾಗಿಲ್ಲ, ವೃತ್ತಿ

ಎನ್ನಬಹುದು. (Labour Welfare) ದೀನ ದಲಿತ. ತಬ್ಬಲಿ ಜನಗಳ ಹಿತರಕ್ಷಣೆ ಮಾಡುವ ಅನಾಥಾಲಯಗಳಿಗೆ ಇವರದು ಉದಾರ ಸಹಾಯ, ಗೌರವ, ಹುದ್ದೆಗಳನ್ನು ತಾವೇ ಇಷ್ಟದಿಂದ ಮಾಡುವ ಜನ ಇವರು.

ಈ ಬುಧ ಶನಿಯೋಗ ಅಪವಾದ ಯೋಗ ಎಂದರು. ಇಂತಹ ಅಪವಾದದಿಂದ ಜೀವನವನ್ನು ಹಾಳು ಮಾಡಿಕೊಂಡ ಅಬಲೆಯರ ಜೀವನವನ್ನು ಪುನಃ ರೂಪಿಸಿ ಉದ್ಧಾರ ಮಾಡುವ ಸಂಘಗಳಲ್ಲಿ ಇವರಿಗೆ ಆಸಕ್ತಿ ಹೆಚ್ಚು. ಅದೇರೀತಿ ಮನೆ ಮಠಗಳಿಲ್ಲದ ಜನಗಳಿಗೆ ವಸತಿ ಸೌಲಭ್ಯ ಒದಗಿಸುವ ವಸತಿ ಯೋಜನಾ ಶಾಖೆಯ ಹುದ್ದೆಯಲ್ಲಿ ಮುಂಬರುವ ಮಂದಿಯೂ ಇವರೇ ಸರಿ. (Housing Scheme and Rehabilitation). ಈ ಮನೋವೃತ್ತಿ ಈ ಮಂದಿಗೆ ದೊಡ್ಡಗುಣ. ಆದರ್ಶವಾದದಲ್ಲಿ ಇವರು ನಿಸ್ಸೀಮರು. ಪಾಳಾದ ದೇವಾಲಯಗಳ ಜೀರ್ಣೋದ್ಧಾರ ಮಾಡಿ ಅದರಿಂದ ಪ್ರಾಪ್ತ ಹರಿ ಕೃಪೆಯಿಂದ ಇವರ ಜೀವನ ಸುಖಮಯ. ಇವರು ಸಮಾಜ ಸುಧಾರಕರು. ಕಷ್ಟದಲ್ಲಿ ತ್ವರಿತ ಸಹಾಯ ಮಾಡುವ ಔದಾರ್ಯ ಜೀವಿಗಳು ಇವರು. ಭಗವತ್ ಭಕ್ತರು. ಭಗವತ್ ಶಕ್ತಿ ಪ್ರಚಾರಕರು. ಹರಿದಾಸರು ಮತ್ತು ಉತ್ತಮ ಜೀವಿಗಳು ಎಂದರೆ ತಪ್ಪಲ್ಲ.

## ಜೀವಿತದಲ್ಲಿ ಪ್ರಭಾವ

ಪ್ರತಿ ಮಾಹೆ ಇಪ್ಪತ್ತೆಂಟನೆಯ ತಾರೀಖು (೨೮) ನಲ್ಲಿ ಜನನ ಆದವರಿಗೆ ಈ ಸಂಖ್ಯಾ ಫಲ ಸರಿಹೊಂದುತ್ತದೆ. ಅಲ್ಲದೆ, ಇಪ್ಪತ್ತೆಂಟನೆಯ ಇಸ್ವಿಯಲ್ಲಿ ಜನಿಸಿದವರಿಗೂ ಸ್ಥೂಲವಾಗಿ (General) ಈ ಫಲ ನಡೆದೀತು. ಎರಡೂ ಸೇರಿದರೆ ಇದರ ಫಲ ಇನ್ನೂ ಸ್ಪಷ್ಟ.

ಈ ಸಂಖ್ಯೆಯ ಉತ್ತರಾರ್ಧ (೮) ಎಂಟು ಸಂಖ್ಯೆಯು. ಬುಧನ ಅರಿಷ್ಟದಿಂದ ಈ ಮಂದಿಗೆ ಬಾಲ್ಯದಲ್ಲಿ ಕಷ್ಟಗಳು ಸಹಜ. ಬಂಧು ಬಳಗದವರ ಸಹಾಯ ಬೇರೆ ಇರದು. ಇವರು ಜನಿಸಿದ ಮನೆಗಳಲ್ಲಿ ಬಂಧುಗಳು ಬಂದು ಅವರಿಗೆ ಕ್ಷೇಮ ಆದೀತು. ಆದರೆ ಅದಕ್ಕೆ. ಪ್ರತಿಫಲ ಮಾತ್ರ ಇರದು. ಎರಡನೆಯದಾಗಿ ಬುಧನು ಮಾತುಲ. ಈ ಸೋದರ ಮಾವನು ಇವರ ಮನೆಯಲ್ಲಿಯೇ ಆಶ್ರಯ ಪಡೆದು ಅಭಿವೃದ್ಧಿ ಆಗುತ್ತಾನೆ. ಆದರೆ ಅವರಿಂದ ಇವರ ಮನೆಗೇನೂ ಉಪಯೋಗವೇನೂ ಆಗದು. ಇವರ ಬಾಲ್ಯದಲ್ಲಿ ಈ ಸಂಖ್ಯೆಯ ಫಲ ಹುಟ್ಟಿದ ಮನೆಗೆ ಯೋಗಿಸುವುದು.

### ಹರಿಸೇವೆಯಿಂದ ಸುಯೋಗ

ವಿಶೇಷ ಪ್ರೀತಿ ಮಮತೆಗಳಿಗೆ ಪಾತ್ರವಾದ ಬಾಲ್ಯ ಇರದು. ಹತ್ತು ಮಂದಿಯಲ್ಲಿ ಇವರೂ ಒಬ್ಬರೂ ಎನ್ನುವಂತೆ ಇವರ ಜೀವನ ನಡೆದೀತು. ಆದರೆ, ಪೂರ್ವಾರ್ಧ ಸಂಖ್ಯೆ ಇಪ್ಪತ್ತರ (೨೦) ಗುರು ಚಂದ್ರ ಯೋಗದಿಂದ ಆ ಬಾಲ್ಯದಲ್ಲಿ ಧನಿಕರ ಸ್ನೇಹ, ವಿದ್ಯಾ ಗುರುಗಳ ಆಶ್ರಯ ಗಳಿಂದ ಈ ಕಷ್ಟ ಅಷ್ಟಾಗಿ ಕಾಣದು. ಬಾಲ್ಯದಲ್ಲಿ ಇವರಿಗೆ ಮರೆವು, ನಿದ್ರೆ ಎರಡೂ ಅತಿ. ಇದರಿಂದ ಇವರು ಅಪಹಾಸ್ಯಕ್ಕೆ ಗುರಿ ಆದಾರು. ವಿದ್ಯೆಯಲ್ಲಿಯೂ ಮಂದಗತಿ. ಕೆಲವರಿಗೆ

ವಿದ್ಯೆಯೂ ಅಷ್ಟಾಗಿ ಇರದು. ಆದರೆ ಬುಧನಿಗೆ ಅಧಿ ದೇವತೆಯಾದ ಶ್ರೀ ಹರಿಯಸೇವೆ ಇವರಿಗೆ ಉತ್ತಮ ವಿದ್ಯೆಕೊಟ್ಟೀತು. ಆ ವಿದ್ಯೆ ಹತ್ತಿದಾಗ ಇವರದು ಆಶ್ಚರ್ಯಕರ ಪ್ರಗತಿ. ಭಗವತ್ ಭಕ್ತಿ ಸೇವೆಗಳಿಲ್ಲ. ಆಗ ಇವರಿಗೆ ಉನ್ನತ ವಿದ್ಯೆ ಹತ್ತಲು ದಾರಿ ಆಗದು. ಉತ್ತೇಜನ ಕೂಡ ಸಿಗದು.

ಮಂದ ಬುದ್ಧಿಯವರಿಗೆ ಸುಲಭವಾಗಿ ತಿಳಿಯುವಂತೆ ಬೋಧನೆ ಮಾಡುವ ಕೆಲಸ ಇವರಿಗೆ ಸೂಕ್ತ. ಇದರಿಂದ ಇವರಿಗೆ ಜೀವನ ಉತ್ತಮ. ಈ ಮಂದಿ ನಾಲ್ಕು ಜನಗಳಿಗೆ ಆಗುವ ಜನ. ಈ ಮನೋಭಾವ ಇವರಿಗೆ ಎಂದು ಬರುತ್ತದೆ. ಅಂದಿನಿಂದ ಇವರಿಗೆ ಸುಯೋಗ ಕಾಲ ಎಂದರೆ ತಪ್ಪಲ್ಲ. ಇವರು ಸ್ವಾರ್ಥ ಸಾಧನೆಗೆ ಏನೇ ಪ್ರಯತ್ನ ಮಾಡಿದರೂ ಅದು ಸಾಧನೆ ಆಗದು. ಇವರ ಪ್ರಗತಿ ಅಭಿವೃದ್ಧಿ, ಕೀರ್ತಿ ಎಲ್ಲವೂ ಇವರಿಗೆ ದೈವ ನಿಯಾಮಕ. ಅದಕ್ಕೆ ಇತರರ ಹಿತಾಸಕ್ತಿಗಾಗಿ ದುಡಿದು ಒಂದೇ ಷರತ್ತು.

ಮುಖ್ಯವಾಗಿ ಇದು ವಿದ್ಯಾ ಪ್ರಚಾರಕ ಸಂಖ್ಯೆ. ಈ ವಿದ್ಯೆ ಯಾವುದಾದರೂ ಆದೀತು. ಶಿಶುಸಾಹಿತ್ಯ, ಉದ್ಗ್ರಂಥಗಳ ಸರಳಾನುವಾದ ರಚನೆ, ವೇದಾಂತ ಗ್ರಂಥಗಳ ಪ್ರಚಾರ, ಇತ್ಯಾದಿ. ಹಾಗಿಲ್ಲ, ಜಾತೀಯ ಸತ್ಕರ್ಮ, ಸದಾಚಾರದ ಅಗತ್ಯಗಳ ಬೋಧೆ ಆದೀತು. ದೀನ ದಲಿತರ ಉದ್ಧಾರಕ್ಕಾಗಿ ದುಡಿಯುವುದು, ಅರಿವಿಲ್ಲದ ವಯಸ್ಕರಿಗೆ ವಿದ್ಯಾ ಪ್ರಚಾರ ಮಾಡುವ ಕೆಲಸ. ಈ ರೀತಿ, ನೀತಿ ನಿಯಮ ಆಚಾರಗಳ ಪ್ರಚಾರಕ್ಕೂ ಈ ಸಂಖ್ಯೆಯು ಹೆಸರು ವಾಸಿ.

ದೇವ ಕ್ಷೇತ್ರಗಳಲ್ಲಿ ವಸತಿ ಸೌಲಭ್ಯಗಳನ್ನು ಒದಗಿಸುವುದು. ದೇವಾಲಯ ಜೀರ್ಣೋದ್ಧಾರ ಮಾಡಲು ಶ್ರಮವಹಿಸಿ ಹಣ ಸಂಗ್ರಹಿಸಿ ಕೆಲಸ ಸಾಧಿಸುತ್ತಾರೆ. ಇವರು ಧನಿಕರೇ? ಬಹುತೇಕ ಅಲ್ಲ. ಆದರೆ ನಾಲ್ಕು ಜನಗಳಿಗಾಗಿ ನಾಲ್ಕು ಜನಗಳ ಸಹಾಯದಿಂದ ಸುಖ, ಶಾಂತಿಗಳನ್ನು ಒದಗಿಸಲು ಇವರು ಒಂದು ಮಾಧ್ಯಮ ಎಂದರೆ ಸರಿ.

ಈ ಮಂದಿಗೆ ಜನ್ಮಾದಿ ಪ್ರಾಯ ಇಪ್ಪತ್ತೆಂಟು (೨೮) ವರ್ಷದ ನಂತರ ಸುಯೋಗ ನಡೆಯುತ್ತದೆ. ಹದಿನೆಂಟು (೧೮) ವರ್ಷದವರಿಗೆ ಕಷ್ಟ. ನಲ್ವತ್ತು ವರುಷ (೪೦) ಗಳಿಂದ ಐವತ್ತೆಂಟು ವರ್ಷದವರೆಗೆ ಇವರಿಗೆ ಸುಯೋಗಕಾಲ. ಇವರಿಗೆ (೮೫) ವರ್ಷ ಕಾಲ ಪರಮಾಯು. ಇವರು ಜೀವಂತ ಇದ್ದ ಕಾಲದಲ್ಲಿ ಸಮಾಜಸೇವಾ ನಿರತರು. ವಿದ್ಯಾ ಬೋಧಕರು. ಸಾಹಿತ್ಯ ಸುಧಾರಕರು. ಮರಣೋತ್ತರದಲ್ಲಿ ನಿರಂತರ ಕೀರ್ತಿ ಭಾಗಿಗಳು.

# ಇಪ್ಪತ್ತೊಂಭತ್ತು - ಆಡಳಿತ ಪೋಷಕ ಸಂಖ್ಯೆ

ಸಂಖ್ಯೆ ಇಪ್ಪತ್ತೊಂಭತ್ತು (೨೯). ಇದರಲ್ಲಿ ಪೂರ್ವಾರ್ಧ ಇಪ್ಪತ್ತು (೨೦). ಇದಕ್ಕೆ ಗುರು ಚಂದ್ರಯೋಗ. ಶುಚಿ ಕರ್ಮ ಇದರ ಗುಣ. ಔದಾರ್ಯ ದೃಷ್ಟಿ ಇದರ ವಿಶೇಷ. ಫಲ ದೈವಿಕ ಪ್ರಸಾದ. ಪರಿಣಾಮ ಸಮೃದ್ಧಿ. ಇದರಿಂದ ಜನತೆಗೆ ತೃಪ್ತಿ. ಜೀವನವೂ ಸಫಲ. ಉತ್ತರಾರ್ಧದ ಸಂಖ್ಯೆ (೯) ಒಂಭತ್ತು ಸೂರ್ಯನ ಸಂಖ್ಯೆ. ಇವನು ತೇಜಸ್ಸಿನ ತತ್ತ್ವ. ಸಕಲದೋಷಗಳನ್ನು ಸುಟ್ಟು ಭಸ್ಮ ಮಾಡುವ ತೇಜಸ್ಸು. ಸಕಲರ ಕಷ್ಟಗಳನ್ನು ಪರಿಹಾರ ಮಾಡುವ ಆಡಳಿತದ ಸತ್ತ್ವ. ಇದರಿಂದ ಸೂರ್ಯ ರಾಜಗ್ರಹ. ಗ್ರಹರಾಜ ಎಂಬ ಬಿರುದು ಬೇರೆ.

ಸೂರ್ಯ ರಾಜ. ಆಡಳಿತ ಮಾಡುವ ವ್ಯಕ್ತಿ. ಹಾಗಿಲ್ಲ. ಆಡಳಿತದ ಸಂಸ್ಥೆ. ಒಕ್ಕೂಟ ಇದೇ ಸರಕಾರ. ದೋಷವಿಲ್ಲದ ಸಂಖ್ಯೆಗೆ ದೋಷವೆಲ್ಲಿ? ಸರ್ವಶಕ್ತನಾದ ಸೂರ್ಯನಿಗೆ ಈ ಶಕ್ತಿ ಎಲ್ಲಿಂದ ಬರುತ್ತೆ. ದೇವತಾ ಪ್ರಸಾದದಿಂದ ಬರುತ್ತೆ. ಈ ದೇವತಾ ಪ್ರಸಾದ ಇಪ್ಪತ್ತು ಸಂಖ್ಯೆಯ ಗುರು ಚಂದ್ರರಿಂದ ಪ್ರಾಪ್ತಿ. ಸತ್ಕರ್ಮ, ಸದಾಚಾರ ಇದಕ್ಕೆ ಸಾಧನೆಗಳು. ಸೂರ್ಯನಿಗೆ ಆಡಳಿತದ ಜವಾಬ್ದಾರಿ. ಇನ್ನು ಈ ಆಚಾರ ವಿಚಾರಗಳಿಗೆ ಸಮಯ ತಾನೇ ಎಲ್ಲಿ? ಇದಕ್ಕಾಗಿ ಈ ಹೊಣೆಗಾರಿಕೆಯನ್ನು ಈ ಇಪ್ಪತ್ತೊಂಭತ್ತು ಸಂಖ್ಯೆಯ ಮುಂದಿಗೆ ಈ ರಾಜ ತೋರಿಸುತ್ತಾನೆ. ಈ ಕಾರಣ ಈ ಸಂಖ್ಯೆಯ ಮಂದಿ ರಾಜನಿಗೆ ದೈವಶಕ್ತಿಯನ್ನು ಸಂಪಾದಿಸಿ ಕೊಡುವ ಜನ ಎಂದರು. ಇವರು ರಾಜ ಪುರೋಹಿತರು. ಇವರ ಆಶೀರ್ವಾದ ರಾಜನಿಗೆ ಅಗತ್ಯ. ಇದರಿಂದ ಅವನಿಗೆ ದೈವಿಕ ಬೆಂಬಲ. ಇದು ಆಡಳಿತದ ಪೋಷಕ ತತ್ತ್ವ.

ಈ ಪೂರ್ವಾರ್ಧದ ಗುರು ಚಂದ್ರಯೋಗ ದೇವತಾ ಪ್ರಸಾದ ಲಕ್ಷಣ. ಅಷ್ಟೇ ಅಲ್ಲದೆ ಇದು ಜ್ಞಾನ ಶಕ್ತಿಯ ಸಂಖ್ಯೆಯೂ ಹೌದು. ಸರಸ್ವತಿ ಇದಕ್ಕೆ ಅಭಿಮಾನಿ ದೇವತೆ. ಈ ಜ್ಞಾನಶಕ್ತಿ ಕೂಡ ಆಡಳಿತದ ವ್ಯಕ್ತಿಗೆ ಅಗತ್ಯ. ಸೂಕ್ತ ಸಮಯದಲ್ಲಿ ಸಲಹೆ ನೀಡುವುದು ಈ ಸಂಖ್ಯೆಯ ಮಂದಿಯ ಹೊಣೆ. ಸೂಕ್ತ ಸಲಹೆಯಿಂದ ರಾಜನಿಗೆ ಧಾರ್ಮಿಕವಾಗಿ ಆಳಲು ಸಾಧ್ಯ. ಈ ಕಾರಣ ಈ ಸಂಖ್ಯೆ ಆಡಳಿತದ ಹಾದಿ ನಿರ್ದೇಶಕ ಸಂಖ್ಯೆ ಎಂದರೆ ತಪ್ಪಲ್ಲ. ಈ ಸಂಖ್ಯೆಯ ಮಂದಿ ಈ ರೀತಿಯ ಆಡಳಿತದ ನ್ಯಾಯಸಮ್ಮತ ನಿರ್ದೇಶಕರು. ಹಾಗಿಲ್ಲ. ಸಲಹೆಗಾರರು. (Secretaries or Advisers to royalty)

ಜ್ಞಾನ ಪ್ರಚಾರಕ್ಕೆ ಮೂಲ ವಿದ್ಯಾ ಸಂಸ್ಥೆಗಳು. ಈವಿದ್ಯೆಗೆ ಸಂಬಂಧದ ಆಡಳಿತದ ಅಧಿಕಾರಿಗೂ ಈ ಇಪ್ಪತ್ತೊಂಭತ್ತು ಪ್ರಧಾನ ಸಂಖ್ಯೆ. ಈ ವಿದ್ಯಾ ಪ್ರಚಾರಕ್ಕೆ ಮೂಲರಾದ

ಕನಿಷ್ಠ ಅಧಿಕಾರಿ ಎಂದರೆ ಉಪಾಧ್ಯಾಯರು. ಈ ಉಪಾಧ್ಯಾಯರಿಗೂ ಈ (೨೯) ಸಂಖ್ಯೆಯೇ ಅಧಿಪತಿ. ವಿದ್ಯೆ ಯಾವುದೇ ಇದ್ದರೂ ಆ ವಿದ್ಯೆಯ ಗುರು ಈ ಸಂಖ್ಯೆಯ ವ್ಯಕ್ತಿ.

## ಅಹಂಕಾರ ದೋಷ

ಸೂರ್ಯ ಸರ್ವಶಕ್ತ. ಸಕಲ ದೋಷಗಳನ್ನು ಪರಿಹಾರ ಮಾಡುವ ಶಕ್ತಿ. ಬೇರೆ ಸರ್ವರ ಕ್ಷೇಮಕ್ಕೆ ಇವನೇ ಕಾರಣ. ಇನ್ನು ಇವನು ಉತ್ಕೃಷ್ಟ ಎಂದರೆ ತಪ್ಪೇನು? ಅದೇನೂ ಇಲ್ಲ. ಆದರೆ ತಾನು ಇಷ್ಟು ಉತ್ಕೃಷ್ಟ ಎಂಬ ಮನೋಭಾವ ಹಾನಿಕರ. ಇದು ಅಹಂಕಾರಕ್ಕೆ ಬುನಾದಿ. ಈ ಅಹಂಕಾರ.ತಲೆ ತಿರುಗಿಸುವ ಶಕ್ತಿ. ಇದು ಆ ವ್ಯಕ್ತಿಯ ಪತನಕ್ಕೆ ಮೂಲ. ಈ ಅಹಂಕಾರ ರಾಜನಿಗೆ, ಆಡಳಿತ ವ್ಯಕ್ತಿಗೆ ಕೇಡನ್ನೇ ತಂದೀತು. ಇವರಿಗೆ ಸಹಾಯಕ ಜನಗಳಲ್ಲಿ ಕೀಳು ಭಾವ ಬೆಳೆದು ಅವರನ್ನು ಕಡೆಗಾಣಿಸುತ್ತಾರೆ. ಇದರಿಂದ ಇವರ ಬೆಂಬಲ ಹೋಗಿ ಅಡಿಪಾಯ ಅಪಾಯಕ್ಕೆ ಸಿಕ್ಕಿ ಆಡಳಿತ ಉರುಳೀತು. ಆಗ ಆ ವ್ಯಕ್ತಿಗೆ ಅಜ್ಞಾನದ ಅರಿವು ಆಗುತ್ತದೆ. "ಕಳ್ಳ ಹೊಕ್ಕ ಮನೆಗೆ ಎಣ್ಣೆ ದಂಡ" ಎಂದಂತೆ ಆಗುತ್ತದೆ. ಈ ಕಾರಣ ಈ ಉತ್ಕೃಷ್ಟ ಸ್ಥಾನ ದೈವದತ್ತ ಎಂಬ ಅರಿವು ಅವನಿಗೆ ಅಗತ್ಯ. ದೇವತಾ ಪ್ರಸಾದವಿಲ್ಲ. ಜನಗಳ ಆದರ ಅಭಿಮಾನಗಳೂ ಶೂನ್ಯ. ಕಾರಣ "ಜನವೇ ಜನಾರ್ಧನ" ಎಂದರು. ಈ ಅರಿವು ರಾಜನಿಗೆ ಇರಬೇಕು. ಈ ಅಹಂಕಾರ ಆವೇಶ. ಇದು ಮೈಗೂಡಿದಾಗ ಈ ಸಂಖ್ಯೆ (೨೯) ಮಂದಿ ಆ ಆವೇಶ ಬಿಡಿಸಿ ರಾಜನನ್ನು ಕೇಡಿನಿಂದ ಪಾರು ಮಾಡುವ ಜನ ಎಂದರೆ ತಪ್ಪಲ್ಲ.

### ಕೇಡಿನಿಂದ ಕಾಪಾಡುವ ಹೊಣೆ

ಆಡಳಿತವನ್ನು ಕೇಡಿನಿಂದ ಕಾಪಾಡುವ ಹೊಣೆಗೆ ಈ ಸಂಖ್ಯೆ ಪ್ರಧಾನ. ಈ ಸಂಖ್ಯೆಯ ಮಂದಿಯೂ ಅಷ್ಟೆ. ಈ ಹೊಣೆ ಹೊತ್ತ ವ್ಯಕ್ತಿಯೇ "ಮಹಾಮಂತ್ರಿ". ಈ ಸಂಖ್ಯೆಯ ಪರಮಾವಧಿಯ ವ್ಯಕ್ತಿ. ಇವನಿಗೆ ಗುರು ಚಂದ್ರ ಯೋಗವೇ ಮೂಲ ಬಲ. ಸದಾಚಾರ, ವಿವೇಕ, ಸಕಲ ಗುಣದೋಷಗಳ ಅರಿವು, ರಾಜನ ಊನಗಳ ಜ್ಞಾನ ಈ ತತ್ವಗಳ ಸಮನ್ವಯ ಮಾಡಿ ಸರಿದಾರಿ ತೋರಿ ಆಡಳಿತವನ್ನು ಕಾಪಾಡುವ ವ್ಯಕ್ತಿ ಈ ಕಾರಣ ಗುರುವಿಗೆ "ದೇವಮಂತ್ರಿ" ಎಂದೂ ಹೆಸರು. ಈ ವ್ಯಕ್ತಿಗೆ ಗುರು ಚಂದ್ರ ಯೋಗ ಬಲ ಹೆಚ್ಚು. ಹಾಗಿಲ್ಲ ಸೂರ್ಯನ ಬಲ ಹೆಚ್ಚಿದೆ. ಆಗ ಇವನಿಗೂ ಅಹಂಕಾರದ ಆವೇಶ ತಪ್ಪದು. ಇದರಿಂದ ಆಡಳಿತದ ಆಸೆ ಹುಟ್ಟಿ ರಾಜನನ್ನು ಉರುಳಿಸಿ ತಾನೇ ರಾಜನಾದಾನು. ಈ ರೀತಿಯ ನಡತೆ ಈ ಸಂಖ್ಯೆಯ ಮಂದಿಗೆ ದೋಷಪ್ರದ. ಇದರಿಂದ ರಾಜನಿಗೆ ಕೇಡು. ರಾಜನ ಸ್ಥಾನಕ್ಕೆ ಕೇಡು. ಈ ಕಾರಣ ಗುರು ಚಂದ್ರ ಬಲಹೆಚ್ಚು ಇರುವುದು ಈ ವ್ಯಕ್ತಿಗೆ ಮಾತ್ರ ಇದು ಸಾಧ್ಯ. ಉದಾಹರಣೆಗೆ "ಚಾಣಕ್ಯ" ಇದ್ದಂತೆ. ಪೂರ್ವಕಾಲದಲ್ಲಿ ಗುರು ಪ್ರಧಾನನಾದ ಬ್ರಾಹ್ಮಣರೇ ಮಂತ್ರಿಗಳಿದ್ದರು. ಈಗ ಜಾತ್ಯತೀತ ಸರಕಾರದಲ್ಲಿ ಯಾರಿಗೆ ಈ ಧರ್ಮ ಪ್ರಧಾನ. ಈ ವ್ಯಕ್ತಿಯೇ ಈ ಸಂಖ್ಯೆಯ ಸ್ಥಾನಮಾನಗಳಿಗೆ ಹೊಣೆ. ಈ ಕಾರಣ ಈ ಸಂಖ್ಯೆ (೨೯)ಯ ಮಂದಿ ನಿರ್ದೇಶಕರು, ನ್ಯಾಯ ವಿವೇಕವಿರುವ ನ್ಯಾಯಾಧೀಶರು. ಜ್ಞಾನಕ್ಕೆ ಮೂಲ ಸಾಧನೆ ವಿದ್ಯೆಯ

ಪ್ರಚಾರ ಮಾಡುವ ಗುರುಗಳು. ಆಶಾರಹಿತ, ಸ್ವಾರ್ಥತ್ಯಾಗಿಗಳೂ ಆಗಿ ಇತರರ ಪ್ರಗತಿಗೆ ಮೂಲಶಕ್ತಿ ಇವರು. ಇನ್ನೊಬ್ಬರ ಕೀರ್ತಿಯನ್ನು ನೋಡಿ ಹಿರಿ ಹಿಗ್ಗುವ ಸಾರ್ಥಕ ಜೀವನ ಈ ಸಂಖ್ಯೆಯ ಮಂದಿಗೆ ಒಂದು ವಿಶೇಷ ಗುಣ.

ಹತ್ತೊಂಭತ್ತು ಮತ್ತು ಇಪ್ಪತ್ತೊಂಭತ್ತು ಈ ಎರಡು ಸಂಖ್ಯೆಗಳಲ್ಲಿ ಹೆಚ್ಚಿನ ಸಾಮ್ಯವಿದೆ. ಆದರೆ ಇಪ್ಪತ್ತು ಪೂರ್ವಾರ್ಧ ಸಂಖ್ಯೆಯ ಕಾರಣ ಈ ಎರಡು ಸಂಖ್ಯೆಗಳೂ ಫಲದಲ್ಲಿ ವ್ಯತ್ಯಾಸ ಆಗುತ್ತದೆ. ಹತ್ತೊಂಭತ್ತು ಸಂಖ್ಯೆ (೧೯) ತಾನೇ ಕೆಲಸದಲ್ಲಿ ಸಕ್ರಿಯ ಭಾಗವಹಿಸುವ ಸಂಖ್ಯೆ. ಇದರ ಪ್ರಗತಿಯ ಹೆಜ್ಜೆ ಇಪ್ಪತ್ತೊಂಭಂತ್ತು (೨೯). ಈ ಸಂಖ್ಯೆ ಸಕ್ರಿಯ ಪಾತ್ರ ವಹಿಸುವುದಿಲ್ಲ. ಆದರೆ ಕಾರ್ಯಕ್ರಮ ನಿರ್ದೇಶನ ಮಾತ್ರ ಇದರ ಹೊಣೆ. ಮೊದಲನೆಯದು ಪ್ರವೃತ್ತಿ. ಎರಡನೆಯದು ನಿವೃತ್ತಿ ಧರ್ಮ. ಇದು ಈ ಸಂಖ್ಯೆಗಳಲ್ಲಿರುವ ವ್ಯತ್ಯಾಸ.

## ಜೀವಿತದಲ್ಲಿ ಪ್ರಭಾವ

ಸಂಖ್ಯೆ (೨೯) ಇಪ್ಪತ್ತೊಂಭತ್ತು. ಈ ಸಂಖ್ಯೆಯ ಫಲ ಪ್ರತಿ ತಿಂಗಳಿನ ಇಪ್ಪತ್ತೊಂಭತ್ತನೆಯ ತಾರೀಖು ಜನನಗಳಿಗೆ ನಡೆಯುತ್ತೆ. ಅಲ್ಲದೆ ಐದನೆಯ ಗರ್ಭಜಾತ ಮಂದಿಗೂ ನಡೆದೀತು. ಆ ಸಂಖ್ಯೆಯ ಇಸ್ವಿ (೧೯೨೯) ಜನನಗಳಿಗೂ ನಡೆಯುತ್ತೆ.

ಈ ಸಂಖ್ಯೆಯ ಮಂದಿ ಗೌರವ ಪ್ರಧಾನವಿರುವ ಜನ. ಈ ಗೌರವದ ಮಂದಿಗೆ ಹಣ ಅಷ್ಟು ಪ್ರಧಾನವಲ್ಲ. ಇವರು ವಿದ್ಯಾವಂತರು. ಅಲ್ಲದೆ ಅನುಭವದ ಅರಿವು ಬೇರೆ. ಈ ಸಂಖ್ಯೆಯ ಪೂರ್ವಾರ್ಧ (೨೦). ಇದಕ್ಕೆ ಗುರುಚಂದ್ರ ಯೋಗ. ಇದನ್ನು ಸಾರಸ್ವತಯೋಗ ಎಂದರು. ಈ ಕಾರಣ ಇವರಿಗೆ ದೇವತಾಕೃಪೆ ಒಂದು ಲಕ್ಷಣ. ಸದಾಚಾರ, ಸತ್ಕರ್ಮ ಇವರಿಗೆ ಇಷ್ಟ. ವಿದ್ಯಾ ಪ್ರಗತಿ, ವಿದ್ಯಾರ್ಥಿಗಳ ಅಭ್ಯುದಯ, ವಿದ್ಯಾಪ್ರಚಾರ ಕಾರ್ಯಗಳಲ್ಲಿ ಇವರು ದಕ್ಷರು. ಇವರಿಗೆ ಯಾವ ಕೆಲಸ ಮಾಡಲಿ ಅದರ ಹಿಂದು ಮುಂದು ಆಗು ಹೋಗುಗಳ ಸ್ಪಷ್ಟ ಅರಿವು ಇರುತ್ತೆ. ಸ್ವಯಂ ಪೂರ್ಣ ವಿದ್ಯಾವಂತರಾಗಿ ವಿದ್ಯಾವಂತರ ಬಗ್ಗೆ ಇವರಿಗೆ ಆದರ ಗೌರವಗಳಿರುತ್ತವೆ.

ಇವರು ಗುಣವಂತರು. ಪ್ರತಿಭೆಯ ಪ್ರಭಾವದಿಂದ ಗೌರವ ಬೇರೆ. ಇವರ ಮಾತು ಸ್ಪಷ್ಟ. ವಾದ ವಿವಾದಗಳಿಗೆ ಅವಕಾಶ ಇರದು. ಅನುಭವದ ಗೌರವ ಬೇರೆ. ಈ ಕಾರಣ ಇವರು ಎಲ್ಲರಿಗೂ ವಾಕ್ ಸಹಾಯ ಮಾಡುವ ಮಂದಿ. ಸಾರ್ವಜನಿಕ ಸಂಸ್ಥೆಗಳ ಧನ ಸಂಚಯ ಇವರಿಂದ ಸುಗಮ. ವಿದ್ಯಾಪ್ರಗತಿ, ವಿದ್ಯಾರ್ಥಿಗಳ ಅಭ್ಯುದಯ ಕಾರ್ಯಗಳೂ ಇವರಿಗೆ ಸುಗಮ. ಇವರ ತೂಕದ ಮಾತಿಗೆ ಬೆಲೆ ಈ ದಕ್ಷ ನಿರ್ವಹಣೆಗೆ ಕಾರಣ. ಇವರು ನಿಷ್ಠಾವಂತ ಕ್ರಿಯಾಶೀಲರು. ಅಲ್ಪತೃಪ್ತರು. ಫಲಾಪೇಕ್ಷೆಗಳಾಗಲೀ, ದುರಾಸೆಯ ಯತ್ನಗಳಾಗಲೀ ಇವರಿಗೆ ಹಿಡಿಸದು. ಇವರು ತ್ಯಾಗಶೀಲ ವ್ಯಕ್ತಿಗಳು, ಲಕ್ಷ್ಯವಾದಿಗಳು.

ಇವರ ಅರಿವು ಪಕ್ವದ ಅನುಭವದಿಂದ ಬಂದದ್ದು. ನ್ಯಾಯ ಧರ್ಮ ಔದಾರ್ಯಇವರ ಮೋಹದ ಆಶಯಗಳು. ಈ ಕಾರಣ ಇವರು ಉತ್ತಮ ನ್ಯಾಯಾಧೀಶರು. ವಿದ್ಯಾಸಂಸ್ಥೆಗಳ ನಿರ್ದೇಶಕರು. ಸಾರ್ವಜನಿಕ ಸಂಸ್ಥೆಗಳ ಸಂಚಾಲಕ ವೃತ್ತಿಗೂ ಇವರು ದಕ್ಷರು.

ಒಂಭತ್ತು (೯) ಸಂಖ್ಯೆ ಆಡಳಿತ ಸಂಖ್ಯೆ. ಇದಕ್ಕೆ ಪೂರಕ ಶಕ್ತಿ ಸಂಖ್ಯೆ (೨೦). ಈ ಕಾರಣ (೨೯) ಇಪ್ಪತ್ತೊಂಭತ್ತು ಸಂಖ್ಯೆಯ ಮಂದಿ ಆಡಳಿತಕ್ಕೆ ನಿಷ್ಠರು. ಅದರ ಪ್ರಗತಿಯ ಪಥ ನಿರ್ದೇಶನ ಮಾಡುವ ಮಂದಿ. ಇವರು ಆಡಳಿತ ಪೋಷಕ ಶಕ್ತಿಯೇ ಹೊರತು ಆಡಳಿತಕ್ಕಾಗಿ ಆಸೆ ಬೀಳುವವರಲ್ಲ. ಈ ಕಾರಣ ಇವರು ಆಡಳಿತದ ಉತ್ತಮ ಕಾರ್ಯದರ್ಶಿಗಳು (Secretries).

## ಜೀವನದ ಯೋಗ ಕಾಲಗಳು

ಇವರ ಧರ್ಮ ಕರ್ಮಶೀಲ ವಂಶದಲ್ಲಿ ಹುಟ್ಟಿದವರು. ವಿದ್ಯೆಯ ಶ್ರದ್ಧೆ ಇವರಿಗೆ ಬಾಲ್ಯದಲ್ಲಿ ಒಂದು ಗುಣ. ಈ ಕಾರಣ ಯಾವ ಹಂತದಲ್ಲಿಯೂ ಬೀಳದೆ ತೇರ್ಗಡೆ ಹೊಂದುವ ವಿದ್ಯಾರ್ಥಿಗಳು ಇವರೇ ಸರಿ. ಆಚಾರ ಶ್ರದ್ಧೆಯಿಂದ ಇವರು ದೇವತಾನಿಷ್ಠೆ ಉಳ್ಳವರು. ಈ ಕಾರಣ ಪ್ರಾಪ್ತಿಯಾದ ದೇವತಾ ಕೃಪೆಯಿಂದ ಇವರಿಗೆ ವಿದ್ಯೆಯಲ್ಲಿ ಯಾವಾಗಲೂ ಕೀರ್ತಿ ಕಟ್ಟಿದ ಫಲ. ಧನಕಷ್ಟವಿದ್ದರೂ ಇವರಿಗೆ ವಿದ್ಯೆಯಲ್ಲಿ ವಿಘ್ನಗಳು ಇರದು.

ಇವರಿಗೆ ೫, ೧೦, ೧೩, ೧೬, ೨೦, ೨೫, ೨೯ ವರ್ಷಗಳಲ್ಲಿ ವಿದ್ಯೆಯು ಹಂತಹಂತವಾಗಿ ಯಶಸ್ವಿಯಾಗಿ ಸಾಗುತ್ತೆ. ಇಪ್ಪತ್ತು ವರ್ಷಗಳಲ್ಲಿ ವಿದ್ಯೆ ಪೂರ್ತಿಯಾದರೂ ಉದ್ಯೋಗ ಪ್ರಗತಿಗಾಗಿ ಇರುವ ಆಡಳಿತ ಪರೀಕ್ಷೆಗಳಲ್ಲಿ ಯಶಸ್ವಿಯಾಗುವರು. ಉದಾಹರಣೆಗೆ ಐ.ಎ.ಎಸ್., ಎಂ.ಎ.ಎಸ್., ಎಂ.ಸಿ.ಎಸ್., ಐ.ಸಿ.ಎಸ್, ಇತ್ಯಾದಿ ಆಡಳಿತ ನಿರ್ದೇಶನ ವಿದ್ಯಾ ದರ್ಜೆಗಳಲ್ಲಿ ಇವರು ಉತ್ತಮ ತೇರ್ಗಡೆ ಹೊಂದುವರು.

ಈ ಸಂಖ್ಯೆಯ ಮಂದಿಗೆ ಇದರ ಆಶ್ರಯ ಸಂಖ್ಯೆಗಳಾದ ೧೬, ೧೯ ಸಂಖ್ಯೆಯ ಜನರು ಮಿತ್ರರು. ಈ ಮಂದಿಗೆ ಗುರು ಯೋಗದಾತನು. ಈ ಕಾರಣ ಇವರಿಗೆ ವಿದ್ಯೆ ಯೋಗಕ್ಕೆ ಅಗತ್ಯ. ಹಿರಿಯ ಮಗು ಜನನ ಕಾಲ ಶುಭೋದಯದ ಕಾಲ. ಇವರು ಉತ್ತಮ ವಾಚಾಳಿಗಳು. ಆದರೆ ಹರಟೆ ಮಲ್ಲರಲ್ಲ! ಗಂಭೀರಮುದ್ರೆಯ ಮುಖದಿಂದ ಮನಸ್ಸಿಗೆ ನಾಟುವಂತೆ ಇವರ ಮಾತು. ಜನಗಳ ಮೇಲೆ ಪರಿಣಾಮ ಬೀರುವ ಶೈಲಿ ಬೇರೆ. ಇವರು ಉತ್ತಮರು ಉತ್ತಮ ನಿರ್ದೇಶಕರು. ಇವರ ಸಲಹೆ ಅಗತ್ಯ ಕಾಲದಲ್ಲಿ ಒಂದು ಉತ್ತಮ ವರ. ಅಂತೆಯೇ ಉತ್ತಮ ನ್ಯಾಯಾಧೀಶರು. ಧರ್ಮ ಪ್ರಚಾರಕರು. ಆದರೆ ಸನ್ಯಾಸಿಗಳಲ್ಲ! ಇವರು ಇತರರನ್ನು ಸನ್ಮಾರ್ಗದಲ್ಲಿ ಒಯ್ಯುವ ಮಂದಿ. ಎಲ್ಲಾ ಸಮಸ್ಯೆಗಳಿಗೂ ಇವರಲ್ಲಿ ಉತ್ತಮ ಸಲಹೆಗೆ ಬರವಿಲ್ಲ. ಈ ಕಾರಣ ಇವರು ಉತ್ತಮ ಸುಧಾರಕರು.

ಈ ಸಂಖ್ಯೆ ಸೂರ್ಯ ಗುರುಗಳ ಪರಸ್ಪರ ನೈತಿಕ ಹೊಂದಾಣಿಕೆಗೆ ಸಂಕೇತ ಇದರಿಂದ ಈ ಜನರು ತಂದೆ ತಾಯಿಗಳನ್ನು ಜೋಪಾನ ಮಾಡುವರು. ತಂದೆ ತಾಯಿಗಳ ಜೀವಿತ ಕಾಲದಲ್ಲಿಯೇ ಇವರು ಪ್ರಗತಿಯತ್ತ ಸಾಗುವರು. ಇಪ್ಪತ್ತು ಸಂಖ್ಯೆಗೆ (೨೦) ಗುರು ಚಂದ್ರ ಯೋಗ. ಇದು ಸ್ತ್ರೀ ಜನನ ಯೋಗ. ಜ್ಯೇಷ್ಠರಾದರೆ ಹೆಣ್ಣಾಗಿ ಗಂಡಿನಂತೆ ಸಂಸಾರದ ಹೊಣೆಯನ್ನು ಹೊತ್ತಾರು. ಇವರಿಂದ ಸಂಸಾರ ಖ್ಯಾತಿಗಳಿಸಿ ಒಗ್ಗಟ್ಟಿನಿಂದ ಇರುತ್ತೆ. ಅನೇಕ ವೇಳೆ ತಮ್ಮ ಸ್ವಾರ್ಥವನ್ನು ಬದಿಗಿಟ್ಟು ಸಂಸಾರಕ್ಕೆ ದುಡಿಯುವ ಮಂದಿ ಎಂದರೆ ತಪ್ಪಲ್ಲ.

ಇವರಿಗೆ ಗುರು ಚಂದ್ರ ಯೋಗ. ಇದೇ ಗಜಕೇಸರಿ ಯೋಗ. ಸಹಸ್ರ ಹುಣ್ಣಿಮೆಗಳನ್ನು ನೋಡುವ ಯೋಗ. ಇದಕ್ಕೆ ಸಹಸ್ರ ಚಂದ್ರದರ್ಶನ ಎಂದರು. ಈ ಕಾರಣ ಇವರಿಗೆ ಆಯುಷ್ಯ ಸುಮಾರು ಎಂಭತ್ತನಾಲ್ಕು ವರ್ಷಗಳು ಆಗುತ್ತೆ. ಇವರಿಗೆ ಜೀವನ ಸುಗಮ. ಸತ್ಕರ್ಮ, ಧರ್ಮಶೀಲರಾಗಿ ಕೀರ್ತಿ ಬೇರೆ. ಇವರಿಗೆ ಪ್ರಾಯ ವರುಷ ೧೩, ೨೩ ೫೩ ರಲ್ಲಿ ಉದರ ಬೇನೆಯಿಂದ ಗಂಡಕಾಲ. ಶಸ್ತ್ರಚಿಕಿತ್ಸೆಯಿಂದ ಇದು ಪಾರು. ಆಯಾ ಕಾಲದಲ್ಲಿ (೧೩) ಹದಿಮೂರು ಸಂಖ್ಯೆಯ ಅಭಿಮಾನಿ ಯತಿ ಶ್ರೇಷ್ಠರ ಸೇವೆ ಉತ್ತಮ ಶಾಂತಿ ಅಲ್ಲದೆ ಆಯುಷ್ಯವೂ ಅಭಿವೃದ್ಧಿ.

# ಸಂಖ್ಯೆ ಮೂವತ್ತು - ರವಿ ಶುಕ್ರ ಯೋಗ

ಸಂಖ್ಯೆ ಮೂವತ್ತು (೩೦) ಪೂರ್ಣ ಸಂಖ್ಯೆ. ಈ ಪೂರ್ಣ ಸಂಖ್ಯೆಗೆ ಶುಕ್ರ ಅಧಿಪತಿ. ಏಕಾಂಕ ಸಂಖ್ಯೆಗಳು ಒಂದರಿಂದ ಒಂಭತ್ತು (೧ ರಿಂದ ೯). ಇವುಗಳಲ್ಲಿ ಯಾವುದೂ ಶುಕ್ರನದಲ್ಲ. ಆದರೆ ಪೂರ್ಣಾಂಕಗಳು ಶುಕ್ರನಿಗೆ ಸಲ್ಲುತ್ತವೆ. ನಾಡಿಗಳಲ್ಲಿ ಈ ಮತ ವ್ಯಕ್ತವಾಗುತ್ತದೆ. ಇದಕ್ಕೆ ಹತ್ತು ಇಪ್ಪತ್ತು ಅಪವಾದ. ಕಾರಣ ಹತ್ತಕ್ಕೆ ಗುರು ಶನಿಯೋಗ. ಆದರೆ ಗುರು ಸಂಖ್ಯೆ ಐದು. ಪೂರ್ಣಾಂಕ (೫೦) ಐವತ್ತು ಆದಾಗ ಅದಕ್ಕೆ ಗುರು ಶುಕ್ರಯೋಗ ಎಂದರು. ಬೇರೆ ಎಲ್ಲ ಸಂಖ್ಯೆಗಳೂ ಪೂರ್ಣಾಂಕವಾದಾಗ ಶುಕ್ರನು ಆಡಳಿತಕ್ಕೆ ಬರುತ್ತವೆ.

ಸಂಖ್ಯೆ ಮೂರು (೩). ಇದಕ್ಕೆ ಕುಜ ಶನಿಯೋಗ. ಇದರಿಂದ (೩೦) ಮೂವತ್ತು ಕುಜ ಶನಿಗೆ ಶುಕ್ರನ ಯೋಗ ಆಗದು. ಕಾರಣ (೩) ಮೂರು (೬) ಆರಾದಾಗಲೂ ಕುಜನ ಗುಣಸಂಖ್ಯೆ ಆಗುತ್ತದೆ. ಈ ಆರರ ಕುಜನ ಸಂಖ್ಯೆ ಅರವತ್ತಾದಾಗ (೬೦) ಈ ಕುಜ ಶುಕ್ರಯೋಗ ಆಗುತ್ತದೆ. ಈ ಕಾರಣ ಮೂವತ್ತು ಸಂಖ್ಯೆಗೆ ಕುಜದ ಫಲವಿಲ್ಲ. ಇದಕ್ಕೆ ರವಿ ಶುಕ್ರಯೋಗ ಇರುತ್ತದೆ.

ಆಕಾಶದಲ್ಲಿ ನಭೋಮಂಡಲ ಗೋಳದ ಆಕಾರ. ಇದು ಮುನ್ನೂರ ಅರವತ್ತು ಡಿಗ್ರಿಗಳಲ್ಲಿ ಅಳೆಯಲ್ಪಡುತ್ತದೆ. ಸೂರ್ಯನು ಈ ಮಂಡಲದಲ್ಲಿ ಸಂಚಾರ ಮಾಡುತ್ತಾನೆ. ಇದಕ್ಕೆ ಒಂದು ವರ್ಷಕಾಲ ಎಂದರು. ಸೂರ್ಯನು ಹನ್ನೆರಡು ಭಾಗಾತ್ಮಕನು. "ದ್ವಾದಶಾತ್ಮಾ ದಿವಾಕರಃ" ಎಂದರು. ಈ ಕಾರಣ ಈ ಮುನ್ನೂರ ಅರವತ್ತರ ಮಂಡಲವನ್ನು ಹನ್ನೆರಡು ಭಾಗ ಮಾಡಿದರೆ ಆಗ ಒಂದಕ್ಕೆ ಮೂವತ್ತು (೩೦) ಆಗುತ್ತದೆ ಈ ಕಾರಣ ಈ ಮೂವತ್ತು ಸಂಖ್ಯೆಗೆ ಸೂರ್ಯ ಶುಕ್ರಯೋಗ ಎಂದು ಕೆಲವರ ಮತ. ಅಲ್ಲದೆ ವಿದೇಶೀಯರೂ ಸಹ ಮೂವತ್ತು ವರುಷದ ನಂತರ ಸೂರ್ಯನ ಯೋಗ ಪ್ರಬಲ ಎಂದಿದ್ದಾರೆ.

ಮೂವತ್ತು (೩೦) ಸಂಖ್ಯೆಗೆ ಶುಕ್ರಯೋಗ. ಇಲ್ಲಿ ಸೂರ್ಯನು ಅಧಿಕಾರಿ ಇಲ್ಲ ನೌಕರಿಯ ಗ್ರಹ. ಶುಕ್ರ ಸಂಸಾರದ ಸುಖ ಕೊಡುವ ಮದುವೆಯ ಗ್ರಹ. ಈ ಎರಡರ ಯೋಗದಿಂದ ಈ ಎರಡು ಜೀವನದ ಘಟನೆಗಳು ಪರಸ್ಪರ ಹೊಂದಿಕೆ ಆಗುತ್ತವೆ. ನೌಕರಿ ಪ್ರಾಪ್ತಿ, ವಿವಾಹ ಎರಡೂ ಒಂದೇ ಕಾಲ ಎಂದರ್ಥ. ಇದು ಕೇವಲ ಕಾಕತಾಳೀಯ ಇದ್ದೀತು, ಆದರೂ ನೌಕರಿ ಸಿಗದವರೆಗೆ ವಿವಾಹ ಬೇಕಿಲ್ಲ. ವಿವಾಹವಾಗುವವರೆಗೆ ನೌಕರಿ ಸಹ ಆಗದು. ಹುಚ್ಚು ಬಿಟ್ಟ ಹೊರತು ಮದುವೆಯಿಲ್ಲ ಮದುವೆಯಾದ ಹೊರತು ಹುಚ್ಚು ಬಿಡದು ಎಂಬ ಗಾದೆ ಇವರಿಗಾಗಿ ಹೇಳಿದ್ದಿರಬಹುದು.

ಈ ಮಂದಿಗೆ ಸಾಧಾರಣ ಸೂರ್ಯನೇ ಪ್ರಧಾನ ಗ್ರಹ. ಇದರಿಂದ ಸೂರ್ಯನ ಗುಣಗಳು ಇವರಿಗೆ ಸಹಜ. ಸೂರ್ಯನ ಗುಣವಾದ ಅಧಿಕಾರ ಇವರಿಗೆ ಜೀವನದ ಹಂಬಲು.ಕೀರ್ತಿ ಪ್ರತಿಷ್ಠೆ ಗಳೇ ಇವರಿಗೆ ಹೆಚ್ಚಿನ ಆಸ್ತಿ. ಸೂರ್ಯನ ಜಾಗೃತ ಗ್ರಹ. ಈ ಕಾರಣ ಇವರು ದಿನವಿಡೀ ಚಟುವಟಿಕೆಯವರು. ದಿನದಲ್ಲಿ ಮಲಗರು. ಜೀವನದಲ್ಲಿ ಉದ್ಯೋಗವೇ ಇವರಿಗೆ ಪ್ರಧಾನ. ಸಂಸಾರ ಶ್ರದ್ಧೆ, ಮಡದಿ ಸಖ್ಯದಲ್ಲಿ ಉತ್ಸಾಹ ಇವುಗಳಿಗೆ ಎರಡನೆಯ ಸ್ಥಾನ, ಈ ಕಾರಣ ಸಂಸಾರದಲ್ಲಿ ಇವರಿಗೆ ಸುಖ ಅತ್ಯಲ್ಪ.ಮಡದಿಗೂ ಅಸಮಾಧಾನ. ಯಾವಾಗ ನೋಡಿದರೂ ಕೆಲಸ, ಕೆಲಸ, ಮನೆ ಎಂದರೆ ಇವರಿಗೆ ಸಮಸ್ಯೆಯೇ ಅಲ್ಲ. ಮನೆಯವರಿಗೆ ಇವರ ಈ ಶ್ರದ್ಧೆಯೇ ಒಂದು ಸಮಸ್ಯೆ.

ಇವರು ಸಾಧಾರಣ ನಿರೋಗಿಗಳು. ಸದಾ ಚಟುವಟಿಕೆಯ ಪ್ರವೃತ್ತಿ ಈ ಆರೋಗ್ಯ ರಕ್ಷಣೆಗೆ ಮೂಲಕಾರಣ. ಹಲವರು ವೈದ್ಯ ವೃತ್ತಿಯಲ್ಲಿ ಸೇವೆ ಮಾಡಿಯಾರು. ಇವರಿಗೆ ನೌಕರಿ ಒಂದು ಪ್ರಧಾನದ ಅಂಶ. ಮೂವತ್ತು ವರುಷಗಳ ನಂತರ ಇವರಿಗೆ ಸುಯೋಗ ಕಾಲ, ಪದೇ ಪದೇ ನೌಕರಿ ಬದಲು ಮಾಡುವ ಮಂದಿ ಇವರಲ್ಲ, ನಿಷ್ಠೆ ಇವರಿಗೆ ಗುಣ. ಆ ನೌಕರಿಯಲ್ಲಿಯೇ ಸಮಾಧಾನ. ಅದರಿಂದ ಇವರಿಗೆ ಪ್ರಗತಿ, ಸುಯೋಗ. ಸಾಧಾರಣ ಏರಿಳಿತಗಳು ಇವರಿಗೆ ಜೀವನದಲ್ಲಿ ಕಡಿಮೆ. ಹೆಚ್ಚು ಕಡಿಮೆ ಒಂದೇ ನಮೂನೆ ಜೀವನ ನಡೆಸುವ ಮಂದಿ ಇವರೇ ಸರಿ.

ಸೂರ್ಯನು ತಂದೆಯ ಗ್ರಹ. ರವಿ ಶುಕ್ರಯೋಗದ ಈ ಸಂಖ್ಯೆಯ ಮಂದಿಗೆ ತಂದೆ ಎಂದರೆ ಪ್ರೀತಿ. ತಂದೆಯ ಸಂಪಾದನೆ ಎಂದರೂ ಗೌರವ ಇವರಿಗೆ. ಅದನ್ನು ಕಾಪಾಡುವುದೂ ಒಂದು ಹೆಮ್ಮೆ. ಎಷ್ಟೇ ಸ್ವಲ್ಪ ಇರಲಿ ಅದನ್ನು ಅವರ ನೆನಪಿಗಾಗಿ ಕಾಪಾಡುವ ಜನ ಇವರು. ಹಾಗೆಯೇ ಮನೆಯ ಗೌರವವೂ ಇವರಿಗೆ ಪ್ರಧಾನ.

ಇವರು ಸಾಧಾರಣ ಪೂರ್ವದಿಕ್ಕಿಗೆ ಪ್ರಾಧಾನ್ಯ ಕೊಡುವ ಮಂದಿ. ಆ ದಿಕ್ಕಿಗೆ ಕಾಲು ಹಾಕಿ ಮಲಗುವವರಲ್ಲ. ಸೂರ್ಯ ಉದಯಕ್ಕೆ ಸರಿಯಾಗಿ ಎದ್ದಿರುವ ಮಂದಿ. ಪೂರ್ವದಿಕ್ಕಿಗೆ ಪ್ರಯಾಣ ಇವರಿಗೆ ಶುಭ. ಮೊದಲ ಯತ್ನವೇ ಇವರಿಗೆ ಜಯದ ಯತ್ನ. ಆ ಯತ್ನ ಆಗದೇ ಹೋದರೆ ಆ ಯತ್ನ ಕೈ ಬಿಡುವುದೇ ಲೇಸು. ದಿನದಲ್ಲಿ ಮಧ್ಯಾಹ್ನ ಇವರಿಗೆ ಎಲ್ಲಾ ಕೆಲಸಗಳಿಗೆ ಶುಭ, ಸೂರ್ಯ ಮುಳುಗಿದ ನಂತರ ರಾತ್ರಿ, ಆಗ ಇವರಿಗೂ ಕತ್ತಲು, ರಾತ್ರಿ. ಮೊತ್ತದಲ್ಲಿ ಸೂರ್ಯನೇ ಇವರಿಗೆ ಆಧಾರ. ಸೂರ್ಯನೇ ಆರಾಧ್ಯಮೂರ್ತಿ. ಅಮಾಲ್ಲಾ ಕಾಲ ಇವರಿಗೆ ಸುಸ್ತಿನ ಕಾಲ.

ಇವರು ಪ್ರತಿಷ್ಠೆಯವರು. ಎಲ್ಲರಲ್ಲಿ ಬೆರೆಯರು. ಎಷ್ಟೋ ಜನ ಹೆಂಡತಿಗೂ ಸಲಿಗೆ ಕೊಡರು. ಮಕ್ಕಳಂತೂ ದೂರವೇ ಸರಿ. ಆದರೆ ಉದ್ಯೋಗದವರು. ಸಹೋದ್ಯೋಗಿಗಳು ಇವರಿಗೆ ಪ್ರಿಯ. ಅಧಿಕಾರಿಗಳು ಎಂದರೆ ಗೌರವ. ನೌಕರಿ ಹೋಗಿ ನಿವೃತ್ತರಾದರೆ ಅರ್ಧ ಸಾವಿನಂತೆ ಇವರಿಗೆ, ಜಗತ್ತೇ ಶೂನ್ಯ.

ಈ ಮೂವತ್ತು, ದೋಷರಹಿತ ಸಂಖ್ಯೆ. ದೋಷ ಸೂಚಕ ಗ್ರಹ ಶನಿ. ಈ ಶನಿಯು ಈ ಮೂವತ್ತು ವರುಷಗಳಲ್ಲಿ ಒಂದು ಬಾರಿ ನಭೋಮಂಡಲವನ್ನು ಪೂರ್ತಿ ಸಂಚರಿಸಿ ಆಗಿರು

ತ್ತದೆ. ಇದರಿಂದ ಈ ಗ್ರಹದ ದೋಷ ಕಡಿಮೆ ಆಗುತ್ತದೆ. ಈ ಕಾರಣ ಸೂರ್ಯ ಶುಕ್ರನ ಸಂಯೋಗದ ಸಂಖ್ಯೆ ಮೂವತ್ತಕ್ಕೆ ( ೩೦) ಶನಿಯ ವೇಧೆ ಇರದು ಎಂದರು.

ಸೂರ್ಯ ಶುಕ್ರಯೋಗಕ್ಕೆ ಈ ಮೂವತ್ತು ಸಂಖ್ಯೆ. ಇದರಿಂದ ಇಲ್ಲಿ ಸೂರ್ಯನ ಯೋಗ ಶುಭವಿದೆ. ಸೂರ್ಯನು ಸರಕಾರದ ಗ್ರಹ. ಹಾಗಿಲ್ಲ ಆಡಳಿತ ಮಾಡುವ ತತ್ವದ ಗ್ರಹ. ಈ ಕಾರಣ ಈ ಸಂಖ್ಯೆಯ ಮಂದಿಗೆ ಆಡಳಿತ ಎಂದರೆ ಪ್ರಿಯ. ಸರಕಾರ, ಸರಕಾರದ ಅಧಿಕಾರ ಎಂದರೇ ಎಲ್ಲದಕ್ಕಿಂತ ಗೌರವ. ಇವರು ಸರಕಾರದ ನೌಕರಿಯಲ್ಲಿ ನಂಬಿಕೆ ಇಟ್ಟಿರುವ ಮಂದಿ. ಖಾಸಗಿ ಉದ್ಯಮ ನೌಕರಿ ಅಷ್ಟು ಸಮಾಧಾನ ಆಗದು. ಇವರು ರಾಜಸೇವಾನಿರತರು. ಸರಕಾರದ ಉದ್ಯೋಗ ಸುಭದ್ರ ಎನ್ನುವ ಧೋರಣೆ ಇವರದು. ಅಧಿಕಾರಿಗಳು ಎಂದರೆ ತುಂಬಾ ಗೌರವ. ಈ ಕಾರಣ ಇವರು ಸರಕಾರೀ ಹುದ್ದೆಗೆ ಸರಿ ಮನುಷ್ಯರು ಎಂದರೆ ತಪ್ಪಲ್ಲ.

## ಜೀವಿತದಲ್ಲಿ ಪ್ರಭಾವ

ಒಂಭತ್ತನೆಯ ಗರ್ಭ ಜನನ. ಪ್ರತಿ ಮಾಹೆ ಮೂವತ್ತನೆಯ ತಾರೀಖು ಜನನಗಳಿಗೆ ಈ ಸಂಖ್ಯೆಯ ಫಲ ಅನ್ವಯವಾಗುತ್ತದೆ. ಈ ಮಂದಿಗೆ ಸೂರ್ಯನೇ ಪ್ರಧಾನ ಗ್ರಹ. ಸೂರ್ಯನ ಗುಣವೂ ಪ್ರಧಾನ. ಶುಕ್ರನ ಸಹಯೋಗ ಬೇರೆ. ಎಲ್ಲರಿಗೂ ಇವರು ಪ್ರೀತಿಪಾತ್ರರಾದ ಮಂದಿ. ಸೂರ್ಯ ತಾನೇ ಕೆಲಸ ಮಾಡನು. ಮಾಡಿಸಿಕೊಳ್ಳುವ ತತ್ವ. ಬಾಲ್ಯದಿಂದ ಇವರಿಗೆ ಕೆಲಸ ಎಂದರೆ ಬೇಸರ. ಆದರೆ ಅವರಿಗೆ ಕೆಲಸ ಹೇಳುವುದು ಇವರಿಗೆ ಕೆಲಸ ಹೇಳುವುದು ಇವರಗೆ ಸಹಜ ಗುಣ. ಕಾರುಬಾರು ಮಾಡಿ ಎಂದರೆ ಇವರೇ ಮುಂದು. ಇವರ ಇಷ್ಟ ನೆರವೇರಬೇಕು. ಹಾಗಿಲ್ಲ ಇವರಿಗೆ ಅಪಮಾನ, ಸಿಟ್ಟು, ಕೋಪ, ತಂದೆಯ ಪ್ರೀತಿ ಇವರಿಗೆ ಹೆಚ್ಚು. ಜಂಭದ ಮಾತು, ಹೊಗಳಿಕೆ ಇವರಿಗೆ ಊನ ಗುಣಗಳು. ತಂದೆ ಪ್ರಬಲ ಅಧಿಕಾರಿ ಆದಾನು. ಆದರೆ ಆ ಪ್ರಭಾವ ಅವರಿಗಿಂತ ಇವರಿಗೇ ಹೆಚ್ಚು. ಈ ಕಾರಣ ಇವರಿಗೆ ವಿದ್ಯಾ ಯೋಗ ಸಾಮಾನ್ಯ. ವಿದ್ಯೆಯ ಶ್ರದ್ಧೆಯೂ ಕಡಿಮೆ. ಎಲ್ಲರ ಪ್ರೀತಿ ಈ ಗುಣಕ್ಕೆ ಕಾರಣ. ಆದರೂ ವಿದ್ಯೆ ಅಗತ್ಯ. ಎಷ್ಟೋ ಅಷ್ಟು ಸಾಧಿಸಿಯಾರು. ಇವರ ಪ್ರಗತಿಗೆ ತಮ್ಮ ದಕ್ಷತೆಗಿಂತ ಇತರರ ಪ್ರಭಾವವೇ ಮೂಲ ಎಂದರೆ ತಪ್ಪಾಗದು.

ಈ ಮಂದಿಗೆ ಮೂವತ್ತು ವರುಷದ ನಂತರ ಸುಯೋಗವಿದೆ. ಪ್ರಭಾವದ ವಂಶದಲ್ಲಿ ವಿವಾಹ ಆದೀತು. ಮದುವೆಯಿಂದ ಕೀರ್ತಿ, ನೌಕರಿ ಎಲ್ಲವೂ ಸಾಧಿಸೀತು. ಇವರಿಗೆ ಹೆಚ್ಚಿನಂಶ ತಮ್ಮದೇ ಮಾತು, ತಮ್ಮದೇ ಕತೆ, ಇತರರ ವಿಷಯ ಇವರಿಗೆ ಹಿಡಿಸದು. ಇತರರಲ್ಲಿ ಶ್ರದ್ಧೆಯೂ ಕಡಿಮೆ. ತಾವು ತಮ್ಮ ಪ್ರಗತಿ, ತಮ್ಮ ಸಂಸಾರ ಇವೇ ಅವರಿಗೆ. ಒಡಗೂಡಿದವರಿಗೆ ಪ್ರಧಾನ ಕಡಿಮೆ. ಅಧಿಕಾರ ದಾಹವಂತೂ ರಕ್ತಗತವೇ ಸರಿ. ತಮಗೆ ಅನುಕೂಲರು ಯಾರು? ಅವರಲ್ಲಿ ಇವರಿಗೆ ಪ್ರೀತಿ. ಎಷ್ಟರವರೆಗೆ ಅನುಕೂಲ ಅಷ್ಟರವರೆಗೆ ಆದರ, ಅಭಿಮಾನ, ಯಾರು ದೊಡ್ಡವರು, ಯಾರ ಜೊತೆಯಿಂದ ಇವರಿಗೆ ಪ್ರಭಾವ ಹೆಚ್ಚು? ಅವರನ್ನೇ ಇವರು ಆದರಿಸಿ ಸತ್ಕಾರ ಮಾಡುತ್ತಾರೆ. ಇದನ್ನು ತಮ್ಮನ್ನು ತಾವು ಮುಂದಕ್ಕೆ ಒಯ್ಯುವ ಹವಣಿಕೆ ಎಂದಾರು. ಕೆಲವರು

ಇದನು ಸ್ವಾರ್ಥ ಎನ್ನಬಹುದು. ಆದರೆ ಇವರಿಗೆ ತಮ್ಮ ಪ್ರಗತಿಯ ಸಾಧನೆಯೇ ಮುಖ್ಯಗುರಿ. ಇದು ತಪ್ಪೇ ?

ಇವರು ನೌಕರಿ ಪ್ರಿಯರು. ವ್ಯಾಪಾರ, ಉದ್ಯಮ ವ್ಯವಹಾರ ಇವರಿಗೆ ಅಗತ್ಯ ಇದ್ದಷ್ಟು ಮಾತ್ರ. ಕಾರಣ ಇವರು ಮುಂದಿಯಲ್ಲಿ ಬೆರೆಯುವವರಲ್ಲ. ಕೇವಲ ಪ್ರತಿಭೆ ಪ್ರಭಾವದ ಮುಂದಿಯಲ್ಲಿ ಮಾತ್ರ ಇವರ ಓಡಾಟ. ಸಂತಸ ವಾರ್ತೆ ಇವರಿಗೆ ಪ್ರಿಯ. ಕಷ್ಟ ಎಂದರೆ ಬೇಸರ, ಕಷ್ಟಪಡುವ ಮಂದಿ ಎಂದರೆ ಇವರು ಬಲುದೂರ. ಜೀವನದಲ್ಲಿ ವಿವಾಹವೂ ಸಹ ತಮ್ಮ ಪ್ರಗತಿಗೆ ಕಾರಣ ಎಂದೇ ಇವರಿಗೆ ಒಪ್ಪಿಗೆ. ವಧುವಿನ ರೂಪು ರೇಖೆಗಳು ಕಾರಣವಲ್ಲ. ಕೆಲಸ ಕೊಡಿಸಿಯಾರು. ಹಣಕಾಸಿನ ಪೂರೈಕೆ. ಅಧಿಕಾರದ ಪ್ರಭಾವ ಇತ್ಯಾದಿ ಇತರ ಅಂಶಗಳೇ ಇವರಿಗೆ ಮುಖ್ಯ.

ಇವರ ಜೀವನ ಕೀರ್ತಿಗಾಗಿ ಮುಡುಪು. ಪ್ರಗತಿಗಾಗಿ ಇವರ ಸಾಧನೆ. ಇವರು ಋಜುಮಾರ್ಗಿಗಳು. ಕಾನೂನು ಬಿಟ್ಟು ಕೆಲಸ ಮಾಡುವವರಲ್ಲ ಲಂಚ ರುಷವತ್ತುಗಳು ಇವರಿಗೆ ಆಗದು. ಇದರಿಂದ ಇವರಿಗೆ ಕೀರ್ತಿ. ಆದರೆ ಮನೆಯಲ್ಲಿ ಸಂಸಾರದ ಕಡೆ ಗಮನ ಕಡಿಮೆ. ಬಂಧುಗಳಿಂದ ಇವರು ದೂರವೇ ಸರಿ. ಔದಾರ್ಯ ಇವರಿಗೆ ಇಷ್ಟ. ಆದರೆ ಕಾರ್ಯದಲ್ಲಿ ಮಾತ್ರ ಇದು ಬಹಳ ಸೀಮಿತ.

ಇವರು ಹೆಚ್ಚಿನಂಶ ದೀರ್ಘಾಯುಗಳು, ಶ್ರೀಮತಿಯೂ ಸುಮಂಗಲಿ ಎಂದರೆ ತಪ್ಪಲ್ಲ. ಕೆಲವರಿಗೆ ದ್ವಿಕಳತ್ರ ಯೋಗವೂ ನಡೆದೀತು. ಇವರಿಗೆ ಜೀವನದಲ್ಲಿ ಪ್ರಾಯ ವರುಷಗಳು ೯, ೧೯, ೨೯, ೩೦, ३೯ ४೯, ४೯ ಉತ್ತಮ ಪ್ರಗತಿಯ ಹಂತಗಳು ಮೂವತ್ತು ವರುಷಗಳ ನಂತರ ಸುಯೋಗದಿಂದ ಕೀರ್ತಿಶಾಲಿಗಳು. ಇವರಿಗೆ ೯೦ ವರುಷ ಆಯುಷ್ಯ. ೬೦, ೬೧, ೬೩, ೬೭ ವರುಷಗಳಲ್ಲಿ ಗಂಡ ಕಾಲಗಳು. ಇವರ ಜೀವನ ಹೆಚ್ಚಿನಂಶ ನಗರಗಳಲ್ಲಿ ಕಳೆಯುತ್ತೆ. ಹಳ್ಳಿ ಎಂದರೆ ಆಸೆ. ಆದರೆ ಅಲ್ಲಿ ನೆಲಸರು ನಿವೃತ್ತಿ ನಂತರ ನೊಂದ ಜೀವನ ಇವರದು. ತಮ್ಮ ಸ್ವರ್ಣ ಕಾಲವನ್ನು ನೆನೆದು ಮೆಲುಕು ಹಾಕುತ್ತಾ ಮುಂದಿನ ಕಾಲದಲ್ಲಿ ನಿರಾಸೆಯಿಂದ ಅತೃಪ್ತರಾಗುವ ಮಂದಿ.

# ಮೂವತ್ತೊಂದು - ಕಷ್ಟ ಪರಿಹಾರ ಯೋಗ

ಮೂವತ್ತು ಸಂಖ್ಯೆಗೆ (೩೦) ಸೂರ್ಯ ಶುಕ್ರಯೋಗ ಒಂದು (೧) ಸಂಖ್ಯೆಗೆ ಶನಿಯೋಗ. ಈ ಕಾರಣ (೩೧) ಮೂವತ್ತೊಂದು ಸಂಖ್ಯೆಗೆ ರವಿ ಶುಕ್ರಯೋಗಕ್ಕೆ ಶನಿಯೋಗ ಬೆರೆಯುತ್ತದೆ. ರವಿ ಶುಕ್ರಯೋಗ ಪೂರ್ವಾರ್ಧ (೩೦) ಮೂವತ್ತು ಉತ್ತರಾರ್ಧ ಸಂಖ್ಯೆ ಒಂದು (೧) ಈ ಸಂಖ್ಯೆ ದೋಷ ಗ್ರಹ ಶನಿಯನ್ನು ಸೂಚಿಸುತ್ತೆ.

ರವಿ ಶನಿಯೋಗದಿಂದ ಕಷ್ಟ

ಈ (೩೧) ಸಂಖ್ಯೆಯಲ್ಲಿ ರವಿಗೆ ಸಂಬಂಧಿಸಿದ ಕಷ್ಟ. ಉದಾಹರಣೆಗೆ ರವಿ ಅಧಿಕಾರದ ಗ್ರಹ. ಇವನಿಗೆ ಇಲ್ಲಿ ಅಧಿಕಾರ ಭಂಗ ಯೋಗ. ಹಾಗಿಲ್ಲ ನೌಕರಿಯಲ್ಲಿ ಬದಲು ಆಗುವ ಯೋಗ. ಆದರೂ ಅದರಿಂದ ಫಲ ಮಾತ್ರ ಶುಭವೇ ನಡೆಯುತ್ತೆ. ಪೂರ್ವಾರ್ಧ ಸಂಖ್ಯೆಯ ರವಿ ಶುಕ್ರ ಯೋಗ ಇದಕ್ಕೆ ಕಾರಣ.

ಸರಕಾರದ ಉದ್ಯೋಗ ಹೋಯಿತು. ಆಗ ಖಾಸಗಿ ಉದ್ಯೋಗ ಸಿಕ್ಕಿ ಅದರಿಂದ ಯೋಗ. ಹಾಗಿಲ್ಲ ಬದಲಾವಣೆ ಆಗಿ ಸರ್ಕಾರದಲ್ಲಿ ಇನ್ನೂ ಉತ್ತಮ ದರ್ಜೆಗೆ ಬಡ್ತಿ ಆಗುವ ಯೋಗ ಆದೀತು. ಎಷ್ಟು ವರ್ಷಗಳಾದರೂ ನೌಕರಿ ಸಿಗದೆ ಇರುವುದೂ ಈ ರವಿ ಶನಿಯೋಗ ಆಗುತ್ತೆ. ಇದು ಮೂವತ್ತೊಂದನೆಯ ವರ್ಷದಲ್ಲಿ ಕಷ್ಟ ಪರಿಹಾರವಾಗಿ. ಉತ್ತಮ ನೌಕರಿ ಸಿಗುತ್ತದೆ.

ರವಿ ತಂದೆಯ ಗ್ರಹ. ಹಾಗೆಯೇ ನೌಕರಿ ಗ್ರಹವೂ ಹೌದು. ರವಿ, ತಂದೆ ಉದ್ಯೋಗ ದಲ್ಲಿರುವ ಕಾಲ ಎಂದರ್ಥ. ಈ ಕಾಲ ಈ ಶನಿ ರವಿ ಯೋಗವಿದ್ದರೆ ಮಗನಿಗೆ ಯೋಗವಿರದು. ಆದರೆ ತಂದೆಗೆ ನೌಕರಿ ನಿವೃತ್ತಿಯಾದರೆ ತಂದೆಗೆ ಈ ಯೋಗ ಸಲ್ಲುವುದರಿಂದ ಮಗನಿಗೆ ರವಿ ಶುಕ್ರಯೋಗ ಪ್ರಾರಂಭ. ಇದರಿಂದ ಅವನಿಗೆ ನೌಕರಿ ಸಿಗುವುದು. ಆದರೆ ಅದು ನೇರ ಸರ್ಕಾರದಲ್ಲಿ ಆದೀತು ಅಥವಾ ಆ ಸಂಬಂಧವಿರುವ ಸಂಸ್ಥೆಗಳಲ್ಲಿ ಆದೀತು.

ರವಿ ಶನಿಯೋಗ ವೈದ್ಯರ ಯೋಗ. ಇವರಿಗೂ ಸಹ ಪಿತ್ರ ತೇಜಸ್ಸಿನ ಕಾಲದ ನಂತರ ರವಿ ಶುಕ್ರರ ಯೋಗದ ಫಲಪ್ರಾಪ್ತಿ. ಇದರಿಂದ ಇವರಿಗೆ ಸುಯೋಗ ಲಾಭ. ಹಾಗಿಲ್ಲ ಮೂವತ್ತೊಂದನೆಯ ವರುಷದಲ್ಲಿ ಸುಯೋಗ ಮೂಡುತ್ತೆ. ಹಸ್ತ ಶುದ್ಧಿಯಿಂದ ಕೀರ್ತಿ ಬೇರೆ.

ಮೂವತ್ತೊಂದು ವರುಷಗಳ ಪರ್ಯಂತ ರವಿ ಶನಿಯೋಗವೇ ಪ್ರಧಾನ. ಈ ಕಾಲದಲ್ಲಿ ತಂದೆಗೆ ಕಷ್ಟ. ಅದೂ ಅಲ್ಲದೆ ರವಿಗೆ ಶುಕ್ರ ಶನಿಯೋಗವಾಗಿ ತಂದೆಗೆ ದ್ವಿಕಳತ್ರಯೋಗ ಆದೀತು. ಹಾಗಿಲ್ಲ ಸ್ತ್ರೀ ಸುಖ ಇರದು. ಎರಡನೆಯ ವಿವಾಹದಿಂದ ತಂದೆಗೆ ಸುಖವೇನೂ ಸಿಗದು. ಆದರೆ ಅವರ ಕಾಲಾನಂತರ ಮಕ್ಕಳಿಗೆ ಶುಭ. ಮೂವತ್ತು ವರ್ಷಗಳ ನಂತರ ಸುಖ ಯೋಗವಿದೆ.

ಈ ರವಿ ಶುಕ್ರಯೋಗ ಮೂವತ್ತೊಂದನೆಯ ವಯಸ್ಸಿಗೆ ಶುರು. ಆಗ ರವಿಯ ಕಾರಣ ಶುಕ್ರನ ಯೋಗ ನಡೆಯುತ್ತೆ. ಉದ್ಯೋಗದ ಕಾರಣ ವಿವಾಹ ಯೋಗ ಎಂದರ್ಥ. ಮೂವತ್ತು ವರುಷಗಳ ನಂತರ ಸುಖದ ಸಂಸಾರ ಜೀವನ ಯೋಗ ಎಂದರು. ನಿಧಾನದ ವಿವಾಹ ಎಂದರ್ಥ.

ಮೂವತ್ತೊಂದು ಸಂಖ್ಯೆ (೩೧) ಶುಭ ಹೆಚ್ಚು ಕೊಡುತ್ತದೆ. ಆದರೆ ಇಲ್ಲಿ ಆ ಒಂದು (೧) ಸಂಖ್ಯೆಯು ಶನಿಯೋಗವನ್ನು ತಡೆಗಟ್ಟಬೇಕು. ಇದಕ್ಕೆ ಸೂರ್ಯ ನಮಸ್ಕಾರ ಉತ್ತಮ ಸಾಧನೆ. ಈ ಉಪಾಸನೆಯಿಂದ ಪುನಃ ತಿರುಗು ಮುರುಗು ಆಗದು. ಹಾಗಿಲ್ಲ ಈಶ್ವರಾರಾಧನೆಯಾದರೂ ಸರಿ, ಜೀವನ ಪಥ ಪ್ರಗತಿಯತ್ತ ಸಾಗಲು ಇದು ಪೂರಕ ಎಂದರೆ ತಪ್ಪಲ್ಲ.

ಈ ಮಂದಿ ಸೂರ್ಯನ ಸಂಖ್ಯೆ ಒಂಭತ್ತರಂತೆ (೯) ಬಹುಶಃ ಇದ್ದಾರು. ಆದರೆ ಮೂವತ್ತು ವರುಷಗಳವರೆಗೆ ಇವರಿಗೆ ಪ್ರಗತಿ ಇರದು. ಈ ರವಿ ಶನಿಯೋಗದ ಕಾರಣ ಬಾಲ್ಯದಲ್ಲಿ ತಂದೆ ಒಂದು ಕಡೆ, ಮಗ ಒಂದು ಕಡೆ ಬೆಳೆದಾರು. ಹಾಗಿಲ್ಲ ಬಾಲ್ಯದಲ್ಲಿಯೇ ತಂದೆ ಬೇರೆ ಲೋಕಕ್ಕೆ ಹೋದಾರು ಅಂತೂ ಬಾಲ್ಯದಲ್ಲಿ ತಂದೆಯಿಂದ ಸುಖ ಇರದು. ಇದು ಪರರಿಂದ ಪೋಷಣೆ ಪಾಲನೆಯಾಗುವ ಯೋಗ ಇವರದು ತಂದೆಗೆ ಪರೋಕ್ಷ ಜೀವನ.

ಪಿತೃ ಸಂಬಂಧದ ಯಾವ ಯೋಗವೂ ಇವರಿಗೆ ಅನುಕೂಲ ಆಗದು. ಪಿತೃ ಆಸ್ತಿಪಾಸ್ತಿಗಳು ಇದ್ದರೂ ಅನುಭವದಲ್ಲಿ ಬಾರದು. ಇದು ಸ್ವಂತ ತೇಜಸ್ಸಿನಿಂದ ಮುಂದೆ ಬರುವ ಯೋಗ. ಶನಿಯು ಒಂದು ಸುತ್ತು ಬಂದನಂತರ ಇವರಿಗೆ ಆ ಶನಿಯು ದೋಷ ನಿವೃತ್ತಿ. ಇದಕ್ಕೆ ಮೂವತ್ತು ವರುಷಗಳಾಗುತ್ತವೆ. ಆ ನಂತರ ಇವರಿಗೆ ಸುಯೋಗ. ತಂದೆಗೂ ಇವರಿಂದ ಸಹಾಯ ಆದೀತು.

ಮೊದಮೊದಲು ನೌಕರಿ ಸಿಗದೆ ಅಲೆದಾಡಿ ಕೆಲವು ಸಲ ಸಿಕ್ಕ ನೌಕರಿ ಸ್ವಲ್ಪ ಕಾಲ ಇದ್ದು ಬಿಟ್ಟಾರು. ಆದರೆ ಮೂವತ್ತು ವರುಷಗಳನಂತರ ಸ್ಥಿರನೆಲೆ ಪ್ರಾಪ್ತಿಯಾಗಿ ಸುಖ ಕಾಣುತ್ತಾರೆ.

## ಜೀವಿತದಲ್ಲಿ ಪ್ರಭಾವ

ಜನ್ಮ ತಾರೀಖು ಪ್ರತಿಮಾಹೆ ಮೂವತ್ತೊಂದು ತಾರೀಖಿನಲ್ಲಿ ಜನನ. ಹಾಗಿಲ್ಲ ಸಾವಿರದ ಒಂಭೈನೂರ ಮೂವತ್ತೊಂದು ಇಸ್ವಿಯಲ್ಲಿ ಜನನವಾದರೂ ಸರಿ ಈ ಸಂಖ್ಯೆಯ ಫಲ ಸ್ಪಷ್ಟ. ನಡೆದೀತು.

ಈ ಮಂದಿ ಉತ್ತಮ ವೈದ್ಯರು, ಖಾಸಗೀ ಸಂಸ್ಥೆಗಳಲ್ಲಿ ಅಧಿಕಾರ ಮಾಡುವವರು. ಛಾಯಾ ಚಿತ್ರ, ಚಲನಚಿತ್ರ ಕಲಾವಿದರು ಹಾಗಿಲ್ಲ ಅಭಿಮಾನಿಗಳಾದರೂ ಆದಾರು. ತಂದೆಯ ಜೀವಿತ ಕಾಲದಲ್ಲಿ ಇವರು ಪ್ರಗತಿ ಆಗುವುದು ಕಷ್ಟ. ಆದರೆ ತಂದೆಗಿಂತ ಹೆಚ್ಚು ಪ್ರಗತಿ ಶೀಲರು, ಇವರಿಗೆ ಸರ್ಕಾರದ ಸೇವೆ ಹಿಡಿಸದು. ವಿಧಿ ಇಲ್ಲದೆ ಸೇರಿದರೆ ಆಗ ಪದೇ ಪದೇ ಬದಲಾವಣೆಗಳ ಬವಣೆ ಬೀಳಬೇಕಾದೀತು.

ಈ ಮುಂದಿಗೆ ಒಂದು ಊನ ಗುಣವೂ ಇದೆ. ತಮಗಿಂದ ಮೇಲಿರುವ ಅಧಿಕಾರಿಗಳನ್ನು ಟೀಕಿಸುವುದು, ತೇಜಸ್ವಿಗಳನ್ನು ಕ್ಷುಲ್ಲಕ ದೃಷ್ಟಿಯಿಂದ ನೋಡುವುದು. ಇವರು ಕಾರ್ಮಿಕರ ಹಿತ ಸಾಧಿಸುವ ಮುಂದಿ. ಆ ಸಂಘ ಸಂಸ್ಥೆಗಳಲ್ಲಿ ಸಕ್ರಿಯ ಪಾತ್ರ ವಹಿಸುವುದು ಇವರಿಗೆ ಇಷ್ಟ.

ಇವರಿಗೆ ಜನ್ಮ ಪ್ರಾಯ ಮೂವತ್ತು ವರ್ಷ ಪರ್ಯಂತ ಕಷ್ಟ. ಇಪ್ಪತ್ತೇಳನೆಯ ವಯಸ್ಸಿನಲ್ಲಿ ಬಾಳಿನಲ್ಲಿ ಶುಭೋದಯ. ಮೂವತ್ತೊಂದು ವರ್ಷಗಳ ನಂತರ ಸುಯೋಗ. ಈ ಯೋಗ ಒಂಭತ್ತು ವರುಷಗಳು ನಡೆಯುತ್ತೆ. ಅನಂತರ ಸಾಮಾನ್ಯ ಜೀವನ ಯೋಗ.

ಇವರಿಗೆ ಸೂರ್ಯ ನಮಸ್ಕಾರ, ಈಶ್ವರ ಆರಾಧನೆ ಉತ್ತಮ. ಕೆಲವರು ಅದ್ವೈತ ವೇದಾಂತ ನಿಷ್ಠರು. ಇವರು ಬಾಳಿನ ಸಂಧ್ಯೆಯಲ್ಲಿ ಸುಖಿಗಳು.

## ಸಂಖ್ಯೆಗಳು ಪ್ರಧಾನ

ಗಣಪತಿ ಸಂಖ್ಯಾಶಾಸ್ತ್ರ ಇದರಲ್ಲಿ ಸಂಖ್ಯೆಗಳು ಪ್ರಧಾನ. ಆ ಸಂಖ್ಯೆಯ ತತ್ವ. ಆ ತತ್ವದ ಗ್ರಹ ಮತ್ತು ಆ ಗ್ರಹದ ಪ್ರಭಾವ ಈ ವಿಷಯಗಳ ವಿಮರ್ಶೆ ಈ ಶಾಸ್ತ್ರದ ಗುರಿ. ಜೀವನದ ಮೇಲೆ ಈ ಪ್ರಭಾವದ ಜ್ಞಾನವೂ ಸಹ ಈ ಶಾಸ್ತ್ರದ ಕೊಡುಗೆ.

ಸಂಖ್ಯೆಗಳು - ಇದರಲ್ಲಿ ಎರಡು ವಿಧ. ಒಂದು ಗ್ರಹ ಸಂಖ್ಯೆ. ಎರಡನೆಯದು ರಾಶಿ ನವಾಂಶಗಳ ಸಂಖ್ಯೆಗಳು. ಈಗ ಕೇವಲ ಗ್ರಹಸಂಖ್ಯಾ ತತ್ವವನ್ನು ಇಲ್ಲಿ ವಿವರಿಸಿದೆ. ಜನ್ಮ ತಾರೀಖು ಸಂಖ್ಯೆಯ ಫಲ ಕಥನ ಈ ನವಖೂನೆಯದು. ರಾಶಿಯಿಂದ ಸಂಖ್ಯೆ ನಿರ್ಣಯ ಮಾಡುವುದರಿಂದ ಇದನ್ನು ರಾಶಿ ಸಂಖ್ಯೆ ಎಂದರು.

### ರಾಶಿಯ ನವಾಂಶ ಸಂಖ್ಯಾ ವಿವರಣೆ

ರಾಶಿ ಸಂಖ್ಯೆ ಕೇವಲ ಅರಿವಿಗಾಗಿ ವಿವರಣೆ. ಇದು ತಿಳಿಯದೆ ಕೇವಲ ಗ್ರಹ ಸಂಖ್ಯೆಯಿಂದಲೇ ಶಾಸ್ತ್ರಕ್ಕೆ ಮಾನ ಸಲ್ಲದು. ರಾಶಿಗಲು ಹನ್ನೆರಡು. ಮನುಷ್ಯನ ಪರಮಾಯುಷ್ಯ ನೂರಿಪ್ಪತ್ತು ವರ್ಷ. ಇದನ್ನು ಈ ಹನ್ನೆರಡು ರಾಶಿಗಳಿಗೆ ಹಂಚಿದರೆ ರಾಶಿಗೆ ಹತ್ತು ವರ್ಷ ಆಯಿತು.

ಈ ನಿಯಮದಲ್ಲಿ ಹತ್ತು ವರ್ಷಕ್ಕೆ ಒಂದು ರಾಶಿ. ಇದನ್ನು ದಶಕ ಎಂದರು. ಮೊದಲನೆಯ ರಾಶಿ ಮೇಷ. ಇದಕ್ಕೆ ಮೊದಲನೆಯ ದಶಕ. ಎರಡನೆಯ ರಾಶಿ ವೃಷಭ. ಇದಕ್ಕೆ ಎರಡನೆಯ ದಶಕ. ಮೊದಲನೆಯ ಹತ್ತು ಒಂದು, ಎರಡು, ಮೂರು ಇತ್ಯಾದಿ ಒಂಭತ್ತು ಅಂಕಗಳು ಈ ರಾಶಿಯ ಒಂಭತ್ತು ನವಾಂಶಗಳನ್ನು ತೋರಿಸುತ್ತೆ. ಮೇಷರಾಶಿಯ ಒಂಭತ್ತು ಅಂಶಗಳಿಗೆ ಒಂಭತ್ತು ಏಕಾಂಕಗಳನ್ನು ಹೊಂದಿಸಿದರು. ಎರಡನೆಯ ವೃಷಭ ರಾಶಿಯಲ್ಲಿ ಎರಡನೆಯ ದಶಕದ ಏಕಾಂಕಗಳನ್ನು ಹೊಂದಿಸಿದರು. ಉದಾಹರಣೆಗೆ ವೃಷಭದ ಒಂಭತ್ತು ನವಾಂಶಗಳಿಗೆ ಕ್ರಮವಾಗಿ ಹನ್ನೊಂದು, ಹನ್ನೆರಡು ಇತ್ಯಾದಿ ಹತ್ತೊಂಭತ್ತು ಸಂಖ್ಯೆಗೆ ಒಂಭತ್ತನೆಯ ಅಂಶ ಪೂರ್ತಿ. ಹೀಗೆ ಮೂರನೆಯ ರಾಶಿ ಮಿಥುನ. ಇದರ ನವಾಂಶಗಳ ಸಂಖ್ಯೆ ಇಪ್ಪತ್ತೊಂದು. ಇಪ್ಪತ್ತೆರಡು ಇತ್ಯಾದಿ ಇಪ್ಪತ್ತೊಂಭತ್ತು ಒಂಭತ್ತನೆಯ ನವಾಂಶ ಆಗುತ್ತದೆ. ಇದೇ ರೀತಿ

ಮೀನ ರಾಶಿ ಹನ್ನೆರಡನೆಯದು. ಹನ್ನೆರಡನೆಯ ದಶಕದ ಏಕಾಂಕ ಸಂಖ್ಯೆಗಳು ನೂರ ಹನ್ನೊಂದು. ನೂರ ಹನ್ನೆರಡು ಇತ್ಯಾದಿ ನೂರ ಇಪ್ಪತ್ತು ಮುಗಿಯುತ್ತೆ.

ಉದಾಹರಣೆಗೆ ಪ್ರಶ್ನೆ ಕೇಳುವವರು "ಎಪ್ಪತ್ತೊಂದು ಸಂಖ್ಯೆ" (೭೧) ಎಂದು ಹೇಳಿಯಾರು. ಈ ಸಂಖ್ಯೆ ಎಂಟನೆಯ ದಶಕದಲ್ಲಿ ಮೊದಲನೆಯ ಸಂಖ್ಯೆ. ಇದು ಮೇಷದಿಂದ ಎಂಟನೆಯ ದಾದ ವೃಶ್ಚಿಕ ರಾಶಿಯಲ್ಲಿ ಮೊದಲನೆಯ ನವಾಂಶವನ್ನು ತೋರಿಸುತ್ತೆ. ಕಾರಣ ರಾಶಿಗೆ ಹತ್ತರಂತೆ ಏಳನೆಯ ರಾಶಿ ತುಲಾಕ್ಕೆ ಎಪ್ಪತ್ತು ಮುಗಿಯುತ್ತೆ. ಈಗ ಆ ಪ್ರಶ್ನಕರ್ತನಿಗೆ ಜಾತಕವಿದೆ. ಆಗ ಆ ಜಾತಕದಲ್ಲಿ ವೃಶ್ಚಿಕದಲ್ಲಿ ಯಾವ ಗ್ರಹವಿದೆ? ಆ ಗ್ರಹದ ವಿಷಯವೇ ಅವರಿಗೆ ಬೇಕಾದ ಸಮಸ್ಯೆ ಮತ್ತು ಪರಿಹಾರ ಎಂದರ್ಥ. ಒಂದು ಸಲ ಆ ರಾಶಿ ಖಾಲಿ ಯಾಗಿದೆ. ಆಗ ಅದರ ತ್ರಿಕೋಣ ರಾಶಿಗಳಾದ ಕಟಕ. ಮೀನಗಳಲ್ಲಿರುವ ಗ್ರಹದಿಂದ ಸಮಸ್ಯೆಯ ಅರಿವು. ಒಂದು ವೇಳೆ ಆ ಮೂರು ರಾಶಿಗಳೂ ಖಾಲಿ. ಆಗ ಆ ಪ್ರಶ್ನೆ ಕೇವಲ ಪರೀಕ್ಷಿಸಲು ಕೇಳಿದ್ದು ನೂರಕ್ಕೆ ನೂರು ಆಗ ಪ್ರಶ್ನೆಯನ್ನೇ ಕೇಳುವುದಿಲ್ಲ. ಒಂದು ಸಮಯ ಆ ರೀತಿ ಇದ್ದರೆ ಆಗ ಗೋಚರದಲ್ಲಿ ವೃಶ್ಚಿಕದಲ್ಲಿರುವ ಗ್ರಹದಿಂದ ಫಲ ಹೇಳಬೇಕು. ಆಗ ಅದು ತತ್ಕಾಲಿಕ ವಿಷಯವಾಗಿರುತ್ತೆ. ಜೀವನದ ಮೇಲೆ ಅಷ್ಟು ಪ್ರಭಾವ ಬೀರುವ ವಿಷಯವಲ್ಲ ಎಂದರ್ಥ.

ಇಲ್ಲಿ ಒಂದ ವಿಶೇಷ. ಮೂಲತಃ ಜಾತಕ ಇರಬೇಕು. ಹಾಗಿಲ್ಲ ಆ ಕಾಲದ ಆರೂಢ ಕುಂಡಲಿ ಇರಬೇಕು. ಏನೂ ಇಲ್ಲದೆ ಇದರಿಂದ ಫಲ ಹೇಳಲು ಆಗದು. ಎರಡೂ ಇದ್ದರೆ ಇದರಿಂದ ಹೇಳಿದ ಫಲ ಪ್ರತ್ಯಕ್ಷ ಪ್ರಮಾಣವು. ಅಲ್ಲದೆ ಆರೂಢ ಕುಂಡಲಿಯಿಂದ ಪೃಚ್ಛಕನ ವಿಷಯ ವಯಸ್ಸು ಎಲ್ಲವೂ ನಿಖರವಾಗಿ ತಿಳಿಯುತ್ತೆ. ಇದಕ್ಕಿಂತ ಉತ್ತಮ ಮಾರ್ಗ ಬೇರೊಂದು ಇರದು. ಆದರೆ ಗ್ರಹ ಸಂಖ್ಯಾವಳಿ ಈ ವಿಷಯದಲ್ಲಿ ಇದರಿಂದ ತೀರಾ ಭಿನ್ನ!

## ಪೂರ್ಣಾಂಕಗಳು

ರಾಶಿ ಸಂಖ್ಯೆ ಕ್ರಮವಾಗಿ ಮೇಷದಿಂದ ಪ್ರಾರಂಭ ಆಗುತ್ತದೆ. ರಾಶಿಯೊಂದಕ್ಕೆ ಹತ್ತು ವರುಷಗಳಂತೆ ೧೨ ರಾಶಿಗಳಿಗೆ ೧೨೦ ವರ್ಷಗಳಾಗುತ್ತದೆ. ಇದು ಮಾನವನ ಪರಮಾಯುಷ್ಯ ಕಾಲ. ಪ್ರತಿ ದಶಕಲ್ಲಿ ಮೊದಲಿನಿಂದ ೯ರ ವರೆಗೆ ಏಕಾಂಕಗಳು. ಇವು ಪ್ರತಿ ರಾಶಿಯ ನವಾಂಶಗಳಿಗೆ ಸರಿಹೊಂದುತ್ತವೆ. ಇದು ಏಕಾಂಕಗಳು. ೧೦. ೨೦. ೩೦ ಇತ್ಯಾದಿ ಅಂಕಗಳು ಪೂರ್ಣಾಂಕಗಳು. ಈ ಪೂರ್ಣಾಂಕಗಳಿಗೆ ಗ್ರಹ ಸಂಖ್ಯೆಯಂತೆ ಫಲ ಹೇಳಬೇಕು ಎಂದು ಕೆಲವರ ಮತ. ಉದಾಹರಣೆಗೆ ಹತ್ತು ಸಂಖ್ಯೆಗೆ ಗುರು-ಶನಿ, ೨೦ಕ್ಕೆ ಗುರು-ಚಂದ್ರ, ೩೦ಕ್ಕೆ ಸೂರ್ಯ-ಶುಕ್ರ, ೪೦ಕ್ಕೆ ಚಂದ್ರ - ಶುಕ್ರ, ೫೦ಕ್ಕೆ ಗುರು-ಶುಕ್ರಯೋಗ, ೬೦ಕ್ಕೆ ಕುಜ-ಶುಕ್ರ. ೭೦ಕ್ಕೆ ರಾಹು-ಶುಕ್ರಯೋಗ, ೮೦ಕ್ಕೆ (ಬುಧ-ಶನಿ) ಶುಕ್ರಯೋಗ, ೯೦ಕ್ಕೆ (ಸೂರ್ಯ-ಗುರು) ಶುಕ್ರಯೋಗ ಹೀಗೆ ಪೂರ್ಣಾಂಕಗಳಿಗೆ ಗ್ರಹಸಂಖ್ಯೆಯಿಂದ ಫಲ ಹೇಳಬೇಕು.

ಈ ಪೂರ್ಣಾಂಕಕ್ಕೆ ಶುಕ್ರನು ಅಧಿಪತಿ. ಯಾವ ಅಂಕ ಪೂರ್ಣಾಂಕ ಆಗುತ್ತದೆಯೋ ಆ ಸಂಖ್ಯೆಯ ಗ್ರಹಕ್ಕೆ ಶುಕ್ರ ಯೋಗವಾಗುತ್ತದೆ. ಉದಾಹರಣೆಗೆ ೫೦. ಇಲ್ಲಿ ೫ ಗುರುವಿನ ಸಂಖ್ಯೆ.

ಇದು ಪೂರ್ಣಾಂಕವಾದಾಗ ೫೦ ಆಗುತ್ತದೆ. ಆಗ ಗುರುವಿಗೆ ಶುಕ್ರನ ಯೋಗವಾಗಿ ಗುರು ಪೂರ್ಣ ಶುಭನಾಗುತ್ತಾನೆ. ಇಲ್ಲಿ ಒಂದು ವಿಚಿತ್ರ. ೨೦ ಗುರು-ಚಂದ್ರರ ಪೂರ್ಣಾಂಕವಾದರೂ ಇದು ಕೇವಲ ಮಾನಸಿಕ ಸಂಸ್ಕಾರ ಸಂಖ್ಯೆ. ಆದರೆ ಗುರುವಿಗೆ ಮತ್ತೊಂದು ಪೂರ್ಣಾಂಕ ೫೦ ಇದ್ದು. ಈ ೨೦ ಪೂರ್ಣಾಂಕವಾದರೂ ಪೂರ್ಣ ಶುಭನಾದ ಗುರುವಿನ ಸಂಖ್ಯೆ ಐವತ್ತೇ ಸರಿ. ಅಂಕಿಯ ಕೊನೆಯ ಅವ್ಯತ್ತದ ಪೂರ್ಣಾಂಕವೇ ಶುಭ ಎನ್ನಬಹುದು.

ಮೊತ್ತದಲ್ಲಿ ಪೂರ್ಣಾಂಕ ಆ ದಶಕದ ರಾಶಿಯ ಸಮಷ್ಟಿ ಫಲವನ್ನು ತೋರಿಸುತ್ತದೆ. ಏಕಾಂಕಗಳಾದರೆ ಕೇವಲ ನವಾಂಶ ಸ್ಥಿತಿಯಿಂದ ಫಲ ಹೇಳುತ್ತೆ. ಉದಾಹರಣೆಗೆ ರಾಶಿಯಲ್ಲಿರುವ ಗ್ರಹಗಳು ಗುಂಪು ಆಗಿದ್ದರೆ ಆಗ ಆ ಫಲ ಆ ದಶಕದ ಪೂರ್ಣಾಂಕದಲ್ಲಿಯೇ ಸ್ಥೂಲವಾಗಿ ಕಾಣುತ್ತದೆ. ಏಕಾಂಕಗಳಲ್ಲಿ ಖಚಿತವಾಗಿ ಕಾಣುತ್ತದೆ. ೨೦ ಸಂಖ್ಯೆಯಲ್ಲಿ ಮಿಥುನ ರಾಶಿಯಲ್ಲಿರುವ ಗ್ರಹಗಳ ಸಮಷ್ಟಿ ಫಲವನ್ನು ಸ್ಥೂಲವಾಗಿ ತಿಳಿಸುತ್ತೆ. ೨೧. ಈ ಫಲ ವಿವರಣೆ ಖಚಿತವಾಗುತ್ತದೆ

ಕೆಲವು ನಾಡೀಗ್ರಂಥಗಳಲ್ಲಿ ಈ ಪೂರ್ಣಾಂಕ ವರುಷದಲ್ಲಿ ಆ ರಾಶಿಯ ಮುನ್ನೋಟದ ಫಲ ಹೇಳಿದೆ. ಮತ್ತೆ ಹಲವು ನಾಡೀಗ್ರಂಥಗಳಲ್ಲಿ ಎರಡು ವರ್ಷ ಸಂಖ್ಯೆಗಳನ್ನು ಸೇರಿಸಿ ಫಲ ಹೇಳಿದ್ದಾರೆ. ಉದಾಹರಣೆಗೆ ೨೦-೨೧, ೨೧-೨೨, ೨೨-೨೩ ಇತ್ಯಾದಿ.

ನಮ್ಮ ಅನುಭವದ ಗಣಿತದಂತೆ ಈ ಪೂರ್ಣಾಂಕಗಳಿಗೆ ಶುಕ್ರನ ಯೋಗ ಆ ಸಂಖ್ಯಾ ಗ್ರಹಕ್ಕೆ ಹೊಂದಿಸಿ ಆ ಫಲವನ್ನು ಉಕ್ತ ಲಗ್ನಕ್ಕೆ ಹೇಳುವುದು ಸರಿ ಹೊಂದುತ್ತದೆ. ಅಲ್ಲದೆ ಈ ಫಲ ಆ ಗ್ರಹದ ಶುಭತ್ವದ ಸಂಖ್ಯೆ ಎಂದರು. ಉದಾಹರಣೆಗ ಗುರು ೫೦ ಸಂಖ್ಯೆಯಲ್ಲಿ ಪೂರ್ಣ ಶುಭನು. ಹುಟ್ಟಿನಿಂದಲೇ ಗುರು ಸರಿ ಇಲ್ಲದಿದ್ದರೆ ಈ ದೋಷ ೫೦ ವರ್ಷಕ್ಕೆ ನೀಗಿ ಶುಭ ಆಗುತ್ತೆ ಎಂದರು. ಹಾಗೆಯೇ ೬೦ರಲ್ಲಿ ಮಂಗಳನ ದೋಷವಿದ್ದರೂ ಅದು ಶುಭದತ್ತ ತಿರುಗೀತು. ಈ ಕಾರಣದಿಂದಲೇ ಆಗ ಶಾಂತಿ ಮಾಡಿಕೊಂಡಾಗ ಪುನಃ ಮಾಂಗಲ್ಯಧಾರಣೆ ಮಾಡಿಸುತ್ತಾರೆ. ಇದೇ ರೀತಿ ಚಂದ್ರನ ದೋಷ ೪೦ ಸಂಖ್ಯೆಯಲ್ಲಿ ಶುಭವಾಗುತ್ತದೆ ಇತ್ಯಾದಿ.

# ಭಾಗ ೨

# ತಿಂಗಳ ಸಂಖ್ಯೆ

ವಿದೇಶೀ ಸಂಖ್ಯಾ ಶಾಸ್ತ್ರದಲ್ಲಿ ಜನನ ತಾರೀಖು, ತಿಂಗಳು ಮತ್ತು ವರುಷ ಸಂಖ್ಯೆಗಳಿಗೆ ಒಂದೇ ನಮೂನೆ ವಿಮರ್ಶೆಯನ್ನು ಕಾಣಬಹುದು. ಆದರೆ ಭಾರತದ ಈ ಗಣಪತಿ ಸಂಖ್ಯಾ ಶಾಸ್ತ್ರದಲ್ಲಿ ದಿನ ಸಂಖ್ಯೆಗೆ ಒಂದು ಫಲ, ತಿಂಗಳ ಸಂಖ್ಯೆಗೆ ಒಂದು ಫಲ, ಹಾಗೆಯೇ ವರುಷ ಸಂಖ್ಯೆಗೂ ಬೇರೆ ಬೇರೆ ರೀತಿಯ ಫಲಗಳನ್ನು ಹೇಳಿದ್ದಾರೆ.

ದಿನ ಸಂಖ್ಯೆಯಿಂದ ಮನುಷ್ಯನ ಗುಣ ಮತ್ತು ಅವನ ಮಾನಸಿಕ ಲಹರಿಗಳನ್ನು ತೋರಿಸುತ್ತದೆ. ತನ್ನ ನಿಜ ಜೀವನದಲ್ಲಿ ತಾನು ಮಾಡುವುದಕ್ಕೆ ಈ ಸಂಖ್ಯೆಯಿಂದ ಉತ್ಪತ್ತಿಯಾದ ಗುಣಗಳೇ ಕಾರಣ. ಆದರೆ ತಿಂಗಳು ಸಂಖ್ಯೆ ಹಾಗಲ್ಲ. ಇದು ಅನ್ಯರಿಂದ ಇವರ ಜೀವನ ಹೇಗೆ ರೂಪಾಂತರ ಹೊಂದುತ್ತದೆ ಎಂಬ ವಿಷಯವನ್ನು ಹೇಳುತ್ತದೆ.

"ತಿಂಗಳು" ಎಂದರೆ ಚಂದ್ರ. ಚಂದ್ರನ ಬೆಳಕಿಗೆ ಬೆಳದಿಂಗಳು ಎಂದಿದ್ದೂ ಇದಕ್ಕೇ ಇ[illegible]ಮು. ತಮಿಳು ಭಾಷೆಯಲ್ಲಿಯೂ ಇದೇ ಅರ್ಥವನ್ನು ಕಾಣಬಹುದು. ಈ ಕಾರಣ ತಿಂಗಳು ಸಂ[illegible]ಂದ್ರನ ಸಂಬಂಧದ ಬಂಧುತ್ವನ್ನು ಹೇಳುತ್ತದೆ. ರವಿಯು ಮನುಷ್ಯನ ಮೂಲ ಜೀ[illegible]ವನು ಅವನ ಮೂಲಗುಣವನ್ನು ತೋರಿಸುತ್ತಾನೆ. ಇದು ದಿನ ಸಂಖ್ಯೆಯಿಂದ ಗೊ[illegible]. ದಿನ ಸಂಖ್ಯೆ ವ್ಯಕ್ತಿಯ ಮೂಲ ಸಂಖ್ಯೆ. ಆದರೆ ತಿಂಗಳ ಸಂಖ್ಯೆ ಅವನ [illegible] ಸಂಸಾರ ಸಂಖ್ಯೆ. ಕಾರಣ, ಚಂದ್ರನ ಬೆಳಕಿಗೆ ಸೂರ್ಯನ ಬೆಳಕೇ ಆಶ್ರಯ.

[illegible] ಪ್ರಧಾನ ವ್ಯಕ್ತಿ, ಕೈಹಿಡಿದ ಹೆಂಡತಿ. ಈಕೆಯ ಪ್ರಭಾವ ಎಂತಹುದು ಎ[illegible]ತಿಂಗಳಿನ ಸಂಖ್ಯೆಯಿಂದ ಪತ್ತೆ ಆಗುತ್ತದೆ. ಹೆಂಡತಿಯ ಗುಣ ಶೀಲಗಳು ಪ್ರ[illegible]ಂಖ್ಯೆಯಿಂದ ರೂಪುಗೊಳ್ಳುತ್ತದೆ. ಈಕೆಗೂ ಅಷ್ಟೆ, ತನ್ನ ನಿಜವಾದ ಗುಣಗಳು ತ[illegible] ದಿನ ಸಂಖ್ಯೆಯಿಂದ ರೂಪಿತವಾಗಿದ್ದರೂ ಮದುವೆಯ ನಂತರ ಅದು. ಯಾವ ರೀತಿ ಬದಲು [illegible] ಅನ್ನುವುದನ್ನು ಈ ಸಂಖ್ಯೆಯಿಂದ ತಿಳಿಯಬಹುದು.

## ಜನವರಿ ತಿಂಗಳಿನಲ್ಲಿ ಶನಿಯ ಪ್ರಭಾವ

ಜನವರಿ ತಿಂಗಳಿಗೆ ಸಂಖ್ಯೆ (೧) ಒಂದು. ಈ ಸಂಖ್ಯೆಗೆ ಶನಿ ಅಧಿಪತಿ. ಇದರಿಂದ ಮನೆಯಾಕೆಗೆ ಈ ಶನಿಯ ಪ್ರಭಾವ ಹೆಚ್ಚು. ಒಂದಲ್ಲ ಒಂದು ರೀತಿ ಈ ಪ್ರಭಾವ ಆಕೆಯ ದಾಂಪತ್ಯ ಜೀವನದಲ್ಲಿ ವ್ಯಕ್ತವಾಗುತ್ತದೆ.

ಶುಭತ್ವ ಕೊಡುವುದರಲ್ಲಿ ಶನಿಗೆ ಅತ್ಯಂತ ಬಲ ಕಡಿಮೆ. ಇದರಿಂದ ಈ ತಿಂಗಳು ಜನನವಾದವರಿಗೆ ತಮ್ಮ ಸ್ಥಿತಿಗತಿಗಳಿಗಿಂತ ಕಡಿಮೆ ದರ್ಜೆಯ ಸಂಸಾರದಲ್ಲಿ ಜನನವಾದ ಹೆಣ್ಣು ಹೆಂಡತಿಯಾಗುವ ಸಂದರ್ಭಗಳೇ ಹೆಚ್ಚು. ಹಾಗಿಲ್ಲ ಮದುವೆಯಾದ ಮೇಲೆ ಎಷ್ಟೇ ಚೆನ್ನಾಗಿದ್ದರೂ ಹೆಂಡತಿಯ ಕಡೆಯವರು ಇವರ ಸ್ಥಿತಿಗತಿಗಳಿಗಿಂತ ಕಡಿಮೆ ಇಳಿಮುಖ ರಾಗುತ್ತಾರೆ ಎಂದರ್ಥ.

ಮನೆಯಾಕೆಗೆ ಈ ಶನಿಯ ಗುಣಗಳು ಊರಿ ನಿಲ್ಲುತ್ತದೆ. ಮನೆಯಲ್ಲಿ ಕೆಲಸಗಳನ್ನು ತಾವು ಮಾಡಿದರೇನೇ ಅವರಿಗೆ ಸಮಾಧಾನ. ಬೇರೆ ಯಾರು ಮಾಡಿದರೂ ಮನಸ್ಸಿಗೆ ತೃಪ್ತಿಯಾಗದು. ಸೇವಕರಿರಲಿ ಇಲ್ಲದಿರಲಿ ಇವರೂ ಸೇವಕರಂತೆ ದುಡಿಯುವ ಮನೋಭಾವ ಎಂದರ್ಥ. ಉತ್ತಮ ವಂಶದಲ್ಲಿ ಜನಿಸಿದರೂ ಮದುವೆಯ ನಂತರ ಕೆಲಸ ಅವರಿಗೆ ಕಟ್ಟಿಟ್ಟ ಬುತ್ತಿ.

ಇವರಿಗೆ ನಿಧಾನದ ಪ್ರವೃತ್ತಿ ಅವಸರ ಇವರಿಗೆ ಆಗದು. ಎಷ್ಟು ಶುಚಿಯಾಗಿದ್ದರೂ ಮತ್ತೆ ಮತ್ತೆ ಶುಚಿ ಮಾಡುತ್ತಿರುವುದು ಇವರಿಗೆ ಹವ್ಯಾಸ. ಸೇವಕರು ಎಷ್ಟೇ ಕೆಲಸ ಮಾಡಲಿ ಅವರು ಇದನ್ನು ಮಾಡಲಿಲ್ಲ ಅದನ್ನು ಮಾಡಲಿಲ್ಲ ಎಂದು ಗೊಣಗುವ ಸ್ವಭಾವ. ಹೊರಗೆ ಹೋಗಬೇಕು. ಆಗ ಇವರಿಂದಲೇ ತಡ ಆದೀತು. ಹೊರಡುವ ಸಮಯಕ್ಕೆ ಸರಿಯಾಗಿ ಏನಾದರೂ ಕೆಲಸ ಮಾಡಲು ಮರೆತೆ ಎಂದು ಮಾಡಲು ಹೋಗುತ್ತಾರೆ. ಇದರಿಂದ ಯಜಮಾನರಿಗೆ ಬೇಜಾರೇ ಸರಿ.

ಶ್ರಮದ ದುಡಿಮೆ ಇವರಿಗೆ ಇಷ್ಟ. ಮೈಗೆ ಸರಿ ಇಲ್ಲ. ಅದು ತೀವ್ರವಾಗುವವರೆಗೆ ಅದನ್ನು ಹೇಳರು. ವಿಪರೀತಕ್ಕೆ ಹೋದಾಗ ಪತಿರಾಯರೇ ತಿಳಿದುಕೊಂಡು ಔಷಧ ಉಪಚಾರ ಮಾಡಿಸಬೇಕು. ಕೆಲವರಂತೂ ಸ್ವಲ್ಪ ಸುಧಾರಿಸಿದರೂ ಸಾಕು. ಔಷಧ ತೆಗೆದುಕೊಳ್ಳುವುದನ್ನು ಬಿಟ್ಟಾರು.

ಕೆಲವರಿಗೆ ಧನಿಕ ವಂಶದ ಹೆಣ್ಣು ಮದುವೆಯಾದೀತು. ಮನೆಯಾಕೆ ಇದರಿಂದ ಮೇಲೆ ಹೇಳಿದ ಕೆಲಸಗಳನ್ನು ಮಾಡದೆ ಇರಬಹುದು. ಆಗ ಈ ಶನಿಯ ಪ್ರಭಾವದಿಂದ ಮದುವೆಯಾದ ಮೇಲೆ ಆಕೆಯ ಆರೋಗ್ಯ ಹದಗೆಟ್ಟು ಯಾವಾಗಲೂ ನರಳಾಡುವಂತೆ ಮಾಡುತ್ತದೆ. ಸೋಮಾರಿತನ ಅವರ ಮೂಲ ಗುಣವಾಗಿ ಅನಾರೋಗ್ಯಕ್ಕೆ ಕಾರಣ ಆಗಬಹುದು. ಅಂತೂ ಯಾವುದಾದರೊಂದು ರೀತಿ ಶನಿ ತನ್ನ ಪ್ರಭಾವವನ್ನು ತೋರಿಸದೆ ಬಿಡನು.

ವಯಸ್ಸಾದ ಮೇಲೆ ಈ ಶನಿ ಮುದಿತನವನ್ನು ತೋರಿಸುತ್ತೆ. ಆಗ ಅವನ ಗುಣಗಳು ಕಡಿಮೆಯಾಗಿ ಸುಖವುಂಟಾಗುವುದು. ಆರೋಗ್ಯ ಕೂಡಾ ಸುಧಾರಿಸುವುದು. ಸೇವಕರಿಂದ ಕೆಲಸ ಮಾಡಿಸಿಕೊಂಡು ಸೋಮಾರಿಗಳಂತೆ ಯಾವಾಗಲೂ ಕೂತು ಇಲ್ಲ ಮಲಗಿಕೊಂಡು ಕಾಲ ಕಳೆಯುವ ಮನೋಭಾವ ಬಂದೀತು. ಶನಿಯ ಫಲ ಅವನು ಭ-ಚಕ್ರದಲ್ಲೆ ಒಂದು ಸುತ್ತು ಬಂದ ನಂತರ ಸುಧಾರಿಸಿ ಸುಯೋಗ ಮೂಡುತ್ತದೆ.

ದಿನ ಸಂಖ್ಯೆಯಿಂದ ಪ್ರಾಪ್ತ ಗುಣಗಳನ್ನು ಬದಲಿಸುವುದು ಪ್ರಯಾಸವಾದರೂ ವಿವಾಹದಿಂದ ಬರಬಹುದಾದ ಈ ಶನಿಯ ಪ್ರಭಾವವನ್ನು ಮಾತ್ರ ಸುಧಾರಿಸಲು ಸಾಧ್ಯ ಎಂದು ಕೆಲವರ ಮತ. ಉದಾಹರಣೆಗೆ ಮದುವೆಯಾಗುವಾಗ ಶನಿಯ ಸಂಖ್ಯೆಯ ಗುಣಗಳನ್ನು ನಿರೋಧಿಸುವ ಸಂಖ್ಯೆಯ ತಿಂಗಳಿನಲ್ಲಿ ಮದುವೆಯಾಗುವುದು ಶುಭ ಎಂದರು. ಈ ಪ್ರತಿನಿರೋಧಕ ಸಂಖ್ಯೆಯ ತಿಂಗಳಿನಲ್ಲಿ ಜನನವಾದ ವಧುವನ್ನು ಹುಡುಕಿ ಮದುವೆಯಾಗುವುದು ಲೇಸು.

ಉದಾಹರಣೆಗೆ ಶನಿಗೆ ಸೂರ್ಯ ಶತ್ರು. ಸೂರ್ಯನ ಸಂಖ್ಯೆ ಒಂಭತ್ತು (೯). ಇದರಿಂದ ಜನವರಿಯಲ್ಲಿ ಹುಟ್ಟಿದ ಜನಗಳಿಗೆ ಒಂಭತ್ತನೆಯ ಸೆಪ್ಟೆಂಬರ್ ತಿಂಗಳಿನಲ್ಲಿ ಹುಟ್ಟಿದ ವಧುವನ್ನು ಮದುವೆಯಾಗುವುದು ಒಂದು ವಿಧಾನ.

ಕೆಲವು ವಿದೇಶಿಯರು ತಮ್ಮ ಜನನದ ತಿಂಗಳಿನ ನಾಲ್ಕನೆಯ ತಿಂಗಳಿನಲ್ಲಿ ಹುಟ್ಟಿದ ವಧು ಲೇಸು ಎಂದರು. ಬಹುಶಃ ಐದನೆಯ ತಿಂಗಳು ತ್ರಿಕೋಣ ಯೋಗದ ಫಲ ನಡೆಯ ಬಹುದು ಎಂದಿರಬಹುದು.

ಐದನೆಯ ಸಂಖ್ಯೆ ಗುರುವಿನದು. ಐದನೆಯ (೫) ತಿಂಗಳಾದ ಮೇ ತಿಂಗಳು ಶನಿಯ ಪ್ರಭಾವವನ್ನು ತಡೆಯಲು ಮಧ್ಯಮ. ಅಂದರೆ ಮೇ ತಿಂಗಳಿನಲ್ಲಿ ಹುಟ್ಟಿದ ವಧು ಜನವರಿ ಹುಟ್ಟಿದ ವರನಿಗೆ ಮಧ್ಯಮ ಫಲ ಎಂದರ್ಥ. ಇಲ್ಲಿ ಮನೆಯಾಕೆ ದೈವ ಭಕ್ತಳು. ಭಕ್ತಿಯ ಆಶ್ರಯದಿಂದ ಶನಿಯ ಕೇಡಿನ ಫಲವನ್ನು ತಡೆಯುವ ಗುಣ ಅವರಲ್ಲಿರುತ್ತೆ. ಆದರೆ ಇಲ್ಲಿ ಈ ಶನಿ ಮಕ್ಕಳಿಲ್ಲದಂತೆ ಮಾಡಿಯಾನು.

ಮೂರು ಸಂಖ್ಯೆ (೩) ಗೆ ಕುಜ ಮತ್ತು ಶನಿಯೋಗವಿರುತ್ತದೆ. ಈಗ ಜನವರಿ ತಿಂಗಳಿನ ವರನಿಗೆ ಮೂರನೆಯದಾದ ಮಾರ್ಚಿ ತಿಂಗಳಿನಲ್ಲಿ ಹುಟ್ಟಿದ ವಧು ಸರಿ ಹೊಂದದು. ಕಾರಣ ಜನವರಿಯ ಶನಿಯ ಗುಣವನ್ನು ಈ ಕುಜ-ಶನಿ ಸಂಯೋಗ ಇನ್ನೂ ಕೆಡಿಸುತ್ತೆ. ಇದು ಕುಜನ ದೋಷದ ಲಕ್ಷಣ. ಈ ಎರಡು ತಿಂಗಳುಗಳ ಮಿಲನ ದಾಂಪತ್ಯದಲ್ಲಿ ದ್ವಿಕಳತ್ರ ಯೋಗವನ್ನು ತೋರಿಸುತ್ತೆ. ವಿವಾಹದಲ್ಲಿ ಮಾತ್ರ ಮೂರು (೩) ಯಾವ ರೀತಿಯಲ್ಲಿಯೂ ಸೇರಬಾರದು ಎಂದು ಹಿರಿಯರ ಅಭಿಪ್ರಾಯ. ಉದಾಹರಣೆಗೆ ತ್ರಿ-ಜ್ಯೇಷ್ಠ ಕೂಡದು ಎಂದರು. ಅಲ್ಲದೆ ಮೂರನೆಯ ಗರ್ಭಜಾತಳಾದ ಗಂಡು ಹೆಣ್ಣಿಗೆ ಶುಭ ನಡೆಯುವುದು ನಿಧಾನ ಮತ್ತು ವಿಘ್ನಗಳೂ ಹೆಚ್ಚು.

ಮೂರು ಸಂಖ್ಯೆಯ ಪ್ರಭಾವ ಜನವರಿ ತಿಂಗಳಿನ ಗಂಡುಗಳಿಗೆ ವಿಚಿತ್ರ. ಮದುವೆಯ ನಂತರ ದೂರದ ಪ್ರಯಾಣ ಕೆಲವರಿಗೆ ಹಲವರಿಗೆ ಮದುವೆಯಿಂದ ಮನೆ ಬಿಟ್ಟು ದೂರ ಹೋಗುವ ಯೋಗ. ದಂಪತಿಗಳಿಗೆ ಸ್ವತಂತ್ರ ಕೊಟ್ಟರೂ ಕಷ್ಟ ಮಾತ್ರ ತಪ್ಪದು. ಒಕ್ಕೂಟದ ಸಂಸಾರದಲ್ಲಿ ಇತರರ ಸಂಖ್ಯೆಯ ಪ್ರಭಾವವಿದ್ದು ಶನಿಯ ಫಲ ಹಿಡಿತಕ್ಕೆ ಬರುವುದು ಹಿತ. ಆದರೆ ಮನೆಯಾಕೆಗೆ ಮಾತ್ರ ಸ್ವತಂತ್ರವಾಗಿ ಪತಿರಾಯನನ್ನು ಹಿಡಿತದಲ್ಲಿಟ್ಟುಕೊಳ್ಳ ಬೇಕೆನ್ನುವ ಹಠ. ಇದರಿಂದ ಶೀಘ್ರದಲ್ಲಿಯೇ ದಂಪತಿಗಳಲ್ಲಿ ವಿರಸಕ್ಕೆ ಹಾದಿಯಾದೀತು.

ಆದರೆ ಪತಿರಾಯನಿಗೆ ಇಂಜನಿಯರಿಂಗ್ ಉದ್ಯೋಗ ಅಥವಾ ಯಂತ್ರಾಲಯದ ಕೆಲಸ ವಾದರೆ ಈ ಸಂಖ್ಯೆಯ ಅಶುಭ ಫಲ ಶುಭದತ್ತ ತಿರುಗಿ ಅನುಕೂಲವಾಗುವುದೆಂದು ಕೆಲವು ತಜ್ಞರ ಅಭಿಪ್ರಾಯ. ಈ ನಮೂನೆ ಉದ್ಯೋಗಕ್ಕೆ ಕುಜ-ಶನಿಗಳ ಸಂಯೋಗವೇ ಕಾರಣ.

ಜನವರಿ ತಿಂಗಳಿನ ಜನಗಳಿಗೆ ಈ ನಾಲ್ಕು ಸಂಖ್ಯೆ (೪)ಯ ತಿಂಗಳಿನ ವಧು ಆ ತಿಂಗಳಿನ ಚಂದ್ರನ ಪ್ರಭಾವದಿಂದ ದುಃಖವನ್ನೇ ಕೊಟ್ಟಾಳು. ಕಾರಣ ಜನವರಿ ತಿಂಗಳಿನ ಶನಿಗೆ ನಾಲ್ಕರ ಚಂದ್ರನ ಸಂಯೋಗವಾಗುತ್ತೆ. ಸಂಸಾರದಲ್ಲಿ ಶನಿ ಚಂದ್ರ ಯೋಗವಾಗಿ ಈ ದುಃಖ ಫಲಿತಕ್ಕೆ ಬರುತ್ತೆ. ಆದರೆ ಸಮುದ್ರತೀರ ವಾಸದಿಂದ ಈ ಚಂದ್ರನ ದೋಷ ಪರಿಹಾರವಾಗಿ ಒಳಿತಾದೀತು.

ಎಂಟನೆಯ ಸಂಖ್ಯೆಗೆ ಬುಧ ಮತ್ತು ಶನಿಯೋಗವಿದೆ. ಇದು ಆಗಸ್ಟ್ ತಿಂಗಳು. ಜನವರಿ ತಿಂಗಳಿಗೆ ಶನಿಯೋಗವಿದೆ. ಈ ವಿವಾಹದಿಂದ ಮನೆಯಾಕೆಗೆ ಬುಧಾರಿಷ್ಟ ಯೋಗವಾಗುತ್ತೆ. ಬುಧ ಇಲ್ಲಿ ಅತ್ತೆಯಿಂದ ಕಷ್ಟವನ್ನು ತೋರಿಸುತ್ತಾನೆ. ಮದುವೆಯ ನಂತರ ಎಂಟು ವರುಷಗಳು. ಈ ಬಾಧೆಯಿಂದ ನರಳಬಹುದು. ಅನಂತರ ಇವರಿಗೆ ಸುಖ ಉಂಟಾಗುವುದು. ಅತ್ತೆ ಮಾವಂದಿರಿಂದ ದೂರ ಇರುವುದು ಇವರಿಗೆ ಇಷ್ಟ. ಕೆಲವರಿಗೆ ಮನೆ ಬದಲಿಸುವುದರಿಂದ ಕ್ಷೇಮ ಉಂಟು.

ಏಳನೆಯ ತಿಂಗಳಾದ ಜುಲೈನಲ್ಲಿ ಹುಟ್ಟಿದ ಕನ್ಯೆಯನ್ನು ಜನವರಿ ತಿಂಗಳಿನ ಮಂದಿ ಮದುವೆಯಾದರೆ ಮದುವೆಯಾದ ವರುಷದಲ್ಲಿ ಸಾವು- ನೋವುಗಳು ಬಂಧುತ್ವದಲ್ಲಿ ಸಂಭವಿ ಸುತ್ತವೆ. ಕಾರಣ ಏಳನೆಯ ಸಂಖ್ಯೆಯ ರಾಹುವಿಗೂ ಜನವರಿಯ ಶನಿಗೂ ಯೋಗವಾಗಿ ಈ ಫಲ ನಡೆಯುವುದು. ಮನೆಯಾಕೆಗೆ ಮೂವತ್ತು ವರುಷಗಳು ಆಗುವವರೆಗೆ ಮೈಗೂ ಪದೇ ಪದೇ ಆಲಸ್ಯವಿರುತ್ತದೆ. ಕೆಲವರಿಗೆ ಮಹಾ ವ್ಯಾಧಿಯ ಭಯ ಬೇರೆ.

ಹತ್ತನೆಯ ತಿಂಗಳಲ್ಲಿ ಹುಟ್ಟಿದ ಕನ್ಯೆಯನ್ನು ವಿವಾಹವಾಗುವುದರಿಂದ ಆ ಸಂಖ್ಯೆಯ ಗುರು ಶನಿಯೋಗದಿಂದ ಮಕ್ಕಳು ಆಗುವುದು ನಿಧಾನ. ಆದರೂ ಬದುಕುವುದೂ ಕಷ್ಟ. ಬದುಕಿದರೂ ಸುಖವಿರದು. ಇದಕ್ಕೆ ಶ್ರೀಕೃಷ್ಣ ಚರಿತ್ರೆಯನ್ನು ಪಾರಾಯಣ ಮಾಡುವುದು ಲೇಸು. ಇದರಿಂದ ಮುಂದೆ ಹುಟ್ಟುವ ಮಕ್ಕಳಿಂದ ಸುಖಪ್ರಾಪ್ತಿಯಾಗುತ್ತೆ. ಅಲ್ಲದೆ ಆಕೆಯ ಮನೆಯವರು ದೈವಭಕ್ತರು. ಇದು ಒಂದು ಅನುಕೂಲ. ಮೊದಲ ಮಗು ಜನನದ ನಂತರ ಈ ದೋಷ ನಿವಾರಣೆಯಾಗುವುದು.

ಜನವರಿ ತಿಂಗಳಿನ ಮಂದಿಗೆ ನವೆಂಬರ್ ತಿಂಗಳಿನ ಕನ್ಯೆ ವಿವಾಹ ಒಂದು ವಿಚಿತ್ರ. ಹನ್ನೊಂದು ಸಂಖ್ಯೆಗೆ ಶುಕ್ರ ಶನಿಯೋಗ. ಈ ಯೋಗದಿಂದ ಎಷ್ಟು ಕಾಲವಾದರೂ ಮದುವೆ ನಿರ್ಣಯವಾಗದು. ಅಲ್ಲದೆ ಕನ್ಯೆಯ ಅಕ್ಕನಿಗೆ ಮದುವೆ ಇಲ್ಲದೆ ಹೋಗುವ ಸಂಭವ ಇದ್ದು ಹಿರಿಯಾಕೆಯನ್ನು ಮದುವೆಯಾಗಲೆಂದು ನಿಧಾನ ಮಾಡುವುದೂ ಉಂಟು. ಶುಕ್ರ ಶನಿಯೋಗದ ಪ್ರಭಾವದಿಂದ ಮದುವೆಯಲ್ಲಿ ಆಸಕ್ತಿಯನ್ನು ಕಳೆದುಕೊಂಡು ಬೇಸರದ ಮನಸ್ಸಿನ ಕನ್ಯೆ ಯನ್ನು ವಿವಾಹ ಆಗುವ ಯೋಗ ಆದೀತು ಎರಡನೆಯದಾಗಿ ತಾನು ಪ್ರೀತಿಸಿದವನನ್ನು ಮದುವೆಯಾಗದೆ ಅನ್ಯ ವರನನ್ನು ಮದುವೆಯಾಗುವ ಯೋಗವಾದರೂ ಆದೀತು. ಅಲ್ಲದೆ

ಈಕೆಗೆ ಸುಖದ ಮೇಲೆ ಆಸೆಯೂ ಅಲ್ಪವಿದ್ದು ದಾಂಪತ್ಯದಲ್ಲಿ ಸುಖ ಇರದು. ಲಕ್ಷ್ಮೀ ಪೂಜೆ ಮಾಡುವುದರಿಂದ ಶಾಂತಿ ನೆಲಸಿ ನೆಮ್ಮದಿ ಬಂದೀತು.

ಹನ್ನೆರಡನೆಯ ಡಿಸೆಂಬರ್ ತಿಂಗಳಿನ ಕನ್ಯೆ ಶುಭವನ್ನು ತಂದಾಳು. ಕಾರಣ ಈ ಸಂಖ್ಯೆಗೆ ಶುಕ್ರ-ಮಂಗಳ ಯೋಗವಿರುತ್ತೆ. ಇದು ಜನವರಿ ತಿಂಗಳ ದೋಷವನ್ನು ನಿವಾರಿಸಿ ಸುಖವನ್ನು ಕೊಡುತ್ತೆ. ಆದರೆ ಮದುವೆಯಲ್ಲಿ ಸುಖವಿಲ್ಲದ ಒಂದು ಹೆಣ್ಣು ಇವರ ಮನೆಯಲ್ಲಿ ಇರುತ್ತಾಳೆ. ಕಾರಣ ಹನ್ನೆರಡು ಸಂಖ್ಯೆಯ ಫಲ ಒಂಟಿ ಇರುವುದಿಲ್ಲ. ಹನ್ನೊಂದರ ಫಲ ಅನುಭವಿಸುವ ಮಂದಿ ಇವರೊಂದಿಗೇ ಇದ್ದಾರು.

**ಶನಿಯ ಅರಿಷ್ಟ ಕಾಲ**

ಜನವರಿ ತಿಂಗಳಿಗೆ ಒಂದು ಸಂಖ್ಯೆಯ ಶನಿ ಅಧಿಪತಿ. ಇವನ ಫಲ ಸಂಸಾರದಲ್ಲಿ ಕಾಣುತ್ತೆ. ಈ ಶನಿಯ ಅರಿಷ್ಟ ಮನೆಯಾಕೆಗೆ ಶನಿ ಗೋಚರದಲ್ಲಿ ಒಂದು ಸುತ್ತು ಬಂದರೆ ಆಗ ಶಮನವಾಗುತ್ತೆ. ಇದಕ್ಕೆ ಆಕೆಗೆ ಮೂವತ್ತು ವರುಷ ವಯಸ್ಸಾಗಬೇಕು. ಅಂದರೆ ಮದುವೆಯಾಗುವಾಗಲೇ ಆಕೆಗೆ ಮೂವತ್ತು ವರುಷ ದಾಟಿದ್ದರೆ, ಈ ದೋಷದ ಫಲ ಇಲ್ಲ ಎಂದರ್ಥ. ಆಗ ಈ ಶನಿಯ ಫಲ ಕೇವಲ ವಯಸ್ಸಾದ ಕನ್ಯೆ ಎಂದು ಆರೋಪದಲ್ಲಿ ಕೊನೆಯಾಗುತ್ತೆ.

ಎರಡನೆಯದಾಗಿ ಈ ಮಂದಿಗೆ ಮನೆಯಲ್ಲಿ ಆಸಕ್ತಿ ಅಷ್ಟಾಗಿ ಇರುವುದಿಲ್ಲ. ಹಿತ ಮಿತದ ದಾಂಪತ್ಯ ಎನ್ನಬಹುದು. ಮನೆಯಲ್ಲಿಯೂ ಶಾಂತಿ. ಈ ದಾಂಪತ್ಯ ವಯಸ್ಸಾದ ಮೇಲೆ ಶುದ್ಧ ಪ್ರೀತಿಯಿಂದ ಕೂಡಿ ಸುಖಮಯವಾಗಿರುತ್ತೆ. ಕಾರಣ ಶನಿ ಮುದಿತನದಲ್ಲಿ ಸುಖವನ್ನು ಕೊಡುವ ಗ್ರಹ. ಬಾಲ್ಯದಲ್ಲಿ ಮಾತ್ರ ಕಷ್ಟ.

## ಫೆಬ್ರವರಿ ತಿಂಗಳು – ಸಂಖ್ಯೆ ಎರಡು (೨)

ಹುಟ್ಟಿದ ತಾರೀಖು. ಇದರಲ್ಲಿ ದಿನ ಸಂಖ್ಯೆ, ತಿಂಗಳ ಸಂಖ್ಯೆ ಮತ್ತು ವರುಷ ಸಂಖ್ಯೆ ಈ ಮೂರು ಸಂಖ್ಯೆಗಳ ಪ್ರಭಾವ ಇರುತ್ತದೆ. ದಿನ ಸಂಖ್ಯೆ ಆ ವ್ಯಕ್ತಿಯ ಗುಣಶೀಲಗಳನ್ನು ತೋರಿಸುತ್ತೆ. ಆದರೆ ತಿಂಗಳ ಸಂಖ್ಯೆ ಅವರ ಸಂಸಾರ ಸಂಗಾತಿ ಗುಣ ಮತ್ತು ಅವರೊಡನೆ ಸಹಬಾಳ್ವೆಯ ರೂಪುರೇಖೆಗಳನ್ನು ತೋರಿಸುತ್ತೆ. ಉದಾಹರಣೆಗೆ ಫೆಬ್ರವರಿ ತಿಂಗಳಿನಲ್ಲಿ ಜನನ. ಆಗ ಅದರ ಸಂಖ್ಯೆ ಎರಡು(೨) ಆಗುತ್ತೆ. ಈ ಸಂಖ್ಯೆಯ ಪ್ರಭಾವ ಅವರ ಮನೆಯಾಕೆಯ ಜೀವನವನ್ನು ರೂಪಿಸುತ್ತದೆ. ಶ್ರೀಮತಿಯ ಜನನ ತಾರೀಖಿನಂತೆ ಆಕೆಯ ಗುಣಶೀಲಗಳು ಇದ್ದರೂ ಮದುವೆಯ ನಂತರ ಪತಿರಾಯನ ತಿಂಗಳಿನ ಸಂಖ್ಯೆಯ ಪ್ರಭಾವಕ್ಕೆ ಒಳಗಾಗಿ ಮಾರ್ಪಾಟನ್ನು ಹೊಂದುತ್ತದೆ ಎಂದರ್ಥ.

ಫೆಬ್ರವರಿ ತಿಂಗಳಿಗೆ ಎರಡು ಸಂಖ್ಯೆ (೨). ಈ ಸಂಖ್ಯೆಗೆ ಗಣಪತಿ ಸಂಖ್ಯಾಶಾಸ್ತ್ರ ಪ್ರಕಾರ ಬುಧ ಗುರುಗಳು ಅಧಿಪತಿಗಳು. ಇವರಿಬ್ಬರ ಸಂಯೋಗ ಫಲ ಈ ತಿಂಗಳಿಗೆ ಸರಿಹೊಂದುತ್ತದೆ. ಬುಧ ಬುದ್ಧಿಯ ಗ್ರಹ. ಗುರು ವಿವೇಕದ ಗ್ರಹ. ಇವರೆಡರ ಸಂಯೋಗದ ಫಲ ಈ ತಿಂಗಳಿನ ಮಂದಿಯ ಮೇಲೆ ಪ್ರಭಾವ ಬೀರುತ್ತದೆ. ಅಂದರೆ ಇವರು ಬುದ್ಧಿವಂತರ ಮನೆಯ ಹೆಣ್ಣನ್ನು

ಮದುವೆಯಾಗುವ ಯೋಗ ಎಂದರ್ಥ. ಈ ಸಂಖ್ಯೆ ಶಾಸ್ತ್ರ ಅಧ್ಯಯನ ಸಂಖ್ಯೆ. ಇದರಿಂದ ಶ್ರೀಮತಿಯು ಪುಸ್ತಕ ಪ್ರಿಯಳು. ಕೆಲವರು ಲೇಖಕಿಯರೂ ಆದಾರು. ಇವರ ಮಾತು ಚತುರತೆ ಆಳವಾದ ಮತ್ತು ಅರಿವಿನ ಪ್ರತಿಭೆಯಿಂದ ಕೂಡಿರುತ್ತೆ.

ಬುದ್ಧಿವಂತರ ಮನೆತನ. ವಿದ್ಯಾವಂತರು, ಲೇಖಕರು, ವಾಚಾಳಿಗಳು ಎಂದರೆ ಇವರಿಗೆ ಪ್ರಿಯ. ದಿನ ಜೀವನದ ಸಂಸಾರ ತಾಪತ್ರಯ ಇವರಿಗೆ ಓಡಿಸದು. ಅದರೆ ಮಾತೂ ಎಂದರ ಬೇಸರ. ಗೆಳತಿಯರು ಬಂದರೆ ಆ ಪುಸ್ತಕ ಹೀಗೆ. ಹಾಗೆ ಎಂದೇ ಇವರ ಮಾತು. ವಿದ್ಯಾವಂತರ ಕುಟುಂಬ. ಈ ಅಭಿಮಾನ ಬೇರೆ. ಇನ್ನು ತಾವೂ ವಿಶೇಷ ವಿದ್ಯಾವಂತರಾದರೆ ಅಭಿಮಾನದ ಜೊತೆಗೆ ಬಿಗುಮಾನ ಬೇರೆ. ಇವರ ಮಾತಿನಲ್ಲಿ ಭಾಷೆ ಶುದ್ಧ ಮತ್ತು ಸರಳ. ಅಶ್ಲೀಲ ಶಬ್ದಗಳು ಕನಸಿನಲ್ಲಿಯೂ ತಲೆಹಾಕವು. ಮೊತ್ತದಲ್ಲಿ ಇವರ ಮಾತಿನ ಮೋಡಿಗೆ ಮರುಳಾಗದವರಿಲ್ಲ.

ಈ ಸಂಖ್ಯೆಯ ಫಲ ಮದುವೆಯ ನಂತರ ಪ್ರಾಪ್ತಿ. ಅದಕ್ಕೆ ಮೊದಲು ಇರಬಹುದು. ಇಲ್ಲ, ಅಂದರೆ ಈ ಸಂಖ್ಯೆಯ ಗುಣಗಳನ್ನು ಬಿಂಬಿಸುವ ಹೆಣ್ಣು ಇವರಿಗೆ ಪ್ರಿಯ ಎಂದರ್ಥ. ಹೆಣ್ಣು ಯಾವುದಿರಲಿ, ಹೆಂಡತಿಯಾದ ಮೇಲೆ ಪತಿಯ ತಿಂಗಳಿನ ಸಂಖ್ಯಾಫಲ ಮತ್ತು ಅದರ ಪ್ರಭಾವಕ್ಕೆ ಸಿಕ್ಕುವುದು ಸಹಜ.

ಈ ಸಂಖ್ಯೆ ಬುದ್ಧಿ ವಿಕಾಸದ ಸಂಖ್ಯೆ. ಈ ಕಾರಣ ಇವರಿಗೆ ದೈಹಿಕ ಶ್ರಮ ಅಷ್ಟಾಗಿ ಇರದು. ಅಂದರೆ ಸೇವಕರಿಂದ ಮನೆಯಲ್ಲಿ ಕೆಲಸ ಕಡಿಮೆ ಇದ್ದೀತು. ಬುಧನ ಪ್ರಭಾವದಿಂದ ಇವರಿಗೆ ಸ್ನೇಹಿತರು ಹೆಚ್ಚು. ಮನೆಗೆ ಬರುವ ಬಂಧುಗಳೂ ಹೆಚ್ಚು. ಎಲ್ಲರಲ್ಲಿಯೂ ಹೊಂದಿಕೆಯ ಸ್ವಭಾವ ಸಹಜವಿದ್ದು ಇವರಿಗೆ ಎಲ್ಲರಲ್ಲಿ ಒಳ್ಳೆಯ ಹೆಸರು ಬರುತ್ತೆ. ಬರವಣಿಗೆಯ ಪ್ರೀತಿಯ ಕಾರಣ ಪತ್ರ ವ್ಯವಹಾರವೂ ಇವರಿಗೆ ದಿನಚರಿ ಇದ್ದೀತು.

ಕೆಲವರು ಬರೆಯುವ ಉದ್ಯೋಗದಲ್ಲಿ ಕೂಡಾ ಇರಲು ಶಕ್ಯ. ಪತ್ರಿಕೆಯ ಕಛೇರಿಗಳಲ್ಲಿ ಕೆಲಸ ಇರಬಹುದು. ಹಾಗಿಲ್ಲ, ಆಡಳಿತದ ಸಂಘ ಸಂಸ್ಥೆಗಳಲ್ಲಿ ಬರೆಯುವ ಶೀಘ್ರಲಿಪಿಕಾರ ರಾಗಿರ ಬಹುದು (ಸ್ಟೆನೋಗ್ರಫಿ). ಹಾಗಿಲ್ಲ, ಬಿಡುವಿನ ವೇಳೆಯ ಹವ್ಯಾಸೀ ಕತೆ ಕಾದಂಬರಿಗಳ ಲೇಖಕರಾಗಬಹುದು. ಮೊತ್ತದಲ್ಲಿ ಇವರು ಪತಿರಾಯನಿಗೆ ಒಪ್ಪು ಮನಸ್ಸಿನ ಸ್ನೇಹಿತರು.

ಸಂಖ್ಯಾ ಶಾಸ್ತ್ರದಲ್ಲಿ ಕೇವಲ ಸಂಖ್ಯಾಶಾಸ್ತ್ರ ಮಾರ್ಗವನ್ನು ಹಿಡಿದು ಫಲ ಹೇಳುವಾಗ ಮಾತ್ರ ಇದು ಸಂಪೂರ್ಣ ಫಲವನ್ನು ಕೊಟ್ಟೀತು. ಜ್ಯೋತಿಷ್ಯ ಶಾಸ್ತ್ರ ಫಲವನ್ನೂ ನೋಡಿಕೊಳ್ಳುತ್ತಾ ಜೊತೆ ಜೊತೆಯಾಗಿ ನೋಡಲು ಹೋದರೆ ಆಗ ಇದು ಸರಿ ಬರದೆ ಇರಬಹುದು. ಈ ಎರಡು ಮಾರ್ಗಗಳಿಗೂ ಸಮನ್ವಯ ಆದೀತು. ಇಲ್ಲ, ಈ ಕಾರಣ ಸಂಖ್ಯಾ ಶಾಸ್ತ್ರ ಫಲಕಥನ ಮಾಡುವಾಗ ಜ್ಯೋತಿಷ್ಯದ ಪ್ರಭಾವವನ್ನು ತಡೆಹಿಡಿಯುವುದು ಲೇಸು.

## ಶ್ರೀಮತಿಯ ಜನನ ತಾರೀಖು – ಅದರ ಪ್ರಭಾವ

ಪತಿರಾಯರ ತಿಂಗಳಿನ ಸಂಖ್ಯೆ. ಅದರ ಅಧಿಪತಿ ಗ್ರಹ ಶ್ರೀಮತಿಯ ಜನ್ಮ ತಾರೀಖಿನ ದಿನ ಸಂಖ್ಯೆ ಗ್ರಹ. ಎರಡರ ಪ್ರಭಾವದಲ್ಲಿ. ಹೊಂದಾಣಿಕೆ ಇದ್ದರೆ ಆಗ ತಿಂಗಳಿನ ಸಂಖ್ಯೆಯ

ಫಲ ಪೂರ್ಣ. ವಿರೋಧ ಇದ್ದರೆ ಅಭಿಪ್ರಾಯಗಳಲ್ಲಿಯೂ ವಿರೋಧ ಕಾಣಿಸೀತು. ಫೆಬ್ರುವರಿ ತಿಂಗಳಿಗೆ ಸಂಖ್ಯೆ ಎರಡು (೨) ಈ ಸಂಖ್ಯೆಗೆ ಬುಧ ಗುರುಗಳ ಸಂಯೋಗ ಫಲ. ಈ ಗ್ರಹಗಳ ಪ್ರಭಾವಕ್ಕೆ ಪೂರಕವಾಗಿರುವ ಗ್ರಹಗಳ ಸಂಖ್ಯೆಯ ದಿನ ಅಥವಾ ತಿಂಗಳಿನಲ್ಲಿ ಜನಿಸಿದ ವಧುವನ್ನು ಆರಿಸುವುದು ಉತ್ತಮ. ಬದಲು ಮಾರಕವಾದ ಅಥವಾ ವಿರೋಧವಾದ ಗ್ರಹಗಳ ಸಂಖ್ಯೆಯ ದಿನ ಯಾ ತಿಂಗಳಿನಲ್ಲಿ ಜನಿಸಿದ ವಧುವನ್ನು ಮದುವೆ ಆದರೆ ಆಗ ಆ ಎರಡು ಪ್ರಭಾವಗಳ ತಿಕ್ಕಾಟದ ಅನುಭವ ದಾಂಪತ್ಯದಲ್ಲಿ ಕಂಡುಬಂದೀತು.

ಉದಾಹರಣೆಗೆ ಬುಧನ ತತ್ವಗಳು ಎಂದರೆ ಮೈತ್ರಿ ಅಭಿವೃದ್ಧಿ ಮಾಡುವ ತತ್ವ. ಈ ಗುರಿ ಸಾಧನೆಗಾಗಿ ಮಾಡುವ ಎಲ್ಲಾ ಸಾಧನೆಗಳಿಗೂ ಬುಧನೇ ಅಧಿಪತಿ. ಮಧುರ ಮಾತು, ಪತ್ರ ವ್ಯವಹಾರ. ಸಂತಸ ಚಿತ್ತ. ಇತರರಲ್ಲಿ ಹೊಂದಾಣಿಕೆ ಇತ್ಯಾದಿ ಗುಣಗಳು ಸ್ನೇಹ ಮತ್ತು ಬಾಂಧವ್ಯಗಳ ಸಂರಕ್ಷಣೆಗೆ ಮೂಲ ಆಧಾರ. ಇದಕ್ಕೆ ವಿರೋಧವಾದ ಗುಣಗಳನ್ನು ಹೊಂದಿರುವ ಗ್ರಹ ಸಂಖ್ಯೆಯ ತಿಂಗಳಿನಲ್ಲಿ ಜನನವಾದ ವಧು ಈ ವಿರೋಧ ಗುಣಗಳನ್ನೇ ಮೂಲವಾಗಿ ಹೊಂದಿದ್ದು ಪರಸ್ಪರ ಹೊಂದಾಣಿಕೆ ಆಗುವುದು ಕಠಿಣ ಆಗುತ್ತೆ. ಉದಾಹರಣೆಗೆ ಮಂಗಳನ ತತ್ವ. ಇವನ ಸಂಖ್ಯೆ ಮೂರು (೩) ಹಿಡಿದ ಪಟ್ಟನ್ನು ಬಿಡದೆ ಸಾಧಿಸುವ ಹಠ ಇವನ ತತ್ವ. ಮಾತಿನಲ್ಲಿ ಇಲ್ಲ. ಕೆಲಸದಲ್ಲಿ ಇನ್ನೊಬ್ಬರ ಗೊಡವೆಯೇ ಇಲ್ಲದೆ ಸಾಧಿಸುವುದು. ಏನು ಕೆಲಸ ಮಾಡಲಿ ಅದು ಯಾರಿಗಾದರೂ ವಿರೋಧ ಇರುವುದು ಇತ್ಯಾದಿ ಬಂಧುತ್ವದ ಮಾಧುರ್ಯಕ್ಕೆ ಹುಳಿಯಾಗುವ ಕೆಲಸಗಳು ಈ ಮಂಗಳನ ಮೂರು ಸಂಖ್ಯೆಯ ಗುಣ. ಇದರಿಂದ ದಾಂಪತ್ಯದಲ್ಲಿ ಸುಖದ ಅನುಭವ ಎಂತು? ಈ ಕಾರಣ ಗಂಡಿನ ಜನನದ ತಿಂಗಳಿನ ಸಂಖ್ಯೆಗೆ ಅನುಗುಣವಾದ ತಿಂಗಳು ಅಥವಾ ದಿನ ಸಂಖ್ಯೆಯುಳ್ಳ ವಧುವನ್ನು ಆರಿಸಿ ಮದುವೆಯಾಗು ವುದರಿಂದ ದಾಂಪತ್ಯದಲ್ಲಿ ಅನುಕೂಲ ಆದೀತು.

ಈ ಮಂಗಳನ ಸಂಖ್ಯೆಗಳಲ್ಲಿ ಮೂರು ಕಷ್ಟದ ಸಂಖ್ಯೆ. ಮಾರ್ಚಿ ತಿಂಗಳಿನ ವಧು ಬುಧನ ಸಂಖ್ಯೆಯಾದ ಎರಡನೆಯ ತಿಂಗಳಿನ ಫೆಬ್ರುವರಿಯ ಗಂಡಿಗೆ ತ್ರಾಸದಾಯಕ ಎನ್ನಬಹುದು. ಆದರೆ ಆರನೆಯ ತಿಂಗಳಾದ ಜೂನ್ ತಿಂಗಳು ಮಂಗಳನ ಶುಭಯೋಗ ಕೊಡುವ ಸಂಖ್ಯೆಯ ತಿಂಗಳು. ಈ ತಿಂಗಳಿನ ವಧು ಮಂಗಳನ ತತ್ವಗಳನ್ನು ಹೊಂದಿದ್ದರೂ ಆರು ಸಂಖ್ಯೆಗೆ ಮಂಗಳ ಶುಕ್ರರ ಸಂಯೋಗ ಫಲವಿದ್ದು ದಾಂಪತ್ಯದಲ್ಲಿ ಪ್ರೀತಿ. ಅನುರಾಗ ಪ್ರಧಾನವಾಗಿ ಈ ವಿರಸ ತರುವ ಗುಣಗಳು ಕಡಿಮೆಯಾಗಿ ಗಂಡು ಇಲ್ಲ. ಹೆಣ್ಣು ಇಬ್ಬರಲ್ಲಿ ಒಬ್ಬರು ಸೋತು ದಾಂಪತ್ಯ ಸುಖಮಯವಾಗುವುದು ಎಂದು ಹಿರಿಯರ ಅಭಿಪ್ರಾಯ. ಹೆಣ್ಣು ಗಂಡಿನ ಮೈತ್ರಿಯ ಸ್ವಭಾವ ದಿಂದ ಹೆಣ್ಣಿಗೇ ಜಯ ಎಂದು ಬೇರೆ ಹೇಳಬೇಕಾದ್ದಿಲ್ಲ. ಅಂದರೆ ಗಂಡಸೇ ಸೋತು ಅನುರಾಗಕ್ಕೆ ಪೋಷಕವಾಗುವುದು ಎಂದರ್ಥ.

ಫೆಬ್ರುವರಿ ತಿಂಗಳಿಗೆ ಎರಡು (೨) ಸಂಖ್ಯೆ. ಇದಕ್ಕೆ ಬುಧ ಗುರು ಸಂಯೋಗ ಇದೆ. ಈ ತಿಂಗಳಿನ ಜನನದ ಮಂದಿಗೆ ಐದನೆಯ (೫) ತಿಂಗಳಿನ ಮೇನಲ್ಲಿ ಹುಟ್ಟಿದ ವಧು ಉತ್ತಮ. ಕಾರಣ. ಈ ತಿಂಗಳಿಗೆ ಗುರು ಅಧಿಪತಿ. ಇವರ ಮನೆಯವರು ವಿದ್ಯಾ ಮೂಲಕ ಜೀವನ ಮಾಡುವ ಮಂದಿ. ಹಾಗಿಲ್ಲ. ಧನ ವ್ಯವಹಾರದಿಂದ ಜೀವನ. ಬ್ಯಾಂಕು ಇತ್ಯಾದಿ ಕೆಲಸ ಮಾಡುವ ಹೆಣ್ಣು ಆದೀತು. ಇವರಿಗೆ ಮದುವೆಯಾದ ಕೆಲವೇ ವರುಷಗಳಲ್ಲಿ ಮಕ್ಕಳು ಆಗುತ್ತವೆ.

ಅಲ್ಲದೆ ಪುತ್ರ ಸಂತಾನವಾದ ಮೇಲೆ ಸುಯೋಗ ನಡೆಯುವುದು. ಗುರು ಪ್ರಗತಿಯತ್ತ ಒಯ್ಯುವ ಗ್ರಹ. ಈ ಕಾರಣ ಇವರಿಬ್ಬರ ವಿವಾಹ ಪ್ರಗತಿಗೆ ನಾಂದಿ ಎನ್ನಬಹುದು.

ನಾಲ್ಕನೆಯ ತಿಂಗಳಿನ ವಧುವಿಗೆ ಈ ಸಂಖ್ಯೆಯ ಚಂದ್ರನ ಪ್ರಭಾವ ಇರುತ್ತದೆ. ಈ ಕಾರಣ ಬುಧ ಚಂದ್ರಯೋಗ ಆಗಿ ಮಾನಸಿಕ ಪ್ರೇಮವನ್ನು ತೋರಿಸುತ್ತೆ. ಮದುವೆಗೆ ಮುನ್ನ ಪರಸ್ಪರ ಅಭಿಮಾನದಿಂದಿರುವುದು ಎಂದರ್ಥ. ಅಲ್ಲದೆ ನಾಲ್ಕು ಜನ ಈ ಬಗ್ಗೆ ಹಾಸ್ಯದಿಂದ ಮಾತಾಡುವ ಪ್ರಸಂಗ ಬೇರೆ. ಆದರೆ ಮದುವೆಯ ನಂತರ ಗುರು ಚಂದ್ರಯೋಗವಾಗುತ್ತದೆ. ಇದರಿಂದ ವಧುವಿಗೆ ಉನ್ನತ ವಿದ್ಯಾಪ್ರಾಪ್ತಿ ಆದೀತು. ಮಾವನವರಿಗೆ ವ್ಯಾಪಾರ ವ್ಯವಹಾರ ಗಳಲ್ಲಿ ವಿಶೇಷ ಅಭಿವೃದ್ಧಿಯನ್ನು ಕೊಡುತ್ತೆ. ದಾಂಪತ್ಯದಲ್ಲಿ ಕೆಲವು ಸಲ ಅತಿರೇಕದ ಪ್ರೇಮ ದಿಂದ ಸಂಶಯ ಸಂದೇಹಗಳೂ ತಲೆ ಹಾಕಲು ಶಕ್ಯ. ಇದರಿಂದ ಮಧ್ಯೆ ಮಧ್ಯೆ ವಿರಸದ ಪ್ರಸಂಗಗಳು ಬೇರೆ. ಆದರೆ ಗುರು ಮಕ್ಕಳ ಗ್ರಹವಾಗಿ ಮಕ್ಕಳಿಂದ ಈ ಹಗರಣ ಪರಿಹಾರ ವಾಗಿ ಸುಖ ಸಂತಸಗಳು ಏರ್ಪಡುವುವು.

ಏಳನೆಯ ತಿಂಗಳಾದ ಜುಲೈನಲ್ಲಿ ಜನನವಾದ ಹೆಣ್ಣು ಈ ಎರಡನೆಯ ತಿಂಗಳು ಜನನದ ಮಂದಿಗೆ ವಿಚಿತ್ರದ ಪ್ರಭಾವವನ್ನು ಬೀರುತ್ತದೆ. ಏಳನೆಯ ಸಂಖ್ಯೆಗೆ ರಾಹು ಅಧಿಪತಿ. ಎರಡನೆಯ ತಿಂಗಳಿನ ಬುಧನ ಜೊತೆ ಸೇರಿ ಬುಧರಾಹುಯೋಗ ಕೆಲದಿನ ನಡೆದು ಅನಂತರ ಸಂಯೋಗದ ಗುರುವಿನ ಫಲದಿಂದ ಮಾರ್ಪಾಡನ್ನು ಹೊಂದುತ್ತೆ. ಬುಧ ರಾಹು ಯೋಗ ಸುಳ್ಳು, ಕಳ್ಳತನದ ಯೋಗವಿದ್ದು ಮದುವೆಯ ಮನೆಯಲ್ಲಿಯೇ ಕಳ್ಳತನ ಆದೀತು. ಇಲ್ಲ ಮದುವೆ ಮಾಡುವುದಕ್ಕಾಗಿ ಏನಾದರೂ ಸುಳ್ಳು ಹೇಳಿದ್ದಾರು. ಅದೂ ಇಲ್ಲ, ಬೇರೆ ಯಾರಾದರೂ ಸುಳ್ಳು ವದಂತಿ ಹಬ್ಬಿಸಿ ತಪ್ಪಿಸಲು ಯತ್ನಿಸಬಹುದು. ಇನ್ನು ಹಲವೆಡೆಗಳಲ್ಲಿ ಹೆಂಡತಿಯ ಕೈಗೆ ಪತಿರಾಯನು ಜೇಬು ಸಿಗದಂತೆ ಮಾಡಬಹುದು. ಕಾರಣ ಇರಲಿ ಬಿಡಲಿ. ಅಭ್ಯಾಸ ಬಲದಿಂದ ಸುಳ್ಳು ಹೇಳುವ ವಧು ಸಿಗಬಹುದು. ಹೀಗೆ ಬುಧ-ರಾಹುವಿನ ಸಂಯೋಗದ ಫಲ ಮೊದಲು ನಡೆಯುತ್ತೆ.

ಗಂಡಸರಿಗೆ ತಮ್ಮ ಜನನದ ತಾರೀಖು ಮುಖ್ಯ. ಜನನದ ತಿಂಗಳ ಸಂಖ್ಯೆ ಅವರ ಪತ್ನಿಯ ಗುಣಶೀಲಗಳನ್ನು ತೋರಿಸುತ್ತೆ. ಆದರೆ ಆಕೆಯದೇ ಆದ ಗುಣಶೀಲಗಳು ಆಕೆಯ ಸ್ವಂತ ಜನನ ತಾರೀಖಿನ ಮೇಲೆ ಕಂಡರೂ ಆ ಗುಣಶೀಲಗಳು ಮದುವೆಯ ನಂತರ ಪತಿರಾಯನ ತಿಂಗಳಿನ ಸಂಖ್ಯೆಯ ಗುಣವನ್ನೂ ಹೊಂದುತ್ತದೆ. ಈ ಕಾರಣ ಹೆಂಡತಿಯ ದಿನ ಸಂಖ್ಯೆ ಹಾಗಿಲ್ಲ ತಿಂಗಳಿನ ಸಂಖ್ಯೆ ಗಂಡಸಿನ ತಿಂಗಳ ಸಂಖ್ಯೆಯ ಗುಣಗಳ ನಡುವೆ ಹೊಂದಾಣಿಕೆ ಇರಬೇಕು. ಇಲ್ಲ, ನಿಧಾನವಾಗಿಯಾದರೂ ಹೆಣ್ಣು ತನ್ನ ಗುಣಶೀಲಗಳನ್ನು ಪತಿಯ ತಿಂಗಳ ಸಂಖ್ಯೆಗೆ ಬದಲಾಯಿಸಿಕೊಳ್ಳುವುದನ್ನು ಕಾಣಬಹುದು. ಅನೇಕ ಮನೆಗಳಲ್ಲಿ ಮದುವೆಯ ನಂತರ ಗಂಡನ ಮನೆಯವರು ಹೆಂಡತಿಯ ಹೆಸರನ್ನೂ ಬದಲಾಯಿಸುವುದೂ ಉಂಟು.

ಉದಾಹರಣೆಗೆ ಗಂಡಸಿನ ಜನನ ತಿಂಗಳು ಫೆಬ್ರುವರಿ - ಎರಡನೆಯ ತಿಂಗಳು. ಈ ಸಂಖ್ಯೆಗೆ ಬುಧ ಗುರು ಸಂಯೋಗ. ಗಣಪತಿ ಸಂಖ್ಯಾ ಶಾಸ್ತ್ರದ ಬಳಕೆ ಇದು. ಈ ಎರಡು ಗ್ರಂಥಗಳ ಸಂಯೋಗದ ಫಲ ಹೆಂಡತಿಗೆ ಪ್ರಾಪ್ತಿ. ಅಂದರೆ ಹೆಂಡತಿಗೆ ವಿದ್ಯ ವಿನಯ ಸೌಶೀಲ್ಯಾದಿ ಗುಣಗಳು ಎಂದರ್ಥ. ಆದರೆ, ಹೆಂಡತಿಯದ್ದೇ ಜನನ ತಾರೀಖು ಇದೆಯಲ್ಲ ಅದರ ಗುಣಗಳು ಆಕೆಗೆ

ಜನ್ಮದಿಂದ ಬಂದದ್ದು. ಈಗ ಮದುವೆಯ ನಂತರ ಮೇಲಿನ ಎರಡು ಸಂಖ್ಯೆಯ ಗುಣಗಳು ಆಕೆಗೆ ಸ್ವಭಾವ ಆಗಬೇಕು. ಹಾಗಿಲ್ಲ. ಅದು ಅಭ್ಯಾಸ ಆಗಬೇಕು. ಹಾಗಿಲ್ಲ. ಆ ದಾಂಪತ್ಯ ಜಯಪ್ರದ ಆಗಲಾರದು ಎಂದರ್ಥ.

ಈಗ ಎಂಟನೆಯ ತಿಂಗಳಿನಲ್ಲಿ ಜನಿಸಿದ ಹೆಂಡತಿಗೆ ಬುಧ ಶನಿಗಳ ಸಂಯೋಗದ ಫಲದ ಗುಣಗಳಿರುತ್ತವೆ. ಎರಡನೆಯ ತಿಂಗಳಿನಲ್ಲಿ ಜನಿಸಿದ ಗಂಡನ್ನು ಆಕೆ ಮದುವೆ ಆದರೆ ಬುಧ ಶನಿಗಳ ಗುಣಗಳನ್ನು ಮರೆತು ಬುಧ ಗುರುಗಳ ಸಂಯೋಗದ ಫಲದ ಗುಣಗಳನ್ನು ಹೊಂದಬೇಕು. ಅಂದರೆ ಬುಧ ಶನಿಗಳ ಗುಣ ಮಂದ ಬುದ್ಧಿ. ಇದು ಮದುವೆಯಾದ ಮೇಲೆ ಗಂಡಸಿನ ಯೋಗದಿಂದ ನಿವಾರಣೆಯಾಗಿ ಬುಧ ಗುರು ಸಂಯೋಗದ ಚಟುವಟಿಕೆಯ ಬುದ್ಧಿ ಬರಬೇಕು. ಅಂದರೆ ಪತಿಯು ಇವರನ್ನು ಈ ವಿಷಯದಲ್ಲಿ ಶ್ರದ್ಧೆ ವಹಿಸಿ ತಯಾರು ಮಾಡುವರೆಂದು ಅಭಿಪ್ರಾಯ. ಮದುವೆಯಾದ ಮೇಲೆ ಹೆಂಡತಿ ಓದಿ ಪಾಸು ಮಾಡಿ ವಿದ್ಯಾವಂತೆಯಾಗುವ ಯೋಗ.

ಸೆಪ್ಟಂಬರ್ ತಿಂಗಳಿನಲ್ಲಿ ಜನಿಸಿದ ವಧುವಿಗೆ ಸೂರ್ಯನ ಗುಣಗಳು ಇರುತ್ತವೆ. ಅಧಿಕಾರ ಮಾಡುವ ಜನಗಳ ಮಧ್ಯೆ ಇವರ ಬೆಳವಣಿಗೆ. ಕೀರ್ತಿವಂತರ ಸಹವಾಸ ಬೇರೆ. ಇದರಿಂದ ಆಕೆಗೆ ಕೂತು ಕಾರುಬಾರು ಮಾಡುವ ಸ್ವಭಾವ ಜನ್ಮತಃ ಬಂದಿರುತ್ತೆ. ಕಾರಣ ಮನೆಯಲ್ಲಿ ಆಳು ಕಾಳು ಓಡಾಟಕ್ಕೆ ಕಾರು ಇತ್ಯಾದಿಗಳ ಸೌಲಭ್ಯ ಇರುತ್ತೆ. ತನ್ನ ಮಾತು ತನ್ನ ಕತೆ ತಂದೆ ಮನೆಯವರ ವಿಷಯ ಕೊಚ್ಚಾಟಿಕೆ ಎಲ್ಲದಕ್ಕಿಂತ ತಾನು ದೊಡ್ಡ ಮನುಷ್ಯರ ಮನೆಯ ಮಗಳು ಎಂಬ ಅಂಥ ಅಭಿಮಾನ ಇರುತ್ತೆ. ಆದರೆ ಗಂಡನ ಜನನದ ತಿಂಗಳು ಎರಡು ಸಂಖ್ಯೆಯಾಗಿದೆ. ಆಗ ಅದರಂತೆ ಎಲ್ಲರಲ್ಲಿ ಆತ್ಮೀಯತೆಯ ಮಾತು. ನಡತೆ ಮತ್ತು ಬಂಧು ಬಳಗದವರಲ್ಲಿ ಪ್ರೀತಿಯ ನಡವಳಿಕೆ ಇತ್ಯಾದಿ ಗುಣಗಳು ಬರಬೇಕು. ತನ್ನ ಸಂಖ್ಯೆಯ ಅಂಧಾಭಿಮಾನವಿದ್ದರೆ ಇದು ಹೇಗೆ ಸಾಧ್ಯ? ಇದರಿಂದ ಮದುವೆಯ ನಂತರ ತನ್ನ ನಿಜಗುಣಗಳನ್ನು ನಿಧಾನ ವಾಗಿಯಾದರೂ ಬಿಡಲು ಯತ್ನಿಸಿ ಪತಿಯ ತಿಂಗಳ ಸಂಖ್ಯೆಯ ಗುಣಗಳನ್ನು ಹೊಂದಬೇಕು. ಹಾಗಿಲ್ಲ. ಪತಿರಾಯನ ನಿರೀಕ್ಷೆಗೆ ನಿರಾಸೆಯಾಗುವುದು ಎಂದರ್ಥ.

ಹತ್ತನೆಯ ತಿಂಗಳಾದ ಅಕ್ಟೋಬರ್‌ನಲ್ಲಿ ಜನಿಸಿದ ಹೆಣ್ಣು ಇದೆ. ಇವರಿಗೆ ಹತ್ತು ಸಂಖ್ಯೆ ಗುಣವಾದ ಗುರು ಶನಿಗಳ ಸಂಯೋಗದ ಫಲವಿದೆ. ಕರ್ಮಸಂಖ್ಯೆಯ ಕಾರಣ ಇವರಿಗೆ ಕರ್ಮ ಶ್ರದ್ಧೆ ಇರುತ್ತದೆ. ಏನು ಕೆಲಸ ಮಾಡಲಿ ಮನಸ್ಸಿಟ್ಟು ಮಾಡುತ್ತಾರೆ. ದೇವತಾರಾಧನೆ ದಿನಚರಿ ಇರುವ ಮನೆಯಲ್ಲಿ ಬೆಳೆದ ಕಾರಣ ಇವರಿಗೂ ಸಹ ದೇವತಾ ವ್ರತ ಶ್ರದ್ಧೆ ಇರುತ್ತದೆ. ಇವರಿಗೆ ಮಾತು ಕಡಿಮೆ ಮಕ್ಕಳೂ ಕಡಿಮೆ. ಕಾರಣ ಹೆರಿಗೆ ಕಾಲದಲ್ಲಿ ಪ್ರಾಣ ಸಂಕಟ ಆಗುತ್ತೆ. ಇದರಿಂದ ಅವರಿಗೆ ಗರ್ಭಧಾರಣೆ ಎಂದರೆ ಭಯ. ಕೆಲವರಿಗೆ ಮಕ್ಕಳೂ ಆಗದೇ ಇರಬಹುದು. ಆದರೆ ಇವರು ಧರ್ಮಿಷ್ಠರು. ದಾನಧರ್ಮಾದಿಗಳಲ್ಲಿ ನಂಬೇ ನಂಬುವ ಮಂದಿ. ಈ ಕಾರಣ ಇವರು ಎರಡನೆಯದಾದ ಫೆಬ್ರುವರಿ ತಿಂಗಳಲ್ಲಿ ಜನಿಸಿದ ವರನಿಗೆ ಹೊಂದಿಕೊಳ್ಳಲು ಕಷ್ಟ ಇರದು. ಬುಧ ಗುರುಗಳ ಸಂಯೋಗದ ಫಲ ಇರುವ ಎರಡನೆಯ ತಿಂಗಳಿಗೆ ಗುರುವಿನ ಸಂಖ್ಯೆ ಇರುವ ಹತ್ತನೆಯ ತಿಂಗಳಿನ ಜನನದ ಹೆಣ್ಣು ಅನುಕೂಲದ ಬಂಧುತ್ವ ಎನ್ನಬಹುದು.

ಹನ್ನೊಂದನೆಯ ತಿಂಗಳಾದ ನವೆಂಬರ್‌ನಲ್ಲಿ ಹುಟ್ಟಿದ ಹೆಣ್ಣು. ಇದಕ್ಕೆ ಶುಕ್ರ ಶನಿಗಳ ಸಂಯೋಗದ ಫಲವಿದೆ. ಮದುವೆಯಲ್ಲಿ. ಆ ಸುಖದಲ್ಲಿ ನಿರಾಸಕ್ತಿ ಉಳ್ಳವಳು ಎಂದರ್ಥ. ಕಾರಣ

ಪ್ರೀತಿಯ ವಿಷಯದಲ್ಲಿ ನಿರಾಸೆ ಹೊಂದಿದ್ದೇ ಸರಿ. ಶನಿಯ ಗುಣ ಪ್ರಧಾನವಾಗಿರುವ ಇವರಿಗೆ ಸೇವಾ ಮನೋಭಾವ ಇದ್ದು ಎಲ್ಲರಲ್ಲಿಯೂ ಒಳ್ಳೆಯ ಹೆಸರು ಸಂಪಾದನೆ ಆಗುತ್ತೆ. ಅನೇಕ ಮಂದಿಗೆ ವಿವಾಹ ಆಗುವುದೇ ಕಷ್ಟ. ಆದರೆ ಜೀವನದ ಪ್ರಮುಖ ಹಂತದಲ್ಲಿ ಈ ಸುಖ ಇರದು. ಈ ತಿಂಗಳಿನ ಅನೇಕ ಮಂದಿ ಗಂಡು ಹೆಣ್ಣುಗಳಿಗೆ ದಾಂಪತ್ಯ ಸುಖ ಕಾಲ್ಪನಿಕ. ಕಾರಣ ಇವರಿಗೆ ಸುಖದ ಇಚ್ಛೆ ಜೀವನದಲ್ಲಿ ಎರಡನೆಯ ಸ್ಥಾನ. ಆದರೆ ಇವರು ಇತರರಿಗೆ ಸುಖವನ್ನು ಬಯಸುವ ಜನ. ಮದುವೆ ಇತ್ಯಾದಿಗಳಲ್ಲಿ ಇವರಿಗೆ ಆಸಕ್ತಿ ಇಲ್ಲದಿದ್ದರೂ ಇತರರ ಮದುವೆ ಮಾಡಲು ಆಸಕ್ತಿಯಿಂದ ಶ್ರಮಿಸುವ ಮಂದಿ ಎಂದರ್ಥ. ಬಾಲ್ಯದಿಂದ ಇವರಿಗೆ ಸನ್ಯಾಸದ ಮನೋಭಾವ ಉಳ್ಳ ಸಜ್ಜನರ ಸಹವಾಸ. ಇದರಿಂದ ಇವರಿಗೆ ಕಾಮ ಮೋಹಾದಿಗಳ ಆವೇಶ ಕಡಿಮೆ. ಆದರೆ ಈ ಮಂದಿಗೆ ಎರಡನೆಯ ತಿಂಗಳಿನಲ್ಲಿ ಹುಟ್ಟಿದ ಗಂಡಿನ ಪ್ರಭಾವ ಉತ್ತಮ. ಕಾರಣ ಬುಧಗುರುಗಳ ಸಂಯೋಗದ ಫಲ ಇವರಲ್ಲಿ ಆವೇಶ ಆಗುತ್ತದೆ. ನಿರಾಸೆಯ ಜೀವನ ತಳ್ಳುವ ನಿರ್ಣಯ ಮಾಡಿಕೊಂಡ ಇವರಿಗೆ ಮದುವೆಯಿಂದ ಉತ್ತೇಜನ. ಜೀವನದಲ್ಲಿ ನಂಬಿಕೆ, ಆಸೆ ಇತ್ಯಾದಿಗಳ ಬಯಕೆಯೂ ಆಗದೇ ಇರದು. ಶುಕ್ರ ಶನಿಯ ಸಂಯೋಗದ ದೋಷದಿಂದ ಈ ಸುಖ ಹೆಚ್ಚಿನ ಕಾಲ ಇರದು. ಕೊನೆಗೆ ತನ್ನ ನೈಜಗುಣವಾದ ಸನ್ಯಾಸದ ಮನೋಭಾವವೇ ಪ್ರಧಾನವಾಗಿ ರೂಪುಗೊಳ್ಳುವುದು.

ಹನ್ನೆರಡು ಸಂಖ್ಯೆಯ ಡಿಸೆಂಬರ್ ತಿಂಗಳಿನಲ್ಲಿ ಜನಿಸಿದ ಹೆಣ್ಣು. ಈ ಸಂಖ್ಯೆಗೆ ಶುಕ್ರ ಮಂಗಳ ಯೋಗವಿದ್ದು ಶುಭದ ಫಲ ನಡೆಯುತ್ತೆ. ಇವರು ಸುಖ ಬೀಳಲೇ ಬೇಕು ಎನ್ನುವ ಧ್ಯೇಯವುಳ್ಳವರು. ಸುಖವನ್ನು ಬಯಸುವ ಮಂದಿ. ಪ್ರೀತಿಗಾಗಿ ಎಷ್ಟು ತ್ಯಾಗವನ್ನು ಬೇಕಾದರೂ ಮಾಡಲು ಇವರು ಹಿಂಜರಿಯರು. ಆದರೆ ಇವರಿಗೆ ಹನ್ನೊಂದು ಸಂಖ್ಯೆಯ ವೇಧೆ ಇದ್ದೇ ಇರುತ್ತೆ. ಈ ಕಾರಣ ಇವರಿಗೆ ಅನ್ಯರ ಮೇಲೆ ಸಂಶಯ ತಾಳುವ ಮಂದಿ. ಹಾಗಿಲ್ಲ. ಸುಖರಹಿತ ಮಂದಿಗೆ ಕೈಲಾದಷ್ಟು ಸಹಾಯ ಮಾಡುವ ಮನೋಭಾವ ಇರುತ್ತೆ. ಈ ಹನ್ನೆರಡು ಸಂಖ್ಯೆಯ ತಿಂಗಳಿನಲ್ಲಿ ಹುಟ್ಟಿದ ಹೆಂಗಳಿಗೆ ಎರಡನೆಯ ತಿಂಗಳಲ್ಲಿ ಜನಿಸಿದ ಗಂಡುಗಳಿಗಿಂತ ಶ್ರೇಷ್ಠರು ಯಾರೂ ಸಿಗರು. ಈ ಎರಡು ತಿಂಗಳುಗಳ ದಾಂಪತ್ಯ ಜೀವನ ಬಹಳ ಅನುರಾಗದಾಯಕವಿದ್ದು ಹೊಂದಾಣಿಕೆಯಿಂದ ಸುಖಸಂತಸಗಳ ಬೀಡು ಇವರ ಜೀವನ ಎಂದು ಹಿರಿಯರ ಅಭಿಪ್ರಾಯ. ಅಲ್ಲದೆ ಎರಡನೆಯ ತಿಂಗಳಿನ ಬುಧಗುರು ಸಂಯೋಗಕ್ಕೆ ಹನ್ನೆರಡು ಸಂಖ್ಯೆಯ ಶುಕ್ರ ಮಂಗಳ ಯೋಗ ತಾಗಿ ಬಹು ಉತ್ಕೃಷ್ಟವಾದ ಲಕ್ಷ್ಮೀ ಯೋಗ ಉತ್ಪತ್ತಿಯಾಗುವುದು ಈ ಯೋಗದಿಂದ ಸಕಲ ಸಂಪತ್ತು, ಸುಖಜೀವನ, ಚಿರನೆನಪಿನ ದಾಂಪತ್ಯದ ಸವಿ ಎಲ್ಲಾ ದೈವದತ್ತ ಎಂದರು.

## ಮಾರ್ಚಿ ತಿಂಗಳು – ಸಂಖ್ಯೆ ಮೂರು (೩)

ಜನನ ತಾರೀಖಿನಲ್ಲಿ ದಿನಾಂಕ, ತಿಂಗಳು ಸಂಖ್ಯೆ ಮತ್ತು ವರ್ಷ ಸಂಖ್ಯೆ ಇಷ್ಟು ಇರುತ್ತವೆ. ಇದರಲ್ಲಿ ದಿನಾಂಕ ವ್ಯಕ್ತಿಯ ಮೂಲ ಗುಣಗಳನ್ನು ವಿಶದವಾಗಿ ಹೇಳುತ್ತದೆ. ತಿಂಗಳಿನ ಸಂಖ್ಯೆ ಅವರ ಸಂಸಾರ ಯಾವ ರೀತಿ ಇರುತ್ತದೆ ಎಂದು ಹೇಳುತ್ತದೆ. ಈಗ ಉದಾಹರಣೆಗೆ ಮಾರ್ಚಿ ತಿಂಗಳು. ಇದರ ಸಂಖ್ಯೆ ಮೂರು (೩) ಈ ಸಂಖ್ಯೆ ಕುಜನ ದೋಷದ ಸಂಖ್ಯೆ. ಇದಕ್ಕೆ ಮಂಗಳ ಶನಿಯೋಗದ ಸಂಖ್ಯೆ ಎಂದರು.

ಮಂಗಳ ಶನಿಯೋಗ ಹಸಿವು. ದಾಹದ ಸಂಖ್ಯೆ. ಇದನ್ನು ಹಿಂಗಿಸಲು ಭೋಜನ ಮತ್ತು ಪಾನೀಯಗಳಿವೆ. ಈ ಮಂದಿಗೆ ಇದರ ಅಗತ್ಯ ಹೆಚ್ಚು. ಕಾರಣ, ಇವರು ತಮ್ಮ ಜನಗಳನ್ನು ಬಿಟ್ಟು ದೂರ ಇರುತ್ತಾರೆ. ಇದು ಇವರು ಮಾಡುವ ಕೆಲಸದ ಕಾರಣ ಇದ್ದೀತು. ಕೆಲವರು ದೂರ ದೇಶಗಳಲ್ಲಿಯೂ ಇದ್ದಾರು. ಈ ಜೀವನದ ಅಗತ್ಯದ ಪೂರೈಕೆಗಾಗಿ ಇವರು ಮದುವೆಯಾಗುವ ಮಂದಿ.

ಈ ಸಂಖ್ಯೆಯ ಕುಜ ದೋಷದಿಂದ ಇವರಿಗೆ ಬಾಲ್ಯದಲ್ಲಿ ವಿವಾಹವಾಗುವ ಯೋಗ ಇದ್ದಾಗ ಗೊತ್ತಾದ ಹೆಣ್ಣು ಮದುವೆಯಾಗದೆ ಅನೇಕರು ಬ್ರಹ್ಮಚಾರಿಗಳಾಗುವ ಮನೋಭಾವವನ್ನು ಹೊಂದಿರುತ್ತಾರೆ. ಮದುವೆಯ ಮಾತು ಬಂದೀತು. ವಧೂ ಜನಗಳು ಒಪ್ಪಿದಾಗ ಇವರು ಒಪ್ಪರು. ಇವರು ಒಪ್ಪಿದಾಗ ವಧೂ ಜನಗಳು ಒಪ್ಪರು. ಹೀಗಾಗಿ ಮದುವೆ ತಕರಾರಿನಲ್ಲಿ ಮುಕ್ತಾಯ. ಈ ದೋಷ ಸಂಖ್ಯೆ ಮೂರು. ಇದರಿಂದ ಮೊದಲು ಮೂರು ಪ್ರಯತ್ನಗಳು ಹೀಗೆ. ನಾಲ್ಕನೆಯ ಸಂಬಂಧ ಅನುಕೂಲವಾಗುತ್ತೆ.

ಇದೇ ದೋಷ ಇರುವ ಹೆಣ್ಣು ಇವರಿಗೆ ಆಗುತ್ತೆ. ಅಂದರೆ ವಧೂ ಜನಗಳಲ್ಲಿ ಕುಜನ ದೋಷದ ಕೆಲಸ ಮಾಡುವ ಮಂದಿ ಯಾರಾದರೂ ಇರುತ್ತಾರೆ. ಇದು ಇಂಜಿನಿಯರಿಂಗ್ ಉದ್ಯೋಗ. ಜಾಸ್ತಿಯಾಗಿ ತಂಗಿಯ ಮದುವೆ ಆಗದ ಕಾರಣ ತಾವು ಮದುವೆಯಾಗದೇ ಉಳಿಯುವ ಸನ್ನಿವೇಶಗಳು ಎನ್ನಬಹುದು. ಇಲ್ಲಿ ಸೋದರ ಕಾರಕತ್ವದ ಕಾರಣ ಕುಜನು ಈ ಫಲವನ್ನು ಕೊಡುತ್ತಾನೆ.

ಅಣ್ಣಾ ತಂಗಿಯರು ವರನ ಕಡೆ. ಅದರಂತೆ ಅಣ್ಣಾ ತಂಗಿಯರು ವಧುವಿನಕಡೆ. ಪರಸ್ಪರ ವಿವಾಹದಿಂದ ಬಂಧುತ್ವ ಕುದುರಿ ಅನುಕೂಲ ಎಂದರ್ಥ. ಅಂದರೆ ತಂಗಿಯ ಸಲುವಾಗಿ ಇಷ್ಟ ಇರಲಿ ಬಿಡಲಿ ಅಣ್ಣಾ ಮದುವೆಯಾಗುವುದು. ಎರಡು ಕಡೆಗಳಲ್ಲಿಯೂ ಈ ತ್ಯಾಗದ ಮನೋಭಾವ ಅಣ್ಣಂದಿರಲ್ಲಿ ಕಾಣಬಹುದು. ಇದು ಒಂದು ನಮೂನೆ ಅನುಕೂಲದ ಮದುವೆ ಎನ್ನಬಹುದು.

ಇನ್ನು ಕೆಲವರು ಮೊದಲು ಮದುವೆ ಮಾತುಕತೆ ಆಗುವಾಗ ವ್ಯವಹಾರದ ಏರುಪೇರಿನಿಂದಾಗಿ ಗೊತ್ತಾಗಿದ್ದ ಹೆಣ್ಣು ತಪ್ಪಿಹೋದರೆ ಮನಸ್ಸಿಗೆ ಬಹಳ ಬೇಸರದಿಂದ ನಂತರ ಬಂದ ಹೆಣ್ಣು ಯಾವುದೇ ಇರಲಿ ಯಾವ ರೀತಿಯ ಕಟ್ಟುಪಾಡಿಲ್ಲದೆ ಬೇಷರತ್ತಾಗಿ ಒಪ್ಪಿ ಮದುವೆಯಾಗುತ್ತಾರೆ. ವ್ಯವಹಾರದ ವಿಷಯವೇ ಇರದು. ಕಾರಣ ಇವರಿಂದ ಈ ಬಂಧುತ್ವವೂ ತಪ್ಪುವುದೆಂಬ ಭಯ.

ಕಾರಣ ಏನೇ ಇರಲಿ ಈ ಮಂದಿಯ ಮದುವೆ ವಿಘ್ನಗಳಿಂದ ಕೂಡಿ ಅನೇಕ ಸಲ ಬೇಕು ಬೇಡಗಳಾಗಿ ಕೊನೆಗೆ ಆದರೆ ಸಾಕು ಎನ್ನುವಂತೆ ಮುಕ್ತಾಯವಾದೀತು. ಇನ್ನು ಕೆಲವೆಡೆ ಬೇಸರ ಬಿದ್ದು ಮದುವೆಯೇ ಆಗದೆ ಕೇವಲ ಬ್ರಹ್ಮಚಾರಿಗಳಾಗಿ ಇರುವ ಸನ್ನಿವೇಶಗಳೂ ಸಹ ಇವೆ. ಬಹುಶಃ ಲೋಕದ ಬ್ರಹ್ಮಚಾರಿಗಳಲ್ಲಿ ಹೆಚ್ಚಿನ ಮಂದಿ ಈ ಮಾರ್ಚ್ ತಿಂಗಳಿನಲ್ಲಿ ಹುಟ್ಟಿದವರು ಎಂದರೆ ಕಲ್ಪನೆ ಎನ್ನಬಹುದು. ಆದರೆ ಅನುಭವದಲ್ಲಿ ಮಾತ್ರ ಅದು ವಾಸ್ತವ.

ಇವರಿಗೆ ಕುಜಗ್ರಹದ ಶಾಪ. ಇದರಿಂದ ಅವನ ತತ್ವಗಳು ಊನ. ಅನೇಕರಿಗೆ ತಿರಿತಿಂಡಿಗಳನ್ನು ತಿಂದು ಹೊಟ್ಟೆ ಕೆಡಿಸಿಕೊಂಡು ಒದ್ದಾಡಿಯಾರು. ಇನ್ನು ಕೆಲವರಿಗೆ ಭೋಜನ ಶಾಲೆಗಳ ಊಟದ ಕಾರಣ ವಾತಾದಿ ರೋಗಗಳಿಂದ ಪೀಡೆಯಾದೀತು. ಅಂತೂ ಇವರಿಗೆ ಹೊಟ್ಟೆಯ ಆರೋಗ್ಯ ಒಂದು ಸಮಸ್ಯೆ. ಭೋಜನ ಸೌಕರ್ಯ ಇನ್ನೊಂದು ಈ ಎರಡರ ಮಧ್ಯೆ ಇವರ ತೊಳಲಾಟ. ಇದನ್ನು ಪರಿಹರಿಸಲು ಇವರಿಗೆ ಮದುವೆ. ಆ ವಧು ಇವರಿಗೆ ದೇವತಾಸಮಾನ. ಕಾರಣ ಇವರ ಅಸದಳದ ತೊಳಲಾಟ. ಆಕೆಗಾಗಿ ಏನು ಬೇಕಾದರೂ ತ್ಯಾಗಮಾಡಲು ಸಿದ್ಧ. ಇನ್ನು ಪ್ರೀತಿಯಾಗಿ ನಡೆಸಿಕೊಳ್ಳುವುದು ಏನು ಹೆಚ್ಚು. ಅದರಲ್ಲಿಯೂ ರುಚಿಯಾದ ಅಡುಗೆ ತಿಂಡಿ ತಿನಸುಗಳನ್ನು ಮಾಡುವ ಹೆಣ್ಣು ದೊರೆತರಂತೂ ಇವರಿಗೆ ಸ್ವರ್ಗ ಮೂರೇ ಗೇಣು.ಹಾಗಿಲ್ಲ, ಮನೆಯಾಕೆ ದಕ್ಷ ಅಡಿಗೆಯಾಕೆಯನ್ನು ಇಟ್ಟು ಅವರಿಗೆ ಈ ಅಗತ್ಯಗಳನ್ನು ಪೂರೈಸಬೇಕು. ಎರಡೂ ಇಲ್ಲ, ಅವರ ಜೀವನ ಒಂದು ಜೀವನವೇ ಎಂದು ಅವರಿಗೇ ಒಂದು ಸಮಸ್ಯೆ. ಅಲ್ಲ ಅಚ್ಚರಿ.

ಈ ಮಂದಿ ಮದುವೆಯಾದರೆ ಆ ಹೆಣ್ಣಿಗೆ ಕುಜನ ದೋಷ ಇರುತ್ತದೆ. ಇದರಿಂದ ಅವರು ಹಠದ ಸ್ವಭಾವದವರು. ತಮ್ಮ ಮಾತು ಯಜಮಾನರಿಗೆ ಅಣತಿ. ಅವರ ನ್ಯೂನತೆಗಳನ್ನು ಉಪಯೋಗಿಸಿಕೊಂಡು ಅವರ ಮೇಲೆ ಕಾರುಬಾರು ಮಾಡುವ ಹವಣಿಕೆ ಇವರದು. ಆದರೆ ಅದರ ಅಗತ್ಯ ಅವರಿಗೆ ಇರದು. ಕಾರಣ ಯಜಮಾನರು ಬೇಷರತ್ತಾಗಿ ತಲೆಬಾಗುವ ಮಂದಿ. ಈ ರೀತಿಯಾಗಿ ಮಡದಿಗೆ ಸಂತೋಷ ಕೊಡುವುದು ಅವರಿಗೂ ಒಂದು ನಮೂನೆ ಸಂತಸದ ವಿಷಯ ಎಂದರೆ ಅದು ತಪ್ಪಲ್ಲ. ಕಾರಣ ಅನೇಕ ಮಂದಿ ಅವರೆದುರು ನಟನೆ ಮಾಡುವುದೂ ಉಂಟು. ಕೆಲವರಿಗೆ ಇದು ಮನೋರಂಜನೆಯೂ ಆದೀತು. ಆದರೆ ಇವರಿಗೆ ಆ ರೀತಿ ಕಲಾವಿಲಾಸೀ ಮನೋಭಾವ ಇರಬೇಕು. ಅಷ್ಟೆ.

ಇವರಿಗೆ ರುಚಿಕರ ಭೋಜನ ಇಷ್ಟ. ತಾವು ತಿನ್ನುವುದು ಒಂದೇ ಅಲ್ಲ, ಇತರರಿಗೆ ತಿನ್ನಿಸುವುದು ಇನ್ನೂ ಇಷ್ಟ. ಕಾಸು ಕೊಡುವ ಮಂದಿ ಇವರಲ್ಲ. ಆದರೆ ಊಟ ಮಾಡಿಸುವ ಮಂದಿ ಇವರಿಗಿಂತ ಬೇರೆ ಸಿಗರು. ಕಾರಣ ಈ ರೀತಿ ಸ್ನೇಹಿತರಿಗೆ ಅತಿಥಿ, ಅಭ್ಯಾಗತರಿಗೆ ಉಪಚಾರ ಮಾಡುವುದು ಎಂದರೆ ಇವರಿಗೆ ಅತಿ ಹೆಚ್ಚಿನ ತೃಪ್ತಿ. ಅಲ್ಲದೆ, ಬೇರೆ ರೀತಿ ಖರ್ಚೂ ಸಹ ಇವರಿಗೆ ಹಿಡಿಸದು. ಆದರೆ ಇವರಿಗೆ ಯೋಗ ಕಾಲ ಎಂದರೆ ಈ ಕುಜದೋಷದ ಯಂತ್ರ ವಾಹನಗಳನ್ನು ಕೊಂಡು ಉಪಯೋಗಿಸಿದಾಗ ಮಾತ್ರ ಎನ್ನಬಹುದು. ಇದು ಮದುವೆ ಆನಂತರ ಯೋಗದಾಯಕ ಎಂದು ಕೆಲವರಿಗೆ ಮತ.

ಕುಜನ ದೋಷ ಹುಟ್ಟು ಊರಿಗೂ ಅನ್ವಯ ಆಗುತ್ತೆ. ಈ ಊರಿನಲ್ಲಿ ಇವರಿಗೆ ಅಭಿವೃದ್ಧಿ ಆಗುವುದು ಕಷ್ಟ. ಆದರೂ ಒಂದು ಬಾರಿ ಹೊರ ಊರಿಗೆ ಪ್ರಯಾಣ ಮಾಡಿದ ಮೇಲೆಯೇ ಸರಿ ಈ ಯೋಗ ಶುರು. ಹಾಗಿಲ್ಲ, ಒಂದು ಸಲ ದಕ್ಷಿಣ ಭಾರತದ ಕ್ಷೇತ್ರಗಳ ದರ್ಶನ ಒಂದೇ ಪ್ರಯತ್ನದಲ್ಲಿ ಮಾಡಿದರೆ ಆಗ ಈ ದೋಷ ಪರಿಹಾರವಾಗಿ ಮಂಗಳನ ಶುಭ ಯೋಗವು ಏರ್ಪಡುವುದು. ಅನಂತರ ಮದುವೆ ಶುಭಪ್ರದ ಮತ್ತೆ ಕೆಲವರಿಗೆ ವಿದೇಶದಲ್ಲಿ ಕೆಲಸವಿದ್ದು ಮದುವೆಯಾದ ಕೂಡಲೇ ಪತ್ನೀ ಸಮೇತ ವಿದೇಶಯಾತ್ರೆ ಮಾಡಿ ಅಲ್ಲಿ ವಾಸ ಮತ್ತು ಉದ್ಯೋಗ ಮಾಡಿಕೊಂಡು ಜೀವಿಸುವ ಮಂದಿ ಎನ್ನಬಹುದು. ಅದರಲ್ಲಿಯೂ ದಿನಾಂಕ,

ಮಾಸಾಂಕ, ವರುಷದ ಅಂಕ ಎಲ್ಲವೂ ಮೂರರ ವರ್ಗಕ್ಕೆ ಸೇರಿದರೆ ಹೊರದೇಶದಲ್ಲಿ ಉದ್ಯೋಗ ಮತ್ತು ಜೀವನ ಎಂದರು ಹಿರಿಯರು.

ಈ ಮಂದಿಗೆ ಕುಜ ಶನಿಯೋಗದ ಯತಿಗಳ ಸೇವೆ, ಆರಾಧನೆ ಉತ್ತಮ ಮದುವೆ ನಂತರ ಸುಯೋಗವನ್ನು ಕೊಡುತ್ತೆ. ನೌಕರಿಯಲ್ಲಿ ಬಡ್ತಿ, ಇತ್ಯಾದಿಗಳೂ ದೊರಕುತ್ತವೆ. ತಮಿಳಿನವರಾದರೆ ಸುಬ್ರಹ್ಮಣ್ಯನ ಆರಾಧನೆ ಉತ್ತಮ. ಮಹಾರಾಷ್ಟ್ರದವರಾದರೆ ದುರ್ಗಾದೇವಿ ಆರಾಧನೆಯಿಂದ ಅನುಕೂಲವಾದೀತು. ದಾಂಪತ್ಯವೂ ಕೂಡ ಜಯಪ್ರದವಾಗುತ್ತೆ.

### ಮನೆಯಾಕೆಯ ಮಾಸಾಂಕ ಪ್ರಭಾವ

ಪತಿರಾಯನ ಜನ್ಮ ಮಾಸ ಮಾರ್ಚಿ. ಇದರ ಸಂಖ್ಯೆ ಮೂರು (೩). ಅಧಿಪತಿ ಕುಜ. ಇವನಿಗೆ ಶನಿಯೋಗವಾದಾಗ ಈ ಸಂಖ್ಯೆ. ಇವರಿಗೆ ಶನಿಯ ಸಂಖ್ಯೆ ಒಂದರ ಜನವರಿಯಲ್ಲಿ ಹುಟ್ಟಿದ ಮಡದಿ ಅನುಕೂಲಳು. ಕಾರಣ ಈಕೆ ಇವರಿಗೆ ಯಾವ ನಮೂನೆ ಸೇವೆಗಾದರೂ ಸರಿ. ಶುಚೀಕರಣದಿಂದ ಹಿಡಿದು ಊಟ ಉಪಚಾರಾದಿಗಳಲ್ಲಿ ಪತಿಗೆ ಸಂತೋಷಪಡಿಸುವುದೇ ಈಕೆಗೆ ಕರ್ತವ್ಯ. ಆದರೆ ಇಲ್ಲಿ ಒಂದೇ ಊನ. ಇವರು ಸೇವಕರಂತೆ ದುಡಿಯುವ ಮನೋಭಾವ. ಗಂಡನಿಗೆ ಸರಿ ಸಮನಾದ ಪ್ರೀತಿಯನ್ನು ಕೊಡಲು ಅಸಮರ್ಥಳು. ಮಧುಚಂದ್ರದ ಮನೋಪ್ರವೃತ್ತಿ ಇರದು. ಅಲಂಕಾರಾದಿಗಳಲ್ಲಿಯೂ ಸಹ ಆಸಕ್ತಿ ಕಡಿಮೆ. ಯಾವಾಗಲೂ ಆ ಕೆಲಸ ಈ ಕೆಲಸ ನೋಡುವವರಿಗೆ ಮನೆಯಾಕೆ ಸೇವಕಿಯಂತೆ ಕಾಣಬಹುದು. ಇದರಿಂದ ಪತಿರಾಯನಿಗೆ ಅತೃಪ್ತಿ. ಅಸಮಾಧಾನ. ಶನಿಯ ಬಲಹೆಚ್ಚಿ ಶುಕ್ರನ ಬಲಕಡಿಮೆ. ಇದರಿಂದ ಪ್ರಿಯನೊಂದಿಗೆ ಪ್ರೇಮ ಸಲ್ಲಾಪಾದಿ ವಿಷಯಾಚಾರಾದಿಗಳಲ್ಲಿ ಅಸಮರ್ಥಳು. ಕಾರಣ ಹಿಂದಿನ ಜನ್ಮದಲ್ಲಿ ಈಕೆ ಇವರ ಮನೆಯಲ್ಲಿ ದುಡಿಮೆಯಾಳು. ಋಣದ ತೀರಿಕೆಗಾಗಿ ಈ ಜನ್ಮದಲ್ಲಿ ಮಡದಿ. ಇದು ಕೆಲವರ ಅಭಿಪ್ರಾಯ.

ಎರಡನೆಯ ತಿಂಗಳಿನಲ್ಲಿ ಹುಟ್ಟಿದವರಿಗೆ ಬುಧನ ಪ್ರಭಾವ ಪ್ರತಿಭೆಗಳು ಹೆಚ್ಚು. ಮಾತುಕತೆಗಳಲ್ಲಿ ಇವರಿಗೆ ಆಸಕ್ತಿ. ಬಂಧು ಬಳಗದವರಲ್ಲಿ ಆತ್ಮೀಯ ಮನೋಭಾವ. ಆದರೆ ಮಾರ್ಚಿ ತಿಂಗಳಿನ ಮಹಾಶಯರು ಕುಜನ ದೋಷದಿಂದ ಕೂಡಿದವರು. ಇವರಿಗೆ ಕಾಮ ಭೋಗಾದಿಗಳಲ್ಲಿ ಆಸಕ್ತಿ. ಮಾತುಕತೆ ಇವರಿಗೆ ಬೇಕಿಲ್ಲ. ಇವರಿಗೆ ಹೆಚ್ಚಿನಂಶ ಕಾರ್ಮಿಕರ ಮನೋಭಾವ. ಬುದ್ಧಿಯ ಚಟುವಟಿಕೆ ಇದ್ದರೂ ಆಸಕ್ತಿ ಕಡಿಮೆ. ಈ ಕಾರಣ ಫೆಬ್ರವರಿಯ ಹೆಣ್ಣು ಇವರಿಗೆ ಅಷ್ಟು ಅನುಕೂಲ ಇರಳು. ಆದರೆ ಹೆಣ್ಣು ಬುದ್ಧಿಯ ತಿಂಗಳಿನಲ್ಲಿ ಜನಿಸಿ ಬುದ್ಧಿಜೀವಿ. ತನ್ನ ಮನಸ್ಸಿಗೆ ಒಗ್ಗದಿದ್ದರೂ ಹೊಂದಿಕೊಂಡು ಪತಿರಾಯನ ಅಗತ್ಯಗಳನ್ನು ಪೂರೈಸಲು ಹೋಗಿ ಆರೋಗ್ಯ ಹದಗೆಟ್ಟು ನರವ್ಯಾಧಿಗಳಿಂದ ನರಳಾಟ ಇವರಿಗೆ ಸಹಜ ಇದ್ದೀತು. ಈ ಕಾರಣ ಈ ಹೆಣ್ಣು ಗಂಡಿಗೆ ತಕ್ಕುದಾದರೂ ತನಗೇ ಅನುಕೂಲ ಇರದು. ಇವರ ಮನಸ್ಸಿನಲ್ಲಿ ಮದುವೆಯ ಸುಖ ಕಲ್ಪನೆಗಳು ವಾಸ್ತವಿಕಕ್ಕೆ ವಿರೋಧಾಭಾಸವಾಗಿ ಅಸಮಾಧಾನ ಒಂದೇ ಇವರ ಜೀವನದ ಫಲ. ಇದರಿಂದ ಇವರಿಗೆ ಪತಿರಾಯನ ಮೇಲೆ ಆಸಕ್ತಿ ದಿನೇದಿನೇ ಕಡಿಮೆಯಾಗಿ ಕೇವಲ ಯಾಂತ್ರಿಕ ಬಾಳುವೆ ನಡೆಸಿಯಾರು.

ಮಾರ್ಚಿ ತಿಂಗಳಿನ ಜನರಿಗೆ ಮಾರ್ಚಿ ತಿಂಗಳಿನಲ್ಲಿಯೇ ಜನಿಸಿದ ಹೆಣ್ಣು ಸಿಕ್ಕಿದರೆ ಉಗ್ಗನಿಗೆ ಉಗ್ಗ ಗುಂಪಿನಲ್ಲಿ ಸಿಕ್ಕಿದಂತೆ. ಕೈ ಸನ್ನೆ ಬಾಯಿ ಸನ್ನೆಗಳನ್ನು ಮಾಡಿಕೊಂಡು ಆನಂದವಾಗಿ ಮಾತಾಡಲು ಅನುಕೂಲ. ಕಾರಣ ಈ ಹೆಣ್ಣು ಈ ಗಂಡು ಇಬ್ಬರಿಗೂ ಒಂದೇ ನಮೂನೆ ಅನುಭವ. ಮದುವೆಯ ಮುನ್ನ ಅವರಿಗೂ ಅನೇಕ ಸಲ ಮುರಿದು ನಿರಾಸೆ. ಈಕೆಗೂ ಕೈಗೆ ಬಂದದ್ದು ಕಂಕಣಕ್ಕಿಲ್ಲದ ನಿರಾಸೆ. ಇಬ್ಬರ ಮದುವೆ ಇಬ್ಬರಿಗೂ ಅನುಕೂಲ. ಆದರೆ ಮೊದಮೊದಲು ಅನುಕೂಲಕ್ಕಾಗಿ ಮದುವೆಯಾದರೂ ಒಂದೇ ಮನೋಭಾವದ ಪ್ರಯುಕ್ತ ಬರಬರುತ್ತಾ ಸಹಜದ ದಾಂಪತ್ಯ. ಪ್ರೀತಿಯ ಅನುರಾಗ ಇವರಿಗೆ ಕುದುರಿ ಸುಖಜೀವಿಗಳು ಎಂದರೆ ತಪ್ಪಾಗದು. ಆದರೆ ಇಬ್ಬರೂ ದುಡಿಮೆಯ ಪ್ರಿಯರು. ಜನಾನುರಾಗಿಗಳು. ಸಮಯಕ್ಕೆ ಆಗುವ ಮಂದಿ. ಆದರೆ ಹಣ ಮಾತ್ರ ಇವರಲ್ಲಿ ಸೇರದು. ಚೆನ್ನಾಗಿ ತಿಂದು ತೇಗುವ ಮಂದಿ. ಜನರಿಗೆ ತಿನ್ನಿಸಿ ಆನಂದ ಬೀಳುವ ಮಂದಿ. ಜನರಿಗೆ ಸುತ್ತಮುತ್ತದ ನೆರೆಹೊರೆಯವರಿಗೆ ಇವರು ಕಷ್ಟಕ್ಕೆ ಆಗುವ ಮಂದಿ. ಸಂತಸದ ಘಟನೆಗಳಿಗೆ ಕರೆಯದಿದ್ದರೂ ಚಿಂತೆ ಇಲ್ಲ. ಕಷ್ಟಕ್ಕಂತೂ ಇವರು ಔದಾರ್ಯದ ದಂಪತಿಗಳು.

ಚಂದ್ರನ ಸಂಖ್ಯೆ ನಾಲ್ಕು (೪). ಈ ಸಂಖ್ಯೆಯ ಏಪ್ರಿಲ್ ತಿಂಗಳಿನ ಕನ್ಯೆಗೆ ಈ ಗ್ರಹದ ಮನೋಭಾವ ಸಹಜ ಅಂದರೆ ಮನಸ್ಸು ಬಂದರೆ ಬಂತು. ಇಲ್ಲದಿದ್ದರೆ ಇಲ್ಲ. ಮದುವೆ ಯಾಗುವಾಗ ಮಾತ್ರ ಪತಿರಾಯನ ಮೊಗದ ಮೇಲೆ ಆಸೆ ಬಿದ್ದೇ ಆಗುವ ಮಂದಿ. ಹಠಾತ್ತನೆ ನಿರ್ಣಯ ಮಾಡುವುದು ಇವರಿಗೆ ಒಂದು ಗುಣ. ಅದರಿಂದ ಅನುಕೂಲ ಪ್ರತಿಕೂಲಗಳು ಎರಡೂ ಕರ್ಮಾರ್ಜಿತ ಎಂದು ಅನುಭವಿಸಬೇಕಾದ ಪ್ರಸಂಗಗಳೂ ಇರದೇ ಇಲ್ಲ. ಆದರೆ ಇವರಿಗೆ ಕೇವಲ ಮನಸ್ಸೇ ಪ್ರಧಾನ. ಇದರಿಂದ ಇವರ ದಾಂಪತ್ಯದಲ್ಲಿ ಆಗಾಗ ವಿರಸಗಳು ತಲೆ ಹಾಕಿ ಸಂಸಾರದಲ್ಲಿ ಸುಖದ ಅನುಭವಕ್ಕಿಂತ ಸಂದೇಹ ಸಂಶಯಗಳ ಗುಡಾಣವಾದೀತು. ಸಂಖ್ಯೆಯ ದೋಷ ಏನೇ ಇರಲಿ, ಇವರ ಪ್ರೇಮ ಮಾತ್ರ ಅಮರ. ಕಾಲಾಂತರದಲ್ಲಿ ಇಬ್ಬರಿಗೂ ಪರಸ್ಪರ ರಾಜೀ ಮನೋಭಾವ ಬಂದು ವಯಸ್ಸಾದ ಮೇಲೆ ಶುದ್ಧ ಸುಖದ ದಾಂಪತ್ಯ ಏರ್ಪಡುವುದು. ಆದರೂ ಇವರ ಉದ್ವೇಗದ ಮನೋಭಾವಕ್ಕೆ ಪತಿರಾಯನೇ ಹೊಂದಿಕೊಳ್ಳಬೇಕಾದ್ದು ಎಂದು ಹಿರಿಯ ಸಂಸಾರಸ್ಥರ ಅಭಿಪ್ರಾಯ.

ಮೇ ತಿಂಗಳಿನ ಮಡದಿ ಐದು ಸಂಖ್ಯೆಯ ಗುರುವಿನ ಗುಣಶೀಲಗಳನ್ನುಳ್ಳವರು. ವಿದ್ಯಾವಂತ ಮನೆತನದವರು. ಒಂದೊಂದು ಸಲ ವಿದ್ಯೆ ಇವರಿಗೆ ಮಾತ್ರ ಇರದು. ಆಗ ಗುರು ಚೆನ್ನಿಲ್ಲ ಎಂದರ್ಥ. ಇದರಿಂದ ಪ್ರಸೂತಿಕಾಲದಲ್ಲಿ ಪ್ರಾಣಗಂಡ ಏರ್ಪಡುವ ಸಂಭವ ಉಂಟು. ಜ್ಯೇಷ್ಠ ಪುತ್ರನಿಂದ ಚಿಂತೆ ಬೇರೆ.

ಗಂಡಸಿನ ತಿಂಗಳ ಸಂಖ್ಯೆ ಮೂರು (೩). ಹೆಣ್ಣಿನ ತಿಂಗಳ ಸಂಖ್ಯೆ ಐದು(೫). ಇವರಿಗೆ ಮದುವೆಯಾಗಿ ಸಂಸಾರ ಇತರರಿಗೆ ಸಂತೋಷ. ಕಾರಣ, ಮೂರು ಸಂಖ್ಯೆಯ ಕುಜ-ಶನಿ ಯೋಗಕ್ಕೆ ಹೆಣ್ಣಿನ ಐದು ಸಂಖ್ಯೆಯ ಗುರುವಿನ ಸಂಬಂಧ ಬಂದು ಗುರು-ಮಂಗಳ-ಶನಿ ಯೋಗವಾಗುತ್ತದೆ. ಇದರಿಂದ ಸಂಸಾರದಲ್ಲಿ ದಿನ ನಿತ್ಯ ತರ್ಕಯೋಗ: ಅಂದರೆ ಮಾತಿಗೆ ಮಾತು ಬೆಳೆದು ನೋಡುವವರಿಗೆ ಜಗಳ ಕಾಯ್ದಾರೋ ಎನ್ನುವ ಭಯ. ಗುರು ಗೌರವದ ಗ್ರಹ. ಕುಜನು ಕೆಲಸದ ಗ್ರಹ. ಬೆಂಕಿಯ ಹತ್ತಿರದ ಕೆಲಸ, ಅಡಿಗೆ ಇತ್ಯಾದಿ. ಈ ಕೆಲಸ

ಮಾಡುವುದು ಹೆಣ್ಣಿಗೆ ಅಗೌರವ. ಈ ಮನೋಭಾವದಿಂದ ಮನೆಯಲ್ಲಿ ಅಡಿಗೆ ಕೆಲಸದವರು ಇರಬೇಕು. ಗುರು ಮಾತಿನ ಗ್ರಹ. ಇದರಿಂದ ಹೆಣ್ಣು ತನ್ನ ಮಾತಿಗೇ ಬೆಲೆ ಕೊಡಬೇಕು ಎಂದು ಸಾಧಿಸುವ ಪ್ರವೃತ್ತಿ. ಈ ಕಾರಣ ಇವರ ಸಂಸಾರ ಪರಸ್ಪರ ಮಾತಿನ ಘರ್ಷಣೆ, ಕೂಗಾಟ ಇತ್ಯಾದಿಗಳ ಕಹಳೆಗಳಿಂದ ಕೂಡಿದ ರಣರಂಗ. ಆದರೆ ಇದೇ ಅವರು ಪರಸ್ಪರ ಪ್ರೀತಿ ಮಾಡುವ ಲಕ್ಷಣವೂ ಹೌದು. ಬೆಕ್ಕುಗಳು ಪ್ರೇಮ ಮಾಡಿದಂತೆ. ಮಾತಿನ ಚಕಮಕಿ ಮಾತ್ರ ಒಂದು ಸಹಜದ ಸ್ವಭಾವ.

ಆರನೆಯ ತಿಂಗಳಿಗೆ ಕುಜ ಶುಕ್ರಯೋಗವಿದೆ. ಇದು ಜೂನ್ ತಿಂಗಳು. ಗಂಡಿನ ಮೂರನೆಯ ತಿಂಗಳಿನ ದೋಷವನ್ನು ತೆಗೆದು ಯಜಮಾನರಿಗೆ ಅನುಕೂಲ ಮಾಡಿ ಕೊಡುವ ಹೆಣ್ಣು ಇದು ಎಂದರೆ ತಪ್ಪಾಗದು. ದೇವೀ ಆರಾಧನೆ ಮಾಡಿ ಆ ತಾಯಿಯ ಪ್ರಸಾದದಿಂದ ಈ ತಿಂಗಳ ಹೆಣ್ಣು ಮದುವೆಯಾಗುವುದು. ಈಕೆಯು ದೇವೀ ಆರಾಧಕಳು. ಪತಿಯ ಸಕಲ ಇಷ್ಟಾರ್ಥ ಗಳನ್ನು ನೆರವೇರಿಸುವ ಶಕ್ತಿ, ಸ್ವಭಾವ ಈಕೆಯಲ್ಲಿರುತ್ತೆ. ಊಟ, ಉಪಚಾರಾದಿಗಳಲ್ಲಿ, ಕಾಮ ಭೋಗಗಳಲ್ಲಿ, ಧೈರ್ಯ, ಔದಾರ್ಯಗಳಲ್ಲಿ ಈಕೆಗೆ ಸರಿಸಮರು ಇರರು. ಇದು ಮಾರ್ಚಿ ತಿಂಗಳಿನ ಗಂಡುಗಳಿಗೆ ಅನುಕೂಲದ ಹೆಣ್ಣು ಎಂದರೆ ತಪ್ಪಲ್ಲ.

ಮನೆಯಾಕೆ ಏಳನೆಯ ತಿಂಗಳಿನಲ್ಲಿ ಜನಿಸಿದ್ದು. ಇದು ಜುಲೈ ತಿಂಗಳು. ಇದಕ್ಕೆ ಅಧಿಪತಿ(೭) ಸಂಖ್ಯೆಯ ರಾಹು. ರಾಹುವಿನ ಪ್ರಾಣಿ ಹಾವು. ಇವರ ನಡೆ ಹಾವಿನ ನಡೆ. ಮೂರುಸಂಖ್ಯೆಯ ಕುಜ-ಶನಿ ಯೋಗ ಬೆರೆತರೆ ಇದು ಸರ್ಪದೋಷವಾಗುತ್ತದೆ. ಇದರಿಂದ ಪರಸ್ಪರ ಅಸೂಯೆ, ದ್ವೇಷಗಳ ಹುತ್ತ. ಇವರ ಸಂಸಾರ ಏತಿ ಎಂದರೆ ಪ್ರೇತಿ ಎನ್ನುವ ವಧು. ಇವರು ತಮ್ಮ ಸಂಸಾರದಲ್ಲಿ ಅಷ್ಟೇ ಅಲ್ಲ ಇತರರ ಸಂಸಾರದಲ್ಲಿ ಕೂಡ ತಲೆಹಾಕಿ ತಮ್ಮ ಈ ದೋಷವನ್ನು ಹಂಚುವ ಮಂದಿ. ಇದು ಒಂದು ನಮೂನೆ ರಾಜಕೀಯ ಮಾಡುವ ಸಂಸಾರ ಎನ್ನಬಹುದು. ಆದರೆ ನಾಗನ ಆರಾಧಕರಾದರೆ ಈ ದೋಷ ಪರಿಹಾರ. ಆ ನಮೂನೆ ದೋಷವನ್ನು ತೆಗೆದು, ಸಂಸಾರ ಸುಖವನ್ನು ಕೊಡುವ ಮಂದಿ ಆಗುತ್ತಾರೆ.

ಎಂಟನೆಯ ತಿಂಗಳು ಆಗಸ್ಟ್. ಈ ತಿಂಗಳಿನ ವಧುವಿಗೆ ಬುಧ-ಶನಿ ಯೋಗ ಇರುತ್ತೆ. ಇದು ಒಂದು ನಮೂನೆ. ಇವರಿಗೆ ಅಷ್ಟಾಗಿ ಕಾಮ ಭೋಗಾದಿಗಳಲ್ಲಿ ಆಸೆ ಕಡಿಮೆ. ಇದು ಒಂದು ದೋಷ. ಇದರ ದೋಷವನ್ನು ಗಂಡಿನ ಮೂರನೆಯ ತಿಂಗಳ ಕುಜ-ಶನಿ ಯೋಗ ಪರಿಹಾರ ಮಾಡಿ ಜೀವನದಲ್ಲಿ ಭೋಗ ಸುಖಾದಿಗಳನ್ನು ಕೊಟ್ಟು ಆನಂದವನ್ನು ಉತ್ಪತ್ತಿ ಮಾಡುತ್ತೆ. ಹಾಗೆಯೇ ಗಂಡಿನ ಮೂರನೆಯ ಸಂಖ್ಯೆಯ ದೋಷವನ್ನು ಹೆಣ್ಣಿನ ಸಂಖ್ಯೆಯ ಬುಧ-ಶನಿ ಯೋಗ ತೆಗೆದು ಊಟ ಉಪಚಾರಾದಿಗಳಿಂದ ಪತಿಯನ್ನು ಮೋಹ ಮಾಡುವಂತೆ ಮಾಡುತ್ತೆ. ಬುಧ ಮತ್ತು ಮಂಗಳರು ಪರಸ್ಪರ ಶತ್ರುಗಳಾಗಿ ಪರಸ್ಪರ ದೋಷವನ್ನು ತೆಗೆದು ಇವರ ಸಂಸಾರ ಸಂಪೂರ್ಣ ಸುಖಮಯವನ್ನಾಗಿ ಮಾಡುತ್ತದೆ. ಮದುವೆಯ ನಂತರ ಹೆಂಡತಿಯ ಯೋಗದಿಂದ ಗಂಡಸಿಗೆ ದರಿದ್ರ ಪರಿಹಾರ. ಉದ್ಯೋಗದಲ್ಲಿ ಪ್ರಗತಿ ಇತ್ಯಾದಿ ಸುಯೋಗ ಗಳನ್ನು ಉತ್ಪತ್ತಿ ಮಾಡುತ್ತದೆ. ಆದರೆ ಹೆಣ್ಣಿನ ಬುಧ-ಶನಿ ಯೋಗದಿಂದ ಮಕ್ಕಳು ಆಗುವುದು ನಿಧಾನ ಮತ್ತು ಅಲ್ಪ ಸಂತಾನ ಯೋಗ. ಹೆಣ್ಣು ಬುಧ-ಶನಿ ಯೋಗದಿಂದ ವಿಷ್ಣು ಆರಾಧಕಳು. ಶ್ರದ್ಧೆಯಿಂದ ಪತಿಯನ್ನು ಸೇವೆ ಮಾಡುವಾಕೆಯಾಗಿ ಸಂಸಾರದಲ್ಲಿ ಪರಸ್ಪರ ಬಿಟ್ಟು ಇರರು.

ಮಾರ್ಚ್ ತಿಂಗಳಿನ ಪತಿರಾಯನಿಗೆ ಸೆಪ್ಟೆಂಬರ್ ತಿಂಗಳಿನ ವಧು ಕೈಹಿಡಿದರೆ ಆಗ ಆ ತಿಂಗಳಿನ ಸಂಖ್ಯೆ (೯) ಒಂಭತ್ತರ ಸೂರ್ಯನ ಯೋಗ ಪ್ರಾಪ್ತಿ. ಇದರಿಂದ ಗಂಡನಿಗೆ ಉದ್ಯೋಗ. ಉದ್ಯಮ. ನೌಕರಿಗಳಲ್ಲಿ ಅಭಿವೃದ್ಧಿಯಾಗುತ್ತೆ. ಆದರೆ ತನ್ನಿಂದ ಪತಿಯ ಪ್ರಗತಿ ಎನ್ನುವ ಅಹಂಭಾವದಿಂದ ಹೆಣ್ಣು ಗಂಡನ ಮಾತು ಕೇಳುವುದು ಅಪರೂಪ. ಅನೇಕರು ಪತಿಯ ಮೂಲಕವೇ ತನ್ನ ಕೆಲಸಗಳನ್ನು ಮಾಡಿಸುವುದೂ ಉಂಟು. ಎರಡನೆಯದಾಗಿ ಪತಿಯ ಮತ್ತು ಪತಿರಾಯನ ಮನೆತನ, ಬಂಧುಗಳ ವಿಷಯಗಳಲ್ಲಿ ಮರ್ಯಾದೆಯುತ ಶ್ರದ್ಧೆ ಇರದು. ಇವರು ತವರುಮನೆ ಪ್ರಶಂಸಕರು. ತಮ್ಮವರ ಹೊಗಳಿಕೆಯೇ ಪ್ರಧಾನ. ಆದರೆ ಇವರೂ ಸಹ ಹೊಗಳಿಕೆಗೆ ಬಲಿಯಾಗುವ ಸ್ವಭಾವದವರು.

ಹತ್ತನೆಯ ತಿಂಗಳಿನಲ್ಲಿ ಜನಿಸಿದ ಹೆಣ್ಣಿಗೆ ಆ ಸಂಖ್ಯೆಯ ಗುರು-ಶನಿ ಯೋಗ ಇರುತ್ತೆ. ಇದು ಅಕ್ಟೋಬರ್ ತಿಂಗಳು. ಕುಜ-ಶನಿ ಯೋಗದ ಮಾರ್ಚ್ ತಿಂಗಳಿನ ಗಂಡಿನ ಮೇಲೆ ಈಕೆಯ ಪ್ರಭಾವ ವಿಚಿತ್ರ. ಗುರು ಶನಿ ಯೋಗದಿಂದ ಈಕೆ ದೈವತಾಶ್ರದ್ಧೆಯುಳ್ಳವಳು. ಮಡಿ ಆಚಾರದಲ್ಲಿ ಅಂಧ ಶ್ರದ್ಧೆ. ಇದರಿಂದ ಗಂಡಿನ ಸಕಾಲಿಕ ಅಗತ್ಯಗಳ ಪೂರೈಕೆಗೆ ಆತಂಕ. ಈ ಕಾರಣ ಗಂಡು ಬಿಕ್ಕಟ್ಟಿನ ಪೇಚಿಗೆ ಸಿಕ್ಕಿ ಒದ್ದಾಡಬೇಕು. ದೇವತಾ ಶ್ರದ್ಧೆಯ ಕಾರಣ ಏನನ್ನೂ ಅನ್ನುವಂತಿಲ್ಲ. ಆದರೆ ಅವರಿಗೆ ಈಕೆಯ ಈ ವೃತ್ತಿ ಹಿಡಿಸದು. ಈ ಕಾರಣ ದಾಂಪತ್ಯ ತನ್ನ ಗುರಿಯನ್ನು ಸಾಧಿಸುವುದರಲ್ಲಿ ಸೋರುತ್ತದೆ. ಎತ್ತು ಏರಿಗೆ ಎಳೆದರೆ ಎಮ್ಮೆ ನೀರಿಗೆಳೆಯಿತು ಎನ್ನುವಂತೆ ಇವರ ಸಂಸಾರ.

ಮಾರ್ಚ್ ತಿಂಗಳಿನಲ್ಲಿ ಜನಿಸಿದ ಗಂಡುಗಳಿಗೆ ಹನ್ನೊಂದನೆಯ ತಿಂಗಳಿನ ವಧು ಮದುವೆ ಆಯಿತು. ಆಗ ಮಾರ್ಚ್ ತಿಂಗಳಿನ ಮೂರು ಸಂಖ್ಯೆಯ ಕುಜ-ಶನಿ ಯೋಗದೊಡನೆ ವಧುವಿನ ಹನ್ನೊಂದನೆಯ ತಿಂಗಳಿನ ಶುಕ್ರ-ಶನಿಯೋಗ ಬೆರೆಯುತ್ತೆ. ಕುಜ-ಶನಿಯೋಗದಲ್ಲಿ ಹೆಣ್ಣು ಕಡೆಯವರಿಂದ ಬೇಡ ಎನ್ನಿಸಿಕೊಂಡ ಗಂಡಿಗೆ ಶುಕ್ರ-ಶನಿಯೋಗದಲ್ಲಿ ಬೇಡ ಎನ್ನಿಸಿ ಕೊಂಡು ಬೇಸರ ಬಿದ್ದ ಹೆಣ್ಣು ಮದುವೆಯಾಗುತ್ತೆ. ಇದು ಒಂದೊಂದು ಸಲ ಅನುಕೂಲದ ಮದುವೆಯಂತೆಯೂ ಆದೀತು. ಇನ್ನು ಕೆಲವೆಡೆಗಳಲ್ಲಿ ಎರಡನೆಯ ಸಂಬಂಧದ ಯೋಗವೂ ಆದೀತು. ಇನ್ನು ಕೆಲವೆಡೆಗಳಲ್ಲಿ ಇಬ್ಬರೂ ಮದುವೆ ಬೇಡ ಎಂದು ಉಳಿದುಕೊಂಡು ಕೊನೆಗೆ ಬೇಸರ ಬಂದು ಪರಸ್ಪರ ಮದುವೆಯಾಗಲು ನಿಶ್ಚಯ ಮಾಡಿಕೊಳ್ಳುವ ಯೋಗ ಇದ್ದೀತು. ಅಂತೂ ಪರಸ್ಪರ ಪ್ರೀತಿ ಇರುತ್ತೆಯೋ ಇಲ್ಲವೋ ತಿಳಿಯದು. ಆದರೆ ಪರಸ್ಪರ ಅಗತ್ಯಗಳಿಂದ ಆಗುವ ಮದುವೆ ಎನ್ನಬಹುದು. ಮದುವೆಯ ನಂತರ ಮೂರು ವರುಷಗಳ ನಂತರ ನಿಜವಾದ ಅನುರಾಗದ ದಾಂಪತ್ಯ ರೂಪಿಸಲ್ಪಡುವುದು ಎಂದು ಹಿರಿಯರ ಮತ.

ಆದರೆ ಹನ್ನೆರಡನೆಯದಾದ ಡಿಸೆಂಬರ್ ತಿಂಗಳಿನ ಹುಟ್ಟಿದ ಹೆಣ್ಣು ಪ್ರೀತಿಯಿಂದ ಮದುವೆಯಾಗುವ ನಮೂನೆ. ಗಂಡಸಿನ ಜನನದ ತಿಂಗಳು ಮಾರ್ಚ್‌ಯ ಕುಜ-ಶನಿಯೋಗದ ದೋಷ ಇದ್ದರೂ ಹೆಣ್ಣಿನ ತಿಂಗಳಿನ ಯೋಗದಿಂದ ಅನುರಾಗದ ದಾಂಪತ್ಯ ಸಾಧಿಸುತ್ತೆ ಎಂದರು. ಆದರೂ ಈ ದೋಷದ ಪ್ರಭಾವ ಮಾತ್ರ ಆಗಾಗ ತೋರಿಸೀತು. ಅಂದರೆ ಮನಸಾರೆ ಪ್ರೀತಿ ಮಾಡುವ ಹೆಣ್ಣಿನ ಮನಸ್ಸಿಗೆ ಪತಿರಾಯನು ಬೇರೆ ಸಂಗ ಮಾಡಿದಂತೆ ಭಾಸವಾಗಿ ಆಗಾಗ ದಾಂಪತ್ಯದಲ್ಲಿ ತೀವ್ರ ಕಿಚ್ಚು ಹತ್ತಿದರೂ ಪುನಃ ಅದು ಶಮನವಾಗಿ ಅನುರಾಗ

ಪರ್ಷಮವುದು. ಈ ದೋಷ ನಿವೃತ್ತಿಗಾಗಿ ಆಗಾಗ ವಿಹಾರಕ್ಕಾಗಿಯೋ ಇಲ್ಲ, ಭಕ್ತಿಗಾಗಿಯೋ ದೂರದ ತೀರ್ಥಯಾತ್ರೆ ಮಾಡುವುದು ಲೇಸು.

ಒಟ್ಟದಲ್ಲಿ ಈ ಮಾರ್ಚಿ ತಿಂಗಳಿನ ಜನನದ ಗಂಡುಗಳಿಗೆ ಸರಸದ ದಾಂಪತ್ಯ ಎಲ್ಲಾ ತಿಂಗಳಿನಲ್ಲಿ ಹುಟ್ಟಿದ ಹೆಂಗಳಿಂದ ಸಾಧ್ಯ ಇರದು. ಕೇವಲ ಕೆಲವು ತಿಂಗಳಿನಲ್ಲಿ ಜನಿಸಿದ ಹೆಣ್ಣುಗಳು ಮಾತ್ರ ಅನುಕೂಲವಾದೀತು. ಈ ದೃಷ್ಟಿಯಿಂದ ಪ್ರತಿ ತಿಂಗಳಿನ ಹೆಣ್ಣಿನ ಗುಣಶೀಲಗಳ ಹೊಂದಾಣಿಕೆಯ ರೂಪು ರೇಖೆಗಳನ್ನು ಸ್ಥೂಲವಾಗಿ ಹೇಳಿದೆ. ಇದರ ಸಹಾಯದಿಂದಲೂ ಹಿರಿಯರ ಆದೇಶದ ಆಶೀರ್ವಾದದಿಂದಲೂ ಈ ತಿಂಗಳಿನ ಮಂದಿಗೆ ವಿವಾಹದ ಜೀವನ ಸುಗಮವಾದೀತು. ಕಾರಣ ಮದುವೆಗೆ ಅತಿ ಮುಖ್ಯವಾದ ಮಂಗಳ ಗ್ರಹದ ಬಲ ಈ ಮೂರು ಸಂಖ್ಯೆಯ ತಿಂಗಳಿಗೆ ಇರದು. ಇವರಿಂದ ವಿವಾಹವಾಗುವಾಗ ಎಚ್ಚರದ ಪರಿಶೀಲನೆ ಉಪಯೋಗಕ್ಕೆ ಬಂದೀತು.

## ನಾಲ್ಕನೆಯ ತಿಂಗಳಿನ ಮಂದಿಯ ಫಲ

ಮೊದಲನೆಯ ಜನವರಿ ತಿಂಗಳು, ನಾಲ್ಕನೆಯದು ಏಪ್ರಿಲ್. ವರ್ಷ ಯಾವುದೇ ಇರಲಿ, ಜನನ ಏಪ್ರಿಲ್ ತಿಂಗಳು. ಆಗ ಆ ಮಂದಿಯ ಸಂಸಾರಿಕ ಜೀವನ ಈ ನಾಲ್ಕು ಸಂಖ್ಯೆ ಗ್ರಹದ ತತ್ವಗಳಿಗೆ ಅನುಗುಣವಾಗಿರುತ್ತೆ. ನಾಲ್ಕನೆಯ ಸಂಖ್ಯೆಗೆ ಚಂದ್ರನು ಅಧಿಪತಿ ಎಂದು ಈ ಶಾಸ್ತ್ರ ಮತ. ಈ ಕಾರಣ ಈ ಮಂದಿಯ ಮಡದಿಯರಿಗೆ ಈ ಚಂದ್ರನ ಗುಣಗಳು ಸಹಜ. [illegible] ಗ್ರಹ. ತಾಯಿಯನ್ನು ತೋರಿಸುತ್ತೆ. ತಾಯ್ತನದ ಪ್ರೀತಿ ವಾತ್ಸಲ್ಯಗಳು ಇವರಿಗೆ [illegible].

[illegible]ಲ್ಲಿ ಈ ತಿಂಗಳಿನ ಮಂದಿಗೆ ಸುಖ ಎಂದರೆ ಅಷ್ಟು ತಪ್ಪಾಗದು. ಆದರೆ ಆಗಾಗ [illegible]ದೆ ಇರವು. ಪ್ರಧಾನವಾಗಿ ಈ ಮಂದಿಗೆ ಮಕ್ಕಳನ್ನು ಉಪಚಾರ [illegible]ಳ್ಳುವ ಮಡದಿಯರು ಪ್ರಿಯ. ಹೊತ್ತಿಗೆ ಹೊತ್ತಿಗೆ ಊಟ ಉಪಚಾರ [illegible]ಡುವರು. ಕಾಲಕಾಲಕ್ಕೆ ನಿದ್ದೆ. ಕಾಯಿಲೆಯಾದಾಗ ಔಷಧಗಳ ಬಗ್ಗೆ [illegible] ಸಣ್ಣ ಲೋಪಗಳನ್ನು ದೊಡ್ಡದು ಮಾಡಿಕೊಂಡು ಮನಸ್ಸಿಗೆ ನೋವು [illegible] ಮಂದಿ ವಾದಿಯರ ನಮೂನೆ ಮಡದಿಯರು ಎಂದರೆ ತಪ್ಪಲ್ಲ.

ಆದರೆ [illegible]ಯಲ್ಲಿ ಸುವಾಸಿನಿಯರು ಸಮಾನವಾಗಿ ಸುಖವನ್ನು ಅನುಭವಿಸಬೇಕು. ಲೋಪ ದೋಷಗಳು ಏನೇ ಇದ್ದರೂ ಅದನ್ನು ಸಮಸಮವಾಗಿ ಅನುಭವಿಸುವುದರಲ್ಲಿಯೂ ಒಂದು ಸಂತಸವಿದೆ. ಹೋಗಬೇಕು ಹೋಟೇಲಿಗೆ. ಆಗ ಇವರು ಅದಕ್ಕೆ ಬಿಡರು. ಕಾರಣ ಖರ್ಚು ಮತ್ತು ಆರೋಗ್ಯಕ್ಕೆ ಕೇಡು. ಇದು ಕೆಲ ಮಂದಿಗೆ ಹಿಡಿಸದು. ಬೇಜವಾಬ್ದಾರಿಯ ಪ್ರಸಂಗಗಳು ಇದ್ದರೇ ಇಬ್ಬರಿಗೂ ಸಂತಸ. ಬಹುಶಃ ಇವರು ಹಿಂದಿನ ಜನ್ಮದಲ್ಲಿ ಈ ಮಂದಿಗೆ ತಾಯಂದಿರಾಗಿದ್ದರು ಎನ್ನಬಹುದು. ಇದರಿಂದ ಇವರು ಗಂಡಂದಿರನ್ನು ಮಕ್ಕಳಂತೆ ಜೋಪಾನ ಮಾಡುತ್ತಾರೆ.

ಚಂದ್ರನು ಮನಸ್ಸಿನ ಗ್ರಹ. ಈ ಕಾರಣ. ಈ ಮಂದಿ ಮನಸ್ಸು ಒಪ್ಪಿ ಮದುವೆಯಾಗುವ ಜನ. ಪ್ರೇಮದ ವಿವಾಹ ಎಂದರು. ಅಕಸ್ಮಾತ್ ವಧು ವಿಷಯ ಕೇಳಿ ದರ್ಶನದ ಕಾಲದಲ್ಲಿಯೇ ಮನಸ್ಸು ಬಂದು ವಿವಾಹವಾಗುವುದು. ಅಂದರೆ ಜಾತಕ ಇತ್ಯಾದಿಗಳ ಮತ ಅಗತ್ಯ ಇರದು. ಕೇವಲ ಮನಸ್ಸೇ ಕಾರಣ ಎಂದರ್ಥ.

ಈ ಮಂದಿಯ ಮಡದಿಯರು ಚಂದ್ರನ ಗುಣಗಳನ್ನು ಹೊಂದಿರುತ್ತಾರೆ. ನೋಡಲು ದುಂಡು ಮುಖ. ವರ್ತುಲ ದೇಹ. ಕೆಲವರಿಗೆ ಹಾಲು ಬಿಳಿ ಬಣ್ಣ ಬೇರೆ. ಮದುವೆಯ ನಂತರ ವರ್ಷ ವರ್ಷಕ್ಕೆ ಊದುವ ದೇಹವಾಗಿ ಕೊನೆಗೆ ಸ್ಥೂಲಕಾಯ ಆದೀತು. ಇವರು ಉಪಚಾರ ಪ್ರಿಯರು. ಮನೆಗೆ ಬಂದವರನ್ನು ಊಟ ಉಪಚಾರಗಳಿಲ್ಲದೆ ಕಳಿಸುವುದಿಲ್ಲ. ಆಗ್ರಹಮಾಡಿ ಪ್ರೀತಿಯನ್ನು ತೋರಿಸುವ ಮಂದಿ. ಪ್ರೀತಿ ವಾತ್ಸಲ್ಯ ಇವರಿಗೆ ಸಹಜ ಗುಣ. ಆದರೆ ಅತಿ ಸೂಕ್ಷ್ಮ ಮನಸ್ಸು. ಅವರ ಮನಸ್ಸಿನ ಬೇಡಿಕೆಯಂತೆ ನಡೆಯಬೇಕು. ಆಗ ಅವರು ನಿಮಗೆ ನಿಸ್ವಾರ್ಥ ಸೇವೆ ಮಾಡುವ ಜನ. ವಿಶಾಲವಾದ ಹೃದಯ ಔದಾರ್ಯದ ಸ್ವಭಾವ ಎಷ್ಟಿದ್ದರೂ ಇಷ್ಟವಿಲ್ಲ. ಆಗ ಆ ಮನಸ್ಸು ಚಿಕ್ಕದಾಗುತ್ತೆ. ವೈಮನಸ್ಯ ಇದ್ದರೂ ಹೆಚ್ಚು ಕಾಲ ಇರದು.

ಇವರಿಗೆ ತಾಯಿಯ ಗುಣ. ಆದರೆ ಅನೇಕರಿಗೆ ಮಕ್ಕಳು ಕಡಿಮೆ. ಇದರಿಂದ ಇವರಿಗೆ ಎಲ್ಲರ ಮಕ್ಕಳೂ ಒಂದೇ ನಮೂನೆ. ಭೇದಸ್ವಭಾವ ಇಲ್ಲದವರು. ಇವರು ಹೆಚ್ಚಿನಂಶ ದೇವೀ ಆರಾಧಕರು. ಇದರಿಂದ ಇವರು ಇರುವ ಮನೆಯಲ್ಲಿ ಅನ್ನಕ್ಕೆ ದರಿದ್ರ ಇರದು. ಕಾರಣ ಅನ್ನಪೂರ್ಣೆಯ ಅನುಗ್ರಹ. ವ್ರತ. ಪೂಜೆ ಇತ್ಯಾದಿಗಳಲ್ಲಿ ನಂಬಿಕೆ ಬೇರೆ. ಈ ಆಧುನಿಕ ಸಮಾಜದಲ್ಲಿಯೂ ಸಹ ಇವರು ಎಷ್ಟೇ ವಿದ್ಯಾವಂತರಾದರೂ ಪೂರ್ವಾಚರ ಪದ್ಧತಿಗಳನ್ನು ಕಟ್ಟುನಿಟ್ಟಾಗಿ ಆಚರಿಸಿಕೊಂಡು ಬರುವ ಮಂದಿ.

ಏಪ್ರಿಲ್ ತಿಂಗಳ ಮಂದಿಗೆ ಹೆಂಡತಿಯು ಚಂದ್ರನ ಮೇಲೆ ಜನನ. ಆ ಚಂದ್ರ ಚೆನ್ನಿಲ್ಲ. ಆಗ ಮದುವೆಯ ನಂತರ ಮಂದಿಗೆ ದುಃಖವೇ ಸರಿ. ಪತಿರಾಯನ ಮೇಲೆ ಅಸಮಾಧಾನದಿಂದ ನಿರಾಸೆ ಬೇರೆ. ತಾಯ್ತನದ ಮೊದಲ ಅನುಭವ ಕಹಿ. ಅನಂತರ ಕ್ಷಯ ಇತ್ಯಾದಿ ಮಹಾರೋಗಗಳ ನರಳಾಟ ಬೇರೆ. ಶಕ್ತಿ ದೇವತೆಯ ಶಾಪದಿಂದ ಈ ನಮೂನೆ ಕಹಿ ಜೀವನ. ಅಲ್ಲದೆ ಕೆಲಸದವರಂತೆ ದುಡಿಸಿಕೊಳ್ಳುವ ಅತ್ತೆಯ ಕಾಟ ಬೇರೆ. ಇದರಿಂದ ಬೇಸತ್ತು ಕೆಲವರಿಗೆ ಜಲ ಗಂಡದ ಸನ್ನಿವೇಶಗಳೂ ಅಸಂಭವವೇನೂ ಇಲ್ಲ.

ಚಂದ್ರ ವ್ಯಾಪಾರದ ಗ್ರಹ. ಮದುವೆಯ ನಂತರ ಕೆಲವರಿಗೆ ವ್ಯಾಪಾರ ಯೋಗ ಪ್ರಾಪ್ತಿ. ಈ ಮಂದಿಗೆ ಮದುವೆಯಾದ ನಾಲ್ಕು ವರುಷಗಳ ನಂತರ ಯೋಗಲಾಭ. ಚಂದ್ರ ಚೆನ್ನಿಲ್ಲ. ಆಗ ತೀರ್ಥಯಾತ್ರೆ ಮಾಡುವುದರಿಂದ ಕಷ್ಟ ನಿವಾರಣೆ ಮತ್ತು ಪ್ರಗತಿ. ಸಮುದ್ರ ತೀರದ ಪಟ್ಟಣದ ಸಂಪರ್ಕದಿಂದ ವ್ಯಾಪಾರ ಹೆಚ್ಚಿ ಧನ ಪ್ರಾಪ್ತಿಯಾದೀತು. ಹಾಗಿಲ್ಲ. ಮಂದಿಗೆ ಸಮುದ್ರಾಂತರ ಪ್ರಯಾಣವಾಗಿ ಹೊರದೇಶಗಳಲ್ಲಿ ಅಭಿವೃದ್ಧಿ ಯಾದೀತು. ಚಂದ್ರ ಬಲದಿಂದ ಕೂಡಿದ್ದರೆ ಆಗ ಮದುವೆಯ ನಂತರ ಸುಯೋಗವೇ ನಡೆಯುತ್ತೆ.

ನಾಲ್ಕನೆಯ ತಿಂಗಳಿಗೆ ಚಂದ್ರ ಅಧಿಪತಿ. ಈ ಮಾಸದಲ್ಲಿ ಜನಿಸಿದ ಮಂದಿಗೆ ಈ ತಿಂಗಳಿನ ಜನನದ ಹೆಂಗಸರು ಅನುಕೂಲದ ಮಡದಿಯರು. ಕಾರಣ ಇವರ ನಿರೀಕ್ಷೆಗೆ ಅನುಗುಣದ ದಾಂಪತ್ಯ ಇರುತ್ತದೆ. ಆದರೆ ಮೊದಲಿನ ಮೂರು ತಿಂಗಳುಗಳಲ್ಲಿ ಜನಿಸಿದ ಮಂದಿಯ ಪ್ರಭಾವ ಹಿಂದೆ ಆಯಾ ತಿಂಗಳಿನ ಜನನಗಳ ವಿಚಾರ ವಿಮರ್ಶೆ ಮಾಡುವಾಗ ಹೇಳಿಯಾಗಿದೆ. ಏಪ್ರಿಲ್ ತಿಂಗಳಿನಲ್ಲಿ ಜನಿಸಿದ ಹೆಂಗಸರು ಅದೇ ತಿಂಗಳಿನ ಗಂಡುಗಳಿಗೆ ಶುಭವನ್ನು ಕೊಡುತ್ತಾರೆ. ದಾಂಪತ್ಯವೂ ಸುಖಮಯ. ಆದರೆ ಇಬ್ಬರೂ ಚಪಲ ಚಂಚಲ ಚಿತ್ತರು. ಈ ಕಾರಣ ಆಗಾಗ ಮನೋ ವಿರಸಗಳು ಇರುತ್ತವೆ. ಆದರೆ ತಾತ್ಕಾಲಿಕ.

ದಿವಂಗತರ ಸ್ಮರಣೆಯನ್ನು ತಂದುಕೊಡುವ ಈ ಮಂದಿ ಸೇವಾ ತತ್ಪರರು. ಬಂಧು ಬಳಗದವರಲ್ಲಿ ಅತಿ ಪ್ರಿಯರು. ಸಂಪ್ರದಾಯಸ್ಥ ಮನೆತನದ ಗಾಂಭೀರ್ಯ ಬೇರೆ. ಪತಿರಾಯ ನಿಗೆ ಬೇಸರ ತರುವಷ್ಟು ಮಡಿ ಆಚಾರಗಳ ಗಡಿಬಿಡಿ. ಸಂತಸದಿಂದ ಅಲೆದಾಡಲು ಅವಕಾಶ ಕೊಡರು. ಸದಾ ಏನಾದರೊಂದು ಕೆಲಸ. ದೇವಸ್ಥಾನ ವ್ರತ ಆಚರಣೆ ಎಂದರೆ ಮೊದಲು ನಿಲ್ಲುವ ಮಂದಿ. ಇದರಿಂದ ಪತಿರಾಯನಿಗೆ ಮನಸ್ಸು ಚಿಕ್ಕಾದಾಗದೇ ಏನು? ಆದರೆ ಅವರು ಇವರನ್ನು ಸಹಿಸುವ ಮಂದಿ. ಉಳಿಕೆ ಜೀವನ ಸುಖಮಯ ಅಂದರೆ ತಪ್ಪಲ್ಲ.

ಈ ಮಂದಿಗೆ ಐದನೆಯ ತಿಂಗಳಾದ ಮೇನಲ್ಲಿ ಹುಟ್ಟಿದವರು ಕೈಹಿಡಿದರು. ಆಗ ಗುರುವಿನ ಪ್ರಭಾವ ಹೆಚ್ಚು. ವಿದ್ಯಾವಂತರ ಕುಟುಂಬದಲ್ಲಿ ಬೆಳವಣಿಗೆ ಬೇರೆ ನಾಲ್ಕನೆಯ ಸಂಖ್ಯೆಯ ಗ್ರಹ ಚಂದ್ರ. ಈ ಕಾರಣ ಗುರು ಚಂದ್ರಯೋಗವಾಗುತ್ತೆ. ಇದನ್ನೇ ಗಜಕೇಸರೀ ಯೋಗ ಎಂದರು. ಇದರಿಂದ ಗಂಡಸರಿಗೆ ಮದುವೆಯ ನಂತರ ಧನಯೋಗ. ಹೆಂಗಸರಿಗೆ ಅತಿ ಶೀಘ್ರ ವಾಗಿ ಸಂತಾನದಿಂದ ಸುಯೋಗ. ದೇವತಾ ಪ್ರಸಾದ ಬೇರೆ. ಕೆಲವರಿಗೆ ಮದುವೆಯಾದ ನಂತರ ವಿದ್ಯೆಯನ್ನು ಮುಂದುವರಿಸಿ ಅದರಿಂದ ಮುನ್ನಡೆಯಾದೀತು. ಆದರೆ, ಈ ಗುರು ಚಂದ್ರಯೋಗದಿಂದ ಮೊದಲಿನ ಸಂತಾನ ಹೆಣ್ಣು ಎಂದರು. ಆದರೆ ವ್ಯಾಪಾರಿಗೆ ಈ ಮೇ ತಿಂಗಳ ಹೆಣ್ಣು ಅನುಕೂಲ. ವ್ಯಾಪಾರ ದೊಡ್ಡದಾಗಿ ಹೇರಳ ಧನ ಲಾಭ.

ನಾಲ್ಕು ಸಂಖ್ಯೆಯ ಗ್ರಹ ಚಂದ್ರ. ಈ ನಾಲ್ಕನೆಯ ತಿಂಗಳಿನ ಗಂಡುಗಳಿಗೆ ಆರನೆಯ ಸಂಖ್ಯೆಯ ಜೂನ್ ತಿಂಗಳಿನ ವಧು ಮದುವೆ ಆದೀತು. ಆಗ ಈ ದಾಂಪತ್ಯದಲ್ಲಿ ಕುಜನ ಶುಭಯೋಗ ಪ್ರಾಪ್ತಿ. ಕಾರಣ ಈ ಆರನೆಯ ಸಂಖ್ಯೆ ಕುಜನ ಶುಭಸಂಖ್ಯೆ. ಇದಕ್ಕೆ ಕುಜ ಶುಕ್ರಯೋಗ ಎಂದರು.

ಆರನೆಯ ತಿಂಗಳಿನಲ್ಲಿ ಹುಟ್ಟಿದ ಹೆಂಗಳಿಗೆ ಮೂರನೆಯ ಕುಜ ಶನಿಯೋಗ ಮೊದಲು ನಡೆಯುತ್ತೆ. ಇದರಿಂದ ಮೊದಲು ಮೂರು ಸಲ ನೋಡಿದ ವರಗಳು ನಿರ್ಣಯವಾಗುವ ಘಟ್ಟದಲ್ಲಿ ಮುರಿದು ಬೇಸರ. ಅನಂತರ ಈ ದೋಷ ಹೋಗುತ್ತೆ. ಅಂದರೆ ಮೂರು ಸಲ ನಿರಾಸೆಯಾಗಿ ತಮ್ಮ ಮೊದಲ ಹಠವನ್ನು ತೊರೆದು ಬಂದ ವರಗಳ ವಿಚಾರದಲ್ಲಿ ಗುಣ ವಿದ್ದರೂ ಬೇಡ ಎನ್ನುವ ಮನೋಭಾವ ಬಿಟ್ಟು ಒಪ್ಪಿಗೆ ಕೊಡುವಷ್ಟು ವಿವೇಕ ಬಂದೀತು. ಅಲ್ಲದೇ ವರನ ಕಡೆಯವರು ಏನು ಕೇಳಿದರೂ ಅದನ್ನು ಉಪಚಾರ ರೂಪಕವಾಗಿ ಕೊಡುವಷ್ಟು

ತಮ್ಮಲ್ಲಿ ಹೊಂದಾಣಿಕೆಯನ್ನು ಮಾಡಿಕೊಳ್ಳುತ್ತಾರೆ. ಈ ಮೂಲ ಸಂಖ್ಯೆಯ ದೋಷದಿಂದ ವರೋಪಚಾರ, ವರದಕ್ಷಿಣೆ ಇತ್ಯಾದಿ ಖರ್ಚುಗಳನ್ನು ಮಾಡಿ ಮದುವೆಯಾಗುವುದು ಎಂದರು. ಅಲ್ಲದೆ ಇದೇ ದೋಷದಿಂದ ವರನ ಕಡೆಯವರಿಂದ ವಧೂ ಜನಗಳು ಉಪೇಕ್ಷೆಯನ್ನು ಕೂಡಾ ಎದುರಿಸಬೇಕಾದೀತು. ಆದರೂ ಸಹ ಮದುವೆ ಕಳೆದರೆ ಸಾಕು ಎನ್ನುವಷ್ಟು ಸಹನೆ ಬೇರೆ. ಹೆಣ್ಣು ಮಾತ್ರ ಸುಖವಾಗಿರಬೇಕು ಎನ್ನುವ ಮನೋಭಾವ ಮುಖ್ಯ. ಈ ಮನೆಯಾಕೆಯ ಮನೋಭಾವ ಸಂಸಾರದ ಸುಖಕ್ಕೆ ಮೂಲ ಕಾರಣ. ಆದರೆ ಇದರ ಹಿಂದೆ ಇರುವ ಮೂರು ಸಂಖ್ಯೆಯ ದೋಷದಿಂದ ವರನ ತಮ್ಮನ ಕಾರಣ ವಿರಸ. ಇಲ್ಲ ಹೆಂಡತಿಯರು ತಮ್ಮ ಆದರೂ ಸರಿ ಏನೋ ಒಂದು ವಿರಸ. ದೇವೀ ಆರಾಧನೆಯಿಂದ ಇದು ಸರಿಯಾಗಿ ಸಂಸಾರ ಸುಖ ಮಯವಾಗುತ್ತೆ.

ಚಂದ್ರನ ಸಂಖ್ಯೆಯಾದ ನಾಲ್ಕನೆಯ ತಿಂಗಳಿನ ಏಪ್ರಿಲ್ ಜನನದ ಗಂಡುಗಳಿಗೆ ಏಳನೆಯ ಸಂಖ್ಯೆ. ರಾಹುವಿನ ತಿಂಗಳಿನ ಜುಲೈನಲ್ಲಿ ಹುಟ್ಟಿದ ಹೆಣ್ಣು ಮದುವೆಯಾದರೆ ದಾಂಪತ್ಯದಲ್ಲಿ ಚಂದ್ರ ರಾಹುವಿನ ಯೋಗ ಫಲ ನಡೆಯುತ್ತೆ. ಮನೆಯಾಕೆಗೆ ಸ್ಥಿರವಾದ ಅಭಿಪ್ರಾಯ ಇರದು. ಒಂದೊಂದು ಸಮಯದಲ್ಲಿ ಒಂದೊಂದು ನಮೂನೆ ಮನಸ್ಸು. ಅಲ್ಲದೆ ಒಂದು ಹೇಳಿದರೆ ಹೆಚ್ಚು ಮತ್ತೊಂದು ಹೇಳಿದರೆ ಕಡಿಮೆ. ಸುಮ್ಮನೆ ಇದ್ದರೆ ಇನ್ನೂ ಕಷ್ಟ. ಈ ರೀತಿಯ ಸೂಕ್ಷ್ಮದ ಮನಸ್ಸು ಆಕೆಗೆ ಬೆಳೆದು ಬಂದೀತು. ಅವಿದ್ಯಾವಂತರಲ್ಲಿ ಒಂದೊಂದು ಸಲ ಆವೇಶದ ಮನಸ್ಸೂ ಇದ್ದೀತು. ಅಂದರೆ ಗಾಳಿಯ ಕಾಟ ಎಂದರ್ಥ. ಈಶ್ವರನ ಆರಾಧನೆಯಿಂದ ಪ್ರಸಾದವಾದರೆ ಮದುವೆಯ ನಂತರ ಯಜಮಾನರಿಗೆ ವ್ಯಾಪಾರದಲ್ಲಿ ಸುಯೋಗವನ್ನು ಕೊಡುತ್ತೆ. ರಾಹುವಿನ ಯೋಗದಿಂದ ಹಗ್ಗ ಅಥವಾ ಎಳೆ, ಅಂದರೆ ನೂಲು ವ್ಯಾಪಾರದಿಂದ ಜೀವನ ನಡೆಸಬಹುದು. ಇನ್ನು ಕೆಲವರಿಗೆ ಮುತ್ತು ಧಾರಣೆಯಿಂದ ಯೋಗ ಎಂದರು.

ನಾಲ್ಕನೆಯ ತಿಂಗಳಿನಲ್ಲಿ ಹುಟ್ಟಿದ ಗಂಡುಗಳಿಗೆ ಎಂಟನೆಯ ತಿಂಗಳಾದ ಆಗಸ್ಟ್‌ನಲ್ಲಿ ಜನಿಸಿದ ವಧು ಮದುವೆಯಾದರೆ ಆಗ ಹೆಣ್ಣಿಗೆ ಶುಭ ಎಂದರು. ಮದುವೆ ಎನ್ನುವುದು ಗಂಡು ಹೆಣ್ಣುಗಳಿಗೆ ಪರಸ್ಪರ ಪೂರಕ ಸಾಧನೆ. ಇದರಿಂದ ಹೆಣ್ಣಿಗೆ ಗಂಡಿನಿಂದ ಒಳಿತಾದರೂ ಸರಿ. ಮದುವೆಯ ಉದ್ದೇಶ ನೆರವೇರಿದಂತೆಯೆ ಸರಿ. ಹೆಣ್ಣು ಹುಟ್ಟಿದ್ದು ಆಗಸ್ಟ್. ಈ ತಿಂಗಳಿನ ಸಂಖ್ಯೆ ಎಂಟು. ಈ ಸಂಖ್ಯೆಗೆ ಅಧಿಪತಿ ಶನಿ. ಇದು ವಿದೇಶೀ ಸಂಖ್ಯೆಯ ಶಾಸ್ತ್ರಕ್ಕೂ ಸಮ್ಮತ. ಆದರೆ ಹಿಂದೂ ಸಂಖ್ಯಾ ಶಾಸ್ತ್ರದಲ್ಲಿ ಇದಕ್ಕೆ ಬುಧ-ಶನಿ ಸಂಯೋಗದ ಸಂಖ್ಯೆ ಎಂದರು. ಕಾರಣ ಶನಿಯ ಸರ್ವತ್ರ ಸಮ್ಮತ ಸಂಖ್ಯೆ ಒಂದು ಎಂದರು. ಆದರೆ ಎಂಟು ಕಷ್ಟ ಸೂಚಕ ಸಂಖ್ಯೆ ಎನ್ನುವುದನ್ನು ಎಲ್ಲರೂ ಬಲ್ಲರು. ಆದರೆ ಇಲ್ಲಿ ಇದು ಬುಧನ ಅರಿಷ್ಟವನ್ನು ತೋರಿಸುವುದು. ಈ ಕಾರಣ ಕಷ್ಟ ಬುಧನ ತತ್ವಗಳಿಗೆ ಸಂಬಂಧಿಸಿದ್ದು.

ಬುಧನ ತತ್ವ ಬುದ್ಧಿ. ಮಂದಬುದ್ಧಿಯ ಕನ್ಯೆ ಎಂದರ್ಥ. ಚುರುಕಿನ ಹುಡುಗಿಯಾದರೆ ಮರೆವಿನ ರೋಗ ಎಂದರು. ಸಕಾಲದಲ್ಲಿ ನೆನಪು ಬಾರದೇ ಹೋಗುವುದು ಎಂದರ್ಥ. ಯಾರು ಏನೇ ಅನ್ನಲಿ, ಮೂಕಿಯಂತೆ ಸುಮ್ಮನೆ ಇರುವ ಸ್ವಭಾವ. ಮದುವೆಯ ಮುನ್ನ ತೌರಿನಲ್ಲಿ ಬಂಧುಗಳಿಂದ ನಿಕೃಷ್ಟಳಂತೆ ಕಾಣಲ್ಪಡುವ ಯೋಗ ಎಂದರು. ಅಂದರೆ ಪ್ರೀತಿ ಮಾಡುವ ಬಂಧುಗಳಿಂದ ಬಿಡಲ್ಪಟ್ಟವಳು ಅಥವಾ ತನ್ನ ಇರುವು ಬೇಡದ ಮನೆಯಲ್ಲಿ ಬೆಳೆಯುವುದು.

ಸಂಸಾರದಲ್ಲಿ ಸಮಾನವಾದ ಪ್ರೀತಿ ಹೊಂದದವಳು. ಈ ನಮೂನೆ ಹುಡುಗಿಗೆ ಮದುವೆ ವರಪ್ರಸಾದವಲ್ಲದೆ ಮತ್ತೇನು? ಆದರೆ ಈ ಕಷ್ಟ ಸಂಖ್ಯೆ ಎಂಟು. ಇದನ್ನು ಕತ್ತರಿಸಿದರೆ ನಾಲ್ಕು ಆಗುತ್ತೆ. ಈ ಕಾರಣ ನಾಲ್ಕು ಸಂಖ್ಯೆಯ ತಿಂಗಳಿನಲ್ಲಿ ಹುಟ್ಟಿದ ಗಂಡು ಈ ಹೆಣ್ಣಿಗೆ ಸುಖದಾಯಕ ದಾಂಪತ್ಯವನ್ನು ಕೊಡುತ್ತೆ. ಕಾರಣ ಕಷ್ಟ ಎಂಟನ್ನು ತುಂಡರಿಸಿದರೆ ನಾಲ್ಕು ಸುಖದ ಸಂಖ್ಯೆಯಾಗುತ್ತದೆ. ಇದರಿಂದ ನಾಲ್ಕನೇ ತಿಂಗಳಿನ ಗಂಡು ಈ ಹೆಣ್ಣಿಗೆ ವರಪ್ರಸಾದ ಎಂದರು.

ಕೆಲವು ಸಲ, ವಧುವಿನ ಸಮೀಪದ ಬಂಧುವಿಗೆ ಪಾರ್ಶ್ವವಾಯು ಪೀಡೆ ಇರುತ್ತೆ. ಹಾಗಿಲ್ಲ ಚರ್ಮವ್ಯಾಧಿ. ಬುಧನ ಅರಿಷ್ಟದ ಕಾರಣ ಮದುವೆ ಕೆಲ ಹೆಣ್ಣುಗಳಿಗೆ ನಿಧಾನ. ಶನಿಯ ಬಣ್ಣವೂ ಒಂದು ಕಾರಣ ಇದ್ದೀತು. ಅಂತೂ ಮದುವೆ ಈ ಹೆಣ್ಣಿಗೆ ಸುಖದಾಯಕ. ಅದರಲ್ಲಿಯೂ ನಾಲ್ಕನೆಯ ತಿಂಗಳಿನ ಗಂಡು ಇನ್ನೂ ಉತ್ತಮ. ಮದುವೆ ಎನ್ನುವುದು ಗಂಡಿಗಾಗಲೀ ಹೆಣ್ಣಿಗಾಗಲೀ ಇನ್ನೂ ಉತ್ತಮ. ಕಾರಣ ಗಂಡು ಅಥವಾ ಹೆಣ್ಣು ತಮ್ಮ ಸ್ವಂತ ಜಾತಕದಲ್ಲಿ ಇರುವ ಗುಣ ದೋಷಗಳನ್ನು ರಿಪೇರಿ ಮಾಡಲು ಇದೊಂದೇ ಸಾಧನೆ. ಅಂದರೆ ಉದ್ಯೋಗದ ಗ್ರಹ ಗಂಡಿನ ಜಾತಕದಲ್ಲಿ ಚೆನ್ನಿಲ್ಲ. ಆಗ ಮದುವೆಯಾಗುವ ಹೆಣ್ಣಿನ ಕುಂಡಲಿಯಲ್ಲಿ ಆ ಗ್ರಹ ಬಲವಿದೆ. ಆಗ ಮದುವೆಯ ನಂತರ ಉದ್ಯೋಗ ಪ್ರಗತಿಯಾಗುತ್ತೆ.

ಮನುಷ್ಯನ ಜೀವನದಲ್ಲಿ ಯಾವುದೇ ರೀತಿಯ ಬದಲಾವಣೆಯಾಗಬೇಕಾದರೂ ಮದುವೆಯಿಂದ ಮಾತ್ರ ಅದು ಸಾಧ್ಯ. ಹಾಗಿಲ್ಲ ಯಾವ ರೀತಿಯ ಯೋಗಗಳೂ ನಡೆಯವು. ಶುಕ್ರ ಹೆಂಡತಿ ಹೆಂಡತಿಯಿಲ್ಲದೆ ಶುಕ್ರ ಯೋಗಿಸನು. ಹೆಂಡತಿ ಇಲ್ಲದೆ ಮಕ್ಕಳಿಲ್ಲ. ಮಕ್ಕಳಿಲ್ಲ ಗುರು ಯೋಗಿಸನು. ಹೆಂಡತಿ ಇಲ್ಲದೇ ಬಂಧುತ್ವ ಇಲ್ಲ. ಬಂಧುಗಳಿಲ್ಲದೆ ಬುಧನು ಯೋಗಿಸನು. ಮದುವೆ ಇಲ್ಲದವನಿಗೆ ಕುಜ ದೋಷವಿದ್ದು ಅವನೂ ಯೋಗಿಸನು. ಇದರಿಂದ ಒಡಹುಟ್ಟಿದ ಸೋದರರೂ ಅನುಕೂಲ ಇರರು. ಶನಿ ಮಾತ್ರ ಯಾವಾಗಲೂ ಯೋಗಿಸುತ್ತಾನೆ. ಅದು ಸೇವಕರ ರೂಪದಲ್ಲಿರುತ್ತೆ. ಹೀಗಿರುವಾಗ ಯಾವ ಗ್ರಹ ಎಷ್ಟೇ ಬಲ ಇದ್ದರೂ ಮದುವೆ ಇಲ್ಲದೆ ಅದು ಯೋಗಿಸದು. ಈ ಕಾರಣ ಮಂದಿ ಮದುವೆ ಆಗುತ್ತಾರೆ. ಆದರೆ ಹಾಗೆ ಆಗುವಾಗ ಯಾವ ತಿಂಗಳಿನ ಗಂಡಿಗೆ ಯಾವ ತಿಂಗಳಿನ ಹೆಣ್ಣು ಸುಯೋಗವನ್ನು ಕೊಡುತ್ತೆ ಮತ್ತು ಯಾವ ತಿಂಗಳಿನ ಹೆಣ್ಣು ಅವಯೋಗವನ್ನು ಕೊಡುತ್ತೆ ಎಂದು ತಿಳಿಯಲು ಈ ಗಣಪತಿ ಸಂಖ್ಯಾಶಾಸ್ತ್ರ ಉಪಯುಕ್ತ. ಕಾರಣ ಮಂದಿಗೆ ಜಾತಕ ಇದ್ದೀತು ಇಲ್ಲ, ಹುಟ್ಟಿದ ತಾರೀಖೂ ಇಲ್ಲ. ಆಗ ಹುಟ್ಟಿದ ತಿಂಗಳಿನಿಂದ ಈ ಬಾಬನ್ನು ಸರಿ ಮಾಡಿಕೊಳ್ಳಲು ಸಾಧ್ಯ ಎಂದು ತೋರಿಸುತ್ತೆ.

ಒಂಭತ್ತನೆಯ ತಿಂಗಳಿನಲ್ಲಿ ಜನಿಸಿದ ಹೆಣ್ಣು ನಾಲ್ಕನೆಯ ತಿಂಗಳಿನಲ್ಲಿ ಜನಿಸಿದ ಗಂಡಿಗೆ ಸರಿಸಮನಾದ ಬಾಂಧವ್ಯವನ್ನು ತೋರಿಸುತ್ತೆ. ಕಾರಣ ಒಂಭತ್ತು ಸಂಖ್ಯೆಯ ಗ್ರಹ ಸೂರ್ಯನು. ನಾಲ್ಕನೆಯ ಸಂಖ್ಯೆಯ ಗ್ರಹ ಚಂದ್ರನು. ಈ ವಿವಾಹವು ಸೂರ್ಯ ಚಂದ್ರ ನಡುವೆಯ ಬಂಧುತ್ವವಾಗಿ ಸರಿ ಸಮ ಎಂದರು. ಆದರೂ ಇಲ್ಲಿ ವಧು ಸೂರ್ಯನ ಸಂಖ್ಯೆಯವಳಾಗಿ ವರನಿಗೆ ಈ ಬಂಧುತ್ವದಿಂದ ಆಶ್ರಯ ಪ್ರಾಪ್ತಿಯಾದರೆ ಅಚ್ಚರಿ ಏನಿಲ್ಲ. ಅಲ್ಲದೆ ಸೂರ್ಯನು ಉದ್ಯೋಗದ ಗ್ರಹವಾಗಿ ಮದುವೆಯ ನಂತರ ಗಂಡಿಗೆ ಜೀವನೋಪಾಯ ನೇರ ಹಾದಿ

ಓಡಿಯುವುದರಲ್ಲಿ ಸಂದೇಹವಿಲ್ಲ. ಆದರೆ ಸಂಸಾರದಲ್ಲಿ ಹೆಣ್ಣಿನದೇ ಮೇಲುಗೈ ಎಂದರೆ ಸಂಕೋಚ ಆದೀತು.

ಹತ್ತನೆಯ ತಿಂಗಳಿನ ಹೆಣ್ಣಿಗೆ ಗುರು ಶನಿಯೋಗ ಇರುತ್ತೆ. ಕಾರಣ ಹತ್ತು ಗುರು ಶನಿಯೋಗದ ಸಂಖ್ಯೆ. ಇದು ಆಚಾರಶೀಲ ವಂಶದ ಹೆಣ್ಣು. ಗೌರವಯುತ ಸಂಸಾರ ಬೇರೆ. ಆದರೆ ಹಣ ಮಾತ್ರ ಕಡಿಮೆ. ದೇವತಾಭಕ್ತಿ ಈಕೆಯ ಆಸ್ತಿ. ದಾನ ಧರ್ಮಾದಿ ಪ್ರವೃತ್ತಿ ಬೇರೆ. ಔದಾರ್ಯದ ಹೆಣ್ಣು ಮಗಳು. ಆದ್ದರಿಂದ ಮನೆಯಲ್ಲಿದ್ದ ಪದಾರ್ಥ ತಿಂಗಳು ಮುಗಿಯುವ ಮೊದಲೇ ಕಂಡವರ ಪಾಲು. ನೆರೆಹೊರೆಯವರಿಗೆ ಸಮಯದಲ್ಲಿ ಆಗುವ ಹೆಣ್ಣಾಗಿ ಉತ್ತಮ ಕೀರ್ತಿಯನ್ನು ಪಡೆಯುವಾಕೆ. ನಾಲ್ಕು ಸಂಖ್ಯೆಗೆ ಚಂದ್ರಯೋಗ ಅಲ್ಲದೆ ಬುಧನ ಸುಖದ ಸಂಖ್ಯೆ ಬೇರೆ. ಇದರಿಂದ ಗಂಡನನ್ನು ದೇವರಂತೆ ನೋಡುವ ಹೆಣ್ಣು ಎಂದರೆ ತಪ್ಪಲ್ಲ. ಇದರಿಂದ ಈ ಬಂಧುತ್ವ ಶುಭ ಎಂದರು.

ಹನ್ನೊಂದನೆಯ ಸಂಖ್ಯೆಗೆ ಅಧಿಪತಿ ಶುಕ್ರ. ಇಲ್ಲಿ ಅವನಿಗೆ ಶನಿ ಸಂಬಂಧದ ದೋಷ. ಇದು ನವೆಂಬರ್ ತಿಂಗಳಿನ ಸಂಖ್ಯೆ. ಈ ತಿಂಗಳಿನ ವಧು ಶುಕ್ರ-ಶನಿಯೋಗದ ಕಾರಣ ಸುಖಕಾರಕ ಗ್ರಹದ ದೋಷ ಇರುತ್ತೆ. ಈ ಕಾರಣ ಈ ಹೆಣ್ಣು ಪ್ರೀತಿಯ ಪರಾಕಾಷ್ಠೆಯನ್ನು ತೋರಿಸಿ ಸುಖದ ಪರಮಾವಧಿಯನ್ನು ಕೊಡುವ ಬಯಕೆಯ ಮನುಷ್ಯನಿಂದ ವಂಚಿತಳು. ಇದರಿಂದ ಜೀವನವೇ ನಿರಾಸೆ. ಮಂದಿಯಲ್ಲಿ ಅಪನಂಬಿಕೆ. ಅನುರಾಗಾದಿಗಳಲ್ಲಿ ಆಸಕ್ತಿ ಕಳೆದು ಕೇವಲ ಯಾಂತ್ರಿಕ ಬಾಳುವೆ. ವೇದಾಂತ. ಪರಮಾತ್ಮ ನಿಷ್ಠೆ ಕೆಲವರಿಗೆ ಸುಖವನ್ನು ಕೊಟ್ಟರೆ ಕೆಲವರು ಹಿರಿಯರ ಅಣತಿಯಂತೆ ಮದುವೆಯಾಗಿ ಸಮಾಜದಲ್ಲಿ ಮನಸ್ಸಿಲ್ಲದ ಪತಿಯೊಡನೆ ಮನಸ್ಸಿಲ್ಲದ ಸಂಸಾರದಲ್ಲಿ ಆಸಕ್ತಿಯಿಲ್ಲದೆ ಜೀವನವನ್ನು ನಡೆಸಿಯಾರು. ಇವರು ನಾಲ್ಕನೆಯ ತಿಂಗಳಾದ ಏಪ್ರಿಲ್‌ನಲ್ಲಿ ಹುಟ್ಟಿದ ಗಂಡನ್ನು ಮದುವೆಯಾದರೆ ಹೇಗೆ? ಚಂದ್ರನ ಪ್ರಭಾವ ಈ ವರನಿಗೆ ಹೆಚ್ಚು. ಈ ಕಾರಣ ಗಂಡಸಾದರೂ ಸ್ತ್ರೀ ಸಹಜವಾದ ಚಪಲ ಬುದ್ಧಿ. ಸೂಕ್ಷ್ಮ ಮನಸ್ಸು. ಘಂಟೆಗೊಮ್ಮೆ ಬದಲಾಯಿಸುವ ಸ್ವಭಾವ. ಈ ನಮೂನೆ ವರನೊಡನೆ ದಾಂಪತ್ಯ ಮೇಲೆ ಹೇಳಿದ ವಿರಾಗೀ ಹೆಣ್ಣಿಗೆ ಹೇಗೆ ಸುಖ ಕೊಟ್ಟೀತು? ಅದೂ ಅಲ್ಲದೆ ಚಂದ್ರನ ಯೋಗ ದಿಂದ ತಾಯಿಯ ಮಾತು ಇವರಿಗೆ ಲಕ್ಷ್ಮಣರೇಖೆ. ಇನ್ನು ಹೆಂಡತಿಯನ್ನು ಕೇಳುವವರಾರು? ಇದು ಬಹಳ ಅನಾನುಕೂಲದ ದಾಂಪತ್ಯ ಎಂದು ಹಿರಿಯರ ಅಭಿಪ್ರಾಯ. ಆದರೆ ಕೆಲವರು ಹೆಣ್ಣು ನಿರಾಸೆಯಿಂದ ಕೂಡಿ ಯಂತ್ರಿಕ ಬಾಳುವೆ ನಡೆಸಲು ಸಿದ್ಧವಿದ್ದು ಗಂಡನ ಸೇವೆಯನ್ನು ಮಾಡಿಕೊಂಡಿರಲು ಯೋಗ್ಯಳು ಎಂದರು. ಆದರೂ ಕಳೆದ ಪ್ರೀತಿ ಬಾರದು ಎಂದರು.

ಹನ್ನೆರಡನೆಯ ತಿಂಗಳಿನಲ್ಲಿ ಜನಿಸಿದ ಹೆಣ್ಣು ಸುಖದ ಬಯಕೆಯವಳು. ಆ ಬಯಕೆಯ ಸಾಧನೆಗಾಗಿ ತನ್ನ ಕೈಲಾದ ತ್ಯಾಗವನ್ನೂ ಮಾಡಲು ಸಿದ್ಧಳು. ಮದುವೆಯಾದವನನ್ನು ಸುಖದಲ್ಲಿ ಬಾಳಿಸುವ ಹೆಣ್ಣು. ಆದರೆ ಈಕೆ ನಯವಾದ ಸ್ವಭಾವದವರಾದರೂ ಕಾಮದ ಬಯಕೆ ಹುತ್ತದಲ್ಲಿಯ ಹಾವಿನಂತೆ ಅಡಗಿರುತ್ತದೆ. ಇನ್ನು ಈಕೆಗೆ ನಾಲ್ಕನೆಯ ತಿಂಗಳ ಚಂದ್ರನ ಸಹಜ ಗುಣವಾದ ಚಪಲತೆಯ ಗಂಡು ಸಿಕ್ಕರೆ ಇನ್ನು ಗಂಡನು ಅವಳ ಕೈಗೊಂಬೆಯೇ ಸರಿ. ಆದರೆ ಈ ಹೆಣ್ಣು ಅದೃಷ್ಟದಾತಳು. ಮನೆಗೆ ಗೃಹಲಕ್ಷ್ಮಿಯು. ಆದರೆ ಮದುವೆ ಇಲ್ಲದ ಅಣ್ಣನಾಗಲೀ ಅಕ್ಕನಾಗಲೀ ಇದ್ದು ಆಗಾಗ ಇದರಿಂದ ಯೋಗ ಭಂಗವಾದರೆ ಕಷ್ಟ. ಹೀಗೆ ನಾಲ್ಕನೆಯ

ತಿಂಗಳಿನಲ್ಲಿ ಹುಟ್ಟಿದ ಗಂಡುಗಳಿಗೆ ಒಂದೊಂದು ತಿಂಗಳಿನಲ್ಲಿ ಜನಿಸಿದ ಹೆಣ್ಣು ಮದುವೆ ಯಾದರೆ ಯಾವ ರೀತಿ ಫಲ ಎಂದು ಹೇಳಿದ್ದಾರೆ. ಇನ್ನು ಆರಿಸಿ ಸಂಸಾರ ಮಾಡುವುದು ಅವರವರ ವಿಧಿಗೆ ತಕ್ಕಂತೆ. ಕಾರಣ ಅವರ ಅಭಿರುಚಿ. ಅವರ ಕರ್ಮಾಚಾರಕ್ಕೆ ಸರಿ ಮಾರ್ಗದರ್ಶನ ಮಾಡುವುದು ಶಾಸ್ತ್ರಜ್ಞರ ಕರ್ತವ್ಯ. ಆದಾಗಿ ಉಳಿದದ್ದು ಹರಿ ಪ್ರೇರಣೆ ಎಂದರು.

## ಐದನೆಯ ತಿಂಗಳಿನ ಜನನದ ಮಂದಿಯ ಸಂಸಾರ ಲಕ್ಷಣ

ಜ್ಯೋತಿಷ್ಯ ಶಾಸ್ತ್ರದಲ್ಲಿ ಗಂಡು ಮಕ್ಕಳಿಗೆ ಮದುವೆ ಮಾಡುವ ಹೊಣೆ ಹಿರಿಯರದು. ಇವರು ಮಕ್ಕಳ ಭವಿಷ್ಯ ರೂಪಿಸಿ ಜೀವನವನ್ನು ಉತ್ತಮಗೊಳಿಸಲು ಹೆಣ್ಣು ಹುಡುಕಿ ಮದುವೆ ಮಾಡುತ್ತಾರೆ. ತಾವು ಹುಡುಕಿದ ವಧು ಮಗನಿಗೆ ಅನುಕೂಲವೇ ಪ್ರತಿಕೂಲವೇ ಎಂದು ತಿಳಿಯಲು ಇಬ್ಬರು ಹುಟ್ಟಿದ ಜಾತಕಗಳನ್ನು ಮೇಳ ಮಾಡಿ ನೋಡುತ್ತಾರೆ. ಆದರೆ ಜಾತಕ ಇಲ್ಲದವರಿಗೆ ಏನು ಮಾಡುವುದು? ಇದಕ್ಕೆ ಸಂಖ್ಯಾ ಶಾಸ್ತ್ರದಲ್ಲಿ ಒಂದು ಕ್ರಮವನ್ನು ಸೂಚಿಸಿರುತ್ತಾರೆ. ಈ ಕ್ರಮದಲ್ಲಿ ಗಂಡು ಹುಟ್ಟಿದ ತಿಂಗಳ ಸಂಖ್ಯೆ ಮತ್ತು ವಧು ಜನನದ ತಿಂಗಳಿನ ಮೇಳ ಮಾಡಿ ಅದರಿಂದ ಅನುಕೂಲ ಪ್ರತಿಕೂಲಗಳನ್ನು ತಿಳಿಯಬಹುದು.

ಗಂಡಿನ ಜನನದ ತಿಂಗಳಿನ ಸಂಖ್ಯೆಯ ಅಧಿಪತಿ ಯಾವ ಗ್ರಹ? ಆ ಗ್ರಹದ ಗುಣಗಳು ಅನುಕೂಲ ಇರುವ ಗ್ರಹದ ಸಂಖ್ಯೆಯ ತಿಂಗಳಿನ ವಧು ಜೀವನದಲ್ಲಿ ಪ್ರಗತಿಯನ್ನು ಕೊಡುತ್ತೆ. ಈ ಸಂಬಂಧವನ್ನು ತಿಳಿಸಲು ಗಂಡಸಿನ ಜನನದ ತಿಂಗಳಿನ ಸಂಖ್ಯೆಯ ಗ್ರಹ ಮತ್ತು ವಧು ಹುಟ್ಟಿದ ತಿಂಗಳಿನ ಫಲಗಳ ಹೊಂದಾಣಿಕೆಯ ವಿಮರ್ಶೆಯನ್ನು ವಿವರಿಸಲು ಈ ಪ್ರಯತ್ನ.

ಹೆಣ್ಣಿನ ಹುಟ್ಟಿದ ತಿಂಗಳಿನ ಗ್ರಹದ ಗುಣಗಳೂ ಸಹ ಸಂಖ್ಯಾ ಶಾಸ್ತ್ರದಿಂದ ಅರಿವಾಗುತ್ತೆ. ಗಂಡಿನ ಜನನದ ತಿಂಗಳು ಈಗ ಮೇ ತಿಂಗಳು. ಆಗ ಈ ತಿಂಗಳಿನ ಸಂಖ್ಯೆ ಐದು. ಇದರ ಅಧಿಪತಿ ಗ್ರಹ ಗುರು. ಮದುವೆಯಾಗುವ ಮಡದಿಗೆ ಈ ಗುಣಗಳು ಇರಬೇಕು ಎನ್ನುವ ಗಂಡಿನ ನಿರೀಕ್ಷೆ ಎಂದರ್ಥ. ಇದಕ್ಕೆ ವಿರೋಧದ ಗುಣಗಳು ಇರುವ ತಿಂಗಳಿನ ವಧು ವರನ ಮಾನಸಿಕ ನಿರೀಕ್ಷೆಗೆ ನಿರಾಸೆಯನ್ನು ಕೊಟ್ಟು ಸಂಸಾರ ಜೀವನವನ್ನು ಕೆಡಿಸಿ ಜೀವನದ ಪ್ರಗತಿಗೆ ಅಡ್ಡಿಯಾಗಬಲ್ಲದು. ಈ ಕಾರಣ ಗುರುವಿನ ತತ್ವಗಳಿಗೆ ಅನುಗುಣದ ಗ್ರಹದ ಸಂಖ್ಯೆಯ ತಿಂಗಳಿನಲ್ಲಿ ಜನಿಸಿದ ಹೆಣ್ಣನ್ನು ಹುಡುಕಿ ಮದುವೆ ಮಾಡುವುದು ಲೇಸು.

ಐದನೆಯ ತಿಂಗಳಿಗೆ ಗುರು ಅಧಿಪತಿ. ಇದರಿಂದ ಮಡದಿ ಗುಣವಂತೆ ಇರಬೇಕು. ವಿದ್ಯೆ ಇರಬೇಕು. ಉತ್ತಮ ಮಾತುಗಾರ್ತಿ ಬೇರೆ. ಕೆಲವು ವೇಳೆ ಗುರು ಚೆನ್ನಿರನು. ಆಗ ಮಡದಿ ವಿದ್ಯಾವಂತ ಕುಟುಂಬದವಳು. ಆದರೆ ತಾನೇ ಕಾಲೇಜಿನ ವಿದ್ಯಾರ್ಥಿಯಲ್ಲ ! ಹಿರಿಯರಲ್ಲಿ ಆದರ ಗೌರವದ ನಡುವಳಿಕೆ ಬೇರೆ. ದೇವ ಗುರುಗಳಲ್ಲಿ ಭಕ್ತಿ ಒಂದು ವಿಶೇಷ. ವಿದ್ಯೆ ಇರಲಿ, ಬಿಡಲಿ ವಿದ್ಯಾವಂತರಲ್ಲಿ ಗೌರವ. ತಾವು ತಮ್ಮ ಮಕ್ಕಳು ಉತ್ತಮ ದರ್ಜೆಯಲ್ಲಿ ತೇರ್ಗಡೆಯಾದರೆ ಅದನ್ನು ಊರಲ್ಲಿ ಎಲ್ಲರಿಗೂ ಹೇಳಿಕೊಂಡು ಹೆಮ್ಮೆ ಬೀಳುವ ಮಂದಿ ಇವರು. ಹಣಕಾಸಿನ ಪ್ರಭಾವ ಇವರ ಮೇಲೆ ಇಲ್ಲದೇ ಇಲ್ಲ. ಆಭರಣಗಳ ಬಯಕೆ ಕೂಡಾ ಹೆಚ್ಚು. ಆದರೆ

ಗುರು ಚೆನ್ನಿಲ್ಲ. ಆಗ ಇವರ ಕೈಲಿ ಕಾಸು ನಿಲ್ಲದು. ಔದಾರ್ಯ ಬುದ್ಧಿಯಿಂದ ಇದ್ದದ್ದನ್ನು ಪರರಿಗೆ ಕೊಟ್ಟು ಕಳೆದಾರು. ಈ ಮೇ ತಿಂಗಳಿನ ಮಂದಿಗೆ ಮಕ್ಕಳಿಂದ ಭವಿಷ್ಯ ರೂಪಿಸುವುದು ಒಂದು ವಿಶೇಷ. ಕೆಲವರಿಗೆ ಮಕ್ಕಳ ಯೋಗದಿಂದ ಮಾಡುವ ಕೆಲಸವೇ ಬದಲಾಯಿಸಿ ವಿಶೇಷ ಪ್ರಗತಿಯನ್ನು ಕೊಡುವ ದಾರಿ ಹತ್ತುವುದು. ವ್ಯಾಪಾರ ವ್ಯವಹಾರ ಮಾಡುವ ಮಂದಿಗೆ ಇದು ವಿಶೇಷವಾಗಿ ಅನ್ವಯವಾಗುತ್ತದೆ. ಚಿನ್ನ ಬೆಳ್ಳಿ ವ್ಯಾಪಾರಸ್ಥರಿಗೆ ವಿಶೇಷ ಯೋಗವೇ ನಡೆದೀತು. ವಿದ್ಯಾಶಾಖೆ ಮತ್ತು ಬ್ಯಾಂಕಿನ ಅಧಿಕಾರ ಕೆಲವರಿಗೆ ಪ್ರಾಪ್ತಿಯಾದೀತು. ಮೊತ್ತದಲ್ಲಿ ಮೇ ತಿಂಗಳು ಜನಿಸಿದ ಮಂದಿಗೆ ಹಣಕಾಸಿನ ಹುಚ್ಚಿರುವ ಮಡದಿ ಬಂದು ತಲೆ ಕೊರೆಯುವಷ್ಟು ಮಾತಿನ ಮಲ್ಲಿಯಾದರೂ ಅವರಿಂದ ಇರುವ ಉನ್ನತ ಕೊಡುಗೆ ಎಂದರೆ ಸಂಸಾರವನ್ನು ಮುಂದಕ್ಕೆ ತರುವ ಮಕ್ಕಳು ಎಂದರೆ ಆಗ. ಅವರಿಗೆ ಅಭಿಮಾನವೇ ಸರಿ.

## ಯಾವ ತಿಂಗಳಲ್ಲಿ ಜನಿಸಿದ ಹೆಣ್ಣು ಲೇಸು

ಮೇ ತಿಂಗಳಲ್ಲಿ ಜನಿಸಿದ ಗಂಡುಗಳಿಗೆ ಗುರುವಿನ ತತ್ವಗಳನ್ನು ಪ್ರಧಾನವಾಗಿ ಹೊಂದಿರುವ ಹೆಣ್ಣು ಹೆಂಡತಿಯಾಗುವುದು ಶಾಸ್ತ್ರ ಮತ. ಆದರೆ ಇತರ ತಿಂಗಳುಗಳಲ್ಲಿ ಹುಟ್ಟಿದ ಹೆಣ್ಣುಗಳೂ ಈ ಮೇ ಮಂದಿಯನ್ನು ಮದುವೆಯಾಗುವದು ಸಹಜ. ಇದರಿಂದ ಹೆಣ್ಣು ಹುಟ್ಟಿದ ತಿಂಗಳಿನ ಗ್ರಹದ ಗುಣಗಳು ಆಕೆಗೆ ಸಹಜ. ಮದುವೆಗಳಾದ ನಂತರ ಗಂಡನ ತಿಂಗಳಿನ ಸಂಖ್ಯೆಯ ಗ್ರಹದ ಗುಣಗಳು ಆಕೆಯ ಮೇಲೆ ವಿಶೇಷ ಪರಿಣಾಮವನ್ನು ಬೀರುತ್ತದೆ. ಈ ಕಾರಣ ಕೆಲವು ಸಂದರ್ಭಗಳಲ್ಲಿ ಆಕೆಯ ಮಾಸಾಂಕದ ಸಹಜವಾದ ಗುಣಗಳೂ ಸಹ ಮಾಯವಾಗಿ ಗಂಡಿನ ಮಾಸಾಂಕದ ಗ್ರಹದ ಗುಣಗಳನ್ನು ಅತಿ ಶೀಘ್ರವಾಗಿ ಪಡೆಯಬಹುದು. ಅನೇಕ ವಾಸ್ತವಿಕ ಉದಾಹರಣೆಗಳು ಇದಕ್ಕೆ ದೊರೆತಾವು.

ಉದಾಹರಣೆಗೆ ಜನವರಿ ತಿಂಗಳಿನಲ್ಲಿ ಜನಿಸಿದ ಹೆಣ್ಣಿಗೆ ಆ ತಿಂಗಳು ಸಂಖ್ಯೆಯಾದ ಒಂದರ ಅಧಿಪತಿ ಗ್ರಹವಾದ ಶನಿಯ ಗುಣಗಳು ಹುಟ್ಟಿನಿಂದ ಬಂದ ಗುಣ. ಸೇವಾ ಮನೋಧರ್ಮ, ಸಹನೆ ಮತ್ತು ಶಾಂತಿಯಿಂದ ಇದಿರಾದ ಸಂದರ್ಭಗಳನ್ನು ಎದುರಿಸುವುದು ಇತ್ಯಾದಿ.

ಈ ಶನಿಯ ಗುಣಗಳು ಜನವರಿ ತಿಂಗಳಿನ ಹೆಣ್ಣಿಗೆ ಸಹಜ. ಆದರೆ ಮದುವೆಯಾದ ಮೇಲೆ ಬದಲಾದ ಸ್ಥಿತಿಗತಿಗಳಿಂದ ನಡೆ ನುಡಿಗಳೂ ಬದಲಾಗುವುದು ಸಹಜ. ಅದರಲ್ಲಿಯೂ ಹೆಂಗಳ ಮನಸ್ಸು, ಕೇಳಬೇಕಾದ್ದೇ ಇಲ್ಲ. ಅತ್ತ ತೆರಳಿದೆ ಮೇಲೆ ಸುಧಾರಿಸಿದ ಸ್ಥಿತಿಗತಿಗಳಿಂದಾಗಿ ಇತ್ತಲ ಮನಸ್ಸೇ ಮಾಯವಾದ ಪ್ರಸಂಗಗಳು ವಿರಳ ಎಂದರೆ ಅವರಿಗೆ ಅನು ಸಮಾಧಾನದ ನುಡಿಯೇ ಸರಿ. ಕಾರಣ ಮನಸ್ಸು ಚಂಚಲ. ಶನಿಯ ಸಮಾಧಾನ, ಶಾಂತಿಯ ಸಹಬಾಳುವೆ, ಸೇವಾ ಮನೋಧರ್ಮ ಎಲ್ಲವೂ ಮಂಗಳಮಾಯ ಆದೀತು. ಕಾರಣ ಹೆಣ್ಣಿನ ಮನಸ್ಸು ಅತ್ಯಂತ ಸುಲಭವಾಗಿ, ಶೀಘ್ರವಾಗಿ ಪರಿಸ್ಥಿತಿಗಳಿಗೆ ಹೊಂದಿಕೊಳ್ಳುವ ಚೇತನವುಳ್ಳದ್ದು.

ಒಂದು ಸಮಯ ಎಳೆತನದ ಗುಣಗಳು ಆಳದ ಬೇರು ಬಿಟ್ಟಿದ್ದರೆ ಆಗ ಮದುವೆಯ ನಂತರ ಪುರುಷನ ತಿಂಗಳ ಸಂಖ್ಯೆಯ ಗುಣಗಳ ಬೆರೆತುಕೊಂಡು ಗುರು ಶನಿ ಸಂಯೋಗದ ಗುಣಗಳು

ಸ್ವಭಾವದಲ್ಲಿ ಬರುತ್ತವೆ. ಅಂದರೆ ಯಜಮಾನರು ಮನೆಯಲ್ಲಿರುವಾಗ ಗುರು ತತ್ವಗಳನ್ನೂ ಅವರು ದೂರದ ಊರು ಇತ್ಯಾದಿಗಳಿಂದ ಬೇರೆ ಹೋದಾಗ ಶನಿಯ ಗುಣಗಳೂ ಕಾಣಿಸಿಕೊಳ್ಳುತ್ತವೆ. ಹಾಗಿಲ್ಲ. ಗುರು ಶನಿಗಳ ಸಂಯೋಗದ ಗುಣಗಳನ್ನು ರೂಪಿಸಿಕೊಂಡು ಜೀವನ ನಡೆಸುವುದು ಎಂದರ್ಥ. ವೇದಾಂತ ಶ್ರದ್ಧೆ, ಗುರು ದೇವತೆಗಳಲ್ಲಿ ಭಕ್ತಿ, ದಾನ ಧರ್ಮಾದಿಗಳಲ್ಲಿ ಶ್ರದ್ಧೆ ಇತ್ಯಾದಿ. ಆದರೆ ಈ ಯೋಗದಲ್ಲಿ ಮಕ್ಕಳಿಂದ ಸುಖ ಇರದು. ಪ್ರಸೂತಿ ಕಾಲದಲ್ಲಿ ಗಂಡಾಂತರ ಬೇರೆ.

ಐದನೆಯ ತಿಂಗಳಿನ ಜನನದ ಗಂಡುಗಳಿಗೆ ಎರಡನೆಯದಾದ ಫೆಬ್ರುವರಿ ಮತ್ತು ನಾಲ್ಕನೆಯದಾದ ಏಪ್ರಿಲ್ ತಿಂಗಳಿನಲ್ಲಿ ಹುಟ್ಟಿದ ಹೆಂಗಸು ಅನುಕೂಲ ಎನ್ನಬಹುದು. ಕಾರಣ ಇದಕ್ಕೆ ಬುಧನು ಎರಡನೆಯ ಸಂಖ್ಯೆಗೆ ಅಧಿಪತಿ. ಚಂದ್ರನು ನಾಲ್ಕನೆಯ ತಿಂಗಳಿಗೆ ಅಧಿಪತಿ. ಗುರುವಿಗೆ ಈ ಎರಡು ತತ್ವಗಳೂ ಸರಿ ಹೊಂದಾಣಿಕೆಯಾಗುತ್ತವೆ. ಬುದ್ಧಿ ಮತ್ತು ಮನಸ್ಸಿನ ಗ್ರಹಗಳಾದ ಇವು ವಿದ್ಯಾ ಗ್ರಹವಾದ ಗುರುವಿಗೆ ಉತ್ತಮ ಜೋಡಿಯಾದೀತು. ಅದರಲ್ಲಿಯೂ ಎರಡನೆಯ ತಿಂಗಳಾದ ಫೆಬ್ರುವರಿಗೆ ಬುಧನು ಅಧಿಪತಿಯಾಗಿ ಬುದ್ಧಿಯ ಚಾಕಚಕ್ಯತೆಯ ಹೆಣ್ಣನ್ನು ತೋರಿಸುತ್ತಾನೆ. ಇನ್ನು ಈ ನಮೂನೆ ಹೆಣ್ಣಿಗೆ ವಿದ್ಯಾಕಾರಕನಾದ ಗುರುವಿನ ತಿಂಗಳಿನ ಗಂಡು ಮದುವೆಯಾದರೆ ಗುರು ಬುಧ ಸಂಯೋಗದ ಫಲದಿಂದ ಸಂಸಾರ ಉತ್ತಮ ಬುದ್ಧಿ ಲಹರಿಗಳಿಂದ ಕೂಡಿ ಸಂತಸದ ಬೀಡಾಗುವುದು. ಅಲ್ಲದೆ ಸಾಹಿತ್ಯಪಟುಗಳು ಈ ಸಂಸಾರಕ್ಕೆ ಸಹಜದ ಮಿತ್ರರಾಗಿ ಮಡದಿಯರು ಉತ್ತಮ ಲೇಖಕರಾಗಿರುವ ಸನ್ನಿವೇಶಗಳೂ ಕಂಡು ಬಂದಾವು.

ಇದೇ ಬುಧನಿಗೆ ಶನಿಯೋಗವಾದರೆ ಅದು ಎಂಟನೆಯ ಸಂಖ್ಯೆಯನ್ನು ತೋರಿಸುತ್ತೆ. ಇದು ಆಗಸ್ಟ್ ತಿಂಗಳಿನ ಹೆಣ್ಣನ್ನು ತೋರಿಸುತ್ತೆ. ಈ ಹೆಣ್ಣಿಗೆ ಗುರುವಿನ ತಿಂಗಳಾದ ಮೇ ಜನನದ ಗಂಡು ಮದುವೆಯಾದರೆ ಆಗ ಹೆಣ್ಣಿಗೆ ಉತ್ತಮ. ಬುಧ ಶನಿಯೋಗದಿಂದ ಬುದ್ಧಿ ಮಂಕು. ಇದರಿಂದ ಆಲಸ್ಯದ ಚಟುವಟಿಕೆ. ಸ್ವಂತ ಬುದ್ಧಿ ಲಹರಿಗಳ ಅಭಾವ ಬೇರೆ. ಅಲ್ಲದೆ ಬುಧನ ಅರಿಷ್ಟದಿಂದ ಬಂಧುಗಳೂ ಆಕೆಗೆ ಅನುಕೂಲ ಇರರು ಇದ್ದರೂ ಆಕೆಗೆ ಆಗರು. ಆ ಕಾರಣ ಐದನೆಯ ತಿಂಗಳಿನ ಗಂಡು ಈಕೆಗೆ ವರಪ್ರಸಾದ ಎಂದರೆ ತಪ್ಪಲ್ಲ. ಗುರುವಿನ ಪ್ರಭಾವದಿಂದ ಬುಧಾರಿಷ್ಟಯೋಗ ನೀಗಿ ಉತ್ತಮ ವಿದ್ಯಾಯೋಗ ಸಹ ಕೆಲವರಿಗೆ ಬಂದದುಂಟು. ಆದರೆ ಈ ಬುಧ ಶನಿಯೋಗ ಸೇವೆಯ ಯೋಗ. ಇದು ಒಂದು ನಮೂನೆ ಭಕ್ತಿಯೋಗವೂ ಹೌದು. ಇದರಿಂದ ಹೆಣ್ಣು ಗಂಡಿನ ವಿಷಯದಲ್ಲಿ ವಿಶೇಷ ಭಕ್ತಿಯುತವಾದ ಪ್ರೇಮವನ್ನು ತೋರಿಸುತ್ತಾರೆ.

ಮಂಗಳ ಗ್ರಹದ ತಿಂಗಳುಗಳಾದ ಮಾರ್ಚಿ, ಜೂನ್ ಜನನಗಳು ಈ ಐದನೆಯ ತಿಂಗಳಿನ ಗಂಡುಗಳಿಗೆ ಸಾಮ್ಯಾದ ಫಲವನ್ನು ಕೊಡುತ್ತೆ. ಮಾರ್ಚಿ ತಿಂಗಳು ಮೂರನೆಯದು. ಇದಕ್ಕೆ ಮಂಗಳನ ಅರಿಷ್ಟದ ಕುಜ ಶನಿ ಸಂಯೋಗದ ಫಲ ನಡೆಯುತ್ತೆ. ಇದು ಕುಜದೋಷವನ್ನು ತೋರಿಸುತ್ತೆ. ದೇವೀ ಆರಾಧನೆಯ ಫಲವಾಗಿ ಈ ಹೆಣ್ಣುಗಳಿಗೆ ಈ ಐದನೆಯ ಗುರುಪ್ರಭಾವದ ತಿಂಗಳಿನ ಗಂಡು ಮದುವೆಯಾದೀತು. ಆದರೆ ಇದರ ಪ್ರಭಾವ ಗಂಡಿನ ಮನೆಯ ಮೇಲೆ ಶುಭ ಎನ್ನಲಾಗದು. ಮದುವೆಯಾದ ನಂತರ ಮಂಗಳನ ಕೇಡಿನ ಫಲ ನಡೆದೀತು. ಇದರಿಂದ

ಗಂಡಿನ ಮನೆಯಲ್ಲಿ ಧನದ ನಷ್ಟ. ಪರಸ್ಪರ ಒಳಜಗಳ ಕಾರಣ ಸಹಜದ ಪರವಾನಕ್ಕೂ ಕೆಲವು ಸಲ ಸಂಚಕಾರ ಆದೀತು. ಆದರೆ ಗಂಡು ಇಂಜಿನಿಯರಿಂಗ್ ಉದ್ಯೋಗದಲ್ಲಿದ್ದರೆ ಬಹುಶಃ ಈ ಹೆಣ್ಣು ಅಭಿವೃದ್ಧಿಯನ್ನು ಕೊಡುತ್ತೆ. ಅನ್ಯಥಾ ಇಲ್ಲ. ಜೂನ್ ತಿಂಗಳಿನ ಫಲ ಇದಕ್ಕಿಂತ ಲೇಸು. ಕಾರಣ ಇದಕ್ಕೆ ಮಂಗಳನ ಶುಭತ್ವವಿದೆ. ಇದಕ್ಕೆ ಕುಜ ಶುಕ್ರಯೋಗದ ಫಲವಿದೆ. ಮದುವೆಯ ನಂತರ ಇದು ಸ್ವತಂತ್ರ ಸಂಸಾರ ಮಾಡುವ ಯೋಗವಿದ್ದು ಪತಿರಾಯನು ದೂರದ ಊರಿನಲ್ಲಿ ಕೆಲಸ ಮಾಡುವ ಯೋಗ. ಆದರೆ ಅನುರಾಗದ ದಾಂಪತ್ಯವಿದ್ದು ಮಂಗಳನ ಗುರುವಿನ ಹೊಂದಾಣಿಕೆಯಲ್ಲಿನ ಊನಗಳನ್ನು ಮರೆಸಿ ಬಾಳುವ ಸುಖ ಎನ್ನಬಹುದು.

ಏಳನೆಯ ತಿಂಗಳಿನಲ್ಲಿ ಜನಿಸಿದ ಹೆಣ್ಣಿಗೆ ರಾಹುವಿನ ಯೋಗವಿದೆ. ಇದಕ್ಕೆ ಗಂಡಿನ ಐದನೆಯ ತಿಂಗಳಿಗೆ ಗುರುವಿನ ಯೋಗ ಬೆರೆತಾಗ ಇದು ಗುರುರಾಹು ಯೋಗವಾಗಿ ಇದರಿಂದ ಮಕ್ಕಳು ಹೆಚ್ಚು. ಕಾರಣ ಇದು ಸುಲಭ ಗರ್ಭಧಾರಣೆಯೋಗ. ಎರಡನೆಯದಾಗಿ ಇದು ಧರ್ಮ ಆಚಾರಗಳಲ್ಲಿ ನಾವೀನ್ಯತೆಯ ಬೆರಿಕೆ ಮಾಡುವ ಯೋಗವೂ ಹೌದು.

ಕೆಲವು ಸಲ ಈ ರಾಹು ತನ್ನ ಬೆರಕೆಯ ಯೋಗದಿಂದ ಅಂತರ ಜಾತೀಯ ಮದುವೆಯನ್ನು ತೋರಿಸುತ್ತೆ. ಕೆಲವು ಸಲ ಯಾವುದೇ ಒಂದು ಧರ್ಮ, ಒಂದು ಆಚಾರದ ಅನುಸರಣೆ ಇರದು. ಅನೇಕ ಸಲ ಇದು ವಿದೇಶದ ಆಚಾರವಿಚಾರಗಳ ಅನುಕರಣೆಯನ್ನೂ ತೋರಿಸುತ್ತೆ. ಅಂದರೆ ಇದು ಒಂದು ನಮೂನೆ ಸಹಜದ ಧರ್ಮ ಆಚಾರ ವಿಚಾರಗಳಿಗೆ ಎಡೆಕೊಡದು. ಆದರೂ ಸಹ ಇದು ಉತ್ತಮ ಪ್ರೇಮ. ಪ್ರತಿಭಾವೃದ್ಧಿ ಇತ್ಯಾದಿಗಳಿಂದ ಗಂಡನಿಗೆ ಒಳ್ಳೆಯದನ್ನೇ ಮಾಡೀತು.

ಐದನೆಯ ತಿಂಗಳಿನ ಜನನದ ಗಂಡುಗಳಿಗೆ ಗುರುವೇ ಪ್ರಧಾನ ಗ್ರಹ. ಈ ತತ್ವಗಳ ಅನುಕರಣೆ ಇರುವ ಹೆಣ್ಣು ಇವರಿಗೆ ಸೂಕ್ತ. ಇದು ಐದನೆಯ ತಿಂಗಳಿನಲ್ಲಿಯೇ ಹುಟ್ಟಿದ ಹೆಣ್ಣಿಗೆ ಇರುತ್ತೆ. ಆದರೆ ಇದು ನಿಯಮದಂತೆ ನಡೆಯದು. ಎಲ್ಲಾ ತಿಂಗಳಿನ ಹೆಣ್ಣುಗಳು ಈ ಗಂಡನ್ನು ಮದುವೆಯಾಗಲು ಶಕ್ಯ. ಆದರೆ ಅದರಲ್ಲಿ ಹೆಚ್ಚಿನ ಪ್ರಭಾವ ಬೀರುವ ಹೆಣ್ಣು ಎಂದರೆ ಪ್ರಗತಿಪರ ತತ್ವದ ಗ್ರಹವಾದ ಸೂರ್ಯನ ತಿಂಗಳಿನಲ್ಲಿ ಹುಟ್ಟಿದಾಕೆ. ಇದರಿಂದ ಮದುವೆಯಿಂದ ಗಂಡಿನ ಪ್ರತಿಭೆ ಪ್ರಭಾವಗಳಲ್ಲಿ ಅಪೂರ್ವ ಪ್ರಗತಿಯನ್ನು ಕೊಡುತ್ತೆ. ಮುನ್ನಡೆ ಅವಕಾಶಗಳೂ ಸಹ ಮದುವೆಯಿಂದ ಪ್ರಾಪ್ತಿ. ಈ ವಧು ಮನೆಗೆ ಬಂದು ಲಕ್ಷ್ಮಿಯಂತೆ ಮೆರೆದಾಳು. ಅಲ್ಲದೆ ಮಕ್ಕಳ ಜನನ ಸಹ ಉತ್ತಮ ಯೋಗಕ್ಕೆ ಬಲವನ್ನು ಕೊಡುತ್ತೆ. ಮಕ್ಕಳೂ ಸಹ ತಂದೆ ತಾಯಿಗಳ ಜೀವಿತ ಕಾಲದಲ್ಲಿಯೇ ಉತ್ತಮ ಪ್ರಗತಿಯನ್ನು ಹೊಂದಿ ಅವರಿಗೆ ಒಂದು ಹೆಮ್ಮೆಯ ಸರಿ ಎಂದರೆ ತಪ್ಪಲ್ಲ.

ಈ ರೀತಿ ಮೇ ತಿಂಗಳಿನ ಜನನದ ಗಂಡುಗಳು ಸಂಸಾರ. ಹೆಣ್ಣು ಹುಟ್ಟಿದ ತಿಂಗಳಿನ ಪ್ರಭಾವ. ಇದರಿಂದ ಅವರು ಹೇಗೆ ಮುಂಬರುವರು ಎನ್ನುವ ಅರಿವು. ಮೊತ್ತದಲ್ಲಿ ಗಂಡು ಹುಟ್ಟಿದ ತಿಂಗಳು. ಆ ತಿಂಗಳಿನ ಸಂಖ್ಯೆ ತೋರಿಸುವ ಗ್ರಹ ಇದು ಜಾತಕದಲ್ಲಿ ಗಂಡಿನ ದಾಂಪತ್ಯ ತೋರಿಸುವ ಗ್ರಹದಂತೆ ಪರಿಗಣನೆ ಮಾಡುವಂತೆ ಫಲ. ಅಂದರೆ ಗಂಡಿನ ಜನನದ

ತಿಂಗಳಿನ ಸಂಖ್ಯೆಯ ಗ್ರಹ ಜಾತಕದ ಸಪ್ತಮ ವಿವಾಹ ಸ್ಥಾನದ ಮೇಲೆ ಪ್ರಭಾವ ಬೀರುವ ಗ್ರಹ ಎನ್ನಬಹುದು.

## ಜೂನ್ ತಿಂಗಳ ಮಂದಿಗೆ ವಧುಗಳು

ಆರನೆಯ ತಿಂಗಳಾದ ಜೂನ್ ತಿಂಗಳಿನಲ್ಲಿ ಹುಟ್ಟುವ ಮಂದಿಗೆ ಅವರ ಸಂಸಾರ ಜೀವನ ಆ ತಿಂಗಳ ಸಂಖ್ಯೆಯಾದ ಆರು (೬) ಮತ್ತು ಅದರ ಅಧಿಪತಿಯಾದ ಕುಜನ ಯೋಗದಿಂದ ರೂಪಿತವಾಗುತ್ತದೆ. ಈ ಆರು ಸಂಖ್ಯೆಗೆ ಮೂರು ಸಂಖ್ಯೆಯ ಫಲ ಗತಫಲ. ಆದರೆ ಮೂರು ಸಂಖ್ಯೆಯ ಕುಜಶನಿ ಯೋಗದ ಫಲ ಕೊಂಚ ಕಾಲ ನಡೆಯಿತು ಎಂದರ್ಥ. ಅಂದರೆ ಮೊದಲು ಮೂರು ಪ್ರಯತ್ನಗಳಿಂದ ನಿರಾಸೆ. ದೇವೀ ಆರಾಧನೆಯಿಂದ ಆ ಕೆಟ್ಟ ಫಲ ನೀಗಿ ಆರು ಸಂಖ್ಯೆಯ ಕುಜ ಶುಕ್ರಯೋಗದ ಫಲ ಪ್ರಾಪ್ತಿಯಾಗುತ್ತೆ.

ಕುಜ ಶುಕ್ರಯೋಗ ಅನುರಾಗದ ದಾಂಪತ್ಯದ ಯೋಗ. ವಧು ಇಷ್ಟಬಿದ್ದ ವರನನ್ನು ಮದುವೆಯಾಗಲು ಅಡ್ಡಿ ಆಂತಕಗಳಾಗಿ ಅನಂತರ ಸಂಧಾನದ ಮೂಲಕ ಮದುವೆ ಅಂದರು. ಮನೆಯಲ್ಲಿ ಹಿರಿಯರು ವರನನ್ನು ಇಷ್ಟ ಬೀಳದ ಬೇರೆ ಬೇರೆ ಗಂಡುಗಳನ್ನು ಪ್ರಯತ್ನ ಮಾಡಿ ವಧುವಿನ ಕುಜ ದೋಷದ ಕಾರಣ ನಿರಾಶೆಯಾಗಿ ಕೊನೆಗೆ ಆ ವರನನ್ನೇ ಮದುವೆ ಮಾಡುವುದು ಎಂದರ್ಥ.

ಈ ಮಂದಿಗೆ ಕುಜನ ಶುಕ್ರಯೋಗದ ಫಲ. ಅಂದರೆ ಅನುರಾಗವೇ ಪ್ರಧಾನ. ಕೆಲವೆಡೆ ಭೋಗ ಲಾಲಸೆ ಪರಸ್ಪರ ಪ್ರೀತಿಗೆ ಕಾರಣ ಆದೀತು. ಅಲ್ಲದೇ ವಧುವಿಗೆ ಗಂಡನನ್ನು ತನ್ನ ಹಿಡಿತದಲ್ಲಿ ಇಟ್ಟುಕೊಳ್ಳುವ ದೈವದತ್ತ ಶಕ್ತಿ ಇರುತ್ತೆ. ಬಹುಶಃ ಇದಕ್ಕೆ ವಧು ದೇವೀಭಕ್ತಿ ಮಾಡುವುದೂ ಕಾರಣ ಇದ್ದೀತು. ಎರಡನೆಯದಾಗಿ ಮೂರು ಸಂಖ್ಯೆಯ ವೇಧೆ ಇಲ್ಲದಿರು ವುದಕ್ಕಾಗಿ ಈ ಕುಜಶನಿ ಯೋಗ ಬೇರೆ ನಿಂತು ಇವರಿಬ್ಬರ ಸೇವೆ ಮಾಡಿಕೊಂಡು ಕಾಲ ಕಳೆಯುವ ವೃದ್ಧ ವಿಧವೆಯನ್ನು ತೋರಿಸೀತು ಹಾಗಿಲ್ಲ ಅಡುಗೆ ಮಾಡುವ ಬೇರೆ ಆಳನ್ನು ತೋರಿಸೀತು. ಮೊತ್ತದಲ್ಲಿ ಈ ವಧು ಕುಜ ಶನಿ ಯೋಗದ ಅಡುಗೆ ಕೆಲಸ ಮಾಡುವವಳಲ್ಲ. ಹಾಗೆ ಒಂದು ಸಮಯ ಮಾಡಿದಲ್ಲಿ ನಡೆಯುವ ಕುಜ ಶನಿ ಯೋಗದಿಂದ ಆರೋಗ್ಯ ಕೆಟ್ಟು ಆಸ್ಪತ್ರೆ ಸೇರಬೇಕಾದೀತು. ಮೊತ್ತದಲ್ಲಿ ಹೆಂಡತಿ ಉತ್ಸವಮೂರ್ತಿಯಂತೆ ಕೆಲಸ.

ಈ ಮಂದಿಗೆ ಮದುವೆ ಎನ್ನುವುದು ಇಷ್ಟ ಎಂದೇನಿಲ್ಲ. ಕಾರಣ ಸುಪ್ತವಾಗಿ ಕೂತ ಮೂರು ಸಂಖ್ಯೆಯ ಕುಜನ ಶನಿಯೋಗದ ದೋಷ. ಆದರೆ ಹೆಂಡತಿಯ ಸನಿಹದಲ್ಲಿ ಮಾತ್ರ ಆ ಮೋಹ ಪಾಶವನ್ನು ಬಿಡಿಸಲು ಇವರಿಗೆ ಅಸಾಧ್ಯ. ಅನೇಕರಿಗೆ ಹೆಂಡತಿ ತವರಿನಲ್ಲಿರುವಾಗ ಆ ನೆನಪು ಕೂಡಾ ಹೋದೀತು.

## ಮದುವೆಯಿಂದ ಸುಯೋಗ

ಆರು ಸಂಖ್ಯೆಗೆ ಕುಜ ಶುಕ್ರ ಯೋಗ. ಇದು ಪುರುಷ ಸ್ತ್ರೀ ಗ್ರಹಗಳ ಸಂಯೋಗ. ಈ ಕಾರಣ ಸ್ತ್ರೀ ಬಾಳಿನಲ್ಲಿ ಬಾರದೆ ಇವರಿಗೆ ಈ ಯೋಗ ನಡೆಯದು. ಅಲ್ಲಿಯವರೆಗೆ ಕೆಲವರಿಗೆ ಕೇವಲ ಕುಜಶನಿ ಯೋಗದ ಅವಯೋಗವೇ ನಡೆಯುತ್ತೆ. ಅಂದರೆ ವೃಥಾ ದುಡಿಮೆ. ಕೈಲಿ ನಿಲ್ಲದ ಸಂಪಾದನೆ. ವೃಥಾ ಅಲೆತ. ಇದೇ ಯೋಗದಿಂದ ಅನೇಕರು ಯಂತ್ರಾಲಯಗಳಲ್ಲಿ ಕೆಲಸ ಮಾಡಬಹುದು. ಹಾಗಿಲ್ಲ ಲೋಕೋಪಯೋಗಿ ಶಾಖೆಯ ಇಂಜನಿಯರು ಆದಾರು. ಹಾಗಿಲ್ಲ ನಿಮ್ನ ವರ್ಗ ಜನಗಳಿಂದ ದುಡಿಮೆ ಮಾಡಿಸಿ ಅದರಿಂದ ಸಂಪಾದನೆ ಆದೀತು. ಊಟ ಉಪಚಾರದ ಸಕಾಲೀನ ಕೊಡುತೆಗಳಿಂದ ಆರೋಗ್ಯ ಕೂಡಾ ಕೆಲವರಿಗೆ ಕೆಟ್ಟೀತು. ಈ ರೀತಿಯ ಕುಜ ಶನಿಯೋಗದ ಫಲ ಮದುವೆ ಗೊತ್ತಾದ ಕೆಲವೇ ದಿನಗಳಲ್ಲಿ ನಿಂತು ಶುಭ ಫಲ ಪ್ರಾಪ್ತಿಯಾಗುತ್ತೆ.

ಶುಕ್ರ ಎಂದರೆ ವಧು. ಹೆಂಡತಿ ಎಂದು ನಿರ್ಣಯವಾದ ವ್ಯಕ್ತಿಯ ಯೋಗದ ದೆಸೆಯಿಂದ ಶುಭಯೋಗ ಶುರು. ವಸ್ತುವಾಹನಾದಿಗಳ ಪ್ರಾಪ್ತಿ ಈ ಯೋಗದ ಪಂತ. ವಾಹನ ಇಲ್ಲದೆ ಶುಭ ಸಂಪತ್ತಿನ ಯೋಗ ನಡೆಯದು. ಹೆಂಡತಿ ತಂದ ಯೋಗ ಹೆಂಡತಿ ತೀರಿಕೊಂಡರೆ ತೀರುತ್ತೆ. ಈ ವಿಷಯ ಅವರಿಗೆ ಮನದಟ್ಟಾಗಿದ್ದು ಆಕೆಯನ್ನು ತನ್ನ ಭಾಗದ ಲಕ್ಷ್ಮಿಯನ್ನಾಗಿ ನಡೆಸಿಕೊಂಡು ಬರುವ ಮಂದಿ ಇವರು. ಆಕೆ ಇವರನ್ನು ಸುಖಿಯಾಗಿಟ್ಟರೂ ಸುಖವಿಲ್ಲದ ಹೆಣ್ಣೊಂದು ಅವರ ಮನೆಯಲ್ಲಿ ಇರುವುದನ್ನು ಮಾತ್ರ ಸಹಿಸಬೇಕಾಗುತ್ತೆ. ಕಾರಣ ಅದು ಕುಜಶನಿ ನಿರೋಧ ಮಾಡುವ ದೈವತಂತ್ರ.

## ಇತರ ತಿಂಗಳುಗಳಲ್ಲಿ ಜನಿಸಿದ ಹೆಣ್ಣುಗಳ ಪ್ರಭಾವ

ಈ ಆರು ಸಂಖ್ಯೆಯ ಜೂನ್ ತಿಂಗಳಿನಲ್ಲಿ ಹುಟ್ಟಿದ ಮಂದಿಗೆ ಮೂರು ಸಂಖ್ಯೆಯ ಸುಪ್ತ ಶನಿಕುಜ ಯೋಗ ಇರುತ್ತೆ. ಈ ಕಾರಣ ಶನಿ ಸಂಬಂಧದ ಯಾವ ತಿಂಗಳಿನಲ್ಲಿ ಹುಟ್ಟಿದ ಹೆಣ್ಣು ಆದರೂ ಅವರಿಗೆ ಯೋಗ ನಡೆಯದು. ಉದಾಹರಣೆಗೆ ಜನವರಿ. ಇದಕ್ಕೆ ಸಂಖ್ಯೆ (೧) ಒಂದು. ಇದರ ಅಧಿಪತಿ ಶನಿ ಆಗ ಇದರಿಂದ ಕುಜಶನಿಯೋಗ ಮೇಲೆ ಕಾಣಿಸಿಕೊಂಡು ಎರಡು ಮದುವೆ ಆಗುವ ಯೋಗ ಅಲ್ಲದೆ ಅನುರಾಗದ ಸಮತೋಲನೆಯನ್ನು ಕಳೆದುಕೊಂಡ ಜೀವನ. ಅಲ್ಲದೆ ಕೈಗಳು ಯಾವಾಗಲೂ ಬರಿದೇ ಸರಿ. ಮನೆಯಲ್ಲಿ ಮೂರು ತಿಂಗಳು ಇದ್ದರೆ ಆರು ತಿಂಗಳು ಹೊರಗೆ ಓಡಾಟ. ಇನ್ನು ಕೆಲವರಿಗೆ ಹೆಣ್ಣು ಸ್ವದೇಶ ಗಂಡು ವಿದೇಶ. ಕೇವಲ ಪತ್ರಮುಖದ ದಾಂಪತ್ಯ ಇದೀತು.

ಆದರೆ ಎಂಟನೆಯ ತಿಂಗಳಲ್ಲಿ ಹುಟ್ಟಿದ ಹೆಣ್ಣಗೆ ಬುಧ ಶನಿ ಯೋಗ ಇರುತ್ತೆ. ಇಲ್ಲಿ ಮಾತ್ರ ಬುಧ ಮತ್ತು ಕುಜರು ಶತ್ರುಗಳಾಗಿ ಒಬ್ಬರ ದೋಷವನ್ನು ಇನ್ನೊಬ್ಬ ತೆಗೆದಾನು. ಎಂಟನೆಯ ಸಂಖ್ಯೆಯ ಅಧಿಪತಿಯಾದ ಬುಧ ಶನಿಯೋಗ ಸೇವಕಿಯ ಯೋಗ. ಅಂದರೆ ಸೇವೆ ಮಾಡುವ ಮನೋಭಾವ ಉಳ್ಳವಳು ಎಂದರ್ಥ. ಇದರಿಂದ ಗಂಡಿಗೆ ಯಾವ ನಮೂನೆ ವಿರೋಧ ಇರದು. ಎದುರು ಬೀಳುವುದೂ ಇಲ್ಲ. ಈ ಕಾರಣ ಅಡ್ಡಿ ಆತಂಕಗಳಿಲ್ಲದೆ ಕುಜನ ದೋಷ

ತಣ್ಣಗಾಗುವುದು. ಆದರೆ ಅತೀವ ಕಾಮದಿಂದ ಹೆಣ್ಣಿಗೆ ಆರೋಗ್ಯ ಕೆಟ್ಟು ನರದುರ್ಬಲತೆಯಿಂದ ಕಾಯಿಲೆ ಆದೀತು.

ನಾಲ್ಕನೆಯ ತಿಂಗಳಿನ(ಏಪ್ರಿಲ್) ಜನನದ ಹೆಣ್ಣು. ಈಕೆಗೆ ಚಂದ್ರ ಅಧಿಪತಿ. ಆದ್ದರಿಂದ ಪ್ರೇಮ ಮಾಡುವ ಸ್ವಭಾವ. ಆರನೆಯ ತಿಂಗಳಿನ ಗಂಡಿಗೆ ಕುಜ ಶುಕ್ರ ಯೋಗವಿದ್ದು ಚಂದ್ರಯೋಗದಿಂದ ಬಲವನ್ನು ಹೊಂದುತ್ತೆ. ಈ ಕಾರಣ ಗಂಡಿನ ಲಾಲನೆಗೆ ಪೋಷಕ ಪೂರಕವಾಗಿ ಹೆಣ್ಣು ಅನುಕೂಲಳು. ಇಲ್ಲಿ ಆರು ಸಂಖ್ಯೆಯ ಕುಜ ಶುಕ್ರ ಯೋಗಕ್ಕೆ ನಾಲ್ಕನೆಯ ಚಂದ್ರಯೋಗ ಬೆರೆತು ಶುಕ್ರ ಚಂದ್ರ ಯೋಗವಾಗಿ ಮೊದಲನೆಯ ಹೆಂಡತಿಗೆ ಅಪಾಯ. ಅಲ್ಲದೆ ಇದು ಸಪತ್ನೀಕ ಯೋಗ ಎಂದರು. ಅಂದರೆ ಎರಡು ವಿವಾಹ ಯೋಗ.

ಗಂಡಿನ ಜನನ ಆರನೆಯದಾದ ಜೂನ್ ತಿಂಗಳು. ಹೆಣ್ಣು ಹುಟ್ಟಿದ್ದು ಸೆಪ್ಟಂಬರ್ ಒಂಭತ್ತನೆ ತಿಂಗಳು. ಒಂಭತ್ತು ಸಂಖ್ಯೆಗೆ ಸೂರ್ಯ ಅಧಿಪತಿ. ಆರು ಸಂಖ್ಯೆಗೆ ಕುಜ ಶುಕ್ರಯೋಗ. ಹೆಣ್ಣು ಸೂರ್ಯನ ಗುಣದಿಂದ ಇದ್ದು ಅಧಿಕಾರ ಅಹಂಭಾವದ ಪ್ರತೀಕ. ತನ್ನ ಮಾತು ನಡೆಸಿಕೊಳ್ಳುವ ಹಠ. ಇದಕ್ಕೆ ಗಂಡಿನ ಆರು ಸಂಖ್ಯೆಯ ಕಾಮ ಅವಳಿಗೆ ಒಂದು ಅಸ್ತ್ರ. ಅಂದರೆ ಗಂಡಿನ ಸ್ವಭಾವವನ್ನು ತನ್ನ ಕಾರ್ಯ ಸಾಧನೆಗೆ ಉಪಯೋಗಿಸಿಕೊಳ್ಳುವಾಕೆ ಎಂದರ್ಥ. ಸೆಪ್ಟಂಬರ್ ತಿಂಗಳ ಹೆಣ್ಣು ಆರು ಸಂಖ್ಯೆಯ ತಿಂಗಳಿನ ಗಂಡನ್ನು ತನ್ನ ಕೈಗೊಂಬೆಯಾಗಿಸುತ್ತಾಳೆ.

ಅಕ್ಟೋಬರ್ ತಿಂಗಳ ಹೆಣ್ಣು. ಈಕೆಗೆ ಗುರುಶನಿಯೋಗ. ಇದರಿಂದ ಈಕೆ ಗುಣವಂತಳು. ಸದಾಚಾರ ಪ್ರಿಯಳು. ಆದರೆ ಹೆಚ್ಚಿನ ಖರ್ಚಾಳು. ಔದಾರ್ಯ ಗುಣದಿಂದ ಕೇಳಿದವರಿಗೆ ದುಡ್ಡು ಕಾಸು ಕೊಟ್ಟು ಗಂಡನನ್ನು ಬರಿಗೈ ಮಾಡುವಾಕೆ. ಜೂನ್ ತಿಂಗಳಿನ ಗಂಡಿನ ಲಾಲಸೆಯನ್ನು ತನ್ನ ಈ ಗುಣದ ಪೋಷಣೆಗಾಗಿ ಉಪಯೋಗಿಸಿಕೊಳ್ಳುತ್ತಾಳೆ. ಈ ಕಾರಣ ಈ ದಾಂಪತ್ಯವು ಹಣದ ದೃಷ್ಟಿಯಿಂದ ಅನಾನುಕೂಲ. ಅಲ್ಲದೆ ಗುರುಶನಿ ಯೋಗದಿಂದ ಸಂತಾನ ಭಾಗ್ಯವೂ ಇರದು.

ನವೆಂಬರ್ ತಿಂಗಳಿನ ಹೆಣ್ಣಿಗೆ ಶುಕ್ರ ಶನಿ ಯೋಗ. ಈಕೆ ಬಾಲ್ಯದ ನಿರಾಸೆಗಳಿಂದ ಜೀವನದಲ್ಲಿ ಉತ್ಸಾಹ ಕಳೆದುಕೊಂಡವಳು. ಅಲಂಕಾರದಲ್ಲಿ ಅನಾಸಕ್ತಿ. ಗಂಡಸರ ಮೇಲೆ ಮೊದಲ ದ್ವೇಷ ಹೋಗಿ ಅವರ ಸ್ವಭಾವಕ್ಕಾಗಿ ಅನುಕಂಪ ಮಾಡುವ ಮಂದಿ ಬಾಲ್ಯದ ಆಸೆ. ಆಕಾಂಕ್ಷೆಗಳಿಂದ ವಂಚಿತಳು. ಇಂತಹ ಹೆಣ್ಣಿಗೆ ಆರನೆಯ ಜೂನ್ ತಿಂಗಳಿನ ಕಾಮಿ ಗಂಡು ತುಂಬಾ ಅನುಕೂಲ. ಕಾರಣ ಬಲವಂತದಿಂದ ಸಿಹಿ ತಿಂಡಿ ತಿನ್ನಿಸುವಂತೆ ಜೀವನದಲ್ಲಿ ಆಕೆಗೆ ಬಲವಂತವಾಗಿ ಹರ್ಷ, ಸಂತಸ ತುಂಬಿ ಸುಪ್ತ ಆಸೆಗಳನ್ನು ಕೆದಕಿ ಹೊರಹಾಕಿ ಜೀವನದ ವಸಂತ ಋತುವನ್ನು ತೋರಿಸುತ್ತಾನೆ. ಈ ದಾಂಪತ್ಯ ಹೆಣ್ಣಿಗೆ ಅನುಕೂಲ. ಗಂಡಿಗೆ ಮೊದಲು ಕಷ್ಟವಾದರೂ ಅನಂತರ ಅನುಕೂಲ.

ಡಿಸೆಂಬರ್ ತಿಂಗಳ ಸಂಖ್ಯೆ ಹನ್ನೆರಡು. ಇದಕ್ಕೆ ಕುಜಶುಕ್ರ ಯೋಗ. ಇಲ್ಲಿ ಶುಕ್ರನಿಗೆ ಬಲ ಹೆಚ್ಚು. ಕಾರಣ ಹನ್ನೊಂದು ಶುಕ್ರನ ನಿರಾಸೆಯ ಸಂಖ್ಯೆ. ಆದರೆ ಹನ್ನೆರಡು ಅದೇ ಶುಕ್ರನಿಂದ ಭೋಗ ಭಾಗ್ಯ ಕೊಡುವ ಸಂಖ್ಯೆ. ಗಂಡಿನದು ಆರು ಸಂಖ್ಯೆ. ಇದಕ್ಕೂ ಕುಜ ಶುಕ್ರ ಯೋಗ.

ಆದರೆ ಇಲ್ಲಿ ಕುಜನ ಬಲ ಹೆಚ್ಚು. ಈ ಇಬ್ಬರು ಮದುವೆಯಾದರೆ ಪರಸ್ಪರ ಪ್ರೀತಿ ಅನುರಾಗ ಇದ್ದರೂ ಕೆಲವೆಡೆ ಸಂಶಯ ಅಸೂಯೆಗಳಿಗೆ ಎಡೆಕೊಟ್ಟು ಗಡಿಬಿಡಿ ಮಾಡುತ್ತೆ. ಆದರೆ ಜೀವನದಲ್ಲಿ ಮದುವೆಯ ನಂತರ ಪರಸ್ಪರ ಅಭಿವೃದ್ಧಿಯಾಗಿ ಸುಯೋಗ ನಡೆಯುತ್ತದೆ. ಇದು ಒಂದು ನಮೂನೆ ಅನುರಾಗದ ಮದುವೆ. ಅತಿರೇಕ ಪ್ರೀತಿಯಾದರೆ ಅಸುಖ.

ಜುಲೈ ತಿಂಗಳ ಜನನ. ಇದಕ್ಕೆ ಏಳು ಸಂಖ್ಯೆಯ ರಾಹು ಅಧಿಪತಿ. ಈ ರಾಹು ಯಾವ ಸಂಖ್ಯೆ ಜೊತೆ ಸೇರಲಿ ಆ ಸಂಖ್ಯೆಯ ಗುಣಗಳನ್ನು ಅತಿರೇಕಿಸುತ್ತಾನೆ. ಗಂಡು ಜೂನ್ ತಿಂಗಳಿನ ಆರು ಸಂಖ್ಯೆಯ ಕುಜ ಶುಕ್ರಯೋಗದಲ್ಲಿರುತ್ತಾನೆ. ಆಗ ಈ ರಾಹು ಯೋಗದಿಂದ ಅತಿಕಾಮಿಯಾಗುವುದುಂಟು. ಅಲ್ಲದೆ ಪರಸ್ತ್ರೀ ಸಂಗದ ಬಯಕೆಯೂ ಉಂಟಾಗಬಹುದು. ಇದರಿಂದ ಪರಸ್ಪರ ಸುಖವಿಚಾರಗಳಲ್ಲಿ ಕುಂದು ಕೊರತೆಗಳು ತಲೆದೋರಿ ದಾಂಪತ್ಯದಲ್ಲಿ ವಿರಸವಾಗುತ್ತೆ. ಕಾರಣ ಕುಜ ಶುಕ್ರಯೋಗಕ್ಕೆ ರಾಹು ಯೋಗ ಬೆರೆತರೆ ಆಗ ಕುಜರಾಹು ಯೋಗ ಸಹ ಉಂಟಾಗಿ ಸರ್ಪದೋಷ ಆಗುತ್ತದೆ. ಇದರಿಂದ ಪರಸ್ಪರ ಕಲಹ ಇತ್ಯಾದಿ ದಿನನಿತ್ಯದ ಬೇಸರದ ಪ್ರಸಂಗಗಳು ಇರುತ್ತವೆ.

ಮೊತ್ತದಲ್ಲಿ ಆರನೆಯ ತಿಂಗಳಿನಲ್ಲಿ ಹುಟ್ಟಿದ ಗಂಡು ಕಾಮಲಾಲಸೆಯ ವ್ಯಕ್ತಿ. ಇದಕ್ಕೆ ಅನುಕೂಲದ ಸಂಖ್ಯೆ ಅವರಿಗೆ ಉತ್ತಮ. ವಿರೋಧದ ಸಂಖ್ಯೆ ವಿರೋಧ. ಜೀವನದಲ್ಲಿ ದೈಹಿಕಸುಖ ಒಂದೇ ಇವರ ಗುರಿ. ಕೆಲವರು ಸ್ವಾರ್ಥಿಗಳೂ ಇದ್ದರೆ ಇನ್ನೂ ಸರಿ.

## ಏಳನೆಯ ತಿಂಗಳ ಲಕ್ಷಣಗಳು

ಮಂದಿಯ ತಿಂಗಳ ಸಂಖ್ಯೆ ಏಳು. ಆಗ ಅವರಿಗೆ ಆ ಏಳು ಸಂಖ್ಯೆಯ ಗುಣ ತತ್ವಗಳುಳ್ಳ ಮಡದಿ ಪ್ರಿಯಳು. ಏಳು ಸಂಖ್ಯೆ ರಾಹುವಿಗೆ ಸೇರಿದ್ದು. ಇದರಿಂದ ಇವರ ಸಂಸಾರದ ರೂಪು ರೇಷೆಗಳಿಗೆ ಈ ರಾಹು ಮೂಲ. ಹೆಂಡತಿಗೆ ರಾಹುವಿನ ಗುಣಶೀಲಗಳು ಇರುವುದು ಇವರಿಗೆ ಇಷ್ಟ.

ರಾಹು ಹಾವಿನ ಸಂಕೇತ. ಪುರಾಣಗಳಲ್ಲಿ ಇವನು ಹಾವಿನ ತಲೆ. ಕೇತು ಈ ಹಾವಿನ ಕೋಳೆ. ಹಾವು ವಿಷಜಂತು. ಆಡುವಾಗ ಆಡಿಸುವಾಗ ಚೆನ್ನ ಆದರೆ ಕಡಿತದಲ್ಲಿ ಮಾತ್ರ ಸಾವು. ಹಾಗೆ ಸಂತಸವಿದ್ದಾಗ ಹೆಣ್ಣು ಸುಖದಾಯಿನಿ. ಮುನಿದರೆ ಆದಾಳು ಮಾರಿ. ಇದು ಛಾಯಾಗ್ರಹ. ನೆರಳಿನಂತೆ ಇದರ ಸ್ವರೂಪ. ಅಂದರೆ ಅಸಲು ಸ್ವರೂಪ ಕಾಣದು. ಇದರಿಂದ ಇವರ ನಿಜ ಸ್ವಭಾವ ಎನ್ನುವುದು ಯಾರಿಂದಲೂ ತಿಳಿಯಲು ಅಸಾಧ್ಯ. ಆದರೆ ಅವರ ಚಲನವಲನಗಳಿಂದ ಇವರ ಉದ್ದೇಶವನ್ನು ಕಾಣಬಹುದು. ಅಡ್ಡಗೋಡೆಯ ಮೇಲಿನ ಮಾತು. ಸಮಯ ಬಂದಾಗ ಸುಳ್ಳು ಹೇಳಿ ತಪ್ಪಿಸಿಕೊಳ್ಳುವ ಹವ್ಯಾಸ ಬೇರೆ. ನೆರಳು ಅಸಲು ವಸ್ತುವನ್ನು ಅನುಸರಿಸಿದಂತೆ ಇವರದೂ ಅನುಕರಣ ಸ್ವಭಾವ. ರಾಹು ವಿದೇಶದ ಗ್ರಹ. ಇವರು ಸ್ವದೇಶದಲ್ಲಿದ್ದರೂ ವಿದೇಶೀಯರಂತೆ ನಡವಳಿಕೆ. ಮಾತುಕತೆ ಹವ್ಯಾಸ ಉಡುಗೆ ತೊಡುಗೆ ಎಲ್ಲಾ ಅದೇ ನಮೂನೆ. ಅಪ್ಪ, ಅಮ್ಮ ಹೋಗಿ ಪಪ್ಪ ಮಮ್ಮಿ ಆದ ಹಾಗೆ. ಸಂಪ್ರದಾಯದ ಎಲ್ಲೆಕಟ್ಟುಗಳ ಬಂಧನ

ಇವರಿಗೆ ಹಿಡಿಸದು. ಎಲ್ಲದರಲ್ಲಿ ಇವರಿಗೆ ಸ್ವಾತಂತ್ರ್ಯ. ಆದರೆ ಒಂಟಿಗರಿದ್ದರೆ ಇವರಿಗೆ ಬಲ ಇರದು. ಹೆಡೆಮುಚ್ಚಿ ಹುತ್ತದೊಳಗೆ ಸೇರಿಯಾರು.

ರಾಹು ಯಾವ ತತ್ವದ ಜೊತೆ ಸೇರಲಿ. ಈ ತತ್ವದ ವಿಕಾಸ ಮಾಡುತ್ತಾನೆ. ಕಾರಣ ಇವನದು ತಂತ್ರ ಬುದ್ಧಿ. ಸಂಪ್ರದಾಯದ ಕಟ್ಟು ಇಲ್ಲದ್ದು. ಈ ಕಾರಣ ಈ ಮಂದಿ ವಿಜ್ಞಾನದತ್ತ ಸಾಗುವುದರಲ್ಲಿ ಮೊದಲಿಗರು. ರಾಹು ಎರಡು ಗಡಿಗಳು ಸೇರುವ ಸಂಧಿ. ಇದು ಮಿಶ್ರ ಮಾಡುವ ಗ್ರಹ ತತ್ವ. ಇವರು ಯಾರನ್ನು ಹೋಲುತ್ತಾರೆ ಎನ್ನುವುದು ಕಷ್ಟ. ಆದರೆ ಸಾಧಾರಣ ತಾತನೇ ಇವರು ಎನ್ನುವಂತೆ ಹೋಲಿಕೆ ಇದ್ದೀತು. ತಿಳುವಳಿಕೆಯಲ್ಲಿ ಇವನು ನೆರಳಿನಂತೆ ಅಡಗಿ ಕೂತಿರುವ ಅಂತರಾರ್ಥ ತತ್ವ. ಈ ಕಾರಣ ಈ ಮಂದಿ ಬಹು ಸೂಕ್ಷ್ಮ ಬುದ್ಧಿಯುಳ್ಳವರು. ಗ್ರಹಣಕ್ಕೆ ಪ್ರಧಾನವಾದ ಈ ರಾಹು ಗ್ರಹಣಶಕ್ತಿಯನ್ನು ಬೆಳೆಸುತ್ತಾನೆ. ಏನು ಹೇಳಲಿ ಅದನ್ನು ಹೇಳಿ ಪೂರೈಸುವ ಮುನ್ನವೇ ಅರ್ಥವನ್ನು ಗ್ರಹಿಸುತ್ತಾರೆ.

ರಾಹುವಿಗೆ ಹೊಂದಿಕೊಳ್ಳುವ ಗ್ರಹ ಸಂಖ್ಯೆಯ ತಿಂಗಳಿನಲ್ಲಿ ಹುಟ್ಟಿದ ಹೆಣ್ಣು ಗಳು ಇವರಿಗೆ ಶುಭ. ಆಗದ ಸಂಖ್ಯಾ ತಿಂಗಳಿನ ಹೆಣ್ಣುಗಳು ಬಾಳನ್ನು ವಿಷಮಯವನ್ನಾಗಿ ಮಾಡಬಲ್ಲದು. ಉದಾರಹರಣೆಗೆ ಕುಜ. ಇವನ ಸಂಖ್ಯೆ ಮೂರು. ಇದು ದೋಷ ಸಂಖ್ಯೆ. ಇದಕ್ಕೆ ಶನಿಯೋಗವಿದೆ. ಇದಕ್ಕೆ ರಾಹು ಸೇರಿದರೆ ಆಗ ಸರ್ಪದೋಷವಾಗುತ್ತದೆ. ಈ ಕಾರಣ ಜುಲೈ ತಿಂಗಳಿನಲ್ಲಿ ಹುಟ್ಟಿದ ಗಂಡುಗಳಿಗೆ ಮಾರ್ಚ್ ತಿಂಗಳಿನಲ್ಲಿ ಹುಟ್ಟಿದ ವಧು ಅಪಾಯಕಾರಿ. ಇದರಿಂದ ಸಂಸಾರದಲ್ಲಿ ಅಂತರ ಕಲಹಗಳು. ಗಂಡನನ್ನು ಬೇರೆ ಮಾಡಿ ತನ್ನ ಹಿಡಿತ ದಲ್ಲಿಟ್ಟುಕೊಳ್ಳುವ ಮಂದಿ. ಅನೇಕ ವೇಳೆ ಅವರಿಗೆ ಈ ಸಂಖ್ಯೆಯಿಂದ ಬರುವ ಕುಜನ ದೋಷದಿಂದ ವಿಧವತ್ವ ಬೇರೆ. ಗಂಡನಿಗೆ ವಾಹನ ಯಂತ್ರಾಲಯಗಳಲ್ಲಿ ಕೆಲಸ ಮಾಡುವಾಗ ಗಂಡಾಂತರ ಒದಗಿ ಮಧ್ಯ ಜೀವನದಲ್ಲಿ ಬಾಳು ಅಂತ್ಯವಾಗುವ ಸಂಭವ ಹೆಚ್ಚು. ಮನೆಗೆ ಬಂದರೆ ಹೆಂಡತಿಯದು ವಿರೋಧ ಪ್ರೀತಿ. ಬೆಕ್ಕು ಜಗಳವಾಡಿ ಪ್ರೇಮ ಮಾಡುವಂತೆ ಇವರ ದಾಂಪತ್ಯ.

ಆದರೆ ಅದೇ ಕುಜನ ಆರನೆಯ ತಿಂಗಳಿನ ಹೆಣ್ಣುಗಳು ಸ್ವಲ್ಪ ವಾಸಿ. ಕಾರಣ ಅವರು ಅನುರಾಗಿಗಳು. ಕೆಲವು ವೇಳೆ ಪತಿರಾಯನನ್ನು ಬೇರೆ ಮಾಡಿದರೂ ಸಹ ಅವರ ಯೋಗ ಕ್ಷೇಮವನ್ನು ಸರಿಯಾಗಿ ನೋಡಿಕೊಳ್ಳುವಷ್ಟು ಪ್ರೇಮ ಇರುತ್ತೆ. ವಾಹನಾದಿಗಳ ಸಂಪತ್ತು ಯಂತ್ರಾಲಯದ ಉದ್ಯೋಗ ಹಾಗಿಲ್ಲ. ಸೂಕ್ಷ್ಮ ಯಂತ್ರಗಳ ಪರಿಜ್ಞಾನ ವಿಜ್ಞಾನಗಳಿಂದ ಜೀವನ. ವಿದೇಶಯಾತ್ರೆ ಬೇರೆ. ಕೆಲವರಿಗಂತೂ ವಿದೇಶದಲ್ಲಿಯೇ ವಾಸವೂ ಆದೀತು.

ಎರಡನೆಯದಾದ ಫೆಬ್ರವರಿಯಲ್ಲಿ ಹುಟ್ಟಿದ ಹೆಣ್ಣು ಇವರಿಗೆ ಸಮಸ್ಯೆ. ಈ ಸಂಖ್ಯೆಗೆ ಬುಧ ಗುರು ಯೋಗವಿದ್ದು ಅವರಿಗೆ ರಾಹುಯೋಗವಾದಾಗ ಸೂಕ್ಷ್ಮಬುದ್ಧಿಯ ಹೆಣ್ಣು ಬಂದು ಸೇರುವ ಯೋಗ. ವಿದ್ಯೆಯಲ್ಲಿ ವಿಜ್ಞಾನ. ಭಾಷಾ ಚಾತುರ್ಯ. ಭಾಷಾಂತರ ಹವ್ಯಾಸ ಬುದ್ಧಿಗೆ ತೀವ್ರ ಕೆಲಸ ಕೊಡುವ ಚಕ್ರಬಂಧಗಳಲ್ಲಿ ಆಸಕ್ತಿ. ಪತ್ತೇದಾರಿ ಕಾದಂಬರಿಗಳು ಮತ್ತು ಈಗ ಬರೆಯುತ್ತಿರುವ ಸಂಖ್ಯೆಗಳ ಶಾಸ್ತ್ರದಲ್ಲಿ ಆಸಕ್ತಿ ಮತ್ತು ಅದನ್ನು ಉಪಯೋಗಿಸುವ ತಂತ್ರಗಳ ಜ್ಞಾನ. ಈ ಬೌದ್ಧಿಕ ವ್ಯವಹಾರಗಳಿಂದ ಧನಸಂಪಾದನೆಯೂ ಸಹ ಕೆಲವರಿಗೆ ಆದೀತು. ಸಾಂಕೇತಿಕ ಭಾಷಾವಿಜ್ಞಾನ. ಶೀಘ್ರಲಿಪಿ ಬರಹ. ಶಾಸನ ಲೇಖನಗಳ ಅರ್ಥ

ವಿಶ್ಲೇಷಣೆ ಇತ್ಯಾದಿಗಳಿಗೆ ಸಂಬಂಧಪಟ್ಟ ಉದ್ಯೋಗದಲ್ಲಿ ಹೆಂಡತಿಯ ಯೋಗದಿಂದ ಪ್ರಗತಿಯನ್ನು ಪಡೆಯುವರೆಂದು ಓರಿಯರ ಮತ. ಆದರೆ ಆ ವಧುವಿಗೆ ಎಲ್ಲಾ ವಿದ್ಯಾವಂತ ತೀವ್ರಗಾಮಿಗಳಿಗೆ ಇರುವಂತೆ ಕದಿಯುವ ಚಟ, ಮರೆಮಾಚುವ ಬುದ್ಧಿ. ಇದ್ದದ್ದನ್ನು ತಿರುವು ಮುರುವು ಮಾಡುವ ಚಾಕಚಕ್ಯತೆ ಬೇರೆ. ಕೇವಲ ಬುದ್ಧಿ ಪರೀಕ್ಷೆಗಾಗಿ ಕೈಕೊಳ್ಳುವ ಒಂದು ನಮೂನೆ ಆಟ ಎಂದು ಇವರ ನಂಬಿಕೆ. ಆದರೆ ಇದರಿಂದ ಮೇಲಿಂದ ಮೇಲೆ ಅನಾಹುತವಾದರೆ ಅವರಿಗೆ ಅದರಿಂದ ಇನ್ನೂ ಸಂತೋಷ.

ಏಳನೆಯ ತಿಂಗಳಿನ ಗಂಡುಗಳಿಗೆ ನಾಲ್ಕನೆಯ ತಿಂಗಳಿನ ಹೆಣ್ಣು ಮದುವೆಯಾದರೆ ಆಗ ಆ ಹೆಣ್ಣಿಗೆ ಬದಲು ಬದಲಾಗುವ ಮನಸ್ಸು. ನಾಲ್ಕನೆಯ ಸಂಖ್ಯೆಗೆ ಚಂದ್ರನು ಗ್ರಹ. ಏಳನೆಯ ತಿಂಗಳಿಗೆ ರಾಹು. ಈ ದಾಂಪತ್ಯ ರಾಹುಚಂದ್ರಗಳ ಸಂಯೋಗದ ಫಲಾನುಭವಕ್ಕೆ ದಾರಿ. ಚಂದ್ರ ಮನಸ್ಸು. ರಾಹು ಅದನ್ನು ತೀವ್ರಗೊಳಿಸುವ ತತ್ವ. ಇದರಿಂದ ಮದುವೆಯ ನಂತರ ಹೆಂಡತಿ ಸೂಕ್ಷ್ಮ ಸ್ವಭಾವದ ಕಾರಣ ದಾಂಪತ್ಯದಲ್ಲಿ ತೊಡಕು. ವಿಚಿತ್ರ ರೀತಿಯ ಕಲ್ಪನೆಗಳ ಲಹರಿ ಬೇರೆ. ಒಂದು ಹೇಳಿದರೆ ಹೆಚ್ಚು ಇನ್ನೊಂದು ಹೇಳಿದರೆ ಕಡಿಮೆ. ಅವರನ್ನು ಅನುಸರಿಸಿದಾಗ ಮಾತ್ರ ದಾಂಪತ್ಯ ಕ್ಷೇಮ. ಇನ್ನು ಕೆಲಮಂದಿಗೆ ಭೂತಾದಿಗಳ ಭ್ರಮೆ ಬೇರೆ. ಇದು ಒಂದು ನಮೂನೆ ಅಲೆಯುವ ಮನ. ಚಂದ್ರನು ತಾಯಿಯ ಗ್ರಹ. ಹೆಣ್ಣು ತಾಯಿಯಾದಾಗ ಸ್ವಲ್ಪ ಈ ರೀತಿ. ಆದರೆ ಮಕ್ಕಳು ಮುಂದೆ ಬಂದು ಅದರಿಂದ ಸಂತೋಷ ಆದೀತು.

ಎರಡು ಬುದ್ಧಿ ವಿಕಾಸ ಸಂಖ್ಯೆ. ನಾಲ್ಕು ಮಾನಸಿಕ ಭ್ರಮೆ. ಎಂಟನೆಯದು ನಿದ್ರೆಯ ಸಂಖ್ಯೆ. ನಿದ್ರೆ ಬುದ್ಧಿಯ ಜಡತ್ವ. ಬುದ್ಧಿಗೆ ಬುಧ, ಜಡತ್ವಕ್ಕೆ ಶನಿ. ಇದಕ್ಕೆ ಎಂಟನೇ ಸಂಖ್ಯೆಗೆ ಬುಧ ಶನಿಯೋಗ. ಇದಕ್ಕೆ ಏಳನೆಯ ತಿಂಗಳಿನ ರಾಹುವಿನ ಯೋಗವಾದರೆ ಆಗ ಅದು ಮೃತ್ಯು. ಬುಧಶನಿಯೋಗ ವಾಯುಸಂಖ್ಯೆ. ಇದಕ್ಕೆ ಗ್ರಹಣವಾದರೆ ಅದು ಶ್ವಾಸಬಂಧ ಮಾಡುವ ರೋಗಗಳು ಹಾಗಿಲ್ಲ ನೇಣು ಹಾಕಿ ಮನೆಯಲ್ಲಿ ಮೃತ್ಯು. ಅಲ್ಲದೆ ಬುಧ ಚರ್ಮಗ್ರಹ. ಇದರಿಂದ ಚರ್ಮವ್ಯಾಧಿ ಇರುವ ಕನ್ಯೆ ಎಂದೂ ಆದೀತು. ಕೆಲವು ಸಂದರ್ಭಗಳಲ್ಲಿ ಮೂಕಿಯೂ ಆದಾಳು. ಅಪಾಯಕರ ಅಪಸ್ಮಾರ ರೋಗವೂ ತಲೆಹಾಕುವುದುಂಟು. ಈ ಕಾರಣ ಯಾವ ನಮೂನೆ ಸುಖ ಇವರಿಗೆ ಸಿಕ್ಕೀತು? ಇದರಿಂದ ಏಳನೆಯ ತಿಂಗಳಿನ ಗಂಡಿಗೆ ಎಂಟನೆಯ ತಿಂಗಳ ಹೆಣ್ಣು ದುಃಖದಾಯಿನಿಯೇ ಸರಿ. ಇದನ್ನು ಬಿಡುವುದೇ ಲೇಸು.

ಗುರು ಐದನೆಯ ಸಂಖ್ಯೆಗೆ ಗ್ರಹ. ಐದನೆಯ ತಿಂಗಳು ಮೇ. ಈ ತಿಂಗಳಿನ ಹೆಣ್ಣು ಜುಲೈ ಗಂಡಿಗೆ ಗುರುರಾಹುಗಳ ಯೋಗದ ಫಲವನ್ನು ಕೊಡುತ್ತೆ. ಗುರು ರಾಹುಯೋಗ ಜಿಪುಣತನಕ್ಕೆ ತವರು. ಈ ಕಾರಣ ಹೆಂಡತಿ ಖರ್ಚು ಮಾಡುವಾಕೆ ಅಲ್ಲ. ಆಕೆಗೆ ಖರ್ಚಿಗೆ ಹಣ ಕೊಡದೇ ಇರುವ ಗಂಡು ಆಗಬಹುದು. ಆದರೆ ಈ ಯೋಗದಿಂದ ಹಣ ಕೂಡಿಟ್ಟು ಆಸ್ತಿ ಪಾಸ್ತಿ ಮಾಡುವ ಬಯಕೆ ಸಾಧಿಸೀತು. ಅದೇ ರೀತಿ ಇದು ಗರ್ಭಧಾರಣೆ ಯೋಗವೂ ಹೌದು. ಮುಟ್ಟಿದರೆ ಬಂತು ಎನ್ನುವಂತೆ. ಕೆಲವರಿಗೆ ಶನಿಯೋಗ ಬೆರೆತರೆ ಆಗ ಗರ್ಭವಾಗದು. ಆದರೆ ನಿಲ್ಲದು. ಹಾಗಿಲ್ಲ ಕಾಯಿಲೆ ಆದೀತು.

ಐದನೆಯ ತಿಂಗಳಿಗೆ ಗುರು ಗ್ರಹ. ಹತ್ತನೆಯ ತಿಂಗಳಿಗೂ ಗುರುವೇ ಗ್ರಹ. ಆದರೆ ಇಲ್ಲಿ ಗುರುವಿಗೆ ಶನಿಯೋಗ. ಇದರಿಂದ ಇದು ಕರ್ಮ ಶುದ್ಧಿ ಇರಬೇಕಾದ ತಿಂಗಳು. ಏಳನೆಯ

ತಿಂಗಳಿನ ಗಂಡಿಗೆ ಹತ್ತನೆಯದಾದ ಅಕ್ಟೋಬರ್ ತಿಂಗಳಿನಲ್ಲಿ ಜನಿಸಿದ ಹೆಣ್ಣು ಅಷ್ಟು ಉತ್ತಮ ಇರದು. ಐದನೆಯ ತಿಂಗಳಿನ ಜನನದ ಹೆಣ್ಣು ಹಣ ಕೂಡಿ ಹಾಕಿದರೆ ಹತ್ತನೆಯ ತಿಂಗಳಿನ ಹೆಣ್ಣು ಬೊಕ್ಕಸ ಖಾಲಿ ಮಾಡುತ್ತಾರೆ. ಗುರುಶನಿಗಳ ಯೋಗದ ದೆಸೆಯಿಂದ ಕೂಡಿಟ್ಟ ಹಣ ಖರ್ಚು, ಹೊರಗಡೆಯಿಂದ ಬಂದ ಹಣವೂ ಖರ್ಚು. ಅಲ್ಲದೆ ಗುರುವಿನ ಆರಿಷ್ಟದಿಂದ ಮಕ್ಕಳಿಗೂ ತೊಂದರೆ. ಕೆಲವರಿಗೆ ಮಕ್ಕಳೇ ಆಗದು. ಕಾರಣ ಏಳನೆಯ ಸಂಖ್ಯೆಯ ರಾಹುವಿಗೂ ಹತ್ತನೆಯ ಸಂಖ್ಯೆಯ ಗುರುಶನಿಗಳಿಗೂ ಯೋಗವಾಗುತ್ತದೆ. ಇದರಿಂದ ಗುರುವಿಗೆ ಮೃತ್ಯು ಯೋಗ ಬಂದು ಹುಟ್ಟಿದ ಮಕ್ಕಳಿಗೆ ಆಯುಷ್ಯ ಕಡಿಮೆ. ಅದರಲ್ಲಿಯೂ ಜ್ಯೇಷ್ಠ ಸಂತಾನಕ್ಕೆ ಹೆಚ್ಚು ಕೇಡು. ಕೆಲವರಿಗೆ ಹೆಣ್ಣು ಮಕ್ಕಳು ಹೆಚ್ಚು. ಆದರೆ ಈ ಸಂಯೋಗದಲ್ಲಿ ಒಂದು ಮಹಾ ಗುಣವಿದೆ. ಅದ ದೈವಭಕ್ತಿ, ಉದಾರ ಮನೋಭಾವ ಮತ್ತು ವೇದಾಂತ ವಿಚಾರಗಳಲ್ಲಿ ಅಚಲ ನಿಷ್ಠೆ. ಅಲ್ಲದೇ ದಾಂಪತ್ಯದಲ್ಲಿ ಶಾಂತಿಯ ಸಹಬಾಳ್ವೆ ಎಲ್ಲದಕ್ಕಿಂತ ಮಿಗಿಲು.

ಸಂಖ್ಯೆ ಹನ್ನೊಂದು. ಇದಕ್ಕೆ ಶುಕ್ರ ಶನಿ ಯೋಗ. ಈ ಸಂಖ್ಯೆಯ ತಿಂಗಳು ನವೆಂಬರ್. ಈ ತಿಂಗಳಿನಲ್ಲಿ ಹುಟ್ಟಿದ ಹೆಣ್ಣು ವಾಸ್ತವವಾಗಿ ಶುಕ್ರನ ಹಾನಿಫಲಕ್ಕೆ ತುತ್ತು. ಆ ಏಳನೆಯ ಅಧಿಪತಿ ರಾಹು. ಈ ಶುಕ್ರನ ಹಾನಿಯನ್ನು ಕಡಿಮೆ ಮಾಡಿ ಹೆಣ್ಣಿಗೆ ಜೀವನದಲ್ಲಿ ಸಂತಸ ವನ್ನು ತುಂಬಿಯಾನು. ಆದರೆ ಇಲ್ಲಿ ಮದುವೆಯ ಮುನ್ನ ಗಂಡಿಗೂ ಒಂದು ಹೆಣ್ಣಿಂದ ನಿರಾಸೆ, ಹೆಣ್ಣಿಗೂ ಒಂದು ಗಂಡಿನಿಂದ ನಿರಾಸೆಯಾಗಿರುತ್ತೆ. ಇಬ್ಬರಿಗೂ ನಿಧಾನದ ಮದುವೆ ಬೇರೆ. ವೈದ್ಯರಾದರೆ ಈ ಯೋಗ ಲೇಸನ್ನೇ ಮಾಡೀತು.

ಹನ್ನೆರಡನೆಯ ತಿಂಗಳು ಡಿಸೆಂಬರ್. ಈ ತಿಂಗಳಿನಲ್ಲಿ ಜನಿಸಿದ ಹೆಣ್ಣು ಶುಕ್ರ ಮಂಗಳರ ಯೋಗವಲ್ಲಿದ್ದು ಅನುರಾಗಮಯಿ. ಆದರೆ ಏಳನೆಯ ತಿಂಗಳಿನ ರಾಹುವಿಗೂ ಈ ಶುಕ್ರ ಯೋಗದ ಮಂಗಳನಿಗೂ ಸರಿಹೊಂದದೆ ತೀವ್ರ ಪ್ರೇಮದಿಂದ ಅಸೂಯೆ. ಅದರಿಂದ ದಾಂಪತ್ಯದಲ್ಲಿ ಇಲ್ಲದ ಸಲ್ಲದ ಆರೋಪ. ಅಪವಾದ. ಶಾಂತಿ ಇಲ್ಲದ ಕಲಹಮಯ [illegible] ಪರಸ್ಪರ ಆಕರ್ಷಣೆ ಇಲ್ಲ ಎಂದಲ್ಲ. ಆದು ತೀವ್ರವಾಗಿ ಕೇಡೇ ಹೆಚ್ಚು.

[illegible] ತಿಂಗಳ ಒಂದು ಸಂಖ್ಯೆ. ಇದರ ಅಧಿಪನು ಶನಿ. ಏಳನೆಯ ತಿಂಗಳಿನ ಗಂಡಿಗೆ [illegible] ದಾಂಪತ್ಯ ಹೊಂದಿಕೊಂಡದ. ಆಗ ಶನಿ ರಾಹು ಯೋಗ. ಇದರಿಂದ [illegible] ದಲ್ಲಿ ಮನೆಯಲ್ಲಿ ಮೃತ್ಯು. ಹಾಗಿಲ್ಲ ತೀವ್ರ ಕಾಯಿಲೆ. [illegible] ಯೋಗ ಬೇಕ. ಇದರಿಂದ ಗಂಡು ಊರೂರು ಸುತ್ತಿಕೊಂಡು [illegible] ನಲ್ಲಿ ಪತ್ರ ಓದಿಕೊಂಡು ಸುಖ ಬಾಳಬೇಕು. ಹಾಗೆ ಊರಿನಲ್ಲಿರುವಾಗ ಇಬ್ಬರಲ್ಲಿ ಒಬ್ಬರಿಗೆ ಆಲಸ್ಯ. ಇಲ್ಲ ಮೂರನೆಯ ಕಾಯಿಲೆಯವರಿಂದ ಅಡ್ಡಿ. ಆದರೆ ವೈದ್ಯ ವೃತ್ತಿಯ ದಂಪತಿಗಳಾದರೆ ಈ ಜನವರಿ ಜುಲೈ ತಿಂಗಳ ಜನನದ ಗಂಡು ಹೆಣ್ಣುಗಳ ದಾಂಪತ್ಯ ಸುಯೋಗದಾಯಕ. ಇವರಿಗೆ ವಿದೇಶದಲ್ಲಿ ಮನ್ನಣೆ, ಸ್ವದೇಶದಲ್ಲಿ ಇರದು. ಆದರೆ ಉತ್ತಮ ಸಮಾಜಸೇವೆ ಮಾಡುವ ಮಂದಿ. ಇದರಿಂದ ಇಬ್ಬರಿಗೂ ಅದೇ ಸಮಾಧಾನ.

ಜುಲೈ ತಿಂಗಳ ಗಂಡುಗಳು ವಿಚಿತ್ರ ಸ್ವಭಾವದವರು. ನಾಜೂಕಾದ ಸ್ವಭಾವ ಬೇರೆ. ವಿಕೃತ ಮನೋಲಹರಿಗಳಿಗೆ ತಮ್ಮ ದಾಂಪತ್ಯದಲ್ಲಿ ಎಡೆ ಹುಡುಕುವ ಮಂದಿ. ಆಧುನಿಕ ಪ್ರಪಂಚದ ಸೊಬಗಿನ ಸೊಗಸು ಇವರಿಗೆ ಬೇಕು. ಅದರ ಪೂರೈಕೆಗೆ ಮಡದಿ ಸನಿಹ ಇರಬೇಕು.

ಸರಿಹೊಂದಿಕೊಳ್ಳದ ಸ್ವಭಾವ ಹೆಣ್ಣಿಗೆ ಇದ್ದರೂ ಆಗಾಗ ಭಿನ್ನಾಭಿಪ್ರಾಯಗಳಿಂದ ಸಂಸಾರದಲ್ಲಿ ಹಗರಣ ತಪ್ಪದು. ಈ ಕಾರಣ ಇವರಿಗೆ ಸಂಸಾರದಲ್ಲಿ ಸುಖ ಶಾಂತಿಯ ಜೀವನ ದಕ್ಕಿದರೆ ಅದು ದೈವಪ್ರಸಾದವೇ ಸರಿ.

## ಎಂಟನೆಯ ತಿಂಗಳ ಜನನದ ಫಲ

ಗಂಡಿನ ಜನ್ಮ ತಿಂಗಳು ಎಂಟನೆಯದಾದ ಆಗಸ್ಟು. ಆಗ ಅವರ ಸಂಸಾರಿಕ ಸುಖ ಆ ಸಂಖ್ಯೆಯ ಅಧಿಪತಿ ಗ್ರಹವಾದ ಶನಿಯ ಪ್ರಭಾವದಿಂದ ರೂಪಿತವಾಗುತ್ತದೆ. ಆದರೆ ಶನಿಯ ಸಾಧಾರಣ ಸಂಖ್ಯೆ ಒಂದು (1). ಇಲ್ಲಿ ಎಂಟು ಸಂಖ್ಯೆಯ ಶನಿಗೆ ಬುಧ-ಶನಿಯೋಗ ಇರುತ್ತೆ. ಮೂರು ಸಂಖ್ಯೆಗೆ ಕುಜಶನಿಯೋಗ ಇದ್ದಂತೆ. ಈ ಕಾರಣ ಎಂಟನೆಯ ತಿಂಗಳಿನಲ್ಲಿ ಹುಟ್ಟಿದ ಮಂದಿಗೆ ಮದುವೆಯಾಗುವ ಮಡದಿಯಲ್ಲಿ ಈ ಬುಧಶನಿ ಯೋಗ ಫಲವನ್ನು ಕಂಡಾರು.

ಬುಧಶನಿ ಯೋಗ. ಅಂದರೆ ಬುಧನಿಗೆ ಶನಿಯ ಫಲ ಪೇರಿಕೊಂಡಿರುತ್ತೆ. ಬುದ್ಧಿಗೆ ಮಂಕು ಹಿಡಿಸುವ ಯೋಗ. ಇದನ್ನು ಮರೆವು ಎಂದರು. ಈ ಎಂಟನೆಯ ಆಗಸ್ಟು ತಿಂಗಳಿನಲ್ಲಿ ಹುಟ್ಟಿದ ಗಂಡಸರಿಗೆ ಸಂಸಾರ ಎಂದರೆ ಆಗಾಗ ಮರೆವು. ಅಂದರೆ ಅವರ ಜೀವನದಲ್ಲಿ ಸಂಸಾರ, ಹೆಂಡತಿ ಮಕ್ಕಳು ಎಲ್ಲಾ ಆದ್ಯ ಗಮನಕ್ಕೆ ಬಾರವು. ಅವರ ಕೆಲಸ ಅವರದು. ಮನೆಗೆ ಬಂದಾಗ, ಬಂದರೆ ಆಗ ಸಂಸಾರ. ಇವರಿಗೆ ಬಹುಶಃ ಹೊರಗಿನ ಕೆಲಸವೇ ಹೆಚ್ಚಾಗಿದ್ದೀತು. ಒಟ್ಟಿನಲ್ಲಿ ಸಂಸಾರ ಅವರಿಗೆ ಅಷ್ಟು ಮುಖ್ಯವಲ್ಲ. ಈ ಕಾರಣ ಸಂಸಾರದಲ್ಲಿ ಅವರಿಗೆ ಸುಖ ಕಾಣುವ ಬಯಕೆಯೂ ಇರದು.

ಬುಧಶನಿ ಯೋಗ ಒಂದು ನಮೂನೆ ಸೇವಾವೃತ್ತಿ. ಇದರಿಂದ ಇವರ ಮಡದಿ ಇವರ ಕಣ್ಣಿಗೆ ಒಂದು ನಮೂನೆ ಸೇವೆಗಾಗಿ ಇರುವ ವ್ಯಕ್ತಿ. ಹೆಚ್ಚು ಮಾತಿಲ್ಲದ ಅನುಸರಣೆ ಅವರಿಗೆ ಬಹಳ ಮೆಚ್ಚುಗೆ. ಇನ್ನು ಕೆಲವರಿಗೆ ಸೇವೆ ಮಾಡುವ ಹೆಣ್ಣುಗಳ ಮೇಲೆ ಬಯಕೆಯನ್ನು ತಡೆಯಲು ಕಷ್ಟ ಆದೀತು. ಹಾಗಿಲ್ಲ ಆ ನಮೂನೆ ಅಪವಾದಕ್ಕಾದರೂ ಅವರು ಬಲಿ. ಬುಧಶನಿ ಯೋಗ ಸಂಶಯ ಸಂದೇಹಗಳ ಬೀಡು. ಇದರಿಂದ ಸಂಸಾರದಲ್ಲಿ ಕಷ್ಟ. ಸನಿಹವೇ ಜಿಗುಪ್ಸೆಯನ್ನು ಹುಟ್ಟಿಸುವಂತಹ ಸಖ್ಯ ಬೇರೆ.

ದಿನ ಸಂಖ್ಯೆ ಶುಭ. ಗುರುವಿನ ಸಂಖ್ಯೆಗಳಲ್ಲಿ ಒಂದಾದರೆ ಆಗ ಮಡದಿ ಒಳ್ಳೆಯ ಕಲೆಯ ಅಭ್ಯಾಸವಿರುವವಳು. ಚಿತ್ರ ಲೇಖನ ಭರತನಾಟ್ಯ. ವಾಯುವಾದ್ಯಗಳಲ್ಲಿ ನೈಪುಣ್ಯ ಇತ್ಯಾದಿ ಕಲೆಗಳು ಆಕೆಗೆ ಕರಗತ. ಆದರೂ ಪರಸ್ಪರ ಅಗತ್ಯಗಳ ಪೂರೈಕೆಗಳಿಗೆ ಸಮಯ ಸನ್ನಿವೇಶಗಳ ಸಹಕಾರ ಸಿಗದೆ ಸುಖಭಾಗಗಳಲ್ಲಿ ಆಗಾಗ ನ್ಯೂನತೆಗಳು ತಲೆಹಾಕಿ ಅಸಮಾಧಾನ ಆದೀತು. ಅಲ್ಲದೇ ಬಂಧುಗ್ರಹವಾದ ಬುಧನ ಅರಿಷ್ಟದಿಂದ ಬಂಧುಗಳ ಬಳಕೆಯೂ ಕಡಿಮೆ ಎನ್ನಬಹುದು. ಸರಿಯಾದ ಸಹಕಾರ. ಆತ್ಮೀಯ ಭಾವನೆ ಇವುಗಳಿಗೆ ಹೆಸರಾದ ಬುಧನು ಕಟ್ಟಿರುವ ಸಂಖ್ಯೆ ಈ ಎಂಟು. ಈ ಕಾರಣ ಎಂಟನೆಯದಾದ ಆಗಸ್ಟು ತಿಂಗಳಿನಲ್ಲಿ ಹುಟ್ಟಿದ ಗಂಡುಗಳಿಗೆ ಅದೇ ತಿಂಗಳಲ್ಲಿ ಹುಟ್ಟಿದ ಹೆಣ್ಣುಗಳು ಸುಖವನ್ನು ಕೊಡಲು ಅಶಕ್ತರು. ಕಾರಣ ದೋಷ ಇಬ್ಬರಿಗೂ ಸಮಸಮ. ಈ ಬೇಸರದ ಯೋಗದ ಫಲವನ್ನು ತಡೆಯಲು ಈ ಮಂದಿಗೆ

ಸೂರ್ಯನ ಸಂಖ್ಯೆ ಒಂಭತ್ತನೆಯದಾದ ಸೆಪ್ಟೆಂಬರ್ ತಿಂಗಳಿನ ಹೆಣ್ಣು ಅನುಕೂಲಳು. ಇದರಿಂದ ಗಂಡಸರೂ ದಾರಿಗೆ ಬಂದು ಸಂಸಾರ ಸುಖಮಯ. ಅಲ್ಲದೆ ಗಂಡಸಿಗೆ ಸಂಸಾರ ಇದೆ ಎಂದು ಮನವರಿಕೆ ಮಾಡಿಕೊಡುವ ಹೆಣ್ಣುಗಳು ಇವರು.

ಈ ಎಂಟನೆಯ ಸಂಖ್ಯೆಯ ಅವಗುಣವನ್ನು ತೊಳೆಯುವ ಸಂಖ್ಯೆ ಅಂದರೆ ಅದರ ಅರ್ಧವನ್ನು ತೋರಿಸುವ ನಾಲ್ಕು. ಕಷ್ಟವನ್ನು ಕತ್ತರಿಸಿದರೆ ಸಿಕ್ಕುವ ಫಲ ಸುಖದಂತೆ. ಇದು ಪ್ರೇಮದ ಸಂಖ್ಯೆ. ಪ್ರೇಮ ವಿವಾಹದ ದೆಸೆಯಿಂದ ಈ ಎಂಟನೆಯ ಸಂಖ್ಯೆಯ ಊನಗುಣ ಇರದು. ಅಂದರೆ ಈ ತಿಂಗಳಿನಲ್ಲಿ ಜನಿಸಿದ ಗಂಡುಗಳು ಮಡದಿಯರು ಹೇಳಿದ ಮಾತನ್ನು ಕೇಳುವುದು ಶುಭದಾಯಕ ಮತ್ತು ಸುಖದಾಯಕ. ಗಂಡಸರದೇ ಮೇಲುಗೈಯಾದರೆ ಆಗ ಯಾವ ಹೆಣ್ಣು ಬಂದರೂ ಆ ಹೆಣ್ಣಿಗೆ ಈ ಬುಧನ ಅವಗುಣ ತಲೆ ಮೇಲೆ ಏರಿಕೂರುತ್ತದೆ. ಈ ಕಾರಣ ಆಗಸ್ಟು ತಿಂಗಳ ಗಂಡಿಗೆ ಏಪ್ರಿಲ್ ತಿಂಗಳಲ್ಲಿ ಜನಿಸಿದ ಹೆಣ್ಣು ಲೇಸು.

ಎರಡನೆಯದಾದ ಫೆಬ್ರುವರಿ ತಿಂಗಳಿಗೂ ಸಹ ಬುಧನೇ ಗ್ರಹ. ಆದರೆ ಇಲ್ಲಿ ಇವನಿಗೆ ಗುರು ಯೋಗ ಸೇರಿರುತ್ತೆ. ಇದರಿಂದ ಹೆಣ್ಣು ಬುದ್ಧಿವಂತಳು. ಮಾತಿನ ಮೋಡಿಗಾರಳು. ಬಂಧು ಬಳಗ ಆಗಾಗಿನ ಸ್ನೇಹಿತರು ಬೇರೆ. ನಾಲ್ಕಾರು ಜನಗಳಲ್ಲಿ ಆತ್ಮೀಯದ ಗೆಳೆತನದಿಂದ ಇವರ ಮನೆ ಒಂದು ಸಂತಸದ ಗುಡಿ. ಇದರ ಪ್ರಭಾವದಿಂದ ಗಂಡಿನ ಜನ್ಮ ತಿಂಗಳಿನ ಇಕ್ಕಟ್ಟಿನ ಫಲ ನಡೆಯದು. ಮರೆವೂ ಆಗದು. ಕಾರಣ ನಾಲ್ಕಾರು ಜನಗಳ ಯೋಗದಿಂದ ಈ ಬುಧ ಶನಿಯ ಅರಿಷ್ಟವೂ ಪರಿಹಾರ. ಮೊದಮೊದಲು ಗಂಡಸು ಇತರ ಜನಗಳನ್ನು ಮನೆಯಲ್ಲಿ ಸತ್ಕರಿಸುವುದು ಬೇಡ ಎಂದರೂ ಮಡದಿಯ ಕೈ ಬಲದಿಂದ ಅದು ಅಭ್ಯಾಸವಾಗಿ ಗಂಡಸೂ ಸಹಭಾಗಿಯಾಗಿ ತನ್ನ ಬೇಸರವನ್ನು ಬಿಟ್ಟು ಸಾಮಾಜಿಕ ಜೀವಿಯಾಗಿ ಬದುಕಲು ಇಷ್ಟ ಬೀಳಬಹುದು.

ಬುಧಶನಿ ಯೋಗ ಎಂಟನೆಯದಾದ ಆಗಸ್ಟು ತಿಂಗಳಿನ ಗಂಡುಗಳಿಗೆ ಇರುತ್ತೆ. ಆದರೆ ಇವರಿಗೆ ಕುಜ ಶನಿಯೋಗದ ಮೂರನೆಯ ಸಂಖ್ಯೆಯ ಮಾರ್ಚಿ ತಿಂಗಳಿನ ಹೆಣ್ಣು ಸೂಕ್ತ. ಕುಜ ಬುಧನಿಗೆ ಶತ್ರು. 'ರಾಮರಾವಣಯೋರ್ಯುದ್ಧಂ ಬುಧಾಂಗಾರ ಕಯೋರಿವ' ಎಂದಂತೆ ಇವರ ಶತ್ರುತ್ವ. ಈ ಕಾರಣ ಗಂಡಿನ ಬುಧನ ದೋಷವನ್ನು ಕುಜನ ದೋಷ ಹೊಡೆಯುತ್ತೆ. ಕುಜನು ಅಗತ್ಯವಾಗಿ ಜೀವನಕ್ಕೆ ಬೇಕಾದ್ದನ್ನು ತೋರಿಸುವ ಗ್ರಹ. ಇವುಗಳ ಬೇಡಿಕೆಗಳನ್ನು ಮೂರನೆಯ ಸಂಖ್ಯೆಯ ಮಾರ್ಚಿ ತಿಂಗಳಿನ ಹೆಣ್ಣು ಪೂರೈಸುತ್ತಾಳೆ. ಇಲ್ಲಿ ಹೆಣ್ಣಿನ ಅಗತ್ಯತೆ ಹೆಚ್ಚು. ಇದರಿಂದ ಎಂಟನೆಯ ತಿಂಗಳಿನ ಗಂಡು ಇವಳಿಗೆ ಬದ್ಧನು. ಅಲ್ಲದೆ ಬುಧನ ಅರಿಷ್ಟದಿಂದ ಯಾರೂ ಬೇಡವಾದ ಗಂಡಿಗೆ ಅಂಕುಶದ ಪ್ರಯೋಗ ಮಾಡುವಾಕೆ ಈಕೆ. ಚುಚ್ಚು ಮಾತಿನ ಜಾಲದಿಂದ ಗಂಡಸನ್ನು ದಾರಿಗೆ ತಂದು ಸಂಸಾರದಲ್ಲಿ ಸುಖವನ್ನು ಕೊಡುವಾಕೆ. ಸಂದೇಹದ ಮನಸ್ಸಿನ ಗಂಡು. ಆದರೆ ಕುಜ ದೋಷದ ಹೆಣ್ಣು ಪತಿವ್ರತೆ. ಆದರೆ ಪತಿಯನ್ನು ಪೂಜಿಸುವಾಕೆಯಂತೂ ಅಲ್ಲ. ಆದರೆ ಪರಸಂಬಂಧ ಕನಸಿನಲ್ಲಿಯೂ ಸಹ ಯೋಚಿಸಳು. 'ಮೂಕಂ ಕರೋತಿ ವಾಚಾಲಂ' ಎನ್ನುವುದರ ಬದಲು ಈಕೆ 'ವಾಚಾಲಂ ಕರೋತಿ ಮೂಕಂ' ಎಂಬಂತೆ ಗಂಡಸನ್ನು ಸದಾ ಮಾತಿನ ಜಗಳಕ್ಕೆ ಕರೆದು ಮೌನವನ್ನು ಮುರಿದು ಸುಖದ ಸವಿಯನ್ನು ತೋರಿಸಿಕೊಡುವಾಕೆ ಎಂದರೆ ತಪ್ಪಲ್ಲ.

ಆದರೆ ಆರನೆಯ ತಿಂಗಳಾದ ಜೂನ್ ತಿಂಗಳಿನಲ್ಲಿ ಹುಟ್ಟಿದ ಹೆಣ್ಣು ಅನುರಾಗಮಯಿ. ಸುಖಭೋಗಪ್ರಿಯಳು. ಇದಕ್ಕೆ ಎಂಟನೆಯ ತಿಂಗಳಿನ ಗಂಡು ಲೇಸವನ್ನು ಮಾಡೀತು. ಕಾರಣ- ಆರನೆಯ ತಿಂಗಳಿಗೆ ಕುಜ ಶುಕ್ರಯೋಗ. ಎಂಟನೆಯ ತಿಂಗಳಿಗೆ ಬುಧ ಶನಿಯೋಗ. ಬುಧಶನಿ ಯೋಗ ನರಗಳ ಮಂದತ್ವದಿಂದ ಭೋಗ ಲಾಲಸೆಗಳಲ್ಲಿ ಆಸಕ್ತಿ ಕಡಿಮೆ. ಕುಜ ಶುಕ್ರಯೋಗದಿಂದ ಹೆಣ್ಣು ಇದರಲ್ಲಿ ಹೆಚ್ಚು. ಹೆಣ್ಣಿನ ಮಾಯೆಗೆ ಬಲಿಯಾಗದ ಗಂಡು ಅಪರೂಪ. ಹೆಣ್ಣಿನ ಪ್ರಚೋದಕ ಶಕ್ತಿಯಿಂದ ಗಂಡಿಗೆ ಆಸೆ ಬಯಕೆಗಳು ಉತ್ಪತ್ತಿಯಾಗುವ ಯೋಗ. ಗಂಡಿನ ಅನಾದರಣೆಯೂ ದೂರ. ಇದರಿಂದ ಸಂಸಾರ ಸುಖಮಯ ಎಂದು ಕೆಲವರ ಮತ. ಆದರೆ ಕೆಲ ಹಿರಿಯರು ನಪುಂಸಕ ಯೋಗದ ಪ್ರಭಾವದಿಂದ ಇಂದ್ರಿಯ ಸುಖ ಲಾಲನೆ ತಳಮಟ್ಟದ ಗಂಡಾಗಿ ಅತಿರೇಕದ ಸುಖಬಯಕೆಯ ಹೆಣ್ಣಿಗೆ ನಿರಾಸೆಯಾದೀತು ಅಂದರು. ಇದರಿಂದ ಹೆಣ್ಣಾಗಲೀ ಗಂಡಿಗಾಗಲೀ ಸಂದೇಹ ನಿರಾಸೆಗಳಿಂದ ಬುದ್ಧಿ ಭ್ರಮೆ ಆದೀತು ಅಂದರು. ಅನುಭವದಲ್ಲಿ ಈ ತಿಂಗಳ ಹೆಣ್ಣು ಗಂಡಿನ ಸುಪ್ತ ಶಕ್ತಿಗಳನ್ನು ಹೊಡೆದೆಬ್ಬಿಸಿ ಜೀವನ ಸುಖಮಯ ಮಾಡುವಾಕೆ ಎನ್ನುವುದೇ ಸರಿ ಎಂದು ಅನ್ನಿಸದೇ ಬಿಡದು.

ಏಳನೆಯದಾದ ಜುಲೈ ತಿಂಗಳಿಗೆ ರಾಹು ನಾಯಕ ಗ್ರಹ. ಈ ತಿಂಗಳಿನ ಹೆಣ್ಣು ಎಂಟನೆಯ ತಿಂಗಳಿನ ಗಂಡಿಗೆ ಸರ್ವಥಾ ಅನಾನುಕೂಲಳು. ಎಂಟನೆಯ ಸಂಖ್ಯೆಗೆ ಬುಧಶನಿ ಯೋಗ. ಇದಕ್ಕೆ ರಾಹು ಬೆರೆತರೆ ಅದು ಉಸಿರುಕಟ್ಟಿ ಸಾಯುವ ಯೋಗ. ಬುಧಶನಿ ಪ್ರಾಣವಾಯು, ರಾಹು ಹಗ್ಗದ ಯೋಗ. ಇದರಿಂದ ವಾಯುಬಂಧವೇ ಫಲ. ಹಾಗಿಲ್ಲ ವಾಸಿಯಾಗದ ಮಹಾ ವ್ಯಾಧಿ ದೇಹದಲ್ಲಿ ಕಾಣಿಸಿಕೊಂಡು ಜೀವನವನ್ನು ಹಣ್ಣು ಹಣ್ಣು ಮಾಡಿ ಹೆಣ್ಣೇ ಬೇಡ ಎನ್ನುವಂತೆ ಆದೀತು.

ಬುಧಶನಿ ಯೋಗಕ್ಕೆ ಎಂಟು ಸಂಖ್ಯೆ. ಇದು ಬುದ್ಧಿಯ ಆಲಸ್ಯದ ಸಂಖ್ಯೆ. ಈ ಕಾರಣ ಮನೆಯಲ್ಲಿ ಒಂದು ನಮೂನೆ ಸೋಮಾರಿಯಂತೆ ಯಾವ ಸಹಕಾರವನ್ನೂ ಕೊಡದೆ ಇರುವುದು. ಆಸಕ್ತಿ ಇಲ್ಲದ ಸಂಸಾರ. ಇದಕ್ಕೆ ಗುರುವಿನ ತಿಂಗಳಾದ ಐದು ಮತ್ತು ಹತ್ತನೆಯದಾದ ಅಂದರೆ ಮೇ ಮತ್ತು ಅಕ್ಟೋಬರ್ ತಿಂಗಳುಗಳಲ್ಲಿ ಹುಟ್ಟಿದ ಹೆಣ್ಣು ಇದಕ್ಕೆ ಪರಿಹಾರವನ್ನು ಕೊಟ್ಟೀತು.

ಮನುಷ್ಯನಿಗೆ ನಾನಾ ರೀತಿಯ ವಿಕಾರಗಳು. ಇವು ಅನೇಕ ಸಲ ಪರಸ್ಪರ ಪರಿಹಾರಾತ್ಮಕವಾಗಿ ಇರಲು ಶಕ್ಯ. ಉದಾಹರಣೆಗೆ ಹೆಂಡತಿ ಎಂದರೆ ಗಂಡನಿಗೆ ಮೋಹ. ಹೆಂಡತಿ ಹಠಾತ್ತನೆ ಸತ್ತರೆ ಅವನಿಗೆ ಅತೀವ ದುಃಖವಾಗುತ್ತೆ. ಪ್ರಪಂಚವೇ ಬೇಸರವಾಗುತ್ತೆ. ಆಗ ಉಳಿದುಕೊಂಡ ಮಗುವನ್ನು ನೋಡಿಕೊಂಡು ಆ ವಿಯೋಗದ ದುಃಖವನ್ನು ಮರೆಯುತ್ತಾರೆ. ಇಲ್ಲ ಹೆಂಡತಿಯ ಮೇಲಿನ ಮೋಹ ಮಗುವಿನ ಮೋಹದಿಂದ ಪರಿಹಾರವಾಗಿ ಸಮಾಧಾನವಾಗುತ್ತದೆ. ಈ ರೀತಿ ಬುಧನ ಕೇಡಿನ ಫಲ ಎಂಟನೆಯ ಸಂಖ್ಯೆಯಲ್ಲಿ ಇದೆ. ಈ ಫಲ ಗುರುವಿನ ಸಂಖ್ಯೆಯ ಐದರ ಫಲದಿಂದ ಪರಿಹಾರ. ಐದನೆಯದಾದ ಮೇ ತಿಂಗಳಿನಲ್ಲಿ ಹೆಣ್ಣು ಹುಟ್ಟಿ ಆಕೆ ಈ ಎಂಟು ಸಂಖ್ಯೆಯ ಗಂಡನ್ನು ಮದುವೆಯಾದರೆ ಗಂಡಿನ ಸಂಸಾರಕ್ಕೆ ಶುಭವನ್ನು ಕೊಟ್ಟಾಳು. ಹೆಣ್ಣು ವಿದ್ಯಾವಂತೆ. ಗುಣಶೀಲಳು ಮತ್ತು ಧನಿಕಳು. ಗಂಡು ಮನೆಗೆ ಬಂದರೆ ಸುಸ್ತು. ಸುಮ್ಮನೆ ಮಲಗಿರಬೇಕು ಎನ್ನುವ ಜಡತ್ವ. ಹಾಗಿಲ್ಲ

ಸಂಸಾರದಲ್ಲಿ ಅನಾಸಕ್ತಿ. ಈ ದೋಷವನ್ನು ಹೆಣ್ಣು ತನ್ನ ವಿದ್ಯಾಬಲ ಮತ್ತು ಧನಬಲ ಹಾಗಿಲ್ಲ ವಿವೇಕದಿಂದ ಪರಿಹರಿಸಿ ಗಂಡನಿಗೆ ಸುಖ ಸಂತಸಗಳನ್ನು ಕೊಡುವಾಕೆ ಎಂದರ್ಥ.

ಆದರೆ ಹತ್ತನೆಯ ಸಂಖ್ಯೆಯ ಅಕ್ಟೋಬರ್ ತಿಂಗಳಿನಲ್ಲಿ ಹುಟ್ಟಿದ ಹೆಣ್ಣು ಧನಿಕಳಲ್ಲ. ಕಾರಣ ಆಕೆ ಉದಾರಿ. ಕರುಣಾಳು. ಕೇಳಿದವರಿಗೆ ಸಹಾಯ ಮಾಡುತ್ತಾ ತನ್ನ ಕೈ ಬರಿದು. ಆದರೆ ಆಚಾರಶೀಲಳು. ದೈವಭಕ್ತಳು ಎಲ್ಲರಿಂದಲೂ ಗೌರವವನ್ನು ಪಡೆಯುವ ಸ್ವಭಾವ ಇವರಿಗೆ ಸಹಜ. ದೈವಿಕ ಬಲದಿಂದ ಇವರ ಗಂಡನ ಮನೆಯ ಬುಧಾರಿಷ್ಟ ಯೋಗವನ್ನು ಪರಿಹರಿಸಿಕೊಂಡು ಸುಖಜೀವನವನ್ನು ನಡೆಸಿಕೊಳ್ಳುವ ಯೋಗ ಅಂದರು. ಗುರು ಸೇವೆ ಹರಿ ಭಕ್ತಿ ಇದಿರು ಬುಧನ ಹಾನಿಯ ಫಲ ನಡೆಯದು. ಕೆಲವರು ವಿದ್ಯಾ ಮೂಲಕ ಜೀವನ ಮಾಡುವ ಮಂದಿ ಕೂಡ ಆದಾರು.

ಎಂಟು ಸಂಖ್ಯೆಯ ಗಂಡಿಗೆ ಸಂಸಾರದಲ್ಲಿ ಹೆಣ್ಣು ಬುಧ ಶನಿ ಯೋಗದಲ್ಲಿದ್ದು ನಿರಾಡಂಬರಿ. ದುಡಿಮೆ ಮಾಡಿಕೊಂಡು ಹೊರ ಪ್ರಪಂಚದಿಂದ ಹೊರಗಿರಬೇಕು ಎನ್ನುವ ಮನೋಭಾವ. ಹೆಣ್ಣು ಬುದ್ಧಿವಂತಳಾದರೂ ಮಂಕುಮಂಕಾಗಿ ನಡೆದುಕೊಳ್ಳಬೇಕು. ಹೆಚ್ಚಿನ ಬುದ್ಧಿವಂತಿಕೆ ತೋರಿಸುವುದು ಇವರಿಗೆ ಇಷ್ಟವಿಲ್ಲ. ಬಂಧುಗಳ ಮನೆಗೆ ಬಳಕೆಯಾಗಿರುವುದೂ ಸಹ ಕೆಲವರಿಗೆ ಆಗದು. ಇನ್ನು ಅವರಲ್ಲಿ ಬಾಲ್ಯದಿಂದ ಸಲಿಗೆಯುಳ್ಳವರು ಬಂದರಂತೂ ಕತೆ ಮುಗಿದಂತೇ ಸರಿ. ಕಾರಣ ಇವರಿಗೆ ಸಂದೇಹದ ಪ್ರಕೃತಿ. ಆದರೆ ಅದನ್ನು ತೋರಗೊಡದೆ ನಾಲ್ಕು ಮಂದಿ ಮನೆಗೆ ಬಂದಾಗ ಹೆಂಡತಿ ಅಲಂಕಾರವಾಗಿ ಓಡಾಡುವುದನ್ನು ಬಹು ಕಷ್ಟದಿಂದ ಸಹಿಸುವ ಮಂದಿ ಅಂದರೆ ಹಾಸ್ಯವಲ್ಲ. ಈ ಮನೋಭಾವಕ್ಕೆ ಸರಿಹೊಂದುವ ಸಂಖ್ಯೆ ಶನಿಯದು. ಒಂದನೆಯ ತಿಂಗಳಾದ ಜನವರಿಯಲ್ಲಿ ಹುಟ್ಟಿದ ಹೆಣ್ಣು ಇವರಿಗೆ ಸರ್ವ ವಿಧದಲ್ಲಿಯೂ ಸೂಕ್ತ ಎಂದರೆ ತಪ್ಪಾಗದು. ಕಾರಣ ಜನವರಿಯಲ್ಲಿ ಹುಟ್ಟಿದ ಹೆಣ್ಣು ಹಿಂದಿನ ಜನ್ಮದಲ್ಲಿ ಬಹುಶಃ ಸೇವಕಿಯೇ ಆಗಿ ಇವರು ಅಲಂಕಾರ ಮಾಡಿಕೊಂಡು ಮೆರೆದಾಡು ಎಂದರೂ ಮಾಡುವಾಕೆಯಲ್ಲ. ತನ್ನ ಕೆಲಸ ಎಷ್ಟು ಅಷ್ಟೇ ಅವರ ಗಮನ. ಬೇರೆ ಏನೂ ಅವರಿಗೆ ಕಾಣದು. ಈ ಕಾರಣ ಇವರು ಎಂಟನೆಯ ತಿಂಗಳ ಮಂದಿಗೆ ಅನುಕೂಲರು.

ಎಂಟನೆಯ ತಿಂಗಳಿನ ಗಂಡು ಮದುವೆಯಾದರೆ ಮನೆ ಕಟ್ಟುವ ಚಿಂತೆ ಶುರು. ಮನೆ ಕಟ್ಟಿದ ಮೇಲೆ ಸಂಯೋಗ ಲಾಭ. ಬಂಧುಬಳಗದವರನ್ನು ಕಂಡರೆ ಇವರಿಗೆ ಆಗದು. ಕಾರಣ ಖರ್ಚು. ಆದರೆ ಹೆಂಡತಿಯು ಭಕ್ತಾದಿಗಳನ್ನು ಕರೆಸಿ ಹರಿಪೂಜೆ ಮಾಡಿಸುವುದರಿಂದ ಇದು ಪರಿಹಾರವಾಗುತ್ತೆ. ಮದುವೆಯಾದ ಎಂಟನೆಯ ತಿಂಗಳು ಮತ್ತು ಎಂಟನೆಯ ವರ್ಷ ಹೆಂಡತಿಗೆ ಪ್ರಾಣಗಂಡ. ಆಗ ಅವರಿಗೆ ನೈಜವಾದ ಭಕ್ತಿ ಉಂಟಾಗಿ ಹೆಂಡತಿ ಉಳಿದುಕೊಂಡು ಹೊಸಮಂದಿಯಾಗುತ್ತಾರೆ. ಲೇಖನ. ಚಿತ್ರಕಲೆ. ಭರತನಾಟ್ಯ. ಪುರಾಣ ಪುಣ್ಯಕತೆಗಳಲ್ಲಿ ಆಸಕ್ತಿಯೂ ಹೆಚ್ಚು. ಇದರಿಂದ ಬಹು ಕಾಲ ಇವರಿಗೆ ಸುಖ ಜೀವನ ಏರ್ಪಡುವುದು.

# ಒಂಭತ್ತನೆಯ ತಿಂಗಳ ಜನನ ಫಲ

ಗಂಡಸಿನ ಜನನ ತಾರೀಖಿನ ತಿಂಗಳನ್ನು ತೋರಿಸುವ ಸಂಖ್ಯೆ ಅವರ ಸಂಸಾರದ ಧೋರಣೆ ನೀತಿ ನಿಯಮಗಳನ್ನು ರೂಪಿಸುತ್ತದೆ. ಆ ಸಂಖ್ಯೆ ಒಂಭತ್ತು(೯). ಆಗ ಆ ಒಂಭತ್ತು ಸಂಖ್ಯೆಗೆ ಫಲ ಕೊಡುವ ಸೂರ್ಯನ ಕಾರಕ ಗುಣಶೀಲಗಳು ಮನೆಯಾಕೆಯ ಸ್ವಭಾವದಲ್ಲಿ ಸೇರಿ ರೂಢಿಯ ಗುಣ ಆಗುತ್ತದೆ. ದಿನ ಸಂಖ್ಯೆ ಸಾಧಾರಣ ಮಂದಿಯ ತನ್ನತನ ಮತ್ತು ತನ್ನದಾದ ವಿಶೇಷ ಏನು? ಈ ವಿಷಯಗಳನ್ನು ರೂಪಿಸುತ್ತದೆ. ಆದರೆ. ಮದುವೆಯ ನಂತರ ಯಜಮಾನರ ಇಷ್ಟಾನಿಷ್ಟಗಳಿಗೆ ಬದ್ಧರಾದ ಕಾರಣ ಅವರ ಗುಣಶೀಲಗಳಿಗೆ ಹೊಂದಿಕೊಳ್ಳಬೇಕಾದ್ದು ಅಗತ್ಯ. ಈ ಕಾರಣ ತನ್ನ ದಿನಾಂಕ ಗ್ರಹದ ಸ್ವಭಾವ ತನ್ನಲ್ಲಿದ್ದರೂ ಕೆಲವು ತನ್ನಲ್ಲಿಲ್ಲದ ಗುಣಗಳು ರೂಢಿಯಾಗುತ್ತವೆ. ಹೊಸ ಸನ್ನಿವೇಶ. ಆವರಣಗಳಿಗೆ ಅಗತ್ಯದ ಗುಣಗಳು ಕೆಲವು ಸಲ ಹೆಂಗಳಿಗೆ ಅನುಕೂಲಕರ. ಆ ರೀತಿಯ ಅನುಕೂಲಕರ ಫಲ ಕೊಡುವ ಸಂಖ್ಯೆ. ಅಂದರೆ ಈ ಒಂಭತ್ತು.

ಒಂಭತ್ತು ಸಂಖ್ಯೆಗೆ ಅಧಿಪತಿ ಸೂರ್ಯ. ಇವನು ಕಷ್ಟ ಮತ್ತು ಕತ್ತಲುಗಳನ್ನು ಪರಿಹಾರ ಮಾಡುವ ತತ್ವ. ಇದಕ್ಕೆ ಬೇಕಾದ ಶಕ್ತಿ ತೇಜಸ್ಸು ಅವನಿಗೆ ಸ್ವಭಾವದ ಗುಣ. ಈ ಕಾರಣ ಇದನ್ನು ಪ್ರಕಾಶಕ ಗ್ರಹ ಎಂದರು. ಪ್ರಕಾಶ ಎಂದರೆ ಎಲ್ಲರಿಗೂ ಕಾಣುವಂತೆ ಮಾಡುವುದು. ಈ ತತ್ವ ಯಾರಲ್ಲಿ ಅಡಗಿದೆ. ಅವರು ಏನು ಮಾಡಲಿ ಅದು ಎಲ್ಲರಿಗೂ ಗೊತ್ತಾಗುವಂತೆ ಮಾಡುತ್ತಾರೆ. ಈ ಕಾರಣ ತಮ್ಮ ಊರು ಕೇರಿಗಳಲ್ಲಿ ಇವರು ಯಾರು ಎನ್ನುವುದು ಎಲ್ಲರಿಗೂ ಗೊತ್ತಾದ ವಿಷಯ. ಕಳಕಳ ಕಹಳೆ ಶಬ್ದದೊಡನೆ ಇವರ ಸಂಚಾರ. ಇನ್ನು ತಿಂಗಳ ಸಂಖ್ಯೆ ಸೂರ್ಯನ ಒಂಭತ್ತು ಆದರೆ ಆಗ ಇವರ ಮದುವೆ. ಮದುವೆಯ ಸಡಗರ. ಸಂಭ್ರಮ ಎಲ್ಲ ವೈಭವಗಳಿಂದ ಕೂಡಿರುತ್ತೆ. ಅಲ್ಲದೆ ಊರಿನವರಿಗೆಲ್ಲಾ ತಿಳಿಯತೋಸುಗ ಎಲ್ಲಿ ನೋಡಿದರೂ ಈ ಜೊತೆ ಜೊತೆ ಕಾಣದೇ ಯಾವ ಕೆಲಸವೂ ನಡೆಯದು.

ಸೂರ್ಯ ತನ್ನ ಪ್ರಕಾಶಕ ತತ್ವದಿಂದ ಕೀರ್ತಿಯನ್ನು ಕೊಡುತ್ತಾನೆ. ಇದು ತಿಂಗಳ ಸಂಖ್ಯೆ ಯಾಗಿದೆ. ಆಗ ಮದುವೆಯಿಂದ ಇವರಿಗೆ ಕೀರ್ತಿ. ಆ ನಮೂನೆ ಬಂಧುತ್ವವೆ ಇವರಿಗೆ ಪ್ರಿಯ. ಹಣಕಾಸಿಗಿಂತ ಮಿಗಿಲು ಇವರಿಗೆ ಈ ಕೀರ್ತಿ. ಹೊಗಳಿಕೆಗೆ ಉಬ್ಬುವ ಮಂದಿ. ಅಧಿಕಾರ ಎಂದರೆ ಇವರಿಗೆ ಗೌರವ. ಕೆಲವರಿಗೆ ಅದೇ ಸರ್ವಸ್ವ. ಅದಕ್ಕೆ ಏನು ಬೇಕಾದರೂ ಮಾಡಿಯಾರು. ಇವನು ಅಧಿಕಾರಿಯ ಮನೆ ಸಂಬಂಧ ಎಂದರೆ ಕತೆ ಮುಗಿದಂತೆಯೇ ಸರಿ. ಎರಡನೆಯದು ಇವರ ಮಡದಿಯಲ್ಲಿ ಸೂರ್ಯನ ತತ್ವ ರೂಢಿಯ ಗುಣ ಆಗುತ್ತೆ. ಅಂದರೆ ಮನೆಯಲ್ಲಿ ಆಕೆಯದೇ ಅಧಿಕಾರ. ಆಕೆಯ ಮಾತು ಅಣತಿ. ಹಾಗೆ ಅವರು ಮಾಡುವುದು ಇವರಿಗೂ ಹಿತ. ಸಾಲದ್ದಕ್ಕೆ ಪ್ರಿಯ ಬೇರೆ. ಯಾವ ರೀತಿಯ ಒತ್ತಾಯವೂ ಇಲ್ಲದೆ ಎಲ್ಲರೂ ಅವರು ಹೇಳಿದಂತೆ ನಡೆಸಿಕೊಳ್ಳುವ ತತ್ವ ಈ ಸೂರ್ಯನ ಸಹಜದ ಯೋಗ. ಈ ಮಂದಿ ಬಂದರೆ ಸಂಸಾರದ ಜನ ತಾವಾಗಿಯೇ ಇವರು ಹೇಳಿದಂತೆ ನಡೆಯುವ ಸ್ವೇಚ್ಛೆ ಇರುತ್ತೆ. ಇದು ಒಂದು ದೈವದತ್ತ ವಿಶೇಷ ಎನ್ನಬಹುದು.

ಸೂರ್ಯನು ಹೊರಗಿನ ಜೀವನದಲ್ಲಿ ಅಸಾಧಾರಣ ಪ್ರಗತಿಯನ್ನು ಕೊಡುವ ತತ್ವ. ಒಂಭತ್ತು ತಿಂಗಳ ಸಂಖ್ಯೆ. ಆಗ ಮದುವೆ ಆಗದೆ ಇವರಿಗೆ ಉದ್ಯಮ. ಉದ್ಯೋಗಗಳಲ್ಲಿ ಪ್ರಗತಿ ಕಾಣದು.

ಅವಕಾಶ ಇದ್ದರೆ ಈ ಗುರಿಯಿಂದ ಮದುವೆಯಾಗುವ ಮಂದಿ ಬಹಳ. ಒಂದು ವೇಳೆ ಹಾಗಿಲ್ಲ ಮದುವೆ ಆದರು. ಆದ ಮಡದಿಯ ಕಾಲ್ಗುಣದಿಂದ ಇವರಿಗೆ ನೌಕರಿ ಬಡ್ತಿ. ಅಧಿಕಾರ ಲಾಭ ಇತ್ಯಾದಿಗಳು ಸುಗಮ. ಕೇವಲ ನೌಕರಿ ಇಲ್ಲದವರಿಗೂ ನೌಕರಿಯಾದರೂ ಸಿಕ್ಕಿ ಸುಖಕ್ಕೆ ದಾರಿ ಆದೀತು. ಒಟ್ಟಿನಲ್ಲಿ ಒಂಭತ್ತು ತಿಂಗಳ ಸಂಖ್ಯೆಯ ಜನನಗಳಲ್ಲಿ ಮದುವೆ ಜೇನುತುಂಬಿದ ಜೀವನದ ಪ್ರಮುಖ ಘಟ್ಟ ಮದುವೆ ಕಷ್ಟ ಪರಿಹಾರದ ಉಪಾಯ. ಮದುವೆಯ ಕಾಲ ಸುಯೋಗದ ಶುರು ಅನ್ನಬಹುದು. ಇವರ ಮನೆಯಾಕೆ ಇವರನ್ನು ಜೋಪಾನ ಮಾಡುವುದರಲ್ಲಿ ಪ್ರಶಸ್ತಿ ವಿಜೇತೆ. ಅನೇಕರು ಹಾದಿ ತಪ್ಪಿದ ಬಾಳುವೆಯಲ್ಲಿದ್ದರೂ ಈ ಮದುವೆಯಿಂದ ಅವರ ಜೀವನ ಸುಖಮಯ. ಕೆಲವು ಸನ್ನಿವೇಶಗಳಲ್ಲಿ ನೌಕರಿ ಮಾಡುವ ಕಾರಣ ವಿವಾಹ ನಿರ್ಣಯ ಆದೀತು. ಹಾಗಿಲ್ಲ ನೌಕರಿ ಮಾಡುವ ಜಾಗದ ದೆಸೆಯಿಂದ ಮದುವೆಯ ಹೆಣ್ಣು ದೊರಕೀತು. ಹಾಗಿಲ್ಲ ನೌಕರಿ ಮಾಡುವ ಹೆಣ್ಣು ವಧು ಆದಾಳು. ಅಂತೂ ಒಂದಲ್ಲ ಒಂದು ರೀತಿ ನೌಕರಿಯ ಪ್ರಭಾವ ಇವರ ಮದುವೆಯಲ್ಲಿ ಕಾಣದೇ ಇರದು.

ಒಂದು ಸಮಯ ಸೂರ್ಯ ಜನ್ಮ ಕಾಲದಲ್ಲಿ ಬಲವಿಲ್ಲ. ಆಗ ಸೆಪ್ಟೆಂಬರ್ ತಿಂಗಳ ಜನನದಲ್ಲಿ ಮದುವೆಯಿಂದ ಕೀರ್ತಿಗೆ ಬದಲಾಗಿ ಅಪಕೀರ್ತಿ ಅಧಿಕಾರಕ್ಕೆ ಬದಲಾಗಿ ನೌಕರಿ ಕಿರಿಕಿರಿ. ಜಾಗ ಬದಲು ಇತ್ಯಾದಿ ಅಪಯೋಗಗಳು ನಡೆಯುವುವು. ಅಲ್ಲದೆ ತಂದೆಯಿಂದ ದೂರ ಬೇರೆ. ಇಲ್ಲಿ ಮದುವೆ ಸುಗಮ ಜೀವನಕ್ಕೆ ಒಂದು ನಮೂನೆ ಕಲ್ಲು. ಅಪವಾದ ಬರುವ ಬಂಧುತ್ವ ಆದೀತು. ಆಗ ಸೂರ್ಯ ನಮಸ್ಕಾರ ಶಾಂತಿಯನ್ನು ಆಚರಿಸಿದಲ್ಲಿ ಸುಯೋಗ ಮೂಡುವುದು. ಈ ಸನ್ನಿವೇಶಗಳಲ್ಲಿ ಜನ್ಮಾದಿ ನಲವತ್ತು ವರುಷ ತುಂಬಿದ ಮೇಲೆ ಇದರ ಶುಭ ಅಥವಾ ಅಶುಭ ಯೋಗದ ಕಾಲ ಅಂದರು.

ಸೆಪ್ಟಂಬರ್ ಒಂಭತ್ತನೆಯ ತಿಂಗಳು. ಒಂಭತ್ತು ಸೂರ್ಯನ ಸಂಖ್ಯೆ. ಈ ಮಂದಿಗೆ ಸೂರ್ಯ ಬಲ ಇರುವ ಕಾಲದ ಹೆಣ್ಣು ಶುಭ. ಸೂರ್ಯನಿಗೆ ಬಲ ಅವನ ಬೆಳಕು, ಬಿಸಿಲು ಹೆಚ್ಚಿರುವಾಗ. ಬಿಸಿಲು ಹೆಚ್ಚಿರುವ ತಿಂಗಳು, ಹೆಚ್ಚು ಬಿಸಿಲು ಕಾಯುವ ಕಾಲದಲ್ಲಿಯೂ ಸೂರ್ಯನಿಗೆ ಬಲ ಹೆಚ್ಚು. ಬೇಸಿಗೆಯ ಕಾಲ ಮತ್ತು ಪ್ರತಿದಿನ ಮಧ್ಯಾಹ್ನ ಸೂರ್ಯ ಬಲ ಇರುವ ಕಾಲ. ಈ ಕಾಲ ದಲ್ಲಿ ಜನಿಸಿದ ಹೆಣ್ಣುಗಳು ಇವರಿಗೆ ಶುಭ ಕೊಡುವ ವಧುಗಳು. ಛಳಿಗಾಲದ ಮಧ್ಯರಾತ್ರಿಯ ಹೆಣ್ಣು ಇವರಿಗೆ ಆಗದು ಎಂದರ್ಥ.

ಮೊದಲನೆಯ ತಿಂಗಳು ಜನವರಿ. ಇದರಲ್ಲಿ ಹುಟ್ಟಿದ ಹೆಣ್ಣಿಗೆ ಶನಿಯ ಪ್ರಭಾವ ಹೆಚ್ಚು. ಸೂರ್ಯನಿಗೂ ಶನಿಗೂ ಶತ್ರುತ್ವ. ದುಡಿಮೆಯ ಗ್ರಹ ಶನಿ. ಸೂರ್ಯನಿಗೆ ಆಡಳಿತ ಮಾಡುವ ಸ್ವಭಾವ. ಈ ಕಾರಣ ದಾಂಪತ್ಯದಲ್ಲಿ ಸಮರಸ ಇರದು. ಸೂರ್ಯ ಶನಿಯೋಗದಿಂದ ಆರೋಗ್ಯವೂ ಸಹ ಕೆಡುವುದು. ಹಾಗಿಲ್ಲ ಪತಿರಾಯನು ವೈದ್ಯ ಓದುವುದು ಲೇಸು. ಬೇರೆ ಸರಕಾರೀ ನೌಕರಿಯಲ್ಲಿ ಹಾನಿಯೇ ಫಲ. ಮನೆಯಲ್ಲಿ ತಂದೆಯವರಿಂದ ಕಷ್ಟ ಬೇರೆ. ಅವರ ಕಟು ನುಡಿಗಳಿಗೆ ಮನೆಯಾಕೆ ಗುರಿ. ಮದುವೆಯ ನಂತರ ಒಂಭತ್ತು ದಿನ ಒಂಭತ್ತು ತಿಂಗಳು ಒಂಭತ್ತು ವರುಷಗಳು ಈ ದೋಷದ ಫಲ ನಡೆಯುವುದು.

ಫೆಬ್ರುವರಿ ತಿಂಗಳಿನ ಹೆಣ್ಣು ಇವರಿಗೆ ಉತ್ತಮ. ಈ ತಿಂಗಳಿನ ಎರಡನೆಯ ಸಂಖ್ಯೆಗೆ ಬುಧ ಗುರು ಸಂಯೋಗದ ಫಲ. ಈ ಸಂಯೋಗ ಸೂರ್ಯನ ಯೋಗದೊಡನೆ ಮಿಳಿತ ಹಿತ, ಬುದ್ಧಿ

ವಿಕಾಸ. ಪ್ರಗತಿಪರ ಜೀವನ ಇದರಿಂದ ಸುಗಮ. ಲೇಖಕರಾದರೆ ಈ ತಿಂಗಳಿನ ಹೆಣ್ಣು ಅವರಿಗೆ ಸ್ಫೂರ್ತಿದಾಯಿನಿ. ಅಲ್ಲದೆ ಉತ್ತಮ ಸಹಾಯಕಳು. ಇವರ ದಾಂಪತ್ಯ ಹರ್ಷದಿಂದ ಸುಖಮಯ.

ಮಾರ್ಚ್ ತಿಂಗಳಿನ ಹೆಣ್ಣಿಗೆ ಮೂರನೆಯ ಸಂಖ್ಯೆಯ ಕುಜ-ಶನಿ ಯೋಗ. ಇದು ಒಂದು ನಮೂನೆ ಕುಜನ ದೋಷ. ಮದುವೆ ಬೇಡ ಬೇಡ ಎನ್ನುವುದೇ ಇದಕ್ಕೆ ಸಾಕ್ಷಿ. ಈ ಹೆಣ್ಣು ವಧು ಆಗಬೇಕಾದರೆ ಬಂಧುಗಳು ಬಹಳ ಕಷ್ಟಪಡಬೇಕಾಗುವುದು. ಆದರೆ ಈ ಒಂಭತ್ತನೆಯ ಸೆಪ್ಟೆಂಬರ್ ತಿಂಗಳಿನ ಗಂಡನ್ನು ಮದುವೆಯಾದರೆ ಅವರಿಗೆ ಆ ದೋಷ ಪರಿಹಾರ. ಈ ದೋಷ ಇವರನ್ನು ಬಿಟ್ಟಿದೆ ಎಂದು ತೋರಿಸಲು ಒಬ್ಬ ಅಡುಗೆಯಾಕೆ ಮನೆ ಒಂದು ಸೇರಿ ಮನೆಯಾಕೆಗೆ ಸುಯೋಗ. ಮದುವೆಯ ನಂತರ ದಂಪತಿಗಳಿಗೆ ದೂರದ ಯಾತ್ರೆ ಕೂಡ ಅನುಕೂಲದ ಸಲಹೆ. ಕೆಲವರಿಗೆ ವಿದೇಶದ ಯಾತ್ರೆ ಬೇರೆ. ಮತ್ತೆ ಕೆಲವರಿಗೆ ಯಂತ್ರಾಲಯದಲ್ಲಿ ನೌಕರಿಯಿಂದ ಪ್ರಗತಿಯಾದೀತು. ಇದರಿಂದ ಈ ಬಂಧುತ್ವ ಶುಭ.

ಏಪ್ರಿಲ್ ತಿಂಗಳಿಗೆ ನಾಲ್ಕನೆಯ ಸಂಖ್ಯೆಯ ಚಂದ್ರನ ಯೋಗವಿದೆ. ಸೂರ್ಯ ಚಂದ್ರರು ತಂದೆ ತಾಯಿ. ಇದು ಸಮರಸದ ದಾಂಪತ್ಯ. ಮಕ್ಕಳ ಮೇಲೆ ವಾತ್ಸಲ್ಯ ಬೇರೆ. ಇಬ್ಬರಿಗೂ ಪರಸ್ಪರ ಭೋಗಲಾಲಸೆ ಕಡಿಮೆ. ಕಾರಣ ತಾಯಿ ತಂದೆ ಗ್ರಹಗಳು ಪರಸ್ಪರ ಸಂಬಂಧ ಕಾಮಲಾಲಸೆಯ ಯೋಗವಲ್ಲ. ಈ ದಾಂಪತ್ಯದಿಂದ ಮಕ್ಕಳಿಗೆ ಅಭಿವೃದ್ಧಿ. ಇವರದು ಸೀತಾರಾಮರಂತೆ ಆದರ್ಶದ ಬಂಧುತ್ವ.

ಮೇ ತಿಂಗಳಿನ ಹೆಣ್ಣು ಗುರುವಿನ ಅಧಿಕಾರದಿಂದ ವರಿಷ್ಠಳು. ಗಂಡಸಿನ ಸೂರ್ಯನ ಯೋಗವನ್ನು ಮೇಲೆ ತಳ್ಳುವ ಶಕ್ತಿ. ಈ ವಧು. ಗುರುವಿನ ಯೋಗದಿಂದ ವಿದ್ಯಾವತಿ ಬೇರೆ. ಮಗನ ಜನನದ ನಂತರ ದಾಂಪತ್ಯದಲ್ಲಿ ಸುಯೋಗ. ನೌಕರಿಯಲ್ಲಿ ಅಧಿಕಾರ ಲಾಭ ಬೇರೆ. ವಾಸ್ತವಿಕ ದೃಷ್ಟಿಯಿಂದ ಈ ಬಂಧುತ್ವ ತೇಜಸ್ಸಿನಿಂದ ಕೂಡಿದ್ದು. ನಾಲ್ಕು ಜನಗಳ ಮಧ್ಯೆ ಹೆಸರು ಮಾಡುವ ಜೀವನ. ವೈಭವದ ಜೀವನದ ಕಾರಣ ಹಣ ಮಿಗದು. ಕಾಸು ಸೇರುವುದು ಕಷ್ಟ. ಆದರೂ ಕಷ್ಟ ಇರದು.

ಆರನೆಯ ತಿಂಗಳು ಜೂನ್. ಇದರಲ್ಲಿ ಹುಟ್ಟಿದ ಹೆಣ್ಣು ಸೆಪ್ಟೆಂಬರ್ ಗಂಡು ಸಾಧಾರಣದ ದಾಂಪತ್ಯ ಎಂದರು. ಗಂಡು ನೌಕರಿ ಇತ್ಯಾದಿ ಮನೆ ಹೊರಗಿನ ವಾತಾವರಣದಲ್ಲಿದ್ದರೆ ಹೆಣ್ಣು ಭೋಗಪ್ರಿಯಳು. ಇನ್ನು ಹೊಂದಾಣಿಕೆ ಪ್ರಯತ್ನಪೂರ್ವಕ. ಅದೂ ಹೆಣ್ಣಿನ ಕಡೆಯಿಂದ ಸಹನೆ, ಸಹಕಾರಗಳ ಒತ್ತಾಸೆಯಿಂದ ಸಂಸಾರ ಸುಖಮಯ. ಆದರೆ ಈ ವಿವಾಹದಿಂದ ಸಂಪತ್ತು ಅಭಿವೃದ್ಧಿ. ವಾಹನಗಳಿಂದ ಸುಯೋಗ ಬೇರೆ. ಅಧಿಕಾರದಲ್ಲಿ ಕೀರ್ತಿ ಬಡ್ತಿಗಳೂ ಸುಗಮ.

ಜುಲೈ ತಿಂಗಳಿನ ಹೆಣ್ಣು ಈ ಮಂದಿಗೆ ಜೀವನದಲ್ಲಿ ಬದಲಿನ ಯೋಗ ಕೊಡುವಾಕೆ. ಮದುವೆಯ ನಂತರ ಜೀವನದ ದಾರಿಯೇ ಬದಲು. ಪ್ರಗತಿಯ ಹಾದಿ ಹತ್ತುವುದು. ಕೇಂದ್ರದ ಆಡಳಿತದ ಅಧಿಕಾರ ಸಿಗುವ ಯೋಗ. ಇದನ್ನು ಸುದರ್ಶನ ಯೋಗ ಎಂದರು. ಕೆಲವು ಮಂದಿ

ಈ ಯೋಗದಲ್ಲಿ ವೈದ್ಯವೃತ್ತಿಯವರೂ ಆದಾರು. ಕೆಲವರಿಗೆ ವಿದೇಶದಲ್ಲಿ ಪ್ರಗತಿಯಾಗುವ ಯೋಗ. ಆದರೆ ಮದುವೆಯಾದ ವರುಷದಲ್ಲಿ ಮನೆಯಲ್ಲಿ ವೃದ್ಧರೊಬ್ಬರಿಗೆ ಮೃತ್ಯುಯಾದೀತು.

ಆಗಸ್ಟ್ ಎಂಟನೆಯ ತಿಂಗಳು. ಇದಕ್ಕೆ ಬುಧಶನಿ ಯೋಗ. ಗಂಡು ಒಂಭತ್ತನೆಯ ತಿಂಗಳ ಜನನ. ಇದಕ್ಕೆ ಸೂರ್ಯನ ಯೋಗ ಸೇರಿ ಬುಧನಿಗೆ ಶನಿದೋಷ ನಿವೃತ್ತಿ. ಹೆಣ್ಣಿಗೆ ಎಂಟನೆಯ ಸಂಖ್ಯೆಯ ಬುಧಶನಿ ಯೋಗದ ಪ್ರಭಾವ. ಹುಟ್ಟಿದ ಮನೆಯಲ್ಲಿ ಕಷ್ಟ. ಬಂಧುಗಳ ಮನೆಯಲ್ಲಿ ಪೋಷಣೆ. ಎಲ್ಲರಿಗೂ ಪರಿಚರ್ಯೆ ಮಾಡಿಕೊಂಡು ಬದುಕು. ಆದರೆ ಹರಿಭಕ್ತಳು. ಮುಂಕುತನ ಈಕೆಗೆ ವರಪ್ರಸಾದ. ಕೆಲವರಿಗೆ ಬುದ್ಧಿ ಇದ್ದರೆ ಮರೆವು ಹೆಚ್ಚು. ಸಿರಿ ಕುಟುಂಬದಲ್ಲಿ ಹುಟ್ಟಿದರೆ ಅವರ ಬಗ್ಗೆ ಕತೆಗಳು ಹೆಚ್ಚು. ಮದುವೆ ಎಂದರೆ ಇವರಿಗೆ ಭಯ. ಕಾರಣ ಗಂಡಿನ ಮನೆ ತನಗೆ ಎಟುಕದ ಬಂಧುತ್ವ. ಈ ಕಾರಣ ಪತಿ ಅಂದರೆ ಭಯ, ಗೌರವ. ಮದುವೆಯ ನಂತರ ಗಂಡನ ಸೇವೆ ಮಾಡುವಾಕೆ. ಆದರೆ ದಿನ ಕಳೆದಂತೆ ಸೂರ್ಯನ ಗುಣ ರೂಢಿಯಾಗಿ ಧೋರಣೆಯ ಮಾತು, ಸ್ವಭಾವ ಕುದುರುವುದು. ಸೋಮಾರಿತನವೂ ಬೆಳೆಯುವುದು. ಕೆಲವರಿಗೆ ಎಲ್ಲಾ ಅನುಕೂಲಗಳು ಸುಗಮ, ಆದರೆ ಚರ್ಮವ್ಯಾಧಿ. ಈ ಸಂಬಂಧ ಹೆಣ್ಣಿಗೆ ಸುಯೋಗ, ಎಂಟು ವರ್ಷಗಳ ನಂತರ ಸುಖ.

ಒಂಭತ್ತನೆಯ ತಿಂಗಳಾದ ಸೆಪ್ಟಂಬರ್ ತಿಂಗಳಿನ ಹೆಣ್ಣು ಈ ಮಂದಿಗೆ ಸಮರಸದ ಸಖಿ. ಕಾರಣ ಇಬ್ಬರಿಗೂ ಒಂದೇ ತಿಂಗಳಿನ ಸಂಖ್ಯೆ, ಒಂದೇ ಫಲ. ಆದರೆ ಹತ್ತನೆಯ ತಿಂಗಳಿನ ಹೆಣ್ಣು ಗಂಡಿಗೆ ಹಿತೈಷಿಣಿ. ಈಕೆ ಉದಾರಿ. ದಾನ ಧರ್ಮಶೀಲಳು ದೇವತಾಬಲ ಪ್ರಧಾನವೆಂದು ನಂಬಿ ನಡೆಯುವಾಕೆ. ವ್ರತ ನಿಯಮಾದಿಗಳಲ್ಲಿ ಶ್ರದ್ಧೆ ಬೇರೆ. ಇದರಿಂದ ಪತಿರಾಯನಿಗೆ ವಿಶೇಷ ಪ್ರಗತಿ. ಆದರೆ ಮಡದಿ ಹಣದ ಬೆಲೆ ತಿಳಿಯದವಳು. ಎಷ್ಟೇ ಬರಲಿ ಖರ್ಚು. ಹತ್ತನೆಯ ಸಂಖ್ಯೆಯ ಗುರುಶನಿ ಯೋಗದ ದೆಸೆಯಿಂದ ಮಕ್ಕಳು ಕಡಿಮೆ. ಕೆಲವರಿಗೆ ಮಕ್ಕಳು ಆಗುವುದು ಕಷ್ಟ. ಮಡಿವಂತಿಕೆಯ ಸೇವೆ ಆಚಾರಗಳಿಂದ ಒಂದೋ ಎರಡೋ ಮಕ್ಕಳು ಆದಾವು. ಅನ್ಯಮಕ್ಕಳು ಎಂದರೆ ಇವರಿಗೆ ತಮ್ಮ ಮಕ್ಕಳಂತೆಯೇ ಸರಿ. ವರುಷಗಳು ಕಳೆದಂತೆ ಪತಿಯನ್ನು ಹೆಚ್ಚು ಗಮನಿಸದೆ ಕೇವಲ ದೇವರ ಸೇವೆಯಲ್ಲಿ ಹೆಚ್ಚು ಕಾಲ ಕಳೆಯುವರು. ಇನ್ನು ಪತಿಗೆ ಸುಖವೆಲ್ಲಿ? ಆದರೆ ಇವರು ಮಾಡುವ ಒಂದು ಕೆಲಸವೂ ಸಹ ಪತಿರಾಯನಿಗೆ ವಿರೋಧ ಇರದು. ಅವರ ಹಿತಕ್ಕಾಗಿಯೇ ದೇವರ ಸೇವೆ ಎಂದು ಇವರ ಗಾಢನಂಬಿಕೆ. ಈ ದಾಂಪತ್ಯದಲ್ಲಿ ಹಿರಿಯ ಮಗ, ಮಗಳಿಂದ ಸುಖದ ಬದಲು ಚಿಂತೆ.

ನಾಲ್ಕು ಜನ ಹಿತೈಷಿಗಳ ಮಾತಿನಂತೆ ಮದುವೆಯಾಗಲು ನಿರ್ಣಯ ಮಾಡುವ ಮಂದಿ ಎಂದರೆ ಹನ್ನೊಂದನೆಯ ತಿಂಗಳಲ್ಲಿ ಹುಟ್ಟಿದ ಹೆಣ್ಣು, ಪ್ರಥಮ ಪ್ರೇಮದಲ್ಲಿ ನಿರಾಸೆ ಹೊಂದಿ ಸುಖ ಎಂದರೆ ಆಸೆ ಕಳೆದುಕೊಂಡು ಉತ್ಸಾಹವಿಲ್ಲದ ಬಾಳು. ವೇದಾಂತ ಇವರಿಗೆ ಆಶ್ರಯ. ಆದರೆ ಮಿತ್ರರು ತನ್ನ ಹಿತಕ್ಕಾಗಿ ಮಾಡಿದ ಪ್ರಯತ್ನಕ್ಕೆ ಇವರು ಕೃತಜ್ಞರು. ಅವರಿಗಾಗಿ ಮದುವೆ ಮಾಡಿಕೋಡು ಕಟ್ಟಿಕೊಂಡವರಿಗೆ ಸುಖ ಕೊಡಲು ಇವರದು ಪ್ರಯತ್ನ. ಇವರಿಗೆ ಸಂಸಾರದಲ್ಲಿ ಆಸೆಯಾಗಲೀ ಸುಖವಾಗಲಿ ಬೇಕು ಅನ್ನಿಸದು. ಮೊತ್ತದಲ್ಲಿ ಹೋದ ಮನೆಯ ಸುಖ ಹಿತ ಇವರ ಧ್ಯೇಯ ಅದಕ್ಕಾಗಿ ಇವರ ಶ್ರಮ. ಇವರದು ಒಂದು ನಮೂನೆ ಸ್ವಾರ್ಥರಹಿತ ಜೀವನ. ಇವರಿಗೆ ಶುಕ್ರ ಶನಿಯೋಗ. ಇದರಿಂದ ಇವರಿಗೆ ಮುತ್ತೈದೆಯ ಸಾವು.

ಡಿಸೆಂಬರ್ ತಿಂಗಳ ಹೆಣ್ಣು ಸುಖದ ಬಾಳುವೆಗಾಗಿ ಹುಟ್ಟಿದಾಕೆ. ಕಾರಣ ಆ ತಿಂಗಳ ಹನ್ನೆರಡು ಸಂಖ್ಯೆಗೆ ಶುಕ್ರ ಮಂಗಳ ಯೋಗ್ಯ ಶ್ರಮದ ದುಡಿಮೆ ಇವರಿಗೆ ಹಿತ ಇರದು. ಕೈಗೆ ಕಾಲಿಗೆ ಆಳುಗಳು ಅಗತ್ಯ. ವಾಹನಾದಿಗಳಲ್ಲಿ ಅಸೆ. ಕಾಮನ ಬಾಣ ಇವರ ಅಸ್ತ್ರ. ಇದಕ್ಕೆ ಪತಿ ತಲ್ಲಣಿಸುವ ಗುರಿ. ಇದರಿಂದ ಅವರ ಬೇಡಿಕೆಗಳೆಲ್ಲಾ ಪೂರೈಕೆ. ತಾನು, ತನ್ನ ಸುಖ ತನ್ನ ಸಂಸಾರ ಇವೇ ವಿನಹ ಬೇರೆ ಇವರ ದೃಷ್ಟಿಗೆ ಬೀಳದು. ಬಂಧುಬಳಗದವರೂ ಸಹ ಬೇಡ ಇವರಂತೆ ಸುಖಜೀವನ ನಡೆಸುವ ಹೆಣ್ಣುಗಳೇ ಇವರಿಗೆ ಗೆಳತಿಯರು. ಬಡವರು ಎಂದರೆ ಇವರು ಗಾವುದ ದೂರ. ಪತಿರಾಯನು ಹೊರಗೆ ಎಷ್ಟೇ ಕೀರ್ತಿಶಾಲಿ ಇರಲಿ ಮನೆಯಲ್ಲಿ ಮಾತ್ರ ಇವರ ಕೈಗೊಂಬೆ. ಇಷ್ಟು ಇದ್ದರೂ ಸಹ ಇವರ ಸಂಸಾರ ಸುಖಮಯ. ಹಾಗಿರಲು ಮಡದಿಯೇ ಕಾರಣ. ಮೊತ್ತದಲ್ಲಿ ಸೆಪ್ಟೆಂಬರ್ ತಿಂಗಳಿನ ಗಂಡಿಗೆ ಮದುವೆ ಪ್ರಗತಿಯತ್ತ ಒಯ್ಯುವ ಹಂತ. ಸಮಾನರಲ್ಲಿ ಕೀರ್ತಿ ಬೇರೆ. ಸರಕಾರದಲ್ಲಿ ಅನುಕೂಲದ ಬಡ್ತಿಯಿಂದ ಸುಖ ಮಡದಿ ಎಂದರೆ ಸರ್ವರಕ್ಷಾಯಂತ್ರ ಎಂದೇ ಇವರ ನಂಬಿಕೆ ಇದ್ದರೂ ಇದ್ದೀತು.

## ಹತ್ತನೆಯ ತಿಂಗಳ ಜನನದ ಸಂಸಾರ ಫಲ

ಹತ್ತನೆಯ ತಿಂಗಳು - ಅಕ್ಟೋಬರ್- ಹತ್ತು, ಜನನದ ತಿಂಗಳು ಸಂಖ್ಯೆ ಆಗ ಇವರ ಸಂಸಾರ ಜೀವನದಲ್ಲಿ ಈ ಹತ್ತನೆಯ ಸಂಖ್ಯೆಯ ಗ್ರಹದ ಗುಣಧರ್ಮಗಳು ಬೇರೂರಿರುತ್ತವೆ. ಈ ಸಂಖ್ಯೆಯ ಗ್ರಹ ಗುರು. ಇಲ್ಲಿ ಈ ಗುರುವಿಗೆ ಶನಿಯ ಸಂಬಂಧ ಇರುತ್ತದೆ. ಇದು ಗುರುವಿನ ಅರಿಷ್ಟದ ಸಂಖ್ಯೆ. ಗುರು ಬಲದಾಯಕ ಗ್ರಹ. ಶನಿ ಬಲಹಾರಕ ಗ್ರಹ. ಎರಡನೆಯ ಸಂಯೋಗ ಜಾತಕದ ಬಲವನ್ನು ಕಡಿಮೆ ಮಾಡುತ್ತದೆ. ಗ್ರಹಬಲ ಕಡಿಮೆಯಾದಾಗ ದೇವತಾ ಬಲದ ಆಶ್ರಯ ಅಗತ್ಯ. ಈ ಕಾರಣ ಈ ಮಂದಿ ದೇವತಾಶ್ರದ್ಧೆಯುಳ್ಳವರು. ಶುಚಿ ಪ್ರಿಯರು. ಗುರು ಸೇವೆಯಲ್ಲಿ ನಂಬಿಕೆ ಅಪಾರ. ದಾನ ಧರ್ಮಾದಿಗಳಲ್ಲಿ ಆಸಕ್ತಿ ಹೆಚ್ಚು. ಹಿಂದಿನ ಜನ್ಮದ ಪಾಪದ ಫಲ ಹೇರಳ ಎಂದು ಇವರ ಪರಿತಾಪ. ಈ ಜನ್ಮದಲ್ಲಿ ರಿಪೇರಿಗಾಗಿ ಇವರ ದೇವತಾಪ್ರಜ್ಞೆ.

ವಿದ್ಯಾಗ್ರಹ ಗುರು. ಇವನ ಅರಿಷ್ಟದಿಂದ ವಿದ್ಯಾವಂತ ಕುಟುಂಬದಲ್ಲಿ ಹುಟ್ಟಿದರೂ ಮಡದಿಗೆ ಉನ್ನತ ವಿದ್ಯೆ ಇರದು. ಗುರುಸೇವೆ ಮಾಡಿದ್ದಲ್ಲಿ ಎಲ್ಲರಿಗಿಂತ ಹೆಚ್ಚಿನ ವಿದ್ಯಾ ಪ್ರಾಪ್ತಿಯಾದೀತು. ಅಲ್ಲದೆ ಮಡದಿ ಕೆಲವು ಸಲ ಜ್ಯೇಷ್ಠಳು. ಗುರು ಶನಿಯೋಗದಿಂದ ಮಾತು ಕಡಿಮೆ. ಆದರೆ ಖರ್ಚಾಳು. ಗಳಿಕೆಯ ಹಣ ಕೂಡಿಡುವುದು ಕಷ್ಟ ಪ್ರಯತ್ನ ಮಾಡಿದರೂ ಸಹ ಹೆಚ್ಚು ಹಣ ಸಂಚಯವಾದಾಗ ಒಟ್ಟಿಗೇ ಎಲ್ಲಾ ಖರ್ಚು. ಕೊನೆಗೆ ಕೈ ಬರಿದು. ಹಣ ಎಷ್ಟೇ ಅಲ್ಪ ಇದ್ದರೂ ಬ್ಯಾಂಕಿನಲ್ಲಿ ಇಡುವುದು ಒಂದು ಆಧುನಿಕ ಉಪಾಯ.

ಹತ್ತನೆಯ ತಿಂಗಳಿನ ಸಂಖ್ಯೆಗೆ ಶನಿ ಯೋಗ. ಇದರಿಂದ ಸಂಸಾರದಲ್ಲಿ ಮಕ್ಕಳ ಬಯಕೆ ಹೆಚ್ಚು. ಈಡೇರುವುದು ನಿಧಾನ ಕಷ್ಟ. ಅದಕ್ಕಾಗಿ ಕೆಲವರದು ದೇವತಾಸೇವೆ. ದಾನ ಧರ್ಮದಲ್ಲಿ ಆಸಕ್ತಿ. ಕೆಲವರಂತೂ ಕಂಡ ಕಂಡ ದೇವರನ್ನು ಪೂಜಿಸಲೂ ಸಹ ಹಿಂಜರಿಯರು. ಈ ಯೋಗದಲ್ಲಿ ಮಕ್ಕಳು ಆಗುವುದು ಕಠಿಣ. ಆದರೆ ಜ್ಯೇಷ್ಠನಿಂದ ಹಿತ ಇರದು. ಅನೇಕ ವೇಳೆ

ಮೊದಲಸಯದು ಹಣ್ಣೇ ಆದೀತು. ಅಂತೂ ಇವರಿಗೆ ಅತೃಪ್ತಿ ತಪ್ಪದು. ಕೆಲ ಕಾಲಾನಂತರ ವೇದಾಂತದಲ್ಲಿ ಅಭಿರುಚಿ ಹುಟ್ಟಿ ಮನಸ್ಸಿಗೂ ನೆಮ್ಮದಿ.

## ಹತ್ತು ಕರ್ಮ ಸಂಖ್ಯೆ

ಹತ್ತು ಸಂಖ್ಯೆಗೆ ಗುರು ಶನಿ ಯೋಗ. ಇದನ್ನು ಕರ್ಮ ಸಂಖ್ಯೆ ಎಂದರು. ಕರ್ಮ ಎಂದರೆ ಕೆಲಸ ಎಂದು ಅರ್ಥ. ಆದರೆ ರೂಢಿಯಲ್ಲಿ ಕರ್ಮ ಎಂದರೆ ಬೇರೆ ಅರ್ಥ. ಗುರು ಜನ್ಮ ಕೊಡುವ ಗ್ರಹ. ಶನಿ ಹಿಂದಿನದನ್ನು ತೋರಿಸುವ ತತ್ವ. ಪೂರ್ವ ಸೂರ್ಯನ ಉದಯದ ದಿಕ್ಕು. ಇದು ಮುಂದಿನದು. ಆಗ ಶನಿ ಹಿಂದಿನದು. ಗುರು ಜನ್ಮ ಗ್ರಹ ಶನಿ ಯೋಗದಿಂದ ಅದು ಹಿಂದಿನ ಜನ್ಮದ ಫಲವನ್ನು ತೋರಿಸುತ್ತೆ. ಆಗ ಮಾಡಿದ ಪಾಪ ಪುಣ್ಯಗಳ ಫಲ ಈ ಜನ್ಮದಲ್ಲಿ. ಇಷ್ಟ ಕಷ್ಟ ಮಿಶ್ರಂಚ ತ್ರಿವಿಧಂ ಕರ್ಮಣಃ ಫಲಂ ಎಂದರು. ಇದರಿಂದ ಕರ್ಮ ಎಂದರೆ ಹಿಂದಿನ ಜನ್ಮದಲ್ಲಿ ಮಾಡಿದ ಪಾಪ ಪುಣ್ಯ ಎರಡಕ್ಕೂ ಅನ್ವಯ. ಕಷ್ಟವಾದಾಗ ಇದು ಅವರು ನಂಬಿರುವ ಕಾರಣ. ಇದರಿಂದ ಸಾಧಾರಣ ಕರ್ಮ ಎಂದರೆ ಹಣ ಬರಹ ಎಂದೂ ಹಣೆ ಮೇಲೆ ಬೆರಳಾಡಿಸಿಯಾರು. ಈ ಕರ್ಮ ಸಂಖ್ಯೆ ಹತ್ತು, ಇದನ್ನು ಕತ್ತರಿಸಿದರೆ ಐದಾಗುತ್ತೆ. ಈ ದಿಸೆಯಲ್ಲಿ ಐದು ಶುಭಕರ ಪುಣ್ಯ ಸಂಖ್ಯೆ. ಈ ಕಾರಣ ಹತ್ತನೆಯ ತಿಂಗಳಿನ ಜನನದ ಗಂಡಸರು ಈ ಐದು ಸಂಖ್ಯೆಯ ಮೇ ತಿಂಗಳಿನ ಹೆಣ್ಣನ್ನು ಕೈ ಹಿಡಿಯುವುದು ಲೇಸು. ಇದರಿಂದ ಗಂಡಿನ ಕರ್ಮ ಕಳೆದು ಪುಣ್ಯದ ಸಂತಾನ ಆಗುತ್ತದೆ. ಹೆಣ್ಣಿನ ಯೋಗದಿಂದ ಶುಭ ಫಲ ಬೇರೆ ಮೂಡುತ್ತೆ. ಆದರೆ ಈ ರೀತಿ ಜೋಡಿ ಸಿಗಬೇಕು. ಮದುವೆಗೆ ಮುನ್ನ ಗುರು ಶನಿಯೋಗಕ್ಕೆ ಗುರು ಸೇವೆ ಎನ್ನುವ ಶಾಂತಿ ಅಗತ್ಯ. ಆಗಿಲ್ಲ ಬ್ರಹ್ಮ ಶಾಪ ನಿವಾರಕ ಶ್ರೀ ಕೃಷ್ಣನ ಭಜನೆ ಲೇಸು. ಇದರಿಂದ ಪಾಪ ಪರಿಹಾರಕ ಐದನೆಯ ತಿಂಗಳಿನ ಜನನದ ಹೆಣ್ಣು ಸಿಕ್ಕಿ ಸುಖ.

ಮನಸ್ಸು ವಿಕಾರಗಳಿಗೆ ಗುರಿ. ಪರಸ್ಪರ ವಿರೋಧದ ವಿಕಾರಗಳು ಕೆಲವು ಸಲ ನೆಮ್ಮದಿ ದಾಯಕ. ಉದಾಹರಣೆಗೆ ಮಡದಿಗೆ ದೂರದ ಕೆಲಸದ ಮೇಲಿರುವ ಪತಿರಾಯನ ವಿರಹ. ಇದು ಆಗ ತಾನೇ ಆಡ ಹತ್ತಿದ ಮುದ್ದು ಮಗುವಿನ ನಸು ನಗುವನ್ನು ನೋಡಿ ಪರಿಹಾರ. ಹೀಗೆ ಮಗನ ಮೇಲಿನ ವಾತ್ಸಲ್ಯ ಪತಿಯ ವಿರಹ ವೇದನೆಗೆ ನೆಮ್ಮದಿಯ ಉಪಾಯ. ಹಾಗೆ ಗುರು ಶನಿಯೋಗದ ಹತ್ತು ಸಂಖ್ಯೆಯ ಅಕ್ಟೋಬರ್ ತಿಂಗಳಿನ ಗಂಡಸಿಗೆ ಬುಧ ಶನಿ ಯೋಗ ಹರಿಭಕ್ತಿಯೋಗ. ಗುರು ಶನಿಯೋಗ ಪರಿಭಕ್ತಿಗೆ ಪೂರಕವಾದ ಗುರುಭಕ್ತಿ. ಎರಡರ ಸಂಯೋಗ ಜ್ಞಾನಕ್ಕೆ ಮಾರ್ಗ. ಹಾಗೆಯೇ ಸಂಸಾರದಲ್ಲಿ ಹೆಂಡತಿಯ ಎಂಟರ ವಿಕಾರ ಗುರು ಶನಿಯೋಗದ ವಿಕಾರವನ್ನು ತಡೆದು ಪುತ್ರ ಸಂತಾನವನ್ನು ಕೊಡುತ್ತೆ. ಅಲ್ಲದೆ ಗಂಡಸಿನ ಮನೋವೃತ್ತಿಗೆ ವಿರೋಧ ಇರದು. ಸಹಕಾರದ ಅನುಕರಣ ಒಂದು ಅವರಿಗೆ ನೆಮ್ಮದಿಯ ವಿಷಯ.

ಕೆಲವರ ಮತದಂತೆ ಗ್ರಹಗಳು ತಮ್ಮದೇ ಆದ ಸ್ವಾಭಾವಿಕ ದೋಷವನ್ನು ಹೊಂದಿರುತ್ತೆ. ಉದಾಹರಣೆಗೆ ಶುಕ್ರನಿಗೆ ಬುಧನ ದೋಷ. ಇದರಿಂದ ವಧು ಲಜ್ಜಾನ್ವಿತಳು. ಕುಜನಿಗೆ ಗುರು ದೋಷ. ವಾದದಲ್ಲಿ ಹಿರಿಯರಿಗೆ ಗೌರವ ಹೋದೀತು. ಸುಬ್ರಹ್ಮಣ್ಯ ಬ್ರಹ್ಮನಿಗೆ ಒಂದು ತಲೆ ತೆಗೆದಂತೆ. ಹಾಗೆಯೇ ಗುರುವಿಗೆ ಕುಜನ ದೋಷ. ಈ ಕಾರಣ ಬಹುಶಃ ಗುರುಜನರು

ಭಿಕ್ಷೆಯಿಂದ ಜೀವಿಸುತ್ತಾರೆ. ಅಲ್ಲದೆ ಅವರ ಸನ್ಯಾಸಯೋಗ ಸಹ ಅಮಂಗಳಕರವಾದ ಈ ಕುಜ ಶನಿಯೋಗದಿಂದ ಅಂದರು. ಈ ಕಾರಣ ಗುರುವಿಗೆ ಕುಜ ಶನಿಯೋಗ ಸಹಜ ಮತ್ತು ಸ್ವಾಭಾವಿಕ. ಇನ್ನು ಹತ್ತನೆಯ ತಿಂಗಳಿನಲ್ಲಿ ಹುಟ್ಟಿದ ಗಂಡುಗಳಿಗೆ ಗುರು ಶನಿಯೋಗ ಇದ್ದು ಈ ಶನಿ ಅವರಿಗೆ ಕುಜನ ದೋಷವೇ ಆಗಿರುತ್ತೆ. ಇದರಿಂದ ಅವರಿಗೆ ಕುಜ ಶನಿ ಯೋಗ ಸಂಖ್ಯೆಯಾದ ಮೂರನೆಯ ತಿಂಗಳಾದ ಮಾರ್ಚಿ ತಿಂಗಳಿನಲ್ಲಿ ಹುಟ್ಟಿದ ಹೆಣ್ಣು ಮದುವೆಯಾಗಲು ಸಲ್ಲದು. ಇದು ಕುಜದೋಷದ ಪ್ರಗತಿಯ ಲಕ್ಷಣ. ಇದರಿಂದ ದಾಂಪತ್ಯ ವಿರಸಮಯ. ಹಾಗಿಲ್ಲ ಸಿರಿ ಸೇರದು.

ಶನಿಯ ಸಂಖ್ಯೆಯಾದ ಒಂದನೆಯ ಜನವರಿ ತಿಂಗಳಿನ ಹೆಣ್ಣು ಹತ್ತನೆಯ ತಿಂಗಳಿನ ಗಂಡುಗಳಿಗೆ ಭಾರಿ ವ್ಯತ್ಯಾಸವನ್ನೇನೂ ಮಾಡರು. ಆದರೆ ಅವರ ಸೇವಾ ಮನೋಧರ್ಮ ಇವರಿಗೆ ಪೂರಕ. ದಾನ, ಧರ್ಮ, ತ್ಯಾಗಬುದ್ಧಿ ಗಳಿಗೆ ಹೆಂಡತಿಯ ಆತಂಕವಿಲ್ಲದೆ ಖರ್ಚು ಹೆಚ್ಚು. ಗಂಡಹೆಂಡಿರು ಇಬ್ಬರೂ ಸಂಗೀತಗಾರರಾಗಿ ಸಂಗೀತದಲ್ಲಿ ಹೊಟ್ಟೆ ತುಂಬಿ ಅಡಿಗೆ ಕೆಲಸ ಸಾಗದು. ಈ ರೀತಿ ದಂಪತಿಗಳು ದಾನ ಧರ್ಮ ಶುಚಿಪ್ರಿಯರಾಗಿ ಹಣ ಎಲ್ಲಾ ಖರಿದು. ಮಕ್ಕಳೂ ಆಗದು, ಕೆಲವರಿಗೆ ನಾಯಿ ಸಾಕಾಣಿಕೆಯೇ ಗತಿಯಾದೀತು.

ಗುರು ಶನಿಯೋಗದ ಹತ್ತನೆಯ ಸಂಖ್ಯೆಯ ಮಂದಿ ಮನನಶೀಲರು. ಧ್ಯಾನಾಸಕ್ತರು. ಮಾತೂ ಕಡಿಮೆ. ಇನ್ನು ಕೆಲವರಿಗೆ ಬುಧ ಗುರುಯೋಗದ ಎರಡನೆಯ ಸಂಖ್ಯೆಯ ಫೆಬ್ರವರಿ ತಿಂಗಳಿನ ಹೆಣ್ಣು ಮದುವೆಯಾದರೆ ಇವರ ಮನೋಧರ್ಮಕ್ಕೆ ಪ್ರಗತಿ. ಕಾರಣ ಹೆಣ್ಣು ಪುಸ್ತಕಪ್ರಿಯಳು. ವೇದಾಂತ ಪ್ರಿಯರಾದ ಪತಿರಾಯನಿಗೆ ಜೀವನದಲ್ಲಿ ಬೌದ್ಧಿಕ ಸರಸ ಸಲ್ಲಾಪಗಳಿಂದ ಜೀವನವನ್ನು ಸುಖವಾಗಿಸುವಾಕೆ ಈಕೆ. ಬುದ್ಧಿ ಚಾತುರ್ಯದಿಂದ ತನ್ನ ಸುತ್ತ ಬುದ್ಧಿಜೀವಿಗಳನ್ನು ಮಧುರ ಲಹರಿಗಳಲ್ಲಿ ತೇಲಿಸಿ ಮುಳುಗಿಸುವಾಕೆ. ಬಂಧುಮಿತ್ರ ಪ್ರೀತಿಯಿಂದ ಸಂಸಾರ ಸರಸಮಯ. ಗುರ ಶನಿಯೋಗದ ಗಾಂಭೀರ್ಯ ಬದಿಗೆ ಸರಿದು ಪತಿಗೆ ಬೇಸರ ಆಗದಂತೆ ಈಕೆಯ ಸಹಜೀವನ ಒಂದು ವರಪ್ರಸಾದ ಎಂದರೆ ತಪ್ಪಲ್ಲ.

ಮನೋಗ್ರಹ ಚಂದ್ರನ ಸಂಖ್ಯೆ ನಾಲ್ಕು. ಇವನ ಸಂಖ್ಯೆಯ ತಿಂಗಳು ಏಪ್ರಿಲ್ ಈ ತಿಂಗಳಿನಲ್ಲಿ ಹುಟ್ಟಿದ ಹೆಣ್ಣು ಮನೋಲಹರಿ ಜೀವಿ. ಇವರ ಜೀವನದ ಬಯಕೆಗಳು, ಕಾಲ್ಪನಿಕ ಆದರ್ಶದ ನಡೆ ನುಡಿಗಳು ಇವರ ಗುರಿ. ಬೇಸರ ಇವರ ಶತ್ರು. ಪ್ರೇಮ ಇವರ ಸಂಜೀವಿನಿ. ಹತ್ತನೆಯ ತಿಂಗಳಿನ ಗಂಡು ವೇದಾಂತಪ್ರಿಯರು. ಇವರಿಗೆ ಪ್ರೇಮಜೀವಿನಿಯಾದ ನಾಲ್ಕನೆಯ ತಿಂಗಳಿನ ಹೆಣ್ಣು ಹೇಗೆ ಸಲ್ಲುವಳು! ವೇದಾಂತದಲ್ಲಿ ಹೆಣ್ಣು ಮಾಯೆ. ಇದರಿಂದ ಹೆಂಡತಿಗೆ ಮೊದಲು ಮೊದಲು ಗಂಡನಿಂದ ತಾತ್ಸರವೇ ಫಲ. ಇದರಿಂದ ಆಕೆಗೆ ಮಾನಸಿಕ ದುಃಖ. ಮಕ್ಕಳಿಲ್ಲದ ಚಿಂತೆ ಬೇರೆ. ಆದರೆ ಗಂಡು ಗುಣಿಯು. ಇದು ಒಂದು ಸಮಾಧಾನ. ಬರಬರುತ್ತಾ ಈ ಮಾಯೆ ಛಳಿಯ ಕೊರೆತದಿಂದ ಮೈಯೊಳಗೆ ತಂಪು ಊರಿದಂತೆ ಮಾಯೆ ಗಂಡಸನ್ನು ಆವರಿಸುತ್ತದೆ. ಆಗ ವಿಪ್ರನಾರಾಯಣನಂತೆ ಗಂಡು ಮಾಯೆಗೆ ಅಧೀನ ಆದಾನು. ಅಲ್ಲಿಯವರೆಗೆ ಹೆಣ್ಣು ತಾಳ್ಮೆಯಿಂದ ಇದ್ದು ಸುಖಪಟ್ಟಾಳು. ಅನಂತರ ದಾಂಪತ್ಯ ಸುಖಮಯ.

ಜೂನ್ ತಿಂಗಳಿನ ಹೆಣ್ಣು ಕುಜ ಶುಕ್ರಯೋಗದಲ್ಲಿ ಜನಿಸಿದವಳು. ಇದರಿಂದ ಈಕೆ ಅನುರಾಗಮಯಿ. ಕಾಮಭೋಗಗಳ ಲಾಲಸೆ ಬೇರೆ. ಇನ್ನು ಹತ್ತನೆಯ ಸಂಖ್ಯೆಯ ವೇದಾಂತ

ಕರ್ಮನಿಷ್ಠರಾದ ಗಂಡು ಇದಕ್ಕೆ ಹೊಂದಿಕೊಳ್ಳುವುದು ಕಷ್ಟವೇ ಸರಿ. ದೇವತಾ ಶ್ರದ್ಧೆಯಲ್ಲಿ ಅಚಲ ನಂಬಿಕೆ ಗಂಡಿಗೆ. ಅವರ ವಿರೋಧದ ಮನೋಭಾವ ಹೆಣ್ಣಿಗೆ ಇನ್ನು ದಾಂಪತ್ಯದಲ್ಲಿ ಸುಖವೆಲ್ಲಿ? ಇದರಿಂದ ಹೆಣ್ಣಿಗೆ ನಿರಾಸೆ. ಗಂಡಿಗೆ ನಿರಾಸೆ ಸಹಜ. ಕಾರಣ ಅವರು ನಿರಾಶಾವಾದಿಗಳು. ಬರಬರುತ್ತಾ ಹೆಣ್ಣಿನ ಹಠವೇ ಜಯಿಸಿ ಗಂಡಿಗೆ ನಿರಾಸೆ ಸಹಜ. ಕಾರಣ ಅವರದು ದಾಕ್ಷಿಣ್ಯದ ಮನೋಭಾವ. ಹೆಣ್ಣು ಹಠದ ಸ್ವಭಾವದಾಕೆ. ಇಷ್ಟ ಇಲ್ಲದ ಕಾಲದಲ್ಲಿ ಬಲವಂತದ ಸುಖ ಅವರ ಪಾಲಿಗೆ ಅಗತ್ಯದ ಹೊಣೆ. ಇದರಿಂದ ಅವರಿಗೆ ಒಳಗೆ ಒಳಗೇ ಮಾನಸಿಕ ವೇದನೆ. ಇದರಿಂದ ಈ ತಿಂಗಳ ಹೆಣ್ಣು ಸಲ್ಲದು ಎಂದು ಕೆಲವರ ಮತ. ಇದು ಕೇವಲ ಪಕ್ಷಪಾತದ ಅಭಿಪ್ರಾಯ ಎನ್ನುವವರೂ ಇದ್ದಾರೆ.

ಜುಲೈ ತಿಂಗಳಿನಲ್ಲಿ ಹುಟ್ಟಿದ ಹೆಣ್ಣು ರಾಹುಗ್ರಹದ ಸ್ವಭಾವ ಉಳ್ಳವಳು. ಇದು ಕೇವಲ ಅನುಕಣದ ಬುದ್ಧಿ. ಗಂಡಿಗೆ ಧಾರ್ಮಿಕ ಬುದ್ಧಿ. ಇವರಿಗೆ ರಾಹುವಿನ ಕ್ರಾಂತಿಕಾರಕ ಮನಸ್ಸು. ಬರಬರುತ್ತಾ ಇದು ಮಾಯವಾಗಿ ಅನುಕರಣ ಯೋಗದಿಂದ ಗಂಡನನ್ನು ಅನುಸರಿಸಿ ದಾಂಪತ್ಯದಲ್ಲಿ ಸುಖ ಉಂಟು. ಆದರೆ ಹತ್ತನೆಯ ತಿಂಗಳಿನ ಗುರು ಶನಿಯೋಗ ಗಂಡಿಗೆ ಇದ್ದು ಜೊತೆಗೆ ಹೆಣ್ಣಿನ ರಾಹು ಯೋಗ ಬೆರೆತರೆ ಗುರು ಶನಿರಾಹು ಯೋಗ ಆಗುತ್ತೆ. ಆಗ ಗುರುವಿಗೆ ಶನಿರಾಹು ಯೋಗವಾಗಿ ಹುಟ್ಟಿದ ಮಕ್ಕಳಿಗೆ ಕೇಡು. ಕಾರಣ ಶನಿರಾಹು ಯೋಗ ಮೃತ್ಯು. ಇದರ ಫಲ ಗುರುವಿಗೆ. ಈ ಗುರು ಪುತ್ರಗ್ರಹ. ಧನಕಾರಕನಾಗಿ ಹಣವೂ ಸಹ ಸೇರದು. ಆದರೆ ಮೃತಿ ಹೊಂದಿ ಬೃಂದಾವನದಲ್ಲಿರುವ ಗುರುಗಳನ್ನು ಸೇವೆ ಮಾಡುವುದರಿಂದ ಈ ದೋಷ ಪರಿಹಾರ. ದಾಂಪತ್ಯದಲ್ಲಿಯೂ ಸುಖ ಉಂಟಾಗುವುದು.

ಹತ್ತನೆಯ ತಿಂಗಳಿನಲ್ಲಿ ಜನನ. ಆ ಮಂದಿಗೆ ನಿಜ ಸ್ವಭಾವ ದಿನ ಸಂಖ್ಯೆಗೆ ಅನುಗುಣ. ಆದರೆ ಅವನ ನಡೆ. ನಡತೆ ಸಂಸಾರದಲ್ಲಿ ಜೊತೆಗಾರ್ತಿಯಾಗಿರುವಾಕೆಯಲ್ಲಿ ಹೇಗೆ? ಈ ಸುಧಾರಣೆ ಅಥವಾ ಧೋರಣೆಯನ್ನು ತಿಂಗಳ ಸಂಖ್ಯೆಯಾದ ಹತ್ತು ಮತ್ತು ಅದರ ಗ್ರಹಗಳಾದ ಗುರು ಶನಿಯೋಗ ತೋರಿಸುತ್ತೆ. ಗುರು ಶನಿಯೋಗದಲ್ಲಿ ಮಕ್ಕಳು ನಿಧಾನ. ಇದರಿಂದ ಬೇಸರ. ಇದರಿಂದ ಶ್ರೀಮತಿಯ ಬಗ್ಗೆ ತಾತ್ಸಾರ. ಮುಂದೆ ನಿರಾಸೆಯಿಂದ. ವೇದಾಂತ. ದಾನ. ಧರ್ಮ ನಿಷ್ಠೆ ಇತ್ಯಾದಿ ಗುಣಗಳ ರೂಢಿ. ಹೀಗೆ ಗುರು ಶನಿಯೋಗದ ಗುಣಗಳು ಸ್ವಭಾವದಲ್ಲಿ ಬೇರೂರಲು ಶಕ್ಯ. ಈ ಮಂದಿಗೆ ಸಕಲ ದೋಷ ನಿವಾರಕ ಗ್ರಹವಾದ ಸೂರ್ಯನ ಸಂಖ್ಯೆಯಾದ ಒಂಭತ್ತು ಶುಭ. ಆ ತಿಂಗಳು ಸೆಪ್ಟೆಂಬರ್‌ನಲ್ಲಿ ಜನಿಸಿದ ಹೆಣ್ಣು ಉತ್ತಮ ಜೋಡಿ ಎಂದರು. ಕಾರಣ ಸೂರ್ಯ ಸ್ವಾಭಿಮಾನಿ ಗ್ರಹ. ಧೋರಣೆ ಇವನ ಸ್ವಭಾವ. ದುಡಿಮೆ ತೆಗೆಯುವುದು ಇವನ ತೇಜಸ್ಸು. ಹೊಗಳಿಕೆ ಇವನಿಗೆ ಜಾರುಗಲ್ಲು. ಈ ಹೆಣ್ಣು ತನ್ನ ಸೂರ್ಯನ ಪ್ರಭಾವದಿಂದ ಗುರು ಶನಿಯೋಗದ ದೋಷವನ್ನು ತೆಗೆದು ಕೀರ್ತಿಯನ್ನು ಹೊಂದುವಾಕೆ. ಗುರುವಿಗೆ ಶನಿಯೋಗ ಪರಿಹಾರ. ಸೂರ್ಯನ ಸಂಯೋಗ ಪ್ರಾಪ್ತಿ. ಇದರಿಂದ ನೌಕರಿಯಲ್ಲಿ ಬಡ್ತಿ. ಉದ್ಯಮದಲ್ಲಿ ಪ್ರಗತಿ. ಸಂತಾನ ದೋಷ ನೀಗುವ ಮುದ್ದುಮಗು ಇವೆಲ್ಲ ಮದುವಣಗಿತ್ತಿಯ ಪ್ರಶಸ್ತಿ ಪತ್ರಗಳು. ಇದರಿಂದ ಅವರಿಗೆ ಕೀರ್ತಿ ಅಮರ. ಶ್ರೀಮತಿಯ ಸಿರಿಮೊಗ ದರ್ಶನ ಬೆಳಗಿನ ಅರುಣೋದಯ. ಇವರ ಬಾಳಿಗೂ ಅರುಣೋದಯ. ಮಕ್ಕಳಿಂದ ಈ ದಾಂಪತ್ಯ ಸುಖಮಯ. ಆದರೆ ಯಜಮಾನಿ ಮನೆಗೂ ಯಜಮಾನಿ. ಮನೆಯವರಿಗೂ ಯಜಮಾನಿ.

ಗುರುವಿಗೆ ಶುಕ್ರ ವೈರಿ. ಕಾರಣ ಅವನ ದೆಶೆ ಇವನಿಂದ ಐದನೆಯದು. ಆದರೆ ಶುಕ್ರನಿಗೆ ಗುರು ವೈರಿಯಲ್ಲ. ಕಾರಣ ಇವನ ದೆಶೆ ಅವನಿಗೆ ಆರನೆಯದು. ಇದು ಏಕಮುಖಿ ವೈರ. ಶುಕ್ರನಿಗೆ ಈ ವೈರ ಮನೋಭಾವ ಗುರುವಿಗಿಲ್ಲ. ಶುಕ್ರ ಪ್ರೀತಿಯ ಮಡದಿಯ ಗೃಹ. ಇವಳಿಗೆ ಗಂಡನ ಗುರುಶನಿ ಗುಣ ಸೇರದು. ಅಕ್ಕರೆಯ ಮಾತು. ಆದರದ ನಡುವಳಿಕೆ. ಪ್ರೇಮದ ಬದುಕೆ ಇಷ್ಟು ಸಾಕು. ಆಗ ಆಕೆ ಇವರಿಗೆ ಚರಣದಾಸಿ. ಆದರೆ ಅದಿಲ್ಲ. ಏಷ್ಟೇ ಭಕ್ತಿ . ವೇದಾಂತ ನಿಷ್ಠೆ . ದಾನ ಇತ್ಯಾದಿಗಳು ಇರಲಿ. ಆಕೆಗ ಅವು ಅಸಾಧಾರಣೆಯ ಹೆಜ್ಜೆಗಳು. ಇದರಿಂದ ಅವರಿಗೆ ಇವರ ಮನೋಭಾವ ಹಿಡಿಸದು. ಅದರಲ್ಲಿಯೂ ಶುಕ್ರನ ಹಾನಿಕರ ಸಂಖ್ಯೆಯಾದ ಹನ್ನೊಂದನೆಯ ತಿಂಗಳ ಜನನದ ಹೆಣ್ಣು ಆದರಂತೂ ಸರಿಯೇ ಸರಿ. ಇವರ ಸಂಸಾರ ಹಿಂದಿಯ ಮೂವತ್ತಾರು ಆದೀತು. ಹಬ್ಬ ಹುಣ್ಣಿಮೆಗಳು ಬಂದರೆ ಇಬ್ಬರ ಮನೋಭಾವ ಸ್ಪಷ್ಟ. ಅನೇಕ ಕಾರಣಗಳು ಇನ್ನೂ ಇದ್ದಾವು. ಅಂತೂ ಹನ್ನೊಂದನೆಯ ತಿಂಗಳ ಹೆಣ್ಣು ಹತ್ತನೆಯ ತಿಂಗಳ ಗಂಡಿಗೆ ಸಲ್ಲದು.

ಹನ್ನೆರಡನೆಯದು ಡಿಸೆಂಬರ್. ಈ ತಿಂಗಳಿಗೆ ಶುಕ್ರ ಮಂಗಳ ಯೋಗ. ಈ ತಿಂಗಳ ಹೆಣ್ಣು ಅದೃಷ್ಟವಂತೆ ಎಂದು ಕೆಲವರ ನಂಬಿಕೆ. ಕಾರಣ ಇವರು ಮದುವೆಯಿಂದ ಸುಖಿಗಳು. ಪರಸ್ಪರ ಅನುರಾಗ ಆಕರ್ಷಣೆ ಬೇರೆ. ಹೆಣ್ಣು ಗಂಡಸಿಗೆ ಸ್ವರ್ಗವನ್ನು ಅಂಗೈಯಲ್ಲಿ ಕಾಣಿಸಿಯಾಳು. ಇದರಿಂದ ಗಂಡನ ಗುರು ಶನಿಯೋಗದ ನಿವೃತ್ತಿ. ಮನೋಗತಿಯೂ ಬದಲು. ಆದರೆ ಹೆಂಡತಿ ತವರಿಗೆ ಮರಳಿದಾಗ ಮಾತ್ರ ತನ್ನ ಹತ್ತು ಸಂಖ್ಯೆಯ ಗುರು ಶನಿಯೋಗದ ವೇದಾಂತ ಮನಸ್ಸು. ಮನೆಗೆ ಮರಳಿದಾಗ ಮತ್ತೆ ಆಕೆಯ ಸಖ್ಯದ ಬಯಕೆ. ಅಂತೂ ಈ ಹನ್ನೆರಡನೆಯ ತಿಂಗಳಿನಲ್ಲಿ ಹುಟ್ಟಿದ ಹೆಣ್ಣು ಯಾವ ತಿಂಗಳಿನಲ್ಲಿ ಹುಟ್ಟಿದ ಗಂಡಿಗೂ ಸರಿತೂಗಿ ಸುಖಿಯಾಗಿರ ಬಲ್ಲಳು ಎಂದು ಕೆಲವರ ಮತ. ಸ್ವಲ್ಪಮಟ್ಟಿಗೆ ಇದು ಸಾರ್ವತ್ರಿಕವಾಗಿ ನಿಜವೂ ಹೌದು.

ಮೊತ್ತದಲ್ಲಿ ಹತ್ತನೆಯ ತಿಂಗಳಾದ ಅಕ್ಟೋಬರ್ ತಿಂಗಳಲ್ಲಿ ಜನನದ ಗಂಡುಗಳಿಗೆ ಗುರು ಶನಿಯೋಗ. ಇದರಿಂದ ಮದುವೆಯ ಮುನ್ನ ಮದುವೆ ಎಂದರೆ ಇವರಿಗೆ ಬೇಡ. ಒಂದು ನಮೂನೆ ಆಶ್ರಮದ ಜೀವನ. ಮನಸ್ಸಿನ ಧ್ಯೇಯ ಇದ್ದೀತು. ಜೀವನದಲ್ಲಿ ಆಗಾಗ ಬಿದ್ದ ಪೆಟ್ಟುಗಳಿಂದ ಜಂಟಿ ಜೀವನಕ್ಕೆ ಧೈರ್ಯ ಬಾರದೆ ಇದ್ದೀತು. ವಿಚಿತ್ರ ಎಂದರೆ ಇವರಿಗೆ ಹೆಣ್ಣಿನ ಬಯಕೆ ಅಷ್ಟು ಬಲವಾಗಿ ಇರದು. ಬಲವಂತಕ್ಕೆ ಮದುವೆಯಾಗುವ ಮಂದಿ. ಮದುವೆಯ ನಂತರ ಹೆಣ್ಣಿನ ಬಯಕೆ. ಹೆಣ್ಣಿನ ಬಲವಂತಕ್ಕಾಗಿ. ಅನಂತರ ಅವರ ಸುಖಕ್ಕಾಗಿ. ಆದರೂ ಹೆಂಡತಿಯ ಸನಿಹ ಇಲ್ಲ. ಆಗ ಆಕೆ ದೂರ ಇರುವುದು ಲೇಸು. ಎನ್ನುವ ಮಂದಿ. ಹತ್ತಿರ ಬಂದರೆ ಬೇಡ ಎನ್ನುವವರೂ ಅಲ್ಲ. ಇದು ಒಂದು ನಮೂನೆ ಗಾಜಿನ ಚೂರು ಕೆಂಪು ಬಣ್ಣದ ಸನ್ನಿವೇಶದಲ್ಲಿ ಕೆಂಪಾಗಿ ಕಂಡಂತೆ.

## ಹನ್ನೊಂದನೆಯ ತಿಂಗಳ ಜನನದ ಫಲಂ

ಮಂದಿಯ ಜನನದ ಮಾಹಿತಿ ಎಂದರೆ ಹುಟ್ಟಿದ ದಿನಾಂಕ. ತಿಂಗಳ ಸಂಖ್ಯೆ ಮತ್ತು ವರ್ಷದ ಸಂಖ್ಯೆ. ದಿನಾಂಕ ಸಂಖ್ಯೆ ಗಂಡಿನ ಹುಟ್ಟು ಸ್ವಭಾವವನ್ನು ತೋರಿಸುತ್ತೆ. ತಿಂಗಳ ಸಂಖ್ಯೆ ಅವರು

ಮದುವೆಯಿಂದ ಬೇಕಾದ ಸುಖ ಅಥವಾ ಕಷ್ಟಗಳನ್ನು ತೋರಿಸುತ್ತೆ. ಈ ಕಾರಣ ಹನ್ನೊಂದನೆಯ ತಿಂಗಳು. ಅಂದರೆ ನವೆಂಬರ್ ತಿಂಗಳಿನಲ್ಲಿ ಜನಿಸದ ಗಂಡುಗಳಿಗೆ ಸಂಸಾರದಲ್ಲಿ ಅನುಕೂಲದ ಸಹಕಾರ. ಸಹಚರಿತ್ವ ನೀಡುವ ಹೆಣ್ಣು ಸಿಗುವುದು ದುರ್ಲಭ. ಕಾರಣ ಈ ನವೆಂಬರ್ ತಿಂಗಳಿಗೆ ಹನ್ನೊಂದು ಸಂಖ್ಯೆಯ ಶುಕ್ರ ಶನಿ ಯೋಗವಿದೆ. ಸುಖಕಾರಕ ಈ ಶುಕ್ರ. ಇವನಿಗೆ ಅದನ್ನು ತಣ್ಣಗಾಗಿಸುವ ಶನಿಯ ಕಲಬೆರಕೆ ಎಂದರ್ಥ.

ಸಂಸಾರ ನೀರಸ ಎಂದು ಈ ಮಂದಿಯ ನಿರ್ಣಯ. ಇದು ಜೀವನದ ಯಾವ ಹಂತದಲ್ಲಿ ಯಾದರೂ ಬರಬಹುದು. ಕಾರಣ ಇವರು ಸುಖಿಸಬೇಕು ಎಂದು ಹಠ ಮಾಡಿದರೂ ಸಹ ದೇವರು ಅದಕ್ಕೆ ಸರಿಯಾದ ಅವಕಾಶ, ಸನ್ನಿವೇಶಗಳನ್ನು ಕೊಡನು. ಇದಕ್ಕೆ ಏನು ಕಾರಣ? ಶನಿಯೇ ಕಾರಣ. ಅಂದರೆ ಶನಿಯ ತತ್ವಗಳು ಈ ಸರಸ ಸಂಸಾರದಲ್ಲಿ ಬೇಕಾದ ಸುಖ ಮೇಳಕ್ಕೆ ಅಡ್ಡಿ. ಶನಿಯ ತತ್ವಗಳು ಅಂದರೇನು? ಮೊದಲನೆಯದು ಕಾಲದ ಅಭಾವ. ಉದಾಹರಣೆಗೆ ಗೃಹಲಕ್ಷ್ಮೀ ಹೇಳಿದ ಯಾವುದೋ ಒಂದು ಬಯಕೆ. ಕೆಲಸ ಅಥವಾ ಸನಿಹ. ಗಂಡಿಗೆ ಅದನ್ನು ಈಡೇರಿಸಲು ಕಾಲದ ಆತಂಕ. ಆ ಕಾಲದಲ್ಲಿ ಇನ್ನೇನೋ ತಲೆ ಹೋಗುವ ಕೆಲಸ ಬಂದು. ಶ್ರೀಮತಿಗೆ ನಿರಾಸೆ, ಕಾಲಮಿತಿ ಕಳೆದ ಮೇಲೆ ಅದರ ಎರಡರಷ್ಟು ಮಾಡಿದರೂ ಅದರಿಂದ ತೃಪ್ತಿ ಆಗದು. ಸಹಜವಾಗಿ ಮೂಡಿದ ಬೇಸರವನ್ನು ಸರಿಪಡಿಸಿಕೊಂಡು ಆಕೆ ಬರುವ ಹೊತ್ತಿಗೆ ಇವರಿಗೆ ಬೇಸರದ ಪರಮಾವಧಿ. ಮೊತ್ತದಲ್ಲಿ ಗಂಡಸಿಗೆ ಹೆಂಡತಿಯ ಮೇಲೆ ಕೊನೆಗೆ ಬೇಸರ. ಅದರಿಂದ ಅಸಡ್ಡೆ. ಇನ್ನು ಸುಖವೆಲ್ಲಿ? ಇಲ್ಲಿ ಕಾಲದ ಒಡಂಬಡಿಕೆ ಇಲ್ಲದೇ ಈ ಶನಿ ಶುಕ್ರಯೋಗ ಫಲಕ್ಕೆ ಬರುತ್ತೆ.

ಇನ್ನು ಕೆಲವರಿಗೆ ಮತ್ತೊಂದು ನಮೂನೆ. ಈ ಮಂದಿಯ ಬಂಧುತ್ವದಲ್ಲಿ ಮದುವೆಗಳು ಆದರೆ ಅವರ ಸಂಸಾರ ಜೀವನ. ಅವರ ಕಷ್ಟ ಕಾರ್ಪಣ್ಯಗಳು ಇವರಿಗೆ ಮದುವೆಯ ಮೇಲೆಯೇ ಬೇಸರ ತರಿಸುತ್ತೆ. ಈ ಕಾರಣ ಇವರು ಮದುವೆ ಎಂದರೆ ಹೆದರಿಯುತ್ತಾರೆ. ಇದರಿಂದ ಅನೇಕರು ಮದುವೆಯೇ ಮಾಡಿಕೊಳ್ಳದೇ ಹೋದಾರು. ಹಾಗಿಲ್ಲ. ಒಂದು ಸಮಯ ಮದುವೆ ಯಾದರೂ ಯಾವುದೋ ವ್ಯವಹಾರದ ಕಾರಣ ಗಂಡು ಹೆಣ್ಣುಗಳಿಗೆ ಜಗಳ ಹತ್ತಿ ಇಬ್ಬರು ಬೇರೆ ಬೇರೆಯೇ ಜೀವನ ನಡೆಸಬಹುದು. ಇಲ್ಲಿಯೂ ಸಹ ಸಂಸಾರದಲ್ಲಿ ಗಂಡಿಗಾಗಲೀ ಹೆಣ್ಣಿಗಾಗಲೀ ಸುಖ ಇರದು.

ಶುಕ್ರ ಮದುವೆ ಗ್ರಹ. ಅವನು ತೋರಿಸುವ ಬಂಧು ಹೆಂಡತಿ. ಶುಕ್ರನಿಗೆ ಶನಿಯೋಗ ಆಗಿದೆ. ಇದು ಹನ್ನೊಂದು ಸಂಖ್ಯೆಯ ಫಲ. ಆಗ ಶುಕ್ರನಿಗೆ ಶನಿಯ ಪೀಡೆ. ಅಂದರೆ ಹೆಂಡತಿಗೆ ಶನಿಯ ಪೀಡೆ. ಅಂದರೆ ಯಾವಾಗ ಹೆಂಡತಿ ಬೇಕು ಎನ್ನಿಸುತ್ತೆ. ಆಗ ಅವರಿಗೆ ಮೈ ಸರಿ ಇರದು. ಹಾಗಿಲ್ಲ. ಬೇರೆ ಕಾಯಿಲೆಯವರು ಮನೆಯಲ್ಲಿದ್ದು ಅವರ ಶುಶ್ರೂಶೆಯಲ್ಲಿ ಮನೆಯಾಕಿಗೆ ಬಿಡುವು ಇರದು. ಒಂದಲ್ಲ ಒಂದು ನಮೂನೆ ಶನಿಯ ರೋಗತತ್ವ ಸುಖಕ್ಕೆ ಅಡ್ಡಿ. ಇದರಿಂದ ಪತಿರಾಯನಿಗೆ ಮನೆಯಾಕೆಯ ಮೇಲೆ ಬೇಸರ.

ಕೆಲವು ಸಲ ಶಕ್ರುನಿಗೆ ಶನಿ ಫಲ. ಅಂದರೆ ಮನೆಯಾಕೆ ಸೇವಕಿಯಂತೆ ದುಡಿಯುವುದು. ವಸ್ತ್ರಾಲಂಕಾರ ಅವರಿಗೆ ಬೇಡ. ಆಕರ್ಷಕ ಉಡುಗೆ ತೊಡುಗೆಗಳಲ್ಲಿ ಅನಾಸಕ್ತಿ. ಇದರಿಂದ ಪತಿಗೆ

ಅಸಮಾಧಾನ. ಮತ್ತೆ ಅಪರೂಪದ ಸಂದರ್ಭಗಳಲ್ಲಿ ಸೇವಕಿ ಶನಿ. ಇವಳಿಗೆ ಶುಕ್ರ ಯೋಗ ಬಂದು ಪತಿರಾಯನಿಗೆ ಸೇವಕಿಯ ಮೇಲೆ ಬಯಕೆ ಆದೀತು. ಆದರೆ ಅನೇಕರು ಗೌರವದ ಕಾರಣ ಈ ಸುಪ್ತ ಬಯಕೆಯನ್ನು ತಡೆ ಹಿಡಿದಿಟ್ಟಾರು. ಮತ್ತೆ ಕೆಲವರು ಮನೆಗೆ ಮಾರಿ ಪರರಿಗೆ ಉಪಕಾರಿ ಎನ್ನುವಂತೆ ಮನೆಗೆ ಬಂದವರ ಮೇಲೆ ಪ್ರೀತಿ. ಮನೆಯಾಕೆಗೆ ಅನಾದಾರಣೆ. ಈ ಶನಿಯ ಪ್ರಭಾವ ನಾನಾ ನಮೂನೆ. ಇದರಿಂದ ಸುಖದ ಸಂಸಾರ ಇವರಿಗೆ ಅಭಾವ.

ಅತ್ಯಂತ ಪ್ರೀತಿ ಮಾಡುವ ದಂಪತಿಗಳು. ಆದರೆ ಗಂಡು ನವೆಂಬರ್ ತಿಂಗಳಿನ ಜನನ. ಆಗ ಮದುವೆಯಾದ ಕೆಲವೇ ವರುಷಗಳಲ್ಲಿ ಗಂಡು ತೀರಿ ಕೊಂಡು ಸಂಸಾರದಲ್ಲಿ ಸುಖ ಹಿಂಗೀತು. ಇಲ್ಲಿ ಶನಿ ಮೃತ್ಯುವಾಗಿ ಸುಖಕ್ಕೆ ಅಡ್ಡಿ. ಶನಿಗೆ ಬಲ ಇದ್ದರೆ ಮದುವೆಯೇ ಆಗದು. ಶನಿಗೆ ಬಲ ಅತ್ಯಂತ ಕಡಿಮೆ. ಆಗ ವಯಸ್ಸಾದ ಮೇಲೆ ಹೆಂಡತಿಗೆ ಮೃತ್ಯು. ಮಧ್ಯ ಬಲ. ಆಗ ಮಧ್ಯ ವಯಸ್ಸಿನಲ್ಲಿ ಸತಿಯ ವಿಯೋಗ. ಕೆಲವರು ಮತದಂತೆ ನವೆಂಬರ್ ತಿಂಗಳಿನ ಹೆಣ್ಣಿಗೆ ಗಂಡನ ವಿಯೋಗ ಆಗುತ್ತೆ.

ಇನ್ನು ಕೆಲವು ಸಂದರ್ಭಗಳಲ್ಲಿ ಹೆಣ್ಣು ಕೆಲಸದ ಹುಡುಗಿ. ಅಂದರೆ ಯಂತ್ರಾಲಯಗಳಲ್ಲಿ ದುಡಿಯುವಾಕೆ. ಈ ಕಾರಣ ಕಾರ್ಯಗೌರವದಿಂದ ಅನೇಕ ಸಲ ಸತಿಪತಿಗಳಿಗೆ ಸನಿಹ ಸಿಗದು. ಇಲ್ಲಿ ಶನಿ ಭಾರ ಹೊರುವ ತತ್ವ. ಅಂದರೆ ಜವಾಬ್ದಾರಿ ಸಂಸಾರ ಸುಖಕ್ಕೆ ಅಡ್ಡಿ. ಸಂಸಾರದ ಭಾರ ಹೊತ್ತರೆ ಆಗ ಅವಳು ಭಾರ್ಯೆ. ಕೆಲಸದ ಭಾರ ಹೊತ್ತರೆ ಈ ಜವಾಬ್ದಾರಿಗೆ ಊನ. ಮೂರನೆಯದು ಕಾಲಾಂತರದ ಮದುವೆ. ಅಂದರೆ ಮದುವೆ ಕಾಲದಲ್ಲಿ ಮದುವೆ ಆಗದೆ ವಯಸ್ಸಾದ ಮೇಲೆ. ಮದುವೆ. ಆಗ ಹಿತಮಿತದ ಒಡಂಬಡಿಕೆ. ಆಗ ಮದುವೆ ಪರಸ್ಪರ ಅನುಕೂಲಕ್ಕಾಗಿ. ಸುಖದ ಜೀವನಕ್ಕಾಗಿ ಅಲ್ಲ. ಹೀಗೆ ಶನಿಯ ಕಾರಣ ಈ ನವೆಂಬರ್ ತಿಂಗಳ ಜನನದ ಗಂಡುಗಳಿಗೆ ಸಂಸಾರ ಜೀವನ ಒಂದಲ್ಲ ಒಂದು ಕಾರಣದಿಂದ ಬೇಸರದ್ದು. ನವೆಂಬರ್ ತಿಂಗಳಿನ ಜನನದಲ್ಲಿ ಪಂಡಿತ ನೆಹರೂ. ಶ್ರೀಮತಿ ಇಂದಿರಾಗಾಂಧೀ ಎಲ್ಲರಿಗೂ ತಿಳಿದವರು. ಇವರಿಗೆ ದೇಶಸೇವೆ ಮಾಡಲು ಹೆಚ್ಚಿನ ಅವಕಾಶ ಇತ್ತು. ಆದರೆ ಮನೆಯಾಕೆಯ ಸುಖ ಸಖ್ಯಗಳಿಗೆ ಅವಕಾಶ ಕಡಿಮೆ. ಹಾಗೆಯೇ ಅವರ ಪುತ್ರಿಕಾ ರತ್ನ. ಆದರೆ ಎಲ್ಲರಿಗೂ ಆ ಛಾತಿ ಬೇಕಲ್ಲ? ಈ ಮಂದಿಯ ಸಂಸಾರ ನೆಟ್ಟಗಿರಲು ಈ ಸುಖಕ್ಕೆ ಮೂಲಕಾರಣಗಳಾದ ಮಡದಿಗೆ ಈ ಶುಕ್ರನ ಹಾನಿ ತಟ್ಟದಂತೆ ಇರಬೇಕು. ಅಂದರೆ ಈ ಹಾನಿ ಇಲ್ಲದಿರುವ ತಿಂಗಳಿನ ಹೆಣ್ಣಾಗಬೇಕು. ಶುಕ್ರನಿಗೆ ಸಂಬಂಧಿಸಿದ ಈ ದೋಷ ಇಲ್ಲದ ತಿಂಗಳು ಅಂದರೆ ಹನ್ನೆರಡನೆಯದಾದ ಡಿಸೆಂಬರ್ ತಿಂಗಳು. ಇಲ್ಲಿ ಶುಕ್ರನಿಗೆ ಕುಜನ ಯೋಗವಿದ್ದು ಶುಕ್ರ ಶನಿಯೋಗದ ಅವಗುಣಗಳನ್ನು ತೀಡಿ ಸರಿಪಡಿಸುತ್ತದೆ. ಈ ಕಾರಣ ಹನ್ನೊಂದನೆಯ ತಿಂಗಳ ಜನನದ ಗಂಡಿಗೆ ಡಿಸೆಂಬರ್ ತಿಂಗಳ ಹೆಣ್ಣು ಸೂಕ್ತ. ವಿರಾಗಿಯಾಗಿ ನಿಂತ ವಿಶ್ವಾಮಿತ್ರನಿಗೆ ಮೇನಕೆಯಿಂದ ಕಾಮ ಸಂಚಲನವಾದಂತೆ ಹನ್ನೊಂದನೆಯ ವಿರಾಗಿಗೆ ಹನ್ನೆರಡನೆಯ ತಿಂಗಳ ಹೆಣ್ಣು. ಭೋಗದ ಸವಿ ತೋರಿಸಿಯಾಳು.

ಶುಕ್ರನಿಗೆ ಶತ್ರುವಾದ ಗುರುವಿನ ಸಂಖ್ಯೆ ಐದು. ಈ ಐದನೆಯ ತಿಂಗಳಾದ ಮೇನಲ್ಲಿ ಹುಟ್ಟಿದ ಹೆಣ್ಣು ಈ ದೋಷವನ್ನು ನೀಗಿ ಸುಖವನ್ನು ಕೊಡುತ್ತಾಳೆ. ಗುರು ಸಂತಾನಕಾರಕ. ವಿದ್ಯಾಕಾರಕ. ಸುಗುಣಗಳಾದ ಮಕ್ಕಳನ್ನು ಕೊಟ್ಟು ಸಂಸಾರವನ್ನು ಉದ್ಧಾರ ಮಾಡಿಯಾಳು.

ಅಲ್ಲದೆ ವಿದ್ಯಾವಂತೆಯಾಗಿ ಪತಿರಾಯನಿಗೆ ಸಮ ಸಮ ಹೊಂದಿಕೊಂಡು ಉತ್ತಮ ಸಖಿಯಾಗುತ್ತಾಳೆ. ಅವರಿಗೆ ಬೇಸರ ಬರದಂತೆ ನಡೆದುಕೊಳ್ಳುತ್ತಾಳೆ. ಈ ಕಾರಣ ನವೆಂಬರ್ ತಿಂಗಳಿನ ಗಂಡಿಗೆ ಮೇ ತಿಂಗಳ ಹೆಣ್ಣು ಸರಿ ಜೋಡಿ ಅಂದರು. ಅಲ್ಲದೆ ಮತ್ತೊಂದು ಕಾರಣ. ಹನ್ನೊಂದನೆಯ ಸಂಖ್ಯೆಗೆ ಶುಕ್ರನು ಕೆಟ್ಟು ಗುರು ಬಲಯುತನಾಗಿರುತ್ತಾನೆ. ಇನ್ನು ಹೆಂಡತಿಯೂ ಸಹ ಗುರುವಿನ ಸಂಖ್ಯೆಯ ತಿಂಗಳಿನವಳಾದರೆ ಆ ಬಲ ಇನ್ನೂ ಪುಷ್ಟಿಯನ್ನು ಹೊಂದುತ್ತೆ.

ಸೂರ್ಯನ ಸಂಖ್ಯೆ ಒಂಭತ್ತು. ಈ ಸಂಖ್ಯೆಯ ತಿಂಗಳಾದ ಸೆಪ್ಟೆಂಬರ್‌ನಲ್ಲಿ ಹುಟ್ಟಿದ ಹೆಣ್ಣು ಸೂರ್ಯನ ಗುಣಗಳಿಂದ ಕೂಡಿರುತ್ತಾರೆ. ಸೂರ್ಯನೂ ಸಹ ಶುಕ್ರನಿಗೆ ಶತ್ರು. ಆದರೆ ಇಲ್ಲಿ ಹೆಣ್ಣು ಧೋರಣೆಯ ಸ್ವಭಾವದಾಕೆ. ಅಲ್ಲದೆ ತನ್ನ ಹಾದಿಯಿಂದ ಬೇರೆ ಹೆಜ್ಜೆ ಇಡಲೂ ಸಹ ಪತಿಯನ್ನು ಬಿಡಳು. ಈ ಕಾರಣ ಮೂಗುದಾರ ಹಾಕಿದ ಪ್ರಾಣಿಯಂತೆ ಗಂಡು ಹೆಣ್ಣಿನ ಪಥದಲ್ಲಿ ನಡೆಯುತ್ತದೆ. ಇಲ್ಲಿ ಗಂಡಿನ ಶುಕ್ರ ಅರಿಷ್ಟದ ಫಲ ಸಂಪೂರ್ಣ ನಾಪತ್ತೆ. ಕಾರಣ ಹೆಂಡತಿಯ ಪ್ರಭಾವ ಆ ನಮೂನೆ.

ಹನ್ನೊಂದನೆಯ ತಿಂಗಳಿನ ಗಂಡಿಗೆ ಶುಕ್ರನ ದೋಷ. ಅಂದರೆ ಹೆಂಡತಿಯ ಮೇಲೆ ಅಷ್ಟು ಆಸಕ್ತಿ ಇಲ್ಲದಿರುವುದು. ಕೆಲವು ಸಲ ಈ ದೋಷ ಮತ್ತೊಂದು ದೋಷದಿಂದ ಪರಿಹಾರ. ಉದಾಹರಣೆಗೆ ಸಂಖ್ಯೆ ಎಂಟು. ಇದಕ್ಕೆ ಬುಧ ಶನಿ ಯೋಗ. ಇಲ್ಲಿ ಬುಧನ ದೋಷ, ಅಂದರೆ ಮಂಕುಬುದ್ಧಿ. ಆದರೆ ಸೇವಾಮನೋಭಾವ. ಅದೇಕೆ ಇದು ಹೇಗೆ ಎನ್ನುವ ಮನೋಭಾವ ಇಲ್ಲದ್ದು. ತನಗೆ ಬುದ್ಧಿ ಇದ್ದರೂ ಅದನ್ನು ತೋರಗೊಡರು. ಪತಿಯೇ ಎಲ್ಲರಲ್ಲಿ ಬುದ್ಧಿವಂತ ಎಂದು ಅವರ ಮನಸ್ಸಿಗೆ ಬರುವಂತೆ ಮಾತಾಡುವುದು. ಇದು ಅವರಿಗೆ ಇಷ್ಟ. ಅಲ್ಲದೆ ಕೆಲವರಿಗೆ ಪತಿ ಬಂದಾಗ ಬುದ್ಧಿಯೇ ಓಡದಂತೆ ಆಗಿ ಸುಮ್ಮನೆ ಅವರ ಮುಖ ನೋಡುತ್ತಾ ಕುಳಿತಾರು. ಇದೂ ಕೂಡ ಪತಿಗೆ ಒಂದು ಹರ್ಷವೇ ಸರಿ. ಅನುಕಂಪ ಪ್ರೀತಿಗೆ ಮೂಲ ಆಧಾರ ವಾಗಿ ದಾಂಪತ್ಯ ಸುಖದ ಹಾದಿಯಲ್ಲಿ ಸಾಗುತ್ತೆ.

ಮಾರ್ಚ್ ತಿಂಗಳಿನ ಹೆಣ್ಣುಗಳು ಈ ಹನ್ನೊಂದನೆಯ ತಿಂಗಳಿನ ಗಂಡಿಗೆ ಸರಿ ಹೊಂದರು. ಉದಾಹರಣೆಗೆ ಮೂರು ಸಂಖ್ಯೆಗೆ ಕುಜ ಶನಿಯೋಗ. ಇದು ಗಂಡನ ಮೇಲುಗೈ ಒಪ್ಪಿ ಕೊಳ್ಳದ ಕುಜಶನಿ ಯೋಗ. ಹೆಂಡತಿಯ ಸನಿಹ ಪ್ರಭಾವ ಬೀರದ ಗಂಡಿಗೆ ಇನ್ನು ಈ ಹೆಣ್ಣು ಸುಖ ತಾನೇ ಏನು ಕೊಟ್ಟಾಳು? ಇವರನ್ನು ಅವರು ನಿಂದೆ ಮಾಡುವುದು, ಇಲ್ಲ, ಅವರನ್ನು ಇವರು ಹೀಯಾಳಿಸುವುದು. ಹೀಗಾಗಿ ದಾಂಪತ್ಯ ವಿರಸ ಗೊಂದಲಗಳಿಂದ ದುಃಖ ಮಯವಾದೀತು. ಆದರೆ ಆರನೆಯ ತಿಂಗಳ ಹೆಣ್ಣು ಇದಕ್ಕಿಂತ ಸ್ವಲ್ಪ ವಾಸಿ. ಕಾರಣ ಆರನೆಯ ಸಂಖ್ಯೆಗೆ ಕುಜಶುಕ್ರ ಯೋಗ. ಇಲ್ಲಿ ಮದುವೆಗೆ ಮುಂಚೆ ನಿರಾಸೆ ಹೊಂದಿದ್ದ ಹೆಣ್ಣು ತಾನು ಸುಖವಾಗಿರಬೇಕು ಎಂಬ ಹಠದಿಂದ ಪತಿಯನ್ನು ತಿದ್ದಿ ತಾನೂ ಸುಖ ವಾಗಿರುತ್ತಾಳೆ.

ಕೇವಲ ಮಾನಸಿಕ ಜೀವಿಯಾದ ನಾಲ್ಕನೆಯ ತಿಂಗಳ ಹೆಣ್ಣು ಈ ಹನ್ನೊಂದನೆಯ ತಿಂಗಳ ಗಂಡು ತೋರಿಸುವ ನಿರಾಶಾದಾಯಕ ಧೋರಣೆಯಿಂದ ಬೇಸರ ಬಿದ್ದು ಸಂಸಾರ ಸಾಗದು. ಇನ್ನೂ ಹಲವು ಸನ್ನಿವೇಶಗಳಲ್ಲಿ ಗರ್ಭಧಾರೆ ಪ್ರಸೂತಿ ಕಾಲಗಳಲ್ಲಿ ಬುದ್ಧಿ

ಪ್ರೇಮಯೂ ಹೆಣ್ಣಿಗೆ ಆಗುವುದು ಸಹಜ. ಈ ಕಾರಣ ಏಪ್ರಿಲ್ ತಿಂಗಳಿನ ಹೆಣ್ಣಿಗೆ ನಿರಾಸೆಯ ಜೀವನದ ಕಾರಣ ನವೆಂಬರ್ ತಿಂಗಳ ಗಂಡಿಗೆ ಸರಿಹೊಂದದು.

ಬುದ್ಧಿ ಚಾತುರ್ಯ ಮೃದು ಮಧುರ ಮಾತು. ನೆರಹೊರೆಯಲ್ಲಿ ಆತ್ಮೀಯತೆ ಇತ್ಯಾದಿ ಸುಗುಣಗಳು ಹೆಣ್ಣಿಗೆ ಭೂಷಣ. ಇವು ಎರಡನೆಯ ಸಂಖ್ಯೆಯ ಶೀಲವಾಗಿ ಆ ತಿಂಗಳಿನಲ್ಲಿ ಹುಟ್ಟಿದ ಹೆಣ್ಣಿಗೆ ಯಾವ ತಿಂಗಳ ಗಂಡನ ಜೋಡಿಯಾದರೂ ಸುಖ ಸಂಸಾರ ಮಾಡಬಲ್ಲಳು. ತನ್ನ ಚಾಟು ಚತುರೋಕ್ತಿಗಳಿಂದ ವಿರಾಗಿಯಾದ ಗಂಡನನ್ನೂ ಸಹ ತನ್ನತ್ತ ಒಲಿಸಿಕೊಂಡು ಸ್ವರ್ಗಲೋಕವನ್ನು ಭೂಮಿಯ ಮೇಲೆ ತೋರಿಸಿಯಾಳು. ನವೆಂಬರ್ ತಿಂಗಳ ಗಂಡಿಗೆ ಹನ್ನೊಂದು ಸಂಖ್ಯೆಯ ಶುಕ್ರ ಶನಿಯೋಗ. ಇನ್ನು ಇದು ಏಳು ಸಂಖ್ಯೆಯ ಜುಲೈ ತಿಂಗಳ ಹೆಣ್ಣು ವಧು ಆಗಿದೆ. ಆಗ ರಾಹು ಗಂಡಿನ ಶುಕ್ರ ಶನಿಯೋಗವನ್ನು ತೀವ್ರ ಮಾಡುತ್ತಾನೆ. ಆಗ ಶುಕ್ರನಿಗೆ ಶನಿರಾಹು ಯೋಗ ಆಗುತ್ತೆ. ಇದು ಶುಕ್ರನಿಗೆ ಮೃತ್ಯುಯೋಗ. ಇದರಿಂದ ಮೊದಲು ಮದುವೆಯಾದ ಈ ಹೆಣ್ಣಿಗೆ ಸಾವಿನ ಯೋಗ. ಇದು ದ್ವಿಕಳತ್ರಯೋಗ ಅಂದರು. ಆದರೆ ಗಂಡಾಗಲೀ ಹೆಣ್ಣಾಗಲೀ ವೈದ್ಯವೃತ್ತಿಯವರಾದರೆ ಆಗ ಈ ಯೋಗ ತಪ್ಪಿ ದಾಂಪತ್ಯ ಸುಖಮಯ. ಅಲ್ಲದೆ ಈ ಶುಕ್ರನ ದೋಷದಿಂದ ಹೆಂಡತಿ ತನ್ನ ಜಾತಿಯಲ್ಲದೆ ಬೇರೆ ಜಾತಿಯವಳಾದರೂ ಆದೀತು. ಹಾಗೆಯೇ ಜನವರಿ ತಿಂಗಳ ಹೆಣ್ಣಿಗೆ ಶನಿ ಯೋಗವಿದ್ದು ಹನ್ನೊಂದನೆಯ ಸಂಖ್ಯೆಯ ಶುಕ್ರ ಶನಿಯೋಗಕ್ಕೆ ಯಾವ ಬದಲಾವಣೆಯನ್ನೂ ಮಾಡದು. ಕಾರಣ ಶನಿ ಎರಡು ತಿಂಗಳುಗಳ ಸಂಖ್ಯೆಗೂ ಸೇರಿರುತ್ತಾನೆ.

ಮೊತ್ತದಲ್ಲಿ ನವೆಂಬರ್ ತಿಂಗಳು ಹುಟ್ಟಿದ ಗಂಡು ಆಸಕ್ತಿಯಿಂದ ಸಂಸಾರ ಮಾಡುವ ಮಂದಿಯಲ್ಲಿ. ಬಲಿಷ್ಠ ಆಕರ್ಷಣೆಗಳಿಂದ ಕೂಡಿದ ಹೆಣ್ಣು ಸನಿಹದಲ್ಲಿ ಮಾತ್ರ ಆ ಕಡೆ ಗಮನ. ಆ ಪ್ರಭಾವ ದೂರ ಸರಿದರೆ ಇವರು ಮೊದಲಿನಂತೆಯೇ ಸರಿ. ಈ ಕಾರಣ ಇದನ್ನು ವೇದಾಂತದ ಅರಿವಿನ ಸಂಖ್ಯೆ ಅಂದರು. ಹಿಂದಿನ ಕಾಲದ ಬರಹಗಳಾದ ಪುರಾಣಗಳಲ್ಲಿ ಈ ಸಂಖ್ಯೆಯ ಅಧ್ಯಾಯಗಳು ವೇದಾಂತದ ವಿಷಯದ ವಿಮರ್ಶೆಗೆ ಮೀಸಲು. ಇದು ಯತಿಗಳ ಸಂಖ್ಯೆ. ಆದರೆ ಇಲ್ಲಿ ಕುಜಶನಿ ಯೋಗದಂತೆ ಅಮಂಗಳ ಯೋಗದಿಂದ ಬರುವ ಸನ್ಯಾಸವಲ್ಲ. ಇದು ಒಂದಲ್ಲ ಒಂದು ನಮೂನೆ ಹೆಣ್ಣಿನ ಪ್ರಭಾವಕ್ಕೆ ಗುರಿಯಾಗಿ ಅದರ ಅನುಭವದಿಂದ ಬೇಸರ ಬಂದು ವಿರಾಗತಾಳುವುದು. ಇವರಿಗೆ ಜೀವನದಲ್ಲಿ ಬೇರೆಯವರ ಪ್ರಭಾವದಿಂದ ಸಂಸಾರಿಗಳಾದರೂ ಕೊನೆಗೆ ವೃದ್ಧಾಪ್ಯದಲ್ಲಿ ಕೇಳಿದರೆ ಮದುವೆ ಇಲ್ಲದಿದ್ದರೇನೇ ಚೆನ್ನಿತ್ತು ಎಂದಾರು.

ಎರಡನೆಯದಾಗಿ ಸ್ತ್ರೀ ಸಂಬಂಧ ಇವರಿಗೆ ಬೇಡ. ಇದರಿಂದ ಇವರಿಗೆ ಮಾಯೆಯ ಪ್ರಭಾವ ಕಡಿಮೆ. ಇದರಿಂದ ಇವರಿಗೆ ದೇವತಾ ಶ್ರದ್ಧೆ ಹೆಚ್ಚು. ವಿಷಯ ವಿಮರ್ಶೆ, ಆಳದ ಅರಿವುಗಳೂ ಸುಗಮ. ಗುರು ಪ್ರೀತಿ ಇವರಿಗೆ ಮೂಲ. ಆದರೆ ಜೀವನದ ಅರ್ಧ ಭಾಗ ಕಷ್ಟ. ಯತಿಸೇವೆಯಿಂದ ಗುರು ಒಲಿದು ಉತ್ತರಾರ್ಧ ಜೀವನದಲ್ಲಿ ಸಾರ್ಥಕ ಕೆಲಸಗಳನ್ನು ಮಾಡಿ ಇವರು ಧನ್ಯರು.

# ಹನ್ನೆರಡನೆಯ ತಿಂಗಳ ಜನನದ ಸಂಸಾರ ಫಲ

ಗಂಡಿನ ಜನನ ತಿಂಗಳು ಡಿಸೆಂಬರ್. ಇದು ಹನ್ನೆರಡನೆಯ ತಿಂಗಳು. ಈ ಸಂಖ್ಯೆಗೆ ಶುಕ್ರ ಮಂಗಳ ಯೋಗ. ಇದು ಭೋಗ ಭಾಗ್ಯಗಳ ಯೋಗ. ಈ ಮಂದಿ ಮದುವೆ ಆಗುವುದು ಸುಖಿ ಬೀಳಬೇಕು ಎಂದು. ಕಾಮಲಾಲಸೆ. ವಾಹನ ಇತ್ಯಾದಿ ಸಂಪತ್ತು ಸೂಚಕ ಸೌಲಭ್ಯಗಳು ಬೇರೆ. ಶುಕ್ರನು ಇವರಿಗೆ ಶುಭದಾತನು. ಈ ಕಾರಣ ಮದುವೆಯ ನಂತರ ಸುಯೋಗ ಪ್ರಾಪ್ತಿ. ಶಕ್ತಿಯುತ ಸಮರಸ ದಾಂಪತ್ಯ ಇವರ ಬಯಕೆ. ಎಡಬಿಡದ ಅನುರಾಗಮಯಿ ಪತ್ನಿ ಇವರ ಸಂಸಾರದ ಮೂಲ. ಕೆಲವರ ಮತದಂತೆ ಇವರದು ಅತಿರೇಕ ಬಯಕೆ. ಇದರಿಂದ ಪತ್ನಿಗೆ ಪತಿರಾಯನಲ್ಲಿ ಅಸಮಾಧಾನ. ಕಾಣದ ಹೆಣ್ಣಿನ ಬಲೆಯ ಕಲ್ಪನೆ ಬೇರೆ. ವೃಥಾ ಅಸೂಯೆ. ಸಂಶಯಗಳಿಂದ ಸಂಸಾರದಲ್ಲಿ ಕಡಿಮೆ. ಪತಿರಾಯನಿಗೆ ಹೇಳದಷ್ಟು ಬೇಸರ.

ಹನ್ನೆರಡನೆಯ ಸಂಖ್ಯೆಗೆ ಶುಕ್ರ ಮಂಗಳ ಯೋಗ. ಇದಕ್ಕೆ ತಾಗಿದಂತೆ ಯಾವಾಗಲೂ ಹನ್ನೊಂದು ಸಂಖ್ಯೆಯ ಶುಕ್ರ ಶನಿ ಯೋಗದವರು ಇವರ ಮನೆಯಲ್ಲಿ ಇರುತ್ತಾರೆ. ಆಗಲೇ ಇವರಿಗೆ ಆ ಶುಕ್ರ ಶನಿಯೋಗದ ವೇಧೆ ಇರದು. ಹಾಗಿಲ್ಲ. ಆ ವೇಧೆಯಿಂದ ಸಂಸಾರದಲ್ಲಿ ಸ್ತ್ರೀ ಎಂದರೆ ಲಕ್ಷ್ಯ ಇಲ್ಲದ ಹಾಗೆ ಆಗುತ್ತೆ. ಶುಕ್ರ- ಶನಿ ಯೋಗದ ಮಂದಿ ಅಂದರೆ ಮದುವೆ ಆಗದ ಹೆಣ್ಣು ಸಂಬಂಧಿಗಳು. ಹಾಗಿಲ್ಲ ಮದುವೆಯಾದ ಮೇಲೆ ಕಷ್ಟ ಬೀಳುವ ಮಂದಿ. ಈ ಕಾರಣ ಶುಕ್ರ ಮಂಗಳ ಯೋಗದ ಹನ್ನೆರಡನೆಯ ಸಂಖ್ಯೆಗೆ ಈ ಅವಯೋಗದ ಮಂದಿ ಇಲ್ಲದೇ ಹೋದರೆ ಇವರಿಗೇ ಆ ಯೋಗ ನಡೆದೀತು. ಇದರಿಂದ ತಾನು ಬಿಡಲ್ಪಟ್ಟನೇನೋ ಅನ್ನುವ ಸಂಶಯ ಮನೆಯಾಕೆಗೆ ಬಂದೀತು. ಈ ದೋಷ ಶಮನಕ್ಕಾಗಿ ಆಕೆ ಶುಕ್ರವಾರಗಳಲ್ಲಿ ಐದು ಜನ ಮುತ್ತೈದೆಯರನ್ನು ಕರೆದು ಉಪಚರಿಸಿ ಪಾನಕ ಪನಿಹಾರಗಳನ್ನು ಕೊಟ್ಟು ಲಕ್ಷ್ಮೀಪೂಜೆಯನ್ನು ಮಾಡುವುದು ಲೇಸು. ಇನ್ನು ಕೆಲವರು ಮದುವೆ ಮಾಡಿಸುವ ಕಾಲದಲ್ಲಿ ಇದನ್ನು ಮಾಡುತ್ತಾರೆ. ಇದನ್ನು ಹೂವೀಳಯ ಎಂದರು.

ಈ ಮಂದಿಗೆ ಮದುವೆಯ ನಂತರ ಸುಯೋಗ. ಸಿರಿ ಸಂಪತ್ತುಗಳೂ ಕೈಸೇರುವವು. ವಾಹನಾದಿಗಳಿಂದ ಅದೃಷ್ಟ ಬೇರೆ. ಪರಸ್ಪರ ಅನುರಾಗದಿಂದ ವಿವಾಹ ಕೆಲವರಿಗೆ ಆದೀತು. ಮದುವೆಯಾದ ಹನ್ನೆರಡು ವರುಷಗಳ ಕಾಲ ದಾಂಪತ್ಯ ಸುಖಮಯ. ಹನ್ನೊಂದು ಸಂಖ್ಯೆಯ ವೇಧೆ ತಪ್ಪಿಸಲು ಇವರು ಒಟ್ಟು ಸಂಸಾರದಲ್ಲಿರುವುದು ಲೇಸು ಅಂದರು. ಹನ್ನೆರಡು ಸಂಖ್ಯೆಯ ತಿಂಗಳಿನ ಜನನದ ಗಂಡುಗಳಿಗೆ ಅದೇ ತಿಂಗಳ ಜನನದ ಹೆಣ್ಣು ಶುಭ. ಒಂದೇ ನಮೂನೆಯ ಮನೋಭಾವ. ನಿರೀಕ್ಷೆಗೆ ಅನುಗುಣವಾದ ನಡುವಳಿಕೆಯಿಂದ ಸಂಸಾರ ಸುಖಮಯ. ಗುಣದೋಷಗಳೂ ಸಮಾನ. ಗಾಢವಾದ ಪ್ರೇಮದ ಜೀವನ ಮತ್ತು ಅದಕ್ಕೆ ಅಂಟಿ ಬಂದ ಅಸೂಯೆ ಎಲ್ಲವೂ ರಸಮಯ ಜೀವನದ ಅಂಗಗಳೇ ಅಂದರೆ ತಪ್ಪಾಗದು. ಮದುವೆಗೆ ಮುನ್ನ ಹೇಗೇ ಇರಲಿ ಮದುವೆಯಾದ ಮೇಲೆ ಇಬ್ಬರಿಗೂ ಸುಯೋಗ ಅಂದರು. ಶುಕ್ರ ಮಂಗಳ ಯೋಗದ ದೆಸೆಯಿಂದ ಗುರು ದೋಷ ಉಂಟಾಗಿ ಅನೇಕ ವೇಳೆ ಮಕ್ಕಳು ಆಗುವುದು ಕಷ್ಟ. ವಯಸ್ಸಾದ ಮೇಲೆ ಇದರಿಂದ ಮನೋವ್ಯಥೆ. ಇದನ್ನು ಬಿಟ್ಟರೆ ಉಳಿದಂತೆ ಸಂಸಾರ ಸುಖಮಯ.

ಹನ್ನೊಂದನೆಯ ತಿಂಗಳಿನ ಹೆಣ್ಣು ಡಿಸೆಂಬರ್ ತಿಂಗಳಿನ ಗಂಡುಗಳಿಗೆ ಅನುಕೂಲ. ಹೆಣ್ಣು ಮೊದಮೊದಲು ತನ್ನ ಶುಕ್ರ ಶನಿ ಯೋಗದ ದೆಸೆಯಿಂದ ನಿರುತ್ಸಾಹಿ. ಆದರೆ ಗಂಡಿನ ಒತ್ತಾಸೆಯಿಂದ ಮತ್ತು ಹೆಣ್ಣಿನ ಸ್ವಭಾವಜನ್ಯ ಬಯಕೆಗಳ ಪೂರೈಕೆಗಳಿಂದ ಹೆಣ್ಣಿಗೆ ಬರಬರುತ್ತಾ ಸಂಸಾರದಲ್ಲಿ ಆಸೆ ಆಕಾಂಕ್ಷೆಗಳು ಉದಯವಾಗಿ ಯೋಗ ನಡೆದೀತು. ಈ ಯೋಗದಲ್ಲಿ ಹೆಣ್ಣು ಎರಡನೆಯ ಸಂಬಂಧದವಳಿದ್ದೀತು. ಕಾರಣ ಶುಕ್ರಶನಿ ಯೋಗದ ದೆಸೆಯಿಂದ ಮೊದಲನೆಯ ಹೆಣ್ಣು ಗಂಡಿಗೆ ಅಲ್ಪಾಯು. ಹಾಗಿಲ್ಲ. ಹೆಣ್ಣಿಗೆ ಬಾಲ್ಯದಲ್ಲಿ ನಿರಾಸೆಯಾಗಿ ವಯಸ್ಸು ಕಳೆದ ಮೇಲೆ ಬಲವಂತವಾಗಿ ಆಗುವ ವಿವಾಹ ಇದ್ದೀತು. ಅಂತೂ ಈ ಹೆಣ್ಣಿಗೆ ಈ ಸಂಬಂಧದಿಂದ ನಿರಾಸೆ ನೀರಾಗಿ ಜೀವನ ಆನಂದದ ಜಲಬುರುಗೆ ಆದೀತು.

ಡಿಸೆಂಬರ್ ತಿಂಗಳ ಗಂಡಿಗೆ ಗುರು ದೋಷ. ಇದರಿಂದ ಮಕ್ಕಳು ಆಗುವುದು ಕಠಿಣ. ಅದಕ್ಕೆ ತಕ್ಕಂತೆ ಈ ಗುರು ದೋಷದ ಹತ್ತನೆಯ ತಿಂಗಳ ಹೆಣ್ಣು ಗಂಟು ಬಿದ್ದರೆ ಇನ್ನೂ ಸರಿ. ಗಂಡು ಭೋಗಲಾಲಸೆಗಾಗಿ ಹಾತೊರೆದರೆ ಹೆಣ್ಣು ವೇದಾಂತ ಪ್ರಿಯೆ. ದೇವತಾ ಶ್ರದ್ಧೆ. ಯಾತ್ರೆ ಇತ್ಯಾದಿಗಳ ಮೇಲೆ ಬಯಕೆ. ಇಬ್ಬರದೂ ಕವಲೊಡೆದ ಹಾದಿಗಳು. ದಾನ ಧರ್ಮಾದಿಗಳ ಔದಾರ್ಯದಲ್ಲಿ ಹೆಣ್ಣು ಇದ್ದರೆ ಗಂಡು ತನ್ನ ಬಯಕೆಗಳನ್ನು ಮತ್ತೆಲ್ಲಿಯಾದರೂ ಹುಡುಕ ಬೇಕಾದೀತು. ಈ ತಿಂಗಳ ಹೆಣ್ಣಿಗೆ ಗಂಡ ಎಂದರೆ ಅಪಾರ ಗೌರವ. ಆದರೆ ಆಕೆ ಸಮರಸದ ಪ್ರೇಮ ಬಾಳುವೆಗೆ ಅಸಮರ್ಥಳು. ಗುಣಶೀಲಗಳ ಬೀಡಾದ ಹೆಣ್ಣು ತನ್ನ ಪತಿ ಚರ್ಯೆಯಲ್ಲಿ ಊನಗಳನ್ನು ಕಂಡರೂ ಸಹಿಸಿಕೊಂಡು ಸಂಸಾರ ಸಾಗಿಸುತ್ತಾಳೆ.

ಒಂಭತ್ತನೆಯ ತಿಂಗಳಾದ ಸೆಪ್ಟಂಬರ್ ತಿಂಗಳ ಹೆಣ್ಣು ಧೋರಣೆಯ ಸ್ವಭಾವದಾಕೆ. ತನ್ನ ಮಾತು ಎಲ್ಲರಿಗೂ ಅದೇ ಅಣತಿ. ಇನ್ನು ಹನ್ನೆರಡನೆಯ ಶುಕ್ರಕುಜ ಯೋಗದ ಲಾಲಸಯ ಗಂಡಿಗೆ ಹೇಳಬೇಕಾದ್ದೇ ಇಲ್ಲ. ಪತ್ನಿಯ ಒಂದು ನಸುನಗುವಿಗಾಗಿ ಗಂಡಸು ಯಾವ ತ್ಯಾಗಕ್ಕೂ ಸಿದ್ಧ. ಇದು ಒಂದು ನಮೂನೆಯ ಯಜಮಾನಿಯ ಗಂಡ ಇದ್ದಂತೆ. ಈ ಸಂಸಾರದಲ್ಲಿ ಗಂಡ ಹೆಂಡಿರು ಇಬ್ಬರಿರುವುದೇ ಲೇಸು. ಹಾಗಿಲ್ಲ. ಒಟ್ಟು ಸಂಸಾರದಲ್ಲಿ ಧೋರಣೆಯ ಸೊಸೆಯನ್ನು ಸಹಿಸದ ಮಂದಿಗೆ ಕಷ್ಟ. ಆಗ ಸಾಧ್ಯವಾದಷ್ಟು ಹೆಣ್ಣು ಗಂಡನನ್ನು ಬೇರೆ ಸೆಳೆದುಕೊಂಡು ಹೋಗುವ ಸಾಧ್ಯತೆ ಹೆಚ್ಚು. ಅದು ಉದ್ಯೋಗದ ಮೂಲಕವೇ ಹೆಚ್ಚು. ಈ ಸಂಸಾರದಲ್ಲಿ ಖರ್ಚು ಹೆಚ್ಚು. ಕಾರಣ ಹೆಂಡತಿ ತೋರ್ಪಡೆಯ ಸ್ವಭಾವದವಳು. ಆದರೆ ಎಲ್ಲರಿಗೂ ಬೇಕಾದವರಂತೆ ನಡೆದುಕೊಂಡು ಕಾಣುವಂತೆ ವಿರಸ ಹಚ್ಚುವ ಹೆಣ್ಣು ಈಕೆಯಂತೂ ಅಲ್ಲ.

ಎಂಟು ಸಂಖ್ಯೆಯ ಆಗಸ್ಟ ತಿಂಗಳಲ್ಲಿ ಹುಟ್ಟಿದ ಹೆಣ್ಣು ಡಿಸೆಂಬರ್ ತಿಂಗಳ ಗಂಡಿಗೆ ಮದುವೆ ಆಗುತ್ತೆ. ಆಗ ಹೆಣ್ಣಿಗೆ ಸುಯೋಗ. ಬಂಧು ಬಳಗದವರಲ್ಲಿ ಅನಾದರಣೆಯ ಸವಿತಿಂದ ಈಕೆಗೆ ಗಂಡಿನ ಮನೆ ಸ್ವರ್ಗಕ್ಕಿಂತ ಮಿಗಿಲು. ಅಲ್ಲದೆ ಪ್ರೀತಿಯ ಅತಿರೇಕದ ಗಂಡ ಬೇರೆ. ಗಂಡಸಿನ ಮನಸ್ಸು ಕೆಡದಂತೆ ಅನುಕರಣದ ಆದರದ ಸ್ವಭಾವದಿಂದ ಪತಿ ಸುಪ್ರೀತನು. ತನ್ನ ಮೇಲೆ ತಾತ್ಸಾರವನ್ನು ತೋರಿಸಿದ ಬಂಧುಗಳನ್ನು ಕರೆದು ಆದರಿಸಿ ಅವರಿಗೆ ತನ್ನ ಜಯವನ್ನು ತೋರಿಸಿಕೊಳ್ಳುವ ಬಯಕೆ ಬೇರೆ. ಈ ದಂಪತಿಗಳಿಗೆ ಮದುವೆಯಾದ ಎರಡನೆಯ ವರುಷದಲ್ಲಿ ಮನೆ ಆಗುವ ಯೋಗವಿದ್ದು ಅದರಿಂದ ಅಪಾರ ಅದೃಷ್ಟ. ಆದರೆ ವಯಸ್ಸಾದ ಮೇಲೆ

ಹೆಂಡತಿಗೆ ಎದೆಗೆ ಸಂಬಂಧಿಸಿದ ರೋಗ ಬಂದು ಆರೋಗ್ಯ ಕೆಟ್ಟೀತು. ಗೋಸೇವೆ ಈಕೆಗೆ ಉತ್ತಮ ಅನುಪಾನ.

ಏಳು ಸಂಖ್ಯೆಯ ಜುಲೈ ತಿಂಗಳಿನ ಜನನದ ಹೆಣ್ಣು ಈ ಡಿಸೆಂಬರ್ ತಿಂಗಳ ಗಂಡಸಿಗೆ ಅನುಕೂಲ ಇರಳು. ಕಾರಣ ಏಳು ಸಂಖ್ಯೆಯ ರಾಹು ಹನ್ನೆರಡು ಸಂಖ್ಯೆಯ ಶುಕ್ರನ ಸಹ ಯೋಗದ ಮಂಗಳನೊಡನೆ ಬೆರೆತು ಸರ್ಪದೋಷ ಆಗುತ್ತದೆ. ಇದರಿಂದ ಸಂಸಾರದಲ್ಲಿ ಪರಸ್ಪರ ವಿರೋಧ, ವಿರಸ, ಜಗಳ ಇತ್ಯಾದಿ ಶಾಂತಿಯನ್ನು ಕದಡುವ ಸನ್ನಿವೇಶಗಳೇ ಹೆಚ್ಚು. ಈ ದೋಷದಿಂದ ಮಕ್ಕಳು ಆಗುವುದೂ ಕಷ್ಟ. ಆದರೂ ಪ್ರಸವ ಕಾಲದಲ್ಲಿ ಗಂಡಭಯ ಆದೀತು. ಈ ಸಂದರ್ಭದಲ್ಲಿ ಶ್ರೀ ಚಾಮುಂಡೇಶ್ವರಿಯನ್ನು ಸೇವಿಸುವುದು ಲೇಸು.

ಜೂನ್ ತಿಂಗಳ ಹೆಣ್ಣಿಗೆ ಕುಜ ಶುಕ್ರ ಸಂಯೋಗದ ಫಲ ನಡೆಯುತ್ತೆ. ಇದು ಹನ್ನೆರಡು ಸಂಖ್ಯೆಯ ಶುಕ್ರ ಮಂಗಳ ಯೋಗದ ತಿರುಗು ಮುರುಗು. ಈ ಕಾರಣ ಹೊಂದಾಣಿಕೆ ಸಹ ಅನುಕೂಲ. ಸಮರಸದ ದಾಂಪತ್ಯ ಎಂದು ಕೆಲವರ ಮತ. ಪರಸ್ಪರ ಅನುರಾಗ ಮತ್ತು ಮಂಗಳ ಗ್ರಹದ ಸುಯೋಗದಿಂದ ಬಾಳು ಹಸನು. ಸಿರಿಯೂ ಒಲಿದು ಬಂದಾಳು. ಆರುಸಂಖ್ಯೆಗೆ ಮೂರನೆಯ ಸಂಖ್ಯೆಯ ಕುಜ ಶನಿ ಯೋಗ ಇದ್ದರೂ ಹನ್ನೆರಡು ಸಂಖ್ಯೆಯ ಶುಕ್ರಮಂಗಳ ಯೋಗದಿಂದ ಅದು ನಿವಾರಣೆಯಾಗಿ ಶುಭವೇ ಆದೀತು. ಹಾಗೆಯೇ ಹನ್ನೊಂದು ಸಂಖ್ಯೆಯ ಶುಕ್ರ ಶನಿವೇಧೆಯೂ ಹನ್ನೆರಡು ಸಂಖ್ಯೆಗೆ ತಗಲದು. ಈ ಕಾರಣ ಇದು ಶುಭ ಅಂದರು.

ಐದು ಸಂಖ್ಯೆಗೆ ಗುರು ಶುಭನು. ಈ ಸಂಖ್ಯೆಯ ಮೇ ತಿಂಗಳಿನ ಹೆಣ್ಣು ಈ ಗ್ರಹದ ಯೋಗಕ್ಕೆ ಪಾತ್ರಳು. ವಿದ್ಯಾವಂತರ ಕುಟುಂಬದಲ್ಲಿ ಜನಿಸಿ ಗುಣಶೀಲಗಳಿಗೆ ಹೆಸರು ಈಕೆ. ಅನೇಕ ವೇಳೆ ಸ್ವಯಂ ವಿದ್ಯಾವತಿಯೂ ಹೌದು. ವಿವೇಕದ ಮಾತು, ಗೌರವ ತರುವ ನಡತೆ. ಉತ್ತಮ ಮಕ್ಕಳನ್ನು ಪತಿರಾಯನಿಗೆ ಕೊಡುವ ಪ್ರಶಸ್ತಿ ಪತ್ರಗಳು. ಗಂಡು ಹನ್ನೆರಡನೆಯದಾದ ಡಿಸೆಂಬರ್ ತಿಂಗಳಿನವರು. ಇವರಿಗೆ ಶುಕ್ರ ಮಂಗಳ ಯೋಗ. ಇವರು ಹೆಣ್ಣಿನ ಗುಣ ಶೀಲಗಳಿಗೆ ವಿರೋಧದ ಗುಣ ಉಳ್ಳವರು. ಇವರಿಗೆ ಆತುರದ ಸ್ವಭಾವ ಸಾಮಾನ್ಯ. ಹೆಣ್ಣಿನ ಗುರುಗ್ರಹದ ವಿವೇಕ ಮನೆಯಾಕೆಯಲ್ಲಿ ಇವರಿಗೆ ಸಲ್ಲದು. ಈ ಕಾರಣ ಭಿನ್ನ ಭಿನ್ನ ಅಭಿಪ್ರಾಯಗಳು. ಹೆಣ್ಣು ತನ್ನ ಮತ ಸರಿ ಎಂದು ವಾದಿಸುವ ಅಗತ್ಯ ಬೇರೆ. ಇದರಿಂದ ಆಗಾಗ ವಿರಸ. ಆದರೆ ಪರಸ್ಪರ ಅನುರಾಗಕ್ಕೆ ಇದು ಅಡ್ಡಿಯಾಗಲು ಬಿಡುವಾಕೆಯಲ್ಲ. ಕಾರಣ ಅವರು ವಿವೇಕಿಗಳು. ಮಕ್ಕಳು ಆಗುತ್ತಾ ಆಗುತ್ತಾ ಮನೆಯಾಕೆಗೆ ಬಲ ಹೆಚ್ಚಿ ಗಂಡನ ವಿಲಾಸೀ ಬುದ್ಧಿಗೆ ಅಂಕುಶ ಬಿದ್ದೀತು. ಆದರೆ ಸಂಸಾರ ಮಾತ್ರ ಸುಖಮಯ.

ನಾಲ್ಕನೆಯ ತಿಂಗಳಾದ ಏಪ್ರಿಲ್ ತಿಂಗಳ ಹೆಣ್ಣು ಭಾವುಕ ಸ್ವಭಾವದವಳು. ಇದಕ್ಕೆ ಶುಕ್ರ ಮಂಗಳ ಯೋಗದ ಡಿಸೆಂಬರ್ ತಿಂಗಳ ಗಂಡು ಮದುವೆಯಾದರೆ ಆಗ ಶುಕ್ರ ಕುಜರಿಗೆ ಈ ಚಂದ್ರಯೋಗವಾಗಿ ಅತಿರೇಕದ ಭೋಗಲಾಲಸೆಗಳಿಗೆ ದಾರಿ. ಇದರಿಂದ ಮೊದಮೊದಲು ದಂಪತಿಗಳಿಗೆ ಆರೋಗ್ಯ ಹದಗೆಟ್ಟು ಹೆಣ್ಣು ತವರಿಗೆ ಓಡಬೇಕಾದೀತು. ರಕ್ತ ದೌರ್ಬಲ್ಯದಿಂದ ಹೆಣ್ಣು ಗಂಡನಿಂದ ದೂರ ಇರಲು ತವಕಿಸಿದರೂ ಪರಸ್ಪರ ಆಕರ್ಷಣೆಯಿಂದ ಬಿಡಲಾರರು. ಕೆಲವು ವೇಳೆ ಹೆಣ್ಣಿಗೆ ಮಹಾರೋಗಗಳು ತಲೆಹಾಕಲು ಶಕ್ಯ. ಇವರಿಗೆ ಮಕ್ಕಳೂ ಆಗುವುದು ಕಷ್ಟ. ಚಾಮುಂಡೇಶ್ವರೀ ಆರಾಧನೆಯಿಂದ ವಿಲಾಸೀ ಮನೋಭಾವ ಹದಕ್ಕೆ ಬಂದು ಸ್ತ್ರೀ

ಸಂತಾನದಿಂದ ಸಂತಸ ಆದೀತು. ಈ ಯೋಗದಲ್ಲಿ ಹೆಣ್ಣಿಗೆ ಆಯುಷ್ಯ ಕಡಿಮೆ. ಇದ್ದಷ್ಟು ದಿನ ಭಾವುಕದ ದಾಂಪತ್ಯ ಅಂದರು.

ಮಾರ್ಚ್ ತಿಂಗಳ ಹೆಣ್ಣಿಗೆ ಕುಜ ಶನಿ ಯೋಗ. ಇದು ಮದುವೆಗೆ ಆಗಾಗ ವಿಘ್ನ. ಮೂರು ನಾಲ್ಕು ಬಾರಿ ಗೊತ್ತಾಗಿ ಬಿಟ್ಟು ಬಿಟ್ಟು ಹೋಗಿ ಅನಂತರ ವಧುವಿಗೆ ಇಷ್ಟ ಇರದ ಮದುವೆಯಾದೀತು. ಆದರೆ ಈ ಡಿಸೆಂಬರ್ ಗಂಡು ತನ್ನ ಶುಕ್ರ ಮಂಗಳಯೋಗದ ದೆಸೆಯಿಂದ ಹೆಣ್ಣಿಗೆ ಮನೋತೃಪ್ತಿ. ಆಶಾದಾಯಕ ತುಂಬು ಜೀವನವನ್ನು ಕೊಟ್ಟು ಸುಖ ಸಂಸಾರವನ್ನು ನಡೆಸುತ್ತಾರೆ. ಇದರಿಂದ ಹೆಣ್ಣಿಗೆ ವಿವಾಹ ಶುಭ. ಮೂರು ವರುಷಗಳ ನಂತರ ಇದು ಜಯಪ್ರದ ಸುಖಮಯ ಸಂಸಾರ. ವಾಹನಾದಿಗಳಿಂದ ಶುಭ. ಯಂತ್ರಾಲಯಗಳಲ್ಲಿ ಉನ್ನತ ಅಧಿಕಾರದಿಂದ ಸುಯೋಗ ನಡೆದೀತು.

ಹನ್ನೆರಡನೆಯ ತಿಂಗಳ ಜನನದ ಗಂಡು. ಇವರಿಗೆ ಅತಿ ಸಮಂಜಸ ಜೋಡಿ ಅಂದರೆ ಎರಡನೆಯ ತಿಂಗಳ ಫೆಬ್ರುವರಿಯ ಹೆಣ್ಣು. ಈಕೆಗೆ ಎರಡು ಸಂಖ್ಯೆಯ ಬುಧ ಗುರು ಯೋಗ. ಇದು ಬುದ್ಧಿ ಚಾತುರ್ಯದ ಹೆಣ್ಣು. ಮಾತು ಮಧುರ. ಸನಿಹ ಮೋಹಕ. ಸಾಲದ್ದಕ್ಕೆ ಚೆಲ್ಲು ಚೆಲ್ಲು ಸ್ವಭಾವ ಬೇರೆ. ಇಷ್ಟು ಸಾಕು. ವಿಲಾಸೀ ಶುಕ್ರ ಮಂಗಳ ಯೋಗದ ಗಂಡಿಗೆ. ಭಾವ ಅತಿರೇಕವೇರಿ ಹೆಣ್ಣಿನ ಬಾಹ್ಯ ಸಂಗ ಸಖ್ಯದಲ್ಲಿ ತೃಪ್ತಿ. ಭೋಗಲಾಲಸೆ ಗಂಡಿಗೆ ಅತಿ ಇದ್ದರೂ ಈಕೆ ಅವಕಾಶ ಕೊಡರು. ಮಾತು ಜೊತೆ ಜೊತೆಯ ಒಡನಾಟದಲ್ಲಿಯೇ ಸುಖ ಕಾಣಿಸಿ ಗಂಡು ಬೇಸ್ತು. ಆದರೆ ಈ ಎರಡು ಸಂಖ್ಯೆಯ ಬುಧಗುರು ಯೋಗಕ್ಕೆ ಹನ್ನೆರಡು ಸಂಖ್ಯೆಯ ಶುಕ್ರ ಮಂಗಳ ಯೋಗ ಬೆರೆತರೆ ಅದು ಬುಧಶುಕ್ರ ಗುರುಮಂಗಳ ಯೋಗದ ಸಮೂಹದಿಂದ ಮಹಾ ವಿಷ್ಣು ಯೋಗ ಆಗುತ್ತದೆ. ಇದರಿಂದ ಮದುವೆಯ ನಂತರ ಶ್ರೀ ಶ್ರೀನಿವಾಸರ ಭಕ್ತಿ ಮೂಡುತ್ತೆ. ಇದರಿಂದ ಸಿರಿ ನಲಿದು ಹರಿದಾಳು.

ಜನವರಿ ತಿಂಗಳ ಹೆಣ್ಣಿಗೆ ಶನಿ ಗ್ರಹದ ತತ್ವ ಪ್ರಧಾನ. ಇದು ಒಂದು ನಮೂನೆ ಸೇವೆಯ ಗುಣ. ಬಹುಶಃ ಹಿಂದಿನ ಜನ್ಮದಲ್ಲಿ ಸೇವಕಿಯೇ ಆಗಿದ್ದಾಳು. ಆಗ ಇವರು ಆಕೆಯನ್ನು ಪ್ರೀತಿಸಿದ್ದು ಆ ಋಣದಿಂದ ಈಗ ಮಡದಿಯ ಯೋಗ. ಇದು ಒಂದು ಕಾಲ್ಪನಿಕ ಊಹೆ. ಈ ಯೋಗದಲ್ಲಿ ಸಮರಸದ ದಾಂಪತ್ಯ ಅಪರೂಪ. ಕಾರಣ ಹೆಣ್ಣು ಗಂಡಸಿನ ಜೊತೆ ಸಮರಸದಲ್ಲಿ ಓಡಾಡುವುದರಲ್ಲಿ ಆಸಕ್ತಿ ಕಡಿಮೆ. ಮೂರು ಹೊತ್ತೂ ದುಡಿಮೆ ಅವರಿಗೆ ಹಿತ. ಹನ್ನೆರಡು ಸಂಖ್ಯೆಯ ಶುಕ್ರಮಂಗಳ ಯೋಗದ ಗಂಡು ಇವರನ್ನು ಮದುವೆಯಾದರೆ ಅವರಿಗೆ ಪೌರುಷದ ಸಹಭಾಗಿನಿ ಈಕೆ. ಯಾವುದೇ ರೀತಿಯ ಪ್ರೀತಿಯ ಕೊಡುಗೆ ಇವರಿಗೆ ತುಂಬಾ ಸುಖದಾಯಕ. ಪತಿಗೆ ಇವರು ಇದರಿಂದ ಋಣಿಗಳು. ಒಂದು ಸಮಯ ಪತಿರಾಯರು ಅನ್ಯ ಸಂಬಂಧ ಮಾಡಿದರೂ ಅದರಲ್ಲಿ ಇವರಿಗೆ ಆಸಕ್ತಿ ಇರದು. ಇದು ಅವರ ಸ್ವಭಾವ ಎಂದು ನೆಮ್ಮದಿ ತಾಳುವ ಮಂದಿ ಇವರು ಅಂದರೆ ತಪ್ಪಲ್ಲ.

ಒಟ್ಟಿನಲ್ಲಿ ಹನ್ನೆರಡು ಸಂಖ್ಯೆಯ ಡಿಸೆಂಬರ್ ತಿಂಗಳಿನ ಗಂಡುಗಳು ಸಾಧಾರಣವಾಗಿ ತಮ್ಮ ತಮ್ಮ ಮಡದಿಯರನ್ನು ಅತ್ಯಂತ ಸುಖವಾಗಿ ನಡೆಸಿಕೊಳ್ಳುವ ಮಂದಿ. ಪರಸ್ಪರ ಅನುರಾಗದಲ್ಲಿ ಸಂಸಾರ ನೌಕೆಯನ್ನು ತೇಲಿಸುವ ಮಂದಿ. ಅನಾನುಕೂಲದ ಮಂದಿ ಗಂಟಾದರೆ

ಆಗ ತಪ್ಪು ಇವರದಂತೂ ಅಲ್ಲ. ಕಾರಣ ಇವರು ಸ್ವಭಾವತಃ ದುಃಖ ಕೊಡುವ ಮಂದಿಯೇನೂ ಅಲ್ಲ.

## ತಿಂಗಳ ಸಂಖ್ಯೆಯ ಮೊತ್ತ ಪ್ರಭಾವ

ಹುಟ್ಟಿದ ತಾರೀಖು ಅಂದರೆ ಜನ್ಮ ದಿನಾಂಕ, ಮಾಸಾಂಕ ಮತ್ತು ವರುಷದ ಸಂಖ್ಯೆಗಳಿಂದ ಕೂಡಿದ್ದು. ಇವುಗಳಲ್ಲಿ ದಿನಾಂಕ ಮಂದಿಯ ಗುಣಶೀಲಗಳನ್ನು ತೋರಿಸುತ್ತೆ. ವ್ಯಕ್ತಿ ಗಂಡು ಅಥವಾ ಹೆಣ್ಣು ಯಾರಾದರೂ ಸರಿ. ಫಲ ಗಣನೆ ಮಾತ್ರ ಒಂದೇ. ಹೆಣ್ಣು ಗಂಡು ಪ್ರಭೇದ. ಗುಣಶೀಲಗಳ ನಿರ್ಣಯ ಮಾಡುವಾಗ ಬರದು. ಆದರೆ ಫಲ ಹೇಳುವಾಗ ಅದರ ಪ್ರಭಾವ ಹೆಣ್ಣಿಗೆ ಸಹಜ ಸ್ವಭಾವದಲ್ಲಿ ಬಂದ ಗುಣ ನ್ಯೂನಾತಿರೇಕಗಳಿಗೆ ಹೊಂದಿಸಿಕೊಳ್ಳುವುದು ಅಗತ್ಯ. ಈ ರೀತಿಯ ನ್ಯೂನಾತಿರೇಕಗಳು ಹೆಣ್ಣಿನ ಮನೋಧರ್ಮ ಮತ್ತು ಈ ದಿನಾಂಕದ ಪ್ರಭಾವಕ್ಕೆ ಮೀರಿದ್ದು. ಈ ತಿದ್ದುಪಡಿಯನ್ನು ಬಿಟ್ಟರೆ ಉಳಿದ ವಿಷಯಗಳಲ್ಲಿ ಸಂಖ್ಯಾಶಾಸ್ತ್ರ ಫಲ ಇಬ್ಬರಿಗೂ ಒಂದೇ.

ತಿಂಗಳ ಸಂಖ್ಯೆಯ ಫಲ ಮೇಲಿನ ತಿದ್ದುಪಡಿಗೆ ಹೊರತೇನೂ ಅಲ್ಲ. ಉದಾಹರಣೆಗೆ ಕುಜನ ಸಂಖ್ಯೆ ಮೂರು. ಇದರ ಕುಜ ಶನಿ ಯೋಗದ ದೋಷ ಹೆಣ್ಣಿಗೆ ಹೆಚ್ಚು. ಹನ್ನೊಂದು ಸಂಖ್ಯೆಯ ಶುಕ್ರಶನಿ ಯೋಗದ ಅರಿಷ್ಟ ಫಲ ಗಂಡಿಗೆ ಹೆಚ್ಚು. ತಿಂಗಳ ಸಂಖ್ಯೆ ಗಂಡಿಗೆ ಜೀವನದ ಸಂಗಾತಿಯಾದ ಹೆಂಡತಿಯ ಗುಣಶೀಲಗಳನ್ನು ತೋರಿಸುತ್ತೆ. ಹಾಗೆಯೇ ಹೆಣ್ಣಿಗೆ ಆ ಸಂಖ್ಯೆ ಆಕೆ ಮದುವೆಯಾಗುವ ಗಂಡನ ಗುಣಶೀಲಗಳ ವಿವರವನ್ನು ಕೊಡುತ್ತೆ. ಇಲ್ಲಿ ಫಲ ಕಥನ ಮಾಡುವಾಗ ಶಾಸ್ತ್ರ ಫಲ ಸಲಹೆಯನ್ನು ಪಡೆಯುವರು ಗಂಡಾದರೆ ಅವರ ಜನ್ಮ ತಿಂಗಳ ಸಂಖ್ಯೆಯೇ ಆಧಾರ ಕೇಳುವವರು ಹೆಣ್ಣಾದರೆ ಆಗ ಹೆಣ್ಣಿನ ತಿಂಗಳ ಸಂಖ್ಯೆಯೇ ಆಧಾರ ವಾಗುತ್ತದೆ. ಎರಡನೆಯದು ಪ್ರಯತ್ನ ಹೆಣ್ಣಿನ ಕಡೆಯಿಂದಾದರೆ ಆಗಲೂ ಸಹ ಹೆಣ್ಣಿನ ತಿಂಗಳ ಸಂಖ್ಯೆ ಫಲವೇ ನಿರ್ಣಾಯಕ ಅಂಶವಾಗುತ್ತದೆ. ಈ ಕಾರಣ ಗಣಪತಿ ಸಂಖ್ಯಾಶಾಸ್ತ್ರ ಕೇವಲ ಗಂಡಿಗೋಸುಗವೇ ಎಂಬ ಭಾವನೆ ನಿರಾಧಾರ.

ತಿಂಗಳ ಸಂಖ್ಯೆ, ಅದರ ಗ್ರಹದ ಗುಣಶೀಲಗಳು ಹೆಣ್ಣು ಅಥವಾ ಗಂಡು ತಾನು ಬಾಳಸಂಗಾತಿಯಲ್ಲಿ ಬಯಸಬಹುದಾದ ಗುಣಗಳನ್ನು ತೋರಿಸುತ್ತೆ. ಮದುವೆಯಾದ ಮೇಲೆ ಗಂಡ ಹೆಂಡಿರ ತಿಂಗಳ ಸಂಖ್ಯಾಗ್ರಹಗಳ ಫಲಗಳು ಪರಸ್ಪರ ಹೊಂದಾಣಿಕೆಯಲ್ಲಿದೆ, ಆಗ ಸಂಸಾರದಲ್ಲಿ ಸುಖ, ಶಾಂತಿ, ಸಹಜ. ಹಾಗಿಲ್ಲ ಪರಸ್ಪರ ವಿರೋಧ ಶೀಲಗಳಿಂದ ಕೂಡಿದ್ದರೆ ಮದುವೆಯಾದ ಹಲವು ವರುಷಗಳ ಕಾಲ ಸಂಸಾರದಲ್ಲಿ ತಿಕ್ಕಾಟ, ಅಶಾಂತಿ. ಆ ಸಂಖ್ಯಾಗ್ರಹದ ಅರಿಷ್ಟ ತೋರಿಸುವಷ್ಟು ಕಾಲ ಕಳೆದ ಮೇಲೆ ಈ ವಿರೋಧ ಶಮನವಾಗಿ, ಶಾಂತಿ ನೆಲೆಸಿ ಸಂಸಾರದಲ್ಲಿ ಸುಖ ಮೂಡತ್ತೆ. ಉದಾಹರಣೆಗೆ ಕುಜನ ದೋಷ ಸಂಖ್ಯೆ ಮೂರು. ಈ ಸಂಖ್ಯೆಯ ಫಲ ಮದುವೆಯಾದ ಮೇಲೆ ಮೂರು ವರುಷ ಕಾಲ ಇರುತ್ತೆ. ಅದೇ ಕುಜನ ದೋಷ ಗುಣವಾಗಿ ಬದಲಿಸಲು ಅದೇ ಗ್ರಹದ ಗುಣಸಂಖ್ಯೆಯಾದ ಆರನೆಯ ವರುಷ ಶುಭ ಎಂದರ್ಥ.

ತಿಂಗಳ ಸಂಖ್ಯೆ. ಅದರ ಗ್ರಹದ ಪ್ರಭಾವದ ಅರಿವಿನಿಂದ ಮದುವೆಗೆ ಮುನ್ನ ತನ್ನ ಬಯಕೆಗಳಿಗೆ ಪೂರಕವಾಗುವ ತಿಂಗಳ ಸಂಖ್ಯೆಯ ಗುಣಶೀಲಗಳಿಂದ ಕೂಡಿದ ಗಂಡು ಅಥವಾ ಹೆಣ್ಣನ್ನು ಆರಿಸಿಕೊಳ್ಳಲು ಸಹಾಯವಾಗುತ್ತದೆ. ಒಂದು ಸಮಯ ತನ್ನ ಆದರ್ಶಗಳಿಗೆ ವಿರೋಧ ಗುಣಗಳುಳ್ಳ ಸಂಗಾತಿಯನ್ನು ಮದುವೆ ಆಗಲೇ ಬೇಕಾದರೆ ಆಗ ತಮ್ಮ ತಮ್ಮ ವಿರೋಧದ ದಾರಿಗಳಿಗೆ ಯಾವ ಅಂಶ ಕಾರಣ ಎಂದು ತಿಳಿಯುತ್ತೆ. ಯಾವ ಗ್ರಹ. ತಿಂಗಳ ಸಂಖ್ಯಾಗ್ರಹ. ಕಾರಣ ಎಂಬಾದರೂ ತಿಳಿಯುತ್ತೆ. ಆಗ ಆ ಗ್ರಹಕ್ಕೆ ತಕ್ಕ ಶಾಂತಿಯನ್ನು ಮಾಡಿಕೊಂಡು ಆಗ ಆ ಗ್ರಹದ ಗುಣ ಶೀಲಗಳು ತನ್ನಲ್ಲಿದ್ದರೆ ಅದು ಜಯಕ್ಕೆ ಒಂದು ಶಾಂತಿ ನೆಲೆಸುತ್ತೆ. ಉದಾಹರಣೆಗೆ ಆರನೆಯ ತಿಂಗಳ ಗಂಡು ಏಳನೆಯ ತಿಂಗಳ ಹೆಣ್ಣು ಇಬ್ಬರ ಬಯಕೆಗಳೂ ಪರಸ್ಪರ ವಿರೋಧ. ಅಲ್ಲದೆ ಆ ಗ್ರಹಗಳಾದ ಕುಜ ಮತ್ತು ರಾಹುಗಳ ಸಂಯೋಗದಿಂದ ಸರ್ಪದೋಷ ಆಗುತ್ತೆ. ಇಲ್ಲಿ ಇಬ್ಬರೂ ಸರ್ಪಶಾಂತಿಯನ್ನು ಮಾಡಿದರೆ ಈ ದೋಷದ ಸಹಜಗುಣವಾದ ಕೋಪ. ತಾಪ. ಬೇಗನೇ ಆರಿದ ದ್ವೇಷದ ಕಿಡಿಗಳು ಶಾಂತಿಯಾಗುತ್ತವೆ. ಮನಸ್ಸಿನ ಈ ಗುಣ ತಾನಾಗಿ ಶಾಂತವಾಗಿ ಸಮಾಧಾನದ ಚಿತ್ತ ರೂಢಿಯಲ್ಲಿ ಬರುತ್ತೆ. ಇದು ಮಾನಸಿಕ ನಿಯಂತ್ರಣಕ್ಕೆ ಸಹಾಯಕಾರಿ ಎನ್ನಬಹುದು. ಎರನಡೆಯದಾಗಿ ಈ ದೋಷದಿಂದ ಆಗಾಗ ಉಂಟಾಗಬಹುದಾದ ಮದುವೆ ಯತ್ನಗಳಿಗೆ ವಿಘ್ನಗಳೂ ಪರಿಹಾರವಾಗಿ ಯತ್ನ ಜಯವಾದೀತು. ಮೊತ್ತದಲ್ಲಿ ಗಣಪತಿ ಸಂಖ್ಯಾಶಾಸ್ತ್ರ ಸಲಹೆ ಸಂಸಾರ ಜೀವನ ಸುಖಮಯವಾಗಲು ಸಹಾಯಕ. ಇಷ್ಟೇ ಅಲ್ಲದೆ ದಿನಾಂಕ ಗ್ರಹದ ಗುಣಶೀಲಗಳ ಅರಿವಿನಿಂದ ತನ್ನ ವ್ಯವಹಾರಗಳಲ್ಲಿ ಜಯದ ಹಾದಿಯನ್ನು ಕಂಡುಕೊಳ್ಳಲು ಸಾಧ್ಯ. ಕಾರಣ ಈ ಸಂಖ್ಯಾಶಾಸ್ತ್ರದಿಂದ ತನ್ನ ಮನೋಧರ್ಮ ಮತ್ತು ಇತರ ಮನೋಧರ್ಮಗಳ ಅರಿವಾಗುತ್ತದೆ. ಇದರಿಂದ ನಾಲ್ಕು ಜನಗಳ ಮಧ್ಯೆ ವ್ಯವಹಾರ ಮಾಡಲು ಸುಲಭ.

### ತಿಂಗಳ ಸಂಖ್ಯೆಯಿಂದ ಸಂಗಾತಿಯ ಅರಿವು

ತಿಂಗಳ ಸಂಖ್ಯೆ ಅದರ ಗ್ರಹ ಸಂಸಾರದ ಜೀವನದಲ್ಲಿ ಇಷ್ಟು ಪ್ರಭಾವವನ್ನು ಬೀರುವಾಗ ಇನ್ನು ಅದರ ಸಂಖ್ಯೆ ಬಾಳಸಂಗಾತಿಯ ವಿವರಗಳನ್ನೂ ಕೊಡಬಲ್ಲದು. ಕೆಲವರ ಮತದಂತೆ ಗಂಡಿನ ಜನ್ಮ ಮಾಹಿತಿಯಲ್ಲಿ ತಿಂಗಳ ಸಂಖ್ಯೆಯನ್ನು ಅವರು ಹುಟ್ಟಿದ ವರುಷ ಸಂಖ್ಯೆಗೆ ಕೂಡಿದರೆ ತಾನು ಮದುವೆಯಾಗಬಯಸುವ ಹೆಣ್ಣಿನ ಜನನದ ವರುಷವನ್ನು ತೋರಿಸುತ್ತೆ. ಇನ್ನು ಕೆಲವರ ಮತದಂತೆ ಹೆಣ್ಣು ಮದುವೆಯಾಗ ಬಯಸುವ ಗಂಡಿನ ಜನನದ ವರುಷ ತನ್ನ ತಿಂಗಳ ಸಂಖ್ಯೆಯನ್ನು ಹುಟ್ಟಿದ ವರುಷ ಸಂಖ್ಯೆಯಲ್ಲಿ ಕಳೆದರೆ ಸಿಗುತ್ತೆ ಅಂದರು. ಅಂದರೆ ಮೊತ್ತದಲ್ಲಿ ತಿಂಗಳ ಸಂಖ್ಯೆ ಗಂಡ ಹೆಂಡತಿಯರ ಮಧ್ಯೆ ಇರುವ ವಯಸ್ಸಿನ ಅಂತರವನ್ನು ತೋರಿಸುತ್ತೆ ಎಂದರ್ಥ.

ಕೆಲವರ ಮತದಂತೆ ತಿಂಗಳ ಸಂಖ್ಯೆಯನ್ನು ವರುಷದ ಸಂಖ್ಯೆಗೆ ಕೂಡಿದಾಗ ಬರುವ ವರುಷ ಸಂಖ್ಯೆಯಲ್ಲಿ ಹುಟ್ಟಿದ ಮಂದಿ ಇವರಿಗೆ ತುಂಬಾ ಇಷ್ಟ. ಅವರು ಹೆಂಡತಿಯಾದರೆ ಪ್ರೇಮ. ತಂಗಿಯಾದರೆ ತಮ್ಮನಾದರೆ ಪ್ರೀತಿ. ಅಲ್ಲದೆ ಇತರ ಬಂಧುಗಳಾಗಲೀ ಅಣ್ಣ. ಚಿಕ್ಕಪ್ಪಂದಿರ ಮಕ್ಕಳಾಗಲೀ ಆದರೆ ಅವರ ಮೇಲೆ ವಾತ್ಸಲ್ಯ ಹೆಚ್ಚು ಅಂದರು. ಹಿರಿಯರಾದರೆ

ತಿಂಗಳ ಸಂಖ್ಯೆಯನ್ನು ಹುಟ್ಟಿದ ವರುಷ ಸಂಖ್ಯೆಯಲ್ಲಿ ಕಳೆಯಬೇಕು. ಒಂದ ವರುಷದಲ್ಲಿ ಹುಟ್ಟಿದ ಬಂಧುಗಳ ಮೇಲೆ ಗೌರವ, ಆದರ, ಅಭಿಮಾನಗಳು ಹೆಚ್ಚು ಅಂದರು.

ಜನವರಿ ತಿಂಗಳ ಜನನದ ಗಂಡಿಗೆ ಹುಟ್ಟಿದ ವರುಷ ಸಂಖ್ಯೆಯಲ್ಲಿ ಒಂದನ್ನು ಕೂಡಿದರೆ ಬರುವ ವರುಷದ ಇಸ್ವಿಯಲ್ಲಿ ಹುಟ್ಟಿದ ಹೆಣ್ಣು ಮದುವೆಯಾಗ ಬಯಸುವರು. ಹಾಗಿಲ್ಲ, ಆ ಒಂದು ಸಂಖ್ಯೆಯ ಅಧಿಪತಿ ಗ್ರಹವಾದ ಶನಿಯ ಬೇರೆ ಸಂಖ್ಯೆಯಾದ ಎಂಟು ಸಂಖ್ಯೆಯನ್ನು ಕೂಡಿದರೆ ಬರುವ ಇಸ್ವಿಯಲ್ಲಿ ಹುಟ್ಟಿದ ಹೆಣ್ಣು ಆದರೂ ಆದೀತು. ಹಾಗೆಯೇ ಹೆಣ್ಣಿಗೆ ಜನವರಿ ತಿಂಗಳ ಜನನವಾದರೆ ಒಂದು ಅಥವಾ ಎಂಟು ಸಂಖ್ಯೆಯನ್ನು ಅವರ ಜನನದ ಇಸ್ವಿಯಲ್ಲಿ ಕಳೆಯಬೇಕು.

ಫೆಬ್ರುವರಿ ಜನನದಲ್ಲಿ ಬುಧನ ಸಂಖ್ಯೆಯಾದ ಎರಡು ಅಥವಾ ನಾಲ್ಕು ಸಂಖ್ಯೆಯನ್ನು ಜನನದ ವರುಷದಲ್ಲಿ ಕಳೆದರೆ ವರನ ಇಸ್ವಿಯೂ ಕೂಡಿದರೆ ಗಂಡಿಗೆ ವಧುವಿನ ಜನನದ ಇಸ್ವಿಯೂ ತಿಳಿಯುತ್ತದೆ.

ಮಾರ್ಚ್ ತಿಂಗಳ ಸಂಖ್ಯೆ ಮೂರು, ಇದಕ್ಕೆ ಕುಜ ಶನಿ ಯೋಗ. ಇದು ದೋಷದ ಸಂಖ್ಯೆ. ಈ ಕಾರಣ ಗಂಡಿನ ಇಸ್ವಿಗೆ ಮೂರು ಸೇರಿಸಿದರೆ ಬರುವ ಇಸ್ವಿಯ ಹೆಣ್ಣು ಒಂದು ಮಾತುಕತೆ ಮುರಿದು ಆರು ಸಂಖ್ಯೆ ಸೇರಿಸಿದರೆ ಬರುವ ಇಸ್ವಿಯಲ್ಲಿ ಹುಟ್ಟಿದ ಹೆಣ್ಣು ನಿರ್ಣಯ ಆದೀತು. ಹಾಗಿಲ್ಲ, ಅದೇ ವರ್ಗದ ಒಂಭತ್ತನೆಯ ಸಂಖ್ಯೆಯನ್ನು ಸೇರಿಸಿದರೆ ಬರುವ ಇಸ್ವಿಯ ಹೆಣ್ಣು ಮದುವೆಯಾಗುತ್ತದೆ. ಕೆಲವರ ಮತದಂತೆ ಇದು ದ್ವಿಕಳತ್ರ, ತ್ರಿಕಳತ್ರ ಯೋಗಕ್ಕೂ ಸರಿ ಹೊಂದುತ್ತದೆ. ಅಂದರೆ ಮೂರು ಸಂಖ್ಯೆ ಸೇರಿಸಿದಾಗ ಬರುವ ಹೆಣ್ಣು ಮೊದಲನೆಯ ಸಂಬಂಧ ಆರನೆಯ ಸಂಖ್ಯೆ, ಎರಡನೆಯ ಸಂಬಂಧ ಒಂಭತ್ತನೆಯದು ಮೂರನೆಯ ಸಂಬಂಧ ಅಂದರು. ಇದೇ ರೀತಿ ಹೆಣ್ಣಿಗೆ ಇಸ್ವಿಯಲ್ಲಿ ಮೂರು, ಆರು ಮತ್ತು ಒಂಭತ್ತು ಸಂಖ್ಯೆಯನ್ನು ಕಳೆದರೆ ಬರುವ ಇಸ್ವಿಯಲ್ಲಿ ಹುಟ್ಟಿದ ಗಂಡುಗಳು ಒಂದು ತಪ್ಪಿದರೆ ಮತ್ತೊಂದು ನಿರ್ಣಯ ಆಗುವುದು ಎಂದರ್ಥ.

ನಾಲ್ಕು ಸಂಖ್ಯೆಯ ಏಪ್ರಿಲ್ ತಿಂಗಳ ಜನನದಲ್ಲಿ ಗಂಡಾದರೆ ನಾಲ್ಕು ಸಂಖ್ಯೆ ಸೇರಿಸಿದರೆ ಬರುವ ಹೆಣ್ಣು ವಧು ಆಗುತ್ತದೆ. ಆ ಸಂಖ್ಯೆಯನ್ನು ಕಳೆದರೆ ಬರುವ ಗಂಡು ವರನಾಗುತ್ತಾನೆ. ಜನನದ ತಿಂಗಳು ಐದನೆಯದಾದ ಮೇ ಆಗಿದೆ. ಆಗ ಗಂಡಿನ ಜನನದ ಇಸ್ವಿಗೆ ಐದು ಸೇರಿಸಿ ಬಂದ ಇಸ್ವಿಯ ಹೆಣ್ಣು ಶುಭ. ಹಾಗಿಲ್ಲ ಹತ್ತು ಸೇರಿಸಿದರೆ ಬರುವ ಇಸ್ವಿಯ ಹೆಣ್ಣು ಆದೀತು. ಹೆಣ್ಣಿನ ಜನನದ ಇಸ್ವಿಯಲ್ಲಿ ಇದೇ ರೀತಿ ಐದು ಇಲ್ಲ ಹತ್ತನ್ನು ಕಳೆದರೆ ಬರುವ ಇಸ್ವಿ ಆಕೆ ಮದುವೆಯಾಗುವ ಗಂಡಿನ ಇಸ್ವಿಯನ್ನು ತೋರಿಸುತ್ತೆ. ಜನನದ ಕಾಲದ ಗುರು ಬಲಿ, ಆಗ ಅದು ಐದು ವರುಷಗಳ ವ್ಯತ್ಯಾಸವನ್ನು ತೋರಿಸುತ್ತೆ. ಗುರು ಬಲ ಇಲ್ಲ, ಆಗ ಅದು ಹತ್ತು ವರುಷಗಳ ವ್ಯತ್ಯಾಸವನ್ನು ತೋರಿಸುತ್ತೆ.

ಆರನೆಯ ತಿಂಗಳ ಜನನದಲ್ಲಿ ಗಂಡು ಹೆಣ್ಣುಗಳಿಗೆ ಆರು ವರುಷ ವ್ಯತ್ಯಾಸ ಇರುವುದು ಲೇಸು. ಆ ವರ್ಗದ ಮೂರನೆಯ ವರುಷದಲ್ಲಿ ಜನಿಸಿದ ಹೆಣ್ಣಿಗೆ ಕುಜನ ದೋಷವಿದ್ದು ಅದು ಎರಡನೇ ವಿವಾಹಕ್ಕೆ ದಾರಿ ಮಾಡಿಕೊಟ್ಟೀತು. ಇದೇ ರೀತಿ ಹೆಣ್ಣಿನ ಜನನದ ವರುಷಕ್ಕೂ

ಅನ್ವಯಮಾಡಬಹುದು. ಕೆಲವರ ಮತದಂತೆ ಹನ್ನೆರಡು ವರುಷದ ವ್ಯತ್ಯಾಸ ಬಹುಪಾಲು ಎರಡನೆಯ ಸಂಬಂಧವನ್ನು ತೋರಿಸುತ್ತೆ ಅಂದರು. ಆದರೆ ಇಲ್ಲಿ ಮೂರನೆಯ ವರುಷದಲ್ಲಿ ಹುಟ್ಟಿದ ಹೆಣ್ಣು ಮದುವೆಯಾಗಬಯಸಿ ಅದು ತಪ್ಪಿ ಆರನೆಯದು ಆಗುತ್ತದೆ. ಈ ಮೂರನೆಯ ಸಂಖ್ಯೆಯ ಅರಿಷ್ಟ ಅಡಗಿ ಕೂತು ಅದನ್ನು ತಪ್ಪಿಸಲು ವಾಹನದ ಸೌಲಭ್ಯ ಒಂದು ನಮೂನೆ ಶಾಂತಿ ಅಂದರು.

ಏಳನೆಯ ತಿಂಗಳು ಜುಲೈ. ಈ ಸಂಖ್ಯೆಯಷ್ಟು ವ್ಯತ್ಯಾಸ ಇರುವ ಗಂಡಿಗೆ ಹೆಣ್ಣು. ಹೆಣ್ಣಿಗೆ ಗಂಡೂ ಶುಭ. ಕೆಲವರು ಇಲ್ಲಿ ಜಾತ್ಯಂತರ ವಿವಾಹ ಎಂದರು. ಕಾರಣ ಏಳು ಸಂಖ್ಯೆಗೆ ಕಾರಣನಾದ ರಾಹು ಎರಡು ಬೇರೆ ಬೇರೆ ಜಾತಿಗಳ ಬೆರಕೆ ಮಾಡುವ ಗ್ರಹ. ಅಂದರೆ ದೊಡ್ಡ ಗುಂಪು ಒಂದೇ ಆದರೂ ಅದರ ಸಣ್ಣ ಸಣ್ಣ ಗುಂಪುಗಳ ಮಧ್ಯೆ ವಿವಾಹ ಎಂದರ್ಥ. ಅಂದರೆ ಎರಡು ಭಿನ್ನ ಭಿನ್ನ ಸಂಪ್ರದಾಯಗಳ ಬುಡಕಟ್ಟುಗಳ ವಧೂವರರು ಅನ್ನಬಹುದು.

ಎಂಟನೆಯ ತಿಂಗಳ ಜನನದಲ್ಲಿ ಆ ಸಂಖ್ಯೆಯ ಶನಿಯ ಪ್ರಭಾವ ಹೆಚ್ಚು. ಗಂಡಿನ ಜನನದ ಇಸ್ವಿಗೆ ಒಂದು ಸೇರಿಸಿದರೆ ಬರುವ ಇಸ್ವಿಯ ಹೆಣ್ಣು ಆದೀತು. ಇದು ಅಪರೂಪ ಕಾರಣ ವ್ಯತ್ಯಾಸ ಬಹಳ ಕಡಿಮೆ. ಈ ಕಾರಣ ಶನಿಯ ಇನ್ನೊಂದು ಸಂಖ್ಯೆಯಾದ ಎಂಟು ಸೇರಿಸಿದಾಗ ಬರುವ ಇಸ್ವಿಯ ಹೆಣ್ಣು ಶುಭ. ಹಾಗೆಯೇ ಈ ಸಂಖ್ಯೆಯನ್ನು ಹೆಣ್ಣಿನ ಇಸ್ವಿಯಲ್ಲಿ ಕಳೆದರೆ ಬರುವುದು ಗಂಡು ಹುಟ್ಟಿದ ಇಸ್ವಿ. ಈ ಜನನದಲ್ಲಿ ಶನಿಯ ಪ್ರಭಾವದಿಂದ ಮದುವೆಯಾಗುವುದೂ ನಿಧಾನ. ಅಲ್ಲದೇ ಮದುವೆಯಾಗುವ ಕಾಲದಲ್ಲಿ ಬಂಧು ಒಬ್ಬರಿಗೆ ಬುಧನ ಅರಿಷ್ಟದ ಕಾಯಿಲೆ ಅಂದರೆ ಮೂರ್ಛೆ ರೋಗ, ವಾಯುಬಡಿತ ಹಾಗಿಲ್ಲ ಹೃದಯಾಘಾತ ಇತ್ಯಾದಿ.

ಸೆಪ್ಟಂಬರ್ ತಿಂಗಳ ಜನನದಲ್ಲಿ ಒಂಭತ್ತು ಸಂಖ್ಯೆಯ ಪ್ರಭಾವ ಹೆಚ್ಚು. ಈ ಸಂಖ್ಯೆಗೆ ಸೂರ್ಯ ಅಧಿಪತಿ. ಅಲ್ಲದೆ ಇದು ಮೂರು ಸಂಖ್ಯಾ ವರ್ಗದ ಅತಿ ಹೆಚ್ಚಿನ ಸಂಖ್ಯೆ. ಇದರಿಂದ ಆ ವರ್ಗದ ಮೂರು, ಆರು ಸಂಖ್ಯೆಗಳ ವೇಧೆ. ಮೊದಲು ಮೂರು ಸೇರಿಸಿದರೆ ಬರುವ ಇಸ್ವಿಯ ಹೆಣ್ಣು ಬಂದು ಅದು ಆಗದೆ ಆರು ಸಂಖ್ಯೆ ಸೇರಿಸಿದರೆ ಬರುವ ಇಸ್ವಿ ಜನನವ ಹೆಣ್ಣು ಮದುವೆಯಾದೀತು. ಆಗ ಎರಡನೆಯ ಸಂಬಂಧ ಒಂಭತ್ತು ಸಂಖ್ಯೆ ಸೇರಿಸಿದರೆ ಬರುವ ಇಸ್ವಿ ಎಂದು ಕೆಲವರ ಮತ. ಆದರೆ ಈ ಆರು ಸಂಖ್ಯೆಯ ಹೆಣ್ಣೇ ಒಂಭತ್ತು ಸಂಖ್ಯೆಯ ಹೆಣ್ಣಿನಂತೆ ಕೆಲಸ ಮಾಡುವುದು ಎಂಬುದು ಪಕ್ಷೇತರ ವಾದ. ಕಾರಣ ಆರು ಸಂಖ್ಯೆಗೆ ಕುಜನ ದೇವರಾದ ಶ್ರೀ ಚಾಮುಂಡೇಶ್ವರೀ ಕೃಪೆ. ಆಗ ಒಂಭತ್ತು ವರುಷ ಸೇರಿಸಿದರೆ ಬರುವ ವರುಷದ ಕನ್ಯೆ ಆರು ಸಂಖ್ಯೆಯ ಹೆಣ್ಣಿನ ತಂಗಿಯನ್ನು ತೋರಿಸುತ್ತೆ. ಆ ಕನ್ಯೆಯ ಮದುವೆಯ ಹೊಣೆ ಈ ಸೆಪ್ಟಂಬರ್ ತಿಂಗಳಿನ ಜನನದ ಗಂಡಿಗೆ ಇರುತ್ತೆ ಅಂದರು. ಹಾಗಿಲ್ಲ, ಈ ಮೇಲಿನ ವ್ಯತ್ಯಾಸದ ಹೆಣ್ಣುಗಳನ್ನು ಬಿಟ್ಟು ಕೊನೆಯ ಹೆಣ್ಣನ್ನು ಮದುವೆ ಆಗುತ್ತಾರೆ.

ಆದರೆ ಈ ರೀತಿ ಹೆಣ್ಣಿಗೆ ಸೆಪ್ಟಂಬರ್ ತಿಂಗಳ ಜನನದಲ್ಲಿ ಅನ್ವಯ ಆಗುತ್ತೆಯೋ ಇಲ್ಲವೋ ತಿಳಿಯದು. ಕಾರಣ ಈಗ ಹೆಣ್ಣಿಗೆ ಮರುಮದುವೆ ಅಸಂಭವವೇನೂ ಅಲ್ಲ. ಆದರೆ ಶಾಸ್ತ್ರ ನಿರ್ಮಾಣ ಕಾಲದಲ್ಲಿ ಈ ಸನ್ನಿವೇಶ ಇತ್ತಿಲ್ಲ. ಈ ಕಾರಣ ಅದರ ಪ್ರಸ್ತಾಪ ಇರದು. ಅಲ್ಲದೇ ಹೆಣ್ಣಿಗೆ ಮೂರು ವರುಷ ಹಿಂದೆ ಜನನವಾದ ಗಂಡು ಪ್ರಿಯ. ಕಾರಣ ವಯಸ್ಸು ಕಡಿಮೆ. ಕುಜನ ದೋಷದಿಂದ ಅದು ತಪ್ಪಿದರೆ ಆಗ ಆರು ಅಥವಾ ಒಂಭತ್ತು ಸಂಖ್ಯೆ ಸೇರಿಸಿದರೆ

ಬರುವ ವರುಷದ ಜನನದ ಗಂಡು ಮದುವೆಯಾದೀತು. ಈ ವಿಷಯದಲ್ಲಿ ಹೆಣ್ಣಿಗೆ ಗಂಡಿಗೆ ಹೇಳಿದ ಕಾನೂನು ತಿರುಗುಮುರುಗು ಆಗುತ್ತದೆ. ಇದು ಗಮನಾರ್ಹ ಸಂಗತಿ.

ಹತ್ತನೆಯ ತಿಂಗಳಾದ ಅಕ್ಟೋಬರ್ ತಿಂಗಳ ಜನನದ ಗಂಡಿಗೆ ಆ ಸಂಖ್ಯೆಯ ಅಧಿಪತಿ ಗುರುವಿನ ಪ್ರಭಾವ ಹೆಚ್ಚು. ಇದರಿಂದ ಅವನ ಇತರ ಸಂಖ್ಯೆಯಾದ ಐದು ವರುಷ ಸಂಖ್ಯೆ ಸೇರಿಸಿದರೆ ಬರುವ ವರುಷದ ಹೆಣ್ಣು ಶುಭ ಅಂದರು. ಅದು ತಪ್ಪಿದರೆ ಆಗ ಹತ್ತು ವರುಷ ವ್ಯತ್ಯಾಸ ಇರುವ ಹೆಣ್ಣು ಆಗುತ್ತೆ. ಹಾಗಿಲ್ಲ. ಆ ವ್ಯತ್ಯಾಸ ಇರುವ ಹೆಣ್ಣು ಅದಕ್ಕೆ ತಂಗಿಯಾಗಿ ಮನೆಯಲ್ಲಿರುವುದನ್ನು ತೋರಿಸುತ್ತೆ. ಮೇಲೆ ಹೇಳಿದಂತೆ ಇಲ್ಲಿಯೂ ಸಹ ಈ ಕಾನೂನು ಹೆಣ್ಣು ಈ ತಿಂಗಳಿನಲ್ಲಿ ಹುಟ್ಟಿದಾಗ ತಿರುಗುಮುರುಗು ಆಗುತ್ತದೆ. ಅಂದರೆ ಐದು ವರುಷ ಹೆಣ್ಣಿನ ಜನನದ ವರುಷದಲ್ಲಿ ಕಳೆದರೆ ಬರುವ ವರುಷದಲ್ಲಿ ಹುಟ್ಟಿದ ಗಂಡು ಕ್ಷೇಮಕರ ಅಂದರು. ಅದು ತಪ್ಪಿದರೆ ಆಗ ಮಾತ್ರ ಹತ್ತು ಸಂಖ್ಯೆ ಕಳೆದರೆ ಬರುವ ವರುಷದ ಗಂಡು ಆದೀತು.

ಹನ್ನೊಂದನೆಯ ತಿಂಗಳು ನವೆಂಬರ್. ಈ ತಿಂಗಳ ಸಂಖ್ಯೆಗೆ ಶುಕ್ರ - ಶನಿ ಯೋಗ. ಇದು ಶುಕ್ರನ ಅಶುಭ ಯೋಗ. ಸಂಸಾರದಲ್ಲಿ ಸುಖ ಎಂಬ ನಂಬಿಕೆ ಇಲ್ಲದ ಗಂಡು ಎಂದರ್ಥ. ಇದರಿಂದ ಮದುವೆ ಅಂದರೆ ಇವರಿಗೆ ಅಂತಹ ಬಯಕೆ ಇರದು. ಈ ಕಾರಣ ಅವರು ಯಾವ ಹೆಣ್ಣು ಬಂದರೂ ಒಪ್ಪರು. ಕಾರಣ ಈ ತಿಂಗಳ ಜನನದ ಗಂಡಿಗೆ ಶನಿಯ ಪ್ರಭಾವ ಹೆಚ್ಚು. ಆ ಶನಿಯ ಬೇರೆ ಸಂಖ್ಯೆಗಳಾದ ಎಂಟು ಮತ್ತು ಒಂದು ಸಂಖ್ಯೆ ಸೇರಿಸಿದರೆ ಬರುವ ಹೆಣ್ಣು ಇವರಿಗೆ ಮದುವೆಯಾಗಲು ಶಕ್ಯ. ಅಂದರೆ ಗಂಡಿನ ಜನನದ ಇಸ್ವಿಗೆ ಎಂಟು ಸೇರಿಸಿದರೆ ಬರುವ ಹೆಣ್ಣು. ಅದಿಲ್ಲ, ಹನ್ನೊಂದು ಸೇರಿಸಿದರೆ ಬರುವ ಇಸ್ವಿಯ ಹೆಣ್ಣು ಆದೀತು. ಈ ತಿಂಗಳಿನ ಗಂಡಿಗೆ ಶುಭದ ನಿರ್ಣಾಯಕ ಶಕ್ತಿ ಇರದು. ಇದರಿಂದ ಬಂದ ಹೆಣ್ಣಿನ ತಿಂಗಳ ಸಂಖ್ಯೆಯ ವರುಷಗಳ ವ್ಯತ್ಯಾಸ ಇಬ್ಬರಿಗೂ ಶುಭ ಅಂದರು. ಕಾರಣ ಹೆಣ್ಣಿನ ಕಡೆಯವರಿಂದ ಬಂದ ಒತ್ತಡದ ಪರಿಣಾಮ ಈ ವಿವಾಹ.

ಹನ್ನೊಂದನೆಯ ತಿಂಗಳ ಜನನದ ಹೆಣ್ಣಿಗೆ ತನಗೆ ಬೇಡವಾದ ಮದುವೆ ಮೇಲೆ ಹೇರುತ್ತಾರೆ ಎಂಬ ಶಂಕೆ. ಇದರಿಂದ ನಿರ್ಣಯದ ಗೋಜಿಗೆ ಹೋಗುವುದು ಅವರಿಗೆ ಬೇಸರ. ಈ ಕಾರಣ ಇತರರ ನಿರ್ಣಯ ಅವರಿಗೆ ಬೇಕು ಬೇಡದ ಬಂಧನ ಈ ಸಂದರ್ಭದಲ್ಲಿ ಬರುವ ಗಂಡಿನ ಜನನದ ತಿಂಗಳ ಮೇಲೆ ವರುಷ ವ್ಯತ್ಯಾಸ ನಿರ್ಣಯ ಮಾಡಬೇಕು ಅಂದರು. ಅಥವಾ ನಿರ್ಣಯ ಮಾಡುವವರು ಯಾರು? ಅವರ ಜನನದ ತಿಂಗಳ ಸಂಖ್ಯೆಯಷ್ಟು ವರುಷ ವ್ಯತ್ಯಾಸ ಗಂಡು ಹೆಣ್ಣಿಗೆ ಮಧ್ಯೆ ಇರುತ್ತೆ ಅಂದರು.

ಈ ತಿಂಗಳ ವಿಶೇಷ ಇನ್ನೊಂದು. ಇದು ಶುಕ್ರ ಶನಿ ಯೋಗದ ತಿಂಗಳು. ಇದರಿಂದ ಇದು ದ್ವಿತೀಯ ವಿವಾಹದ ಯೋಗ. ಆದರೆ ಮದುವೆ ಗಂಡಿನ ಇಳಿ ವಯಸ್ಸಿನಲ್ಲಿ ಆದರೆ ಇದು ಅಸಂಭವ. ಹೆಂಡತಿಯ ಯೋಗಕ್ಕೆ ಶನಿಯ ವೇಧೆ. ಇದರ ಪರಿಹಾರಕ್ಕೆ ಹೆಣ್ಣು ವೈದ್ಯರ ಮನೆಯದರೆ ಯೌವನದಲ್ಲಿ ಮದುವೆಯಾದರೂ ಈ ಸ್ತ್ರೀಗೆ ಹಾನಿ ಇರದು. ಅಲ್ಲದೆ ಹೆಣ್ಣಿಗೆ ಈ ಸಂಖ್ಯೆಯ ದೋಷದಿಂದ ಬರಬಹುದಾದ ಉಪೇಕ್ಷಾ ಮನೋಭಾವ ಕೂಡ ಕಡಿಮೆ ಯಾಗುತ್ತೆ. ಕಾರಣ ವೈದ್ಯರಿಗೆ ಶನಿಯೋಗ ಉದ್ಯೋಗದಲ್ಲಿ ನಡೆಯುತ್ತೆ. ವೈಯಕ್ತಿಕವಾಗಿ

ಅದರ ಫಲ ನಡೆಯದು. ಹಾಗಿಲ್ಲ; ಈ ಅರಿಷ್ಟದ ಫಲ ಬೇರೇ ಜಾತಿಯ ಹೆಣ್ಣನ್ನು ತೋರಿಸ ಬಹುದು.

ಹನ್ನೆರಡನೆಯದಾದ ಡಿಸೆಂಬರ್ ತಿಂಗಳ ಜನನದ ಗಂಡುಗಳಿಗೆ ಹೆಚ್ಚಿನಂಶ ಮದುವೆ ಅನುರಾಗದಿಂದ ಕೂಡಿದ್ದು. ಇದಕ್ಕೆ ಪರಿಚಯದ ಹೆಣ್ಣು ಅಂದರು. ಹನ್ನೆರಡು ವರುಷ ಇಬ್ಬರಿಗೂ ವ್ಯತ್ಯಾಸ ಇರುತ್ತೆ. ಹನ್ನೆರಡು ಸಂಖ್ಯೆಗೆ ಕುಜನ ಯೋಗ ಶುಕ್ರನಿಗೆ ಇರುತ್ತೆ. ಅದೇ ರೀತಿ ಆರು ಸಂಖ್ಯೆಗೆ ಶುಕ್ರನ ಯೋಗ ಕುಜನಿಗೆ ಇರುತ್ತೆ. ಅದರಿಂದ ಆರು ವರುಷ ವ್ಯತ್ಯಾಸ ಶುಭ ಅಂದರು. ಹನ್ನೊಂದು ಮತ್ತು ಹನ್ನೆರಡು ಈ ಎರಡು ಸಂಖ್ಯೆಗಳು ಯಮಳ ಸಂಖ್ಯೆಗಳು. ಈ ಎರಡಕ್ಕೂ ಶುಕ್ರನೇ ಅಧಿಪತಿ. ಬೆಳಕಿಗೆ ಛಾಯೆ ಅಂಟಿದಂತೆ ಮಂಗಳಕರ ಶುಕ್ರ ಮಂಗಳ ಯೋಗಕ್ಕೆ ಹನ್ನೊಂದು ಸಂಖ್ಯೆಯ ಶುಕ್ರ ಶನಿ ಯೋಗ ವೇಧೆಯಾಗಿ ಇರುತ್ತದೆ. ಶುಕ್ರ ಶನಿ ಯೋಗ ಅಂದರೆ ಸವತಿ ಯೋಗ. ಹಾಗಿಲ್ಲ, ಅನ್ಯ ಸ್ತ್ರೀ ಸಂಬಂಧ ಯೋಗ. ಇದು ನಿಜ ಇರಲಿ ಬಿಡಲಿ ಹನ್ನೆರಡನೆಯ ತಿಂಗಳಾದ ಡಿಸೆಂಬರ್ ತಿಂಗಳ ಜನನದ ಗಂಡು ಹೆಣ್ಣುಗಳಿಗೆ ಈ ಭಯವಂತೂ ಇರುತ್ತೆ. ಅಂದರೆ ದಾಂಪತ್ಯದಲ್ಲಿ ಶುಕ್ರ ಅಂದರೆ ಹೆಂಡತಿಗೆ ಪತಿರಾಯನಿಗೆ ಅನ್ಯ ಸ್ತ್ರೀ ಸಂಬಂಧದ ಕಲ್ಪನೆಯಿಂದ ಅಪನಂಬಿಕೆ ಅಂದರು. ಇದು ಅನುರಾಗದ ಕಾರಣ ಅಸೂಯೆಯ ಫಲ ಅಂತ ಕೆಲವರ ಮತ. ಇದು ದೂರವಾಗಲು ಶುಕ್ರ ಶನಿ ಯೋಗಕ್ಕೆ ಸೂಕ್ತ ಶಾಂತಿಯನ್ನು ಮಾಡಿಕೊಳ್ಳುವುದು ಲೇಸು. ಇದಕ್ಕೆ ಶುಕ್ರನ ರತ್ನವಾದ ವಜ್ರವನ್ನು ಗಂಡಾಗಲೀ ಹೆಣ್ಣಾಗಲೀ ಧಾರಣೆ ಮಾಡುವುದು ಲೇಸು. ಪ್ರತಿ ಶುಕ್ರವಾರ ಲಕ್ಷ್ಮೀಪೂಜೆಯನ್ನು ಮಾಡಿ ಐದು ಜನ ಮುತ್ತೈದೆಯರನ್ನು ಕರೆದು ಪೂಜೆ ಮಾಡಿ ಪಾನಕ ಪನಿಹಾರಗಳನ್ನು ಕೊಡಬೇಕು. ಇದರಿಂದ ಶುಕ್ರನು ಶುಭನಾಗಿ ದಾಂಪತ್ಯದಲ್ಲಿ ಸುಖ ಮೂಡುತ್ತದೆ.

ಸಾಧಾರಣ ಹನ್ನೆರಡನೆಯ ತಿಂಗಳ ಜನನದಲ್ಲಿ ಗಂಡಸಿನ ಜನ್ಮ ವರುಷಕ್ಕೆ ಆರು ಸಂಖ್ಯೆಯನ್ನು ಸೇರಿಸಿದರೆ ಬರುವ ವರುಷದ ಕನ್ಯೆ ಮದುವೆಯಾಗುತ್ತೆ. ಹಾಗಿಲ್ಲ, ಅದು ತಪ್ಪಿ ಹನ್ನೆರಡು ವ್ಯತ್ಯಾಸದ ಹೆಣ್ಣು ಮದುವೆಯಾಗುತ್ತದೆ.

## ದಂಪತಿಗಳಲ್ಲಿ ಹೆಣ್ಣಿಗೆ ವಯಸ್ಸು ಕಡಿಮೆ ಇರುವುದು ಲೇಸು.

ಸಾಧಾರಣವಾಗಿ ಮದುವೆಯಾಗುವಾಗ ಕಡಿಮೆ ವಯಸ್ಸಿನ ಹೆಣ್ಣು ಉತ್ತಮ ಅಂದರು. ವಯಸ್ಸಾದ ಮೇಲೆ ತನ್ನ ಆಕರ್ಷಕ ಶಕ್ತಿಯನ್ನು ಕಳೆದುಕೊಂಡು ಗಂಡನಿಗೆ ಸುಖಾನುಭವ ದಲ್ಲಿ ಪೂರಕಳಾಗಳು. ವಯಸ್ಸಿನ ಏರಿಕೆಯೊಡನೆ ವಿವೇಕ ಜ್ಞಾನವೂ ಬೆಳೆದು ಬಂದು ಕಾಮಲಾಲಸೆ ಅವಳಿಗೆ ಹಿಡಿಸದು. ಇನ್ನು ಗಂಡನಿಗೆ ವಯಸ್ಸು ಕಡಿಮೆ ಆಗಿದೆ. ಆಗ ಸಮರತಿಗೆ ವಿಘ್ನ.

ಸಂಸಾರದಲ್ಲಿ ನಾಯಕನು ಹಿರಿಯನು. ಆಗ ಅವನಿಗೆ ಗೌರವ. ಅವನ ಮಾತಿಗೆ ಬೆಲೆ. ನಾಯಕನ ಗ್ರಹ ಯೋಗಗಳೇ ಸಂಸಾರದ ಆಗುಹೋಗುಗಳಿಗೆ ಪ್ರಧಾನ. ಹಿರಿಯ ಗಂಡು, ಆಗ ಗ್ರಹಚಾರ ಬಂದಾಗ ಕಷ್ಟ ಬರುವುದು ಮೊದಲು ಅವನಿಗೆ. ಅದನ್ನು ತಾಳಿ ಬಾಳಲು ಅವನಿಗೆ ಸಾಮರ್ಥ್ಯ ವಿವೇಕಗಳ ಸಹನೆಗಳೂ ದೈವದತ್ತ. ಇತರರಿಗೆ ಆ ಕಷ್ಟ ಎರಡನೆಯ ಸಲ

ಬರುವುದರಿಂದ ಅದರ ಕೇಡಿನ ತೀವ್ರತೆಯೂ ಕಡಿಮೆ. ಈ ಕಾರಣ ಹೆಣ್ಣಿನ ಕ್ಷೇಮಕ್ಕಾಗಿ ಸಣ್ಣ ವಳಿರಬೇಕು ಅಂದರು. ಗಂಡಸಿಗಿಂತ ಹೆಣ್ಣಿಗೆ ಉದ್ವೇಗ ಹೆಚ್ಚು. ದ್ವೇಷಾಸೂಯೆಗಳು ತೀವ್ರ. ಮಾನಸಿಕ ಕಷ್ಟ ಬಂದಾಗ ವಿವೇಕ ಕೈಬಿಡುವುದೂ ಹೆಚ್ಚು. ಆತ್ಮಹತ್ಯೆಯ ಚಟ ಬೇರೆ. ಇನ್ನೂ ಅನೇಕ ನ್ಯೂನಾತಿರೇಕಗಳಿಂದ ಸಂಸಾರದಲ್ಲಿ ಹೆಣ್ಣಿಗೆ ಗಂಡನಿಗಿಂತ ವಯಸ್ಸು ಕಡಿಮೆ ಇರುವುದು ಲೇಸು. ಬಹುಶಃ ಇದೇ ಕಾರಣದಿಂದ ಹೆಣ್ಣು ಹುಟ್ಟಿದ ನಕ್ಷತ್ರ ಮತ್ತು ರಾಶಿಗಳೂ ಸಹ ಗಂಡಿನ ನಕ್ಷತ್ರ ರಾಶಿಗಳನಂತರ ಇದ್ದರೆ ಲೇಸು. ಇದನ್ನು ಸ್ತ್ರೀ ಪೂರ್ವದೋಷ ಅಂದರು. ಕಾರಣ ಶನಿ ಗೋಚರದಲ್ಲಿ ಶನಿಕಾಟ ಬಂದಾಗ ಹೆಣ್ಣಿನ ರಾಶಿ ಮೊದಲು ಬಂದರೆ ಆಗ ಆ ಶನಿಕಾಟ ಮೊದಲು ಹೆಣ್ಣಿಗೆ ನಡೆಯುತ್ತದೆ. ಸಂಸಾರದಲ್ಲಿ ಶನಿಕಾಟ ಮೊದಲು ಯಾರಿಗೆ ಆಗ ಅದರ ತೀವ್ರತೆಯ ಫಲ ಪರಿಣಾಮಗಳೂ ಅವರಿಗೇ ಆಗುತ್ತದೆ. ಈ ಕಾಟ ಹೆಣ್ಣಿಗೆ ಬಂದರೆ ಸಂಸಾರದಲ್ಲಿ ಎಲ್ಲರಿಗೂ ಬಂದಂತೆಯೇ ಸರಿ. ಕಾರಣ ಆಕೆ ತನ್ನ ಕಾಟದಿಂದ ಎಲ್ಲರಿಗೂ ಕಾಡುತ್ತಾಳೆ. ಆದರೆ ಹೆಣ್ಣಿನ ನಕ್ಷತ್ರ ರಾಶಿ ಗಂಡಿನ ರಾಶಿಯನ್ನು ದಾಟಿದೆ. ಆಗ ಮೊದಲ ಶನಿಕಾಟ ಗಂಡಿಗೆ ಅನಂತರ ಹೆಣ್ಣಿಗೆ. ಆಗ ಹೆಣ್ಣು ಗಂಡನಿಗೆ ಸಮಾಧಾನಕರ ಸಾಧನೆಯಾಗಿ ಸಂಸಾರದಲ್ಲಿ ಸುಖಕ್ಕೆ ಸುಗಮ ಹಾದಿ ಅಂದರು. ಕಾರಣಾಂತರಗಳಿಂದ ಮಿಂಚಿದ ಸನಿವೇಶಗಳಿಂದ ಹೆಚ್ಚು ವಯಸ್ಸಿನ ಹೆಣ್ಣನ್ನು ಮದುವೆಯಾಗಿರುವ ಸಂಸಾರಗಳಿವೆ. ಆದರೆ ಅಲ್ಲಿ ಸುಖದ ಲಹರಿಗಳು ಕಡಿಮೆ ಎನ್ನುವುದು ಅವರಿಗೆ ಅನಂತರ ಅರಿವಾಗಲು ತಡವಾಗದು.

ತಿಂಗಳ ಸಂಖ್ಯೆಯ ಫಲ ಜನಜೀವನದಲ್ಲಿ ಸುಖದ ಬಯಕೆಗಳನ್ನು ಪೂರೈಸಲು ಒಂದು ಸಾಧನೆ. ಇದರ ಅರಿವಿನಿಂದ ತನ್ನ ಸನ್ನಿವೇಶಗಳಿಗೆ ಸಹಕಾರಿಯಾದ ಬಾಳ ಸಂಗಾತಿಯನ್ನು ಆರಿಸಲು ಸಾಧ್ಯ. ಇದರ ನೆರವು ಸಮಾಜದ ಏಳಿಗೆಗೆ ಪೂರಕವಾದರೆ ಶಾಸ್ತ್ರದ ಗುರಿ ಸಾಧಿಸಿದೆ ಎಂದರ್ಥ.

# ಭಾಗ ೩

# ವರುಷ ಸಂಖ್ಯೆಯ ಮಹತ್ವ

ಮಂದಿ ಹುಟ್ಟಿದ ತಾರೀಖು ಅಂದರೆ ಜನ್ಮದಿನ, ಮಾಸ ಸಂಖ್ಯೆ ಮತ್ತು ವರ್ಷ ಸಂಖ್ಯೆಗಳಿಂದ ಕೂಡಿದ್ದು. ಇವುಗಳಲ್ಲಿ ಜನ್ಮ ದಿನಾಂಕ ಅವರ ಸ್ವಭಾವ ಮತ್ತು ಗುಣಗಳನ್ನು ತೋರಿಸುತ್ತೆ. ಮಾಸ ಸಂಖ್ಯೆ ಅವರ ಸಸಾರದ ಸ್ಥಿತಿಗತಿಗಳನ್ನು ರೂಪಿಸುವುದರಲ್ಲಿ ಸಹಾಯಕ. ಅದರೆ ವರುಷ ಸಂಖ್ಯೆ ಹಾಗಲ್ಲ. ಇದರ ಉಪಯೋಗಗಳು ಹಲವಾರು. ಶಾಸ್ತ್ರ ದೇಶ ವಿದೇಶಗಳಲ್ಲಿವೆ. ವಿದೇಶದಲ್ಲಿ ಈ ವರುಷ ಸಂಖ್ಯೆಯನ್ನು ಫಲ ನಡೆಯುವ ವರುಷಗಳನ್ನು ತೋರಿಸಲು ಉಪಯೋಗಿಸುತ್ತಾರೆ. ಗಣಪತಿ ಸಂಖ್ಯಾಶಾಸ್ತ್ರದಲ್ಲಿ ಈ ವರ್ಷ ಸಂಖ್ಯೆಗೆ ಎರಡು ನಮೂನೆ ಉಪಯೋಗಗಳಿವೆ. ಒಂದು ಫಲ ನಡೆಯುವ ವರುಷ ತೋರಿಸುತ್ತದೆ. ಎರಡು, ಮಂದಿ ಲೋಕದಲ್ಲಿ ತಮ್ಮ ಬಗ್ಗೆ ಯಾವ ರೀತಿ ಅಭಿಪ್ರಾಯವನ್ನು ಹೊಂದುತ್ತಾರೆ ಎನುವುದು. ಕೆಲವರ ಮತದಂತೆ ಇದು ಅವರು ಮಾಡುವ ಉದ್ಯೋಗವನ್ನು ತೋರಿಸುತ್ತದೆ ಅಂದರು.

ವಿದೇಶಿಯರು ಜನ್ಮ ದಿನಾಂಕ, ಮಾಸಾಂಕ ಮತ್ತು ವರ್ಷ ಸಂಖ್ಯೆಗಳನ್ನು ಕೂಡಿಸಿ ಬಂದ ಮೊತ್ತವನ್ನು ಒಂಭತ್ತರಿಂದ ಭಾಗಿಸಿ ಮುಂಬರುವ ಶೇಷ ಸಂಖ್ಯೆಯನ್ನು ಪ್ರಧಾನ ಅಂಕವಾಗಿ ತೆಗೆದು ಕೊಳ್ಳುತ್ತಾರೆ. ಇದು ಮೊತ್ತನ್ನು ಏಕಾಂಕಕ್ಕೆ ಇಳಿಸಿಕೊಳ್ಳುವ ಕ್ರಮ. ಈ ಸಂಖ್ಯೆಯಿಂದ ಮಂದಿಯ ಗುಣಶೀಲಗಳನ್ನು ವಿಮರ್ಶೆ ಮಾಡುತ್ತಾರೆ. ಈ ಸಂಖ್ಯೆಯನ್ನೇ ವರುಷ ಸಂಖ್ಯೆಗೆ ಸೇರಿಸಿ ಬಂದ ಮೊತ್ತವನ್ನು ಏಕಾಂಕಕ್ಕೆ ಇಳಿಸಿ ಬಂದ ಸಂಖ್ಯೆ ಯಾವ ಗ್ರಹವನ್ನು ತೋರಿಸುತ್ತೆ. ಆ ಗ್ರಹದಿಂದ, ಆ ವರುಷದ ಫಲವನ್ನು ನಿರ್ಣಯ ಮಾಡುತ್ತಾರೆ. ಪುನ: ಈ ಸಂಖ್ಯೆಯನ್ನು ಕೂಡಿ ಬಂದ ವರುಷ ಸಂಖ್ಯೆಗೆ ಸೇರಿಸಿ ಮುಂಬರುವ ವರುಷದಲ್ಲಿ ಮೊದಲಿನಂತೆ ಫಲ ನಿರ್ಣಯವನ್ನು ಮಾಡುತ್ತಾರೆ. ಅಂದರೆ ಎಲ್ಲಾ ರೀತಿ ಫಲಗಳೂ ಕೇವಲ ಒಂಭತ್ತು ಸಂಖ್ಯೆಗಳ ಪರಿಮಿತಿ ಸೀಮಿತ. ಇಲ್ಲಿ ಒಂದು ರೀತಿ ವಿಶೇಷವನ್ನು ತಜ್ಞರು ತೋರಿಸುವುದೂ ಉಂಟು. ಯಾವ ಎರಡು ಸಂಖ್ಯೆಗಳನ್ನು ಸೇರಿಸಿ ಈ ಏಕಾಂಕ ಸಂಖ್ಯೆಯಾಗುತ್ತದೆಯೋ ಆ ಸಂಖ್ಯೆಯ ಫಲವನ್ನು ಹೇಳುವಾಗ ಆ ಎರಡು ಸಂಖ್ಯಾ ಗ್ರಹಗಳ ತತ್ವಗಳನ್ನೇ ಆಧಾರವಾಗಿಟ್ಟುಕೊಂಡು ಆ ಏಕಾಂಕ ಸಂಖ್ಯೆಯ ಫಲ ವಿಮರ್ಶೆ ಮಾಡುತ್ತಾರೆ.

ಉದಾಹಾರಣೆಗೆ ಜನ್ಮ ದಿನಾಂಕ : ೨೪ ಡಿಸೆಂಬರ್ ೧೯೨೪. ಇದರಲ್ಲಿ ದಿನಾಂಕ ೨೪ ಇದರ ಏಕಾಂಕ ೬ ಈ ಸಂಖ್ಯೆ ಏಕಾಂಕವಾಗುವಾಗ ೨ ಮತ್ತು ೪ ಸಂಖ್ಯೆಗಳ ಗುಣಗಳಿಂದ ಕೂಡಿರುತ್ತೆ. ಈ ೨ ಸಂಖ್ಯೆಗೆ ಚಂದ್ರ ಮತ್ತು ೪ ಸಂಖ್ಯೆಗೆ ಯುರೇನಸ್ ಗ್ರಹಗಳು ಅಧಿಪತಿಗಳು. ಕೆಲವರು ೪ಕ್ಕೆ ಚಂದ್ರನ ಬೇರೆ ಸಂಖ್ಯೆ ಅಂದರು. ಇತ್ತೀಚೆಗೆ ಆ ಸಂಖ್ಯೆ ರಾಹುವಿನದು ಅಂದರು. ಆದರೆ ಈ ಎರಡು ಸಂಖ್ಯೆಗಳ ಮೊತ್ತದ ಸಂಖ್ಯೆ ೬ಕ್ಕೆ ಶುಕ್ರ ಅಧಿಪತಿ. ದಿನಾಂಕದಿಂದ ಬಂದ ಪ್ರಧಾನಾಂಕ

ಶುಕ್ರನದು. ಇದರಿಂದ ಈ ಮುಂದಿಗೆ ಶುಕ್ರನ ಗುಣಗಳನ್ನು, ನಡವಳಿಕೆಯನ್ನು ಹೇಳಿದರು. ಫಲ ಶುಕ್ರನಾದರೂ ಕಾರಣ ಈ ಬಿಡಿ ಎರಡು ಸಂಖ್ಯೆಗಳ ಗ್ರಹಗಳಾದ ಚಂದ್ರ ಮತ್ತು ರಾಹುವಿನ ಗುಣಗಳ ಮಿಳಿತಫಲ ಈ ಶುಕ್ರನ ಫಲದಲ್ಲಿ ಕಾಣುವಂತೆ ವಿಮರ್ಶೆ ಮಾಡುತ್ತಾರೆ. ಇದೇ ರೀತಿ ದಿನಾಂಕಕ್ಕೆ ಮಾಸಾಂಕ ೧೨ರ ಏಕಾಂಕ ಸಂಖ್ಯೆಯಾದ ೩ರನ್ನು ಸೇರಿಸಿದರೆ ಬರುವ ಸಂಖ್ಯೆ ೯. ಈ ೯ ಸಂಖ್ಯೆಯನ್ನು ವರುಷ ಸಂಖ್ಯೆ ೧೯೨೪ ಇದರ ಏಕಾಂಕ ಸಂಖ್ಯೆ ೭ಕ್ಕೆ ಸೇರಿಸಿದರೆ ಬರುವ ಸಂಖ್ಯೆ ೧೬. ಇದರ ಸಮಷ್ಟಿ ಏಕಾಂಕ ಸಂಖ್ಯೆ ೭. ಈ ಉದಾಹಾರಣೆಯಲ್ಲಿ ದಿನಾಂಕ ಸಂಖ್ಯೆ ೬. ಸಮಷ್ಟಿ ಸಮಷ್ಟಿ ಸಂಖ್ಯೆ೭. ಈ ಸಂಖ್ಯೆಗೆ ಚಂದ್ರ ಅಧಿಪತಿ. ಪ್ರಧಾನ ಸಂಖ್ಯೆ ೭ರನ್ನೇ ಹಿಡಿದು ಫಲವನ್ನು ವಿಮರ್ಶೆ ಮಾಡುತ್ತಾರೆ.

## ಗಣಪತಿ ಸಂಖ್ಯಾ ಶಾಸ್ತ್ರದಲ್ಲಿ ವರ್ಷ ಸಂಖ್ಯೆಯ ಉಪಯೋಗ

ಶ್ರೀ ಗಣಪತಿ ಸಂಖ್ಯಾ ಶಾಸ್ತ್ರದಲ್ಲಿ ದಿನ ಸಂಖ್ಯೆ ಮಂದಿಯ ಗುಣಶೀಲಗಳನ್ನು ತೋರಿಸುತ್ತದೆ. ಅಷ್ಟೇ ಅಲ್ಲ, ಅವರು ಮಾಡುವ ಪ್ರತಿಯೊಂದು ಕೆಲಸದಲ್ಲಿಯೂ ಈ ಸಂಖ್ಯೆಯ ಪ್ರಭಾವ ಇರುತ್ತದೆ. ಇದು ವ್ಯಕ್ತಿಯ ಮೂಲಾಂಕ ಅಂದರೆ ತಪ್ಪಲ್ಲ. ಈ ಕಾರಣ ಈ ದಿನಾಂಕ ಸಂಖ್ಯೆಯನ್ನು ವರ್ಷ ಸಂಖ್ಯೆಗೆ ಸೇರಿಸಿದರೆ ಬರುವ ಇಸ್ವಿಯ ವರ್ಷದಲ್ಲಿ ಮೊದಲ ಹಂತವಾದ ವಿದ್ಯೆಯ ಬಾಳುವೆಯನ್ನು ರೂಪಿಸುತ್ತದೆ. ಇದು ವಿದೇಶಿಯರ ಅನುಕರಣವೇನೂ ಅಲ್ಲ. ಅವರೆ ದಿನಾಂಕ ಸಂಖ್ಯೆ ಆ ಸಂಖ್ಯೆಯಷ್ಟು ವರುಷಗಳ ತನ್ನ ವಿಶಿಷ್ಟ ಪ್ರಭಾವವನ್ನು ಬೀರುತ್ತೆ ಅಂದರ್ಥ. ಇಲ್ಲಿ ದಿನಾಂಕ ಸಂಖ್ಯೆ ಏಕಾಂಕವಾದರೆ ಆಗ ಆ ದಿನಾಂಕದ ವರ್ಗದ ಇತರ ಸಂಖ್ಯೆಗಳೆಷ್ಟು ವರುಷಗಳು ವಿವಿಧ ಹಂತಗಳನ್ನು ತೋರಿಸುತ್ತದೆ. ಉದಾಹಾರಣೆಗೆ ಒಂದು. ಇದು ಕನಿಷ್ಟ ಏಕಾಂಕ ಸಂಖ್ಯೆ. ಒಂದು ವರುಷದ ಮಗುವಿಗೆ ಯಾವ ರೀತಿಯ ಬಾಳಿನ ಹಂತ ತೋರಿಸಬಲ್ಲದು. ಈ ಕಾರಣ ಒಂದು ಸಂಖ್ಯೆಯ ಗ್ರಹ ಶನಿಗೆ ಸಂಬಂಧಿಸಿದ ಇತರ ಸಂಖ್ಯೆಯ ವರ್ಗದ ಸಂಖ್ಯೆಗಳನ್ನು ಬಳಸಿಕೊಳ್ಳುವುದು ಲೇಸು. ಇದಕ್ಕೆ ಶನಿ ವರ್ಗಕ್ಕೆ ಸೇರಿದ ಎಂಟು ಸಂಖ್ಯೆ ಯನ್ನು ಬಳಸಿಕೊಳ್ಳುತ್ತದೆ. ಜನ್ಮ ದಿನಾಂಕ ಒಂದು ಅಥವಾ ಎಂಟಾದರೆ ಮೊದಲು ಎಂಟು ವರುಷಗಳು ಕಷ್ಟ. ಆ ನಂತರ ದಿನಾಂಕ ಜನ್ಮ ಅರಿಷ್ಟದ ಫಲದ ನಿವಾರಣೆ ಎಂದರ್ಥ.

### ಒಂದೇ ವರ್ಗಕ್ಕೆ ಸೇರಿದ ಸಂಖ್ಯಾಗಣ

| ಸಂಖ್ಯೆ | ಗ್ರಹ | ಆ ವರ್ಗದ ಇತರ ಸಂಖ್ಯೆಗಳು |
|---|---|---|
| ೧ | ಶನಿ | ೮ |
| ೨ | ಬುಧ-ಗುರು | ೪ ಮತ್ತು೧೪ |
| ೩ | ಕುಜ- ಶನಿ | ೬ ಮತ್ತು ೯ |
| ೪ | ಚಂದ್ರ-ಬುಧ | ೨ ಮತ್ತು ೮ |
| ೫ | ಗುರು-ಮಂಗಳ | ೧೦ ಮತ್ತು ೨೦ |
| ೬ | ಕುಜ-ಶುಕ್ರ | ೩ ಮತ್ತು ೧೨ |
| ೭ | ರಾಹು | - |
| ೮ | ಬುಧ-ಶನಿ | ೧ ಮತ್ತು ೧೪ |
| ೯ | ಸೂರ್ಯ | ೩೦ |

. ತನ್ನ ಸಂಖ್ಯೆಯಷ್ಟು ವರುಷಗಳ ಕಾಲ ಜೀವನದಲ್ಲಿ ದಿನಾಂಕವು ಪ್ರಭಾವ ಬೀರುವ ಸಂಖ್ಯೆ. ಇದು ಸಾಧಾರಣ ಬಾಲ್ಯದಿಸೆಯಲ್ಲಿ ಜೀವನದ ಸುಖ ಅಥವಾ ದುಃಖಗಳನ್ನು ತೋರಿಸುತ್ತದೆ. ಆ ಕಾಲದ ನಂತರ ಆ ಸಂಖ್ಯೆ ಗ್ರಹದ ಆಧಿಪತಿ ದೇವತಾ ಪ್ರಸಾದದಿಂದ ಆ ದೋಷ ಪರಿಹಾರವಾಗಿ ಸುಖವಾಗುತ್ತದೆ. ಉದ್ಧಾಹರಣೆಗೆ ದಿನಾಂಕ ಸಂಖ್ಯೆ ಮೂರು. ಇದು ಕುಜನ ದೋಷದ ಸಂಖ್ಯೆ. ಮೂರು, ಆರು ಅಥವಾ ಒಂಭತ್ತನೆಯ ವರ್ಷದ ನಂತರ ಕುಜನಿಗೆ ಅಧಿದೇವತೆಯಾದ ದುರ್ಗಾ ಇಲ್ಲ ಸುಬ್ರಹ್ಮಣ್ಯಸ್ವಾಮಿ ದರ್ಶನವಾಗಿ ಪರಿಹಾರ ಆಗುತ್ತೆ.

ಜನ್ಮ ದಿನಾಂಕ ಸಂಖ್ಯೆಯನ್ನು ಜನನದ ಇಸ್ವಿಗೆ ಸೇರಿಸಿದರೆ ಬರುವ ವರುಷ ಜೀವನದಲ್ಲಿ ಪ್ರಬಲ ಪ್ರಗತಿಯ ಹೆಜ್ಜೆಗೆ ನಾಂದಿ ಅಂದರು. ಅದರಲ್ಲಿಯೂ ಗ್ರಹಗಳ ವಿಶೇಷ ಸಂಖ್ಯೆಗಳಂತೂ ಪ್ರಬಲ ಬದಲಾವಣೆಗೆ ಕಾರಣ ಆದೀತು ಉದಾಹಾರಣೆಗೆ ಬುಧನ ಸಂಖ್ಯೆಗಳು ಯಾವುದೇ ಇರಲಿ, ಅವರಿಗೆ ಇಪ್ಪತ್ತನಾಲ್ಕನೆಯ ವರುಷ ಜೀವನದ ಪ್ರಮುಖ ಹಂತವಾಗುತ್ತೆ. ಗುರುವಿನ ಸಂಖ್ಯೆ ಯಾವುದೇ ಇರಲಿ ಅವರಿಗೆ ಗುರುವಿನ ವಿಶೇಷ ಸಂಖ್ಯೆಯಾದ ಇಪ್ಪತ್ತೈದು ವರುಷಗಳು ಪ್ರಬಲ ಪ್ರಗತಿಯ ಹಂತವನ್ನು ತೋರಿಸುತ್ತದೆ. ಹಾಗೆಯೇ ಸೂರ್ಯನ ವಿಶೇಷ ಸಂಖ್ಯೆ ಮೂವತ್ತು. ಚಂದ್ರನ ವಿಶೇಷ ಸಂಖ್ಯೆ ನಲವತ್ತು.

## ವಯೋಪ್ರಮಾಣ ಸಂಖ್ಯಾ ಫಲಂ.

ಜನ್ಮಕಾಲದ ಗ್ರಹಗಳು ಇರುವ ಸ್ಥಾನದ ವಿಶೇಷ ಕಾರಣ ಇದ್ದೀತು. ಗ್ರಹಚಾರ ಫಲ ದುಃಖವನ್ನು ಕೊಡುತ್ತೆ. ಈ ಗ್ರಹದ ಫಲಕ್ಕೆ ಒಂದು ಕಾಲ. ಆ ಕಾಲಕ್ಕೆ ಒಂದು ಮಿತಿ ಅಗತ್ಯ. ಇಡೀ ಜೀವನವೆಲ್ಲಾ ಆ ಗ್ರಹದ ಕಾರಣ ಕಷ್ಟ ಅನುಭವಿಸುವುದು ಪ್ರಕೃತಿ ನಿಯಮಕ್ಕೆ ವಿರುದ್ಧ. ಈ ಫಲ ಕೇಡಿನದೋ ಅಥವಾ ಶುಭದಾಯಕವೋ ಅಂತೂ ಅದಕ್ಕೆ ಕಾಲ, ಕಾಲಮಿತಿ ಇರುತ್ತೆ. ಗಣಪತಿ ಸಂಖ್ಯಾ ಶಾಸ್ತ್ರದಲ್ಲಿ ಆಯಾ ಗ್ರಹದ ಇಷ್ಟ ಅಥವಾ ಅನಿಷ್ಟದ ಫಲಕ್ಕೂ ಒಂದು ಕಾಲ ಇದೆ. ಈ ಕಾಲ ಆ ಗ್ರಹದ ಸಂಖ್ಯೆಯ ದಶಕದ ಕಾಲ. ಇದರ ಮಿತಿ ಹತ್ತು ವರುಷಗಳು. ಉದಾಹರಣೆಗೆ ಚಂದ್ರನ ಸಂಖ್ಯೆ ನಾಲ್ಕು. ಚಂದ್ರನ ಶುಭಾಶುಭ ಫಲ, ನಾಲ್ಕರ ದಶಕವಾದ ನಲವತ್ತು ವರುಷಗಳ ನಂತರ ಹತ್ತು ವರುಷಗಳ ಕಾಲ ನಡೆಯುತ್ತೆ. ಅದರಲ್ಲಿಯೂ ಸಹ ಚಂದ್ರನ ಜೊತೆಗೆ ಯೋಗದಲ್ಲಿರುವ ಗ್ರಹದ ಸಂಖ್ಯೆಯ ವರುಷ ಹೆಚ್ಚಿನ ಮಹತ್ವವನ್ನು ತೋರಿಸುತ್ತೆ.

ಕೆಲವು ಹಿರಿಯ ಅನುಭವೀ ವೃತ್ತಿ ಪಂಡಿತರು ಈ ಗ್ರಹದ ದೋಷ ಆ ಗ್ರಹದ ಸಂಖ್ಯೆಯ ದಶಕ ಶುರುವಾದಾಗ ಹೋಗುತ್ತೆ. ಅಂದರು. ಬಾಲ್ಯದಿಂದ ಅದರ ದೋಷ ನಡೆದು ಆ ದಶಕ ದಲ್ಲಿ ಆ ಕೇಡು ನಿವೃತ್ತಿ ಅಂದರು. ನಲ್ವತ್ತನೆಯ ವರುಷದಿಂದ ಚಂದ್ರ ಲಗ್ನವೇ ಪ್ರಧಾನ ಅಂದ ಕಾರಣವೂ ಇದೇ ಎಂದು ಕಾಣುತ್ತೆ. ಆದರೆ ಈಗಿನ ವೃತ್ತಿತಜ್ಞರ ಮತ ಹಾಗಲ್ಲ. ದೋಷ ಅಥವಾ ಗುಣಿಯಾದ ಗ್ರಹದ ಫಲ ಬಾಲ್ಯದಲ್ಲಿ ನಡೆಯದು. ಅದರ ಸಂಖ್ಯಾ ದಶಕದ

ಕಾಲದಲ್ಲಿ ಮಾತ್ರ ನಡೆಯುತ್ತೆ. ಇದರಿಂದ ಗ್ರಹದ ಶುಭ ಅಥವಾ ಕಷ್ಟ ಆ ಸಂಖ್ಯಾ ದಶಕದಲ್ಲಿ ಮಾತ್ರ ಗೋಚರವಾಗುತ್ತೆ. ಅನುಭವದಲ್ಲಿ ಇವರ ಮತವೇ ಸಾಧು ಎಂದು ಕಂಡು ಬರುತ್ತದೆ.

ಅಲ್ಲದೇ ಮತ್ತೊಂದು ಮಾರ್ಗವೂ ಇದೆ. ವಿಶೇಷ ಪ್ರಚಾರದಲ್ಲಿರುವ ಆಂಗ್ಲ ಇಸ್ವಿಯ ಸಂಖ್ಯಾ ದಶಕದ ಗ್ರಹದ ಫಲ ಆ ದಶಕದಲ್ಲಿ ಪ್ರಾಯದ ಗಣನೆ ಇಲ್ಲದೇ ಆ ಗ್ರಹದ ಫಲವನ್ನು ನಡೆಸುತ್ತದೆ. ಈ ಕಾರಣ ಫಲ ಚಿಂತನೆಯನ್ನು ಮಾಡುವಾಗ ಈ ಪ್ರಾಯ ವರುಷ ಮತ್ತು ಆಂಗ್ಲ ಇಸ್ವಿಯ ದಶಕ ಎರಡನ್ನೂ ಸಹ ಗಣನೆಗೆ ತೆಗೆದುಕೊಂಡು ಫಲ ಹೇಳುವುದು ಸೂಕ್ತ. ಮತ್ತು ಎಲ್ಲರಿಗೂ ಹಿತ. ಇದೇ ಕಾರಣದಿಂದ ಎಪ್ಪತ್ತು ಸಂಖ್ಯಾದಶಕದ ಫಲ ಆಂಗ್ಲ ಇಸ್ವಿಗೆ ಅನ್ವಯ ಮಾಡಿ ಬರೆದಿದೆ. ಬಹು ಮಂದಿ ಈ ವಯಸ್ಸಿನಲ್ಲಿ ಫಲ ಅನುಭವಿಸಲು ಬದುಕಿದ್ದಾರು. ಇಲ್ಲ. ಆದರೆ, ಇಸ್ವಿ ಫಲವಂತೂ ಇರುವವರೆಗೆ ನಡೆಯುತ್ತೆ.

ದಿನ ಸಂಖ್ಯಾಕ್ರಮದ ವಿವರಣೆ ಹಿಂದೆ ಹೇಳಿದೆ. ಆದರೆ ಅದರಲ್ಲಿ ಮೂವತ್ತು ಸಂಖ್ಯೆ ಯವರೆಗೆ ಫಲವನ್ನು ವಿವರಿಸಿದೆ. ಮೂವತ್ತರ ನಂತರ ಈ ವರುಷ ಫಲದಲ್ಲಿ ಗೊತ್ತಾಗುತ್ತೆ. ಮೂವತ್ತು ಸೂರ್ಯನ ವಿಶೇಷ ಸಂಖ್ಯೆ ಅಂದರು. ಗುರುವಿಗೆ ಇಪ್ಪತ್ತು. ಐವತ್ತು ಇದ್ದಂತೆ. ಇದ ರಿಂದ ಸಾಮುದ್ರಿಕ ಶಾಸ್ತ್ರದಲ್ಲಿ ಸೂರ್ಯನ ರೇಖೆ ಮತ್ತು ದಳದ ಫಲ ಮೂವತ್ತರ ನಂತರ ನಡೆಯುತ್ತೆ ಅಂದರು. ಮೂರು ಸಂಖ್ಯೆ ಕುಜನ ದೋಷ ಸಂಖ್ಯೆಯಾದರೂ ಇವನ ಗುಣಮುಖ್ಯವಾದ ದಶಕ ಅರವತ್ತು ಆಗುತ್ತೆ. ಕಾರಣ ಕುಜನ ಮತ್ತೊಂದು ಸಂಖ್ಯೆ ಆರು!

ಸೂರ್ಯನು ದೋಷ ನಾಶಮಾಡುವ ಗ್ರಹ. ಆದರೂ ಇವನಿಗೆ ಶನಿ ಸಂಬಂಧದಿಂದ ಬಲ ಮೋ[illegible] ಅಶುಭನಾದಾನು. ಇದರ ದೋಷ ರಾಶಿ ಚಕ್ರದಲ್ಲಿ ಶನಿ ಒಂದು ಸಲ ಸುತ್ತು ಬಂದರೆ ಪರಿಹಾ[illegible]ವಕ್ಕೆ ಹಿಡಿಯುವ ಕಾಲ ಮೂವತ್ತು ವರ್ಷ. ಸೂರ್ಯನ ಶುಭತ್ವದ ದಶಕ ಮೂವತ್ತು ಆಗಲು [illegible]ಮೂ ಒಂದು ಕಾರಣ.

[illegible]ತ್ತರ ದಶಕದಲ್ಲಿ ಸೂರ್ಯನು ಶುಭನು. ನೌಕರಿ, ಅಧಿಕಾರಿ ಗ್ರಹ ಸೂರ್ಯ. ಇದರಿಂದ ಮೂವತ್ತು [illegible] ನಂತರ ನೌಕರಿ ಪ್ರಗತಿ. ಅಧಿಕಾರಿಯ ಅನುಸರಣೆ ಮಾಡುವ ಸಮಾಧಾನ ಮನ[illegible]ಯು ದೋಷದ ಪರಿಹಾರದ ಕಾರಣ ರೋಗ ರೂಜಿನಗಳನ್ನು ಪರಿಹಾರ ವಾಗ[illegible]ಸಹ ಈ ಮೂವತ್ತನೆಯ ವರುಷದ ನಂತರ ಸುಯೋಗ ನಡೆಯುತ್ತದೆ. [illegible] ತುಲಾ ರಾಶಿಯಲ್ಲಿ ನೀಚತ್ವದ ಕಾರಣ ತಂದೆಯೊಡನೆ ವಿರಸವನ್ನು ಕೊಟ್ಟಾನು. [illegible]ರಿಗೂ ಸಹ ಮೂವತ್ತು ವರುಷದ ನಂತರ ತಂದೆಯಿಂದ ಸ್ವತಂತ್ರವಾಗಿ ಜೀವನ ಪ್ರಾರಂಭವಾಗಿ ಆ ವಿಗಸ ತಪ್ಪುತ್ತೆ. ಅಲ್ಲದೇ ಈ ಕಾಲದಲ್ಲಿ ಸೂರ್ಯನ ಪ್ರೀತಿಯಾಗಿ ಅವನನ್ನು ಪೂಜೆ ಮಾಡಲು ಆರಂಭವಾಗುತ್ತೆ. ಇಲ್ಲಿ ಸೂರ್ಯನೊಡನೆ ಇರುವ ಗ್ರಹದ ಸಂಖ್ಯೆಯ ಬಿಡಿ ವರುಷದಲ್ಲಿ ಈ ಅಶುಭ ಫಲ ಕೊನೆಯಾಗುತ್ತೆ. ಉದಾಹರಣೆಗೆ ತುಲಾರಾಶಿಯಲ್ಲಿ ಸೂರ್ಯನಿದ್ದು ಅಲ್ಲಿ ಜೊತೆಗೆ ರಾಹು ಇದ್ದಾನೆ. ಇದು ತೀವ್ರತರವಾದ ಅರಿಷ್ಟ. ಇದರಿಂದ ಅಶುಭಫಲ. ಸೂರ್ಯನ ದಶಕವಾದ ಮೂವತ್ತು ವರುಷದಿಂದ ರಾಹುವಿನ ಸಂಖ್ಯೆಯಾದ ಏಳನೆಯ ವರುಷ ಬಂದಾಗ ಪರಿಹಾರವಾಗುತ್ತೆ. ಅಂದರೆ ಮೂವತ್ತೇಳನೆ. ವರುಷದಲ್ಲಿ ಪರಿಹಾರ. ಬಹುಶಃ ಆ ಏಳು ವರುಷ ಕಾಲ ಕಷ್ಟದ ಕಾಲ ಎನ್ನಬಹುದು. ಮುಂದಿಗೆ ಜಾತಕ

ಇದ್ದಲ್ಲಿ ಸೂರ್ಯನಿಗೆ ಯಾವ ಗ್ರಹದ ಸಂಬಂಧವಿದೆ ಎಂದು ತಿಳಿಯಬಹುದು. ಹಾಗಿಲ್ಲ ಕೇವಲ ಸಂಖ್ಯಾ ಶಾಸ್ತ್ರದಲ್ಲಿ ಹೇಗೆ ಗೊತ್ತಾಗಬೇಕು ? ಇದು ಗುಣಶೀಲಗಳಿಂದ ಅರಿವಾಗುತ್ತದೆ.

ಬಿಡಿ ಸಂಖ್ಯೆ ಯಾವುವೇ ಇರಲಿ, ಅದರ ದಶಕ ಶುರು ಆದಾಗ ಆ ಸಂಖ್ಯೆಯ ಗ್ರಹ ಫಲವನ್ನು ಕೊಡುತ್ತೆ. ಆದರ ಸಂಬಂಧದ ಗ್ರಹ ತನ್ನ ಬಿಡಿ ಸಂಖ್ಯೆಯ ವರುಷದಲ್ಲಿ ಫಲವನ್ನು ಮಾಡಲೇ ಕೊಡುತ್ತೆ. ಜನ್ಮ ಕಾಲದ ಜಾತಕ ಇಲ್ಲ, ಆಗ ಅದರ ಗ್ರಹದ ಯೋಗಗಳು ಅರಿವಾಗುವುದು. ಆಗ ಆ ಗ್ರಹದ ದಶಕ ಬಂದಾಗ ಒಳ್ಳೆಯದು, ಕೇಡಿನದು ಎರಡು ನಮೂನೆ ಫಲಗಳೂ ನಡೆಯುತ್ತವೆ. ಒಂದು ಗ್ರಹದ ಪೂರ್ಣಾಂಕದ ವರುಷ ನಡೆಯುವಾಗ ಈ ಫಲ ಸ್ಥೂಲವಾಗಿ ತಿಂಗಳ ಸಂಖ್ಯೆಯಲ್ಲಿ ನಡೆಯುತ್ತೆ. ಉದಾಹರಣೆಗೆ ಜನ್ಮ ದಿನದಿಂದ ಐದನೆಯ ತಿಂಗಳಿನಲ್ಲಿ ಗುರುವಿನ ಫಲ ಹಾಗಿಲ್ಲ ಆಂಗ್ಲ ಐದನೆಯ ತಿಂಗಳಾದ ಮೇನಲ್ಲಿ ಗುರುವಿನ ಫಲ ಇತ್ಯಾದಿ. ಆಗ ಆ ದಶಕದಲ್ಲಿ ಐದು ವರುಷಗಳು ಗುರುವಿನ ಅರಿಷ್ಟ ಕಾಲ ಎಂದು ತಿಳಿಯಬೇಕು. ಈ ಕಾಲದಲ್ಲಿ ಆ ಅರಿಷ್ಟದಿಂದ ಮಕ್ಕಳಿಂದ ಚಿಂತೆ, ವಿದ್ಯಾ ನಷ್ಟ, ಧನಹಾನಿ ಇತ್ಯಾದಿ ಫಲಗಳು ಕಂಡು ಬರುತ್ತವೆ. ಆಗ ಗುರುವಿಗೆ ಶಾಂತಿ ಮಾಡಿಕೊಳ್ಳಬೇಕು. ದಶಕ ಸಂಖ್ಯಾಗ್ರಹದ ಶತ್ರುಗ್ರಹದ ಬಿಡಿ ಸಂಖ್ಯಾ ವರುಷ ಬಂದಾಗ ಹಾನಿ, ಮಿತ್ರ ಗ್ರಹದ ಬಿಡಿ ಸಂಖ್ಯಾ ವರುಷದಲ್ಲಿ ಸುಯೋಗ ನಡೆಯುತ್ತೆ. ಮೊತ್ತದಲ್ಲಿ ದಶಕದ ಪೂರ್ಣಾಂಕ, ಅಂದರೆ ಮೂವತ್ತು, ನಲವತ್ತು, ಐವತ್ತು ಇತ್ಯಾದಿ ವರುಷಗಳಲ್ಲಿ ತಿಂಗಳ ಸಂಖ್ಯೆಯಲ್ಲಿ ಆ ದಶಕದ ಬಿಡಿ ಸಂಖ್ಯೆಯ ಗ್ರಹಗಳ ಫಲಗಳು ಸ್ಥೂಲವಾಗಿ ಕಾಣಿಸಿಕೊಳ್ಳುವುವು ಎಂದರ್ಥ.

ಉದಾಹಾರಣೆಗೆ ಮೂವತ್ತು ಪೂರ್ಣಾಂಕ. ಇದಕ್ಕೆ ಗ್ರಹ ಸೂರ್ಯ. ಇಲ್ಲಿ ಶನಿ ಇವನ ಶತ್ರು. ಇದರಿಂದ ಈ ವರುಷ ಜನವರಿ ತಿಂಗಳಿನಲ್ಲಿ ಸೂರ್ಯನಿಗೆ ಶನಿ ಯೋಗ. ಹಾಗಿಲ್ಲ, ಜನ್ಮ ದಿನದಿಂದ ಮೊದಲನೆಯ ತಿಂಗಳು ಶನಿಯೋಗ. ಇದರಿಂದ ನೌಕರಿಯಲ್ಲಿ ಅದಲು ಬದಲು. ಅಧಿಕಾರಿಯಿಂದ ಹಿಂಸೆ. ಆದರೆ ಈ ಯೋಗ ವೈದ್ಯರಿಗೆ ಸುಯೋಗವನ್ನು ಕೊಡುತ್ತದೆ. ಇದರಿಂದ ಮೂವತ್ತೊಂದನೆಯ ವರುಷದಲ್ಲಿ ವೈದ್ಯರಿಗೆ ಕೀರ್ತಿ, ಸ್ಥಿರ ವೃತ್ತಿ, ರೋಗ ನಿವಾರಕ ಶಕ್ತಿ ಎಲ್ಲವೂ ಸಾಧನೆಯಾಗುತ್ತವೆ. ಹಿಂದಿನ ಕ್ರಮದಂತೆ ಈ ಮೂವತ್ತೊಂದು ವರುಷದಲ್ಲಿ ಸೂರ್ಯದೆಶೆಯಲ್ಲಿಯ ಶನಿಭಕ್ತಿಯ ಫಲದಂತೆ ನಡೆಯುತ್ತೆ. ಈ ಸಂಖ್ಯಾ ಶಾಸ್ತ್ರ ಫಲ ಜಾತಕದ ಗ್ರಹಯೋಗಗಳಿಗೂ ಸುಲಭವಾಗಿ ಅನ್ವಯ ಮಾಡಲು ಸಾಧ್ಯ. ಪಿತೃಗ್ರಹ ಸೂರ್ಯ. ಈ ವರುಷದಲ್ಲಿ ಸೂರ್ಯ ಶನಿಯೋಗದಿಂದ ಕೆಲವರಿಗೆ ಪಿತೃ ಹಾನಿಯಾದರೆ ಹಲವರಿಗೆ ಪಿತೃ ಅಸ್ವಿ ಹಾಳು. ಹಾಗಿಲ್ಲ, ಸೂರ್ಯನ ಕಾಯಿಲೆ ಜ್ವರದಿಂದ ಪೀಡೆ ಇತ್ಯಾದಿ ಫಲ ಅನುಭವಕ್ಕೆ ಬಂದೀತು. ಈ ಯೋಗ ಸಿನಿಮಾ ಉದ್ಯಮಕ್ಕೆ ಮಾತ್ರ ಸುಯೋಗದ ಕಾಲ.

## ಮೂವತ್ತೆರಡನೆಯ ವರುಷ ಫಲ

ಜನ್ಮ ಪ್ರಾಯ ಮೂವತ್ತೆರಡು ವರುಷ. ಹಾಗಿಲ್ಲ, ಆಂಗ್ಲರ ಮೂವತ್ತೆರಡನೆಯ ಇಸ್ವಿಯಲ್ಲಿ ಸೂರ್ಯನಿಗೆ ಬುಧನ ಯೋಗ. ಕಾರಣ ಎರಡು ಬಿಡಿ ಸಂಖ್ಯೆಗೆ ಬುಧ ಗುರು ಯೋಗ. ಇದು ಬುಧ ಪ್ರಗತಿಯ ಸಂಖ್ಯೆ, ಸೂರ್ಯನ ಸಂಬಂಧದ ದಶಕ ವರುಷದಲ್ಲಿ ಬುದ್ಧಿಗೆ ಪ್ರಶಂಸೆ, ನೌಕರಿಯಲ್ಲಿ

ಬದ್ಧಿ ಆದೀತು. ನೌಕರಿಗಾಗಿ ಮಾಡುವ ಪೋಟಿ ಪರೀಕ್ಷೆಗಳಲ್ಲಿ ಉತ್ತಮ ದರ್ಜೆಯಲ್ಲಿ ತೇರ್ಗಡೆಯೂ ಆಗಿ ಉತ್ತಮ ನೌಕರಿ ಲಾಭ. ಅದರಲ್ಲಿಯೂ ಬುಧನು ಲೇಖನ ಮತ್ತು ಗಣಿತ ಗ್ರಹ. ಈ ಬಾಬಿನ ವಿದ್ಯೆಗಳಲ್ಲಿ ಕೌಶಲ ಪ್ರಾಪ್ತಿ. ಜ್ಯೋತಿಷ್ಯ ಜ್ಞಾನ ಕೆಲವರಿಗೆ ಬಂದೀತು. ಲೇಖಕರಿಗೆ ಕೀರ್ತಿ, ಸರಕಾರದ ಸೆಕ್ರೆಟರಿಯ ಅಧಿಕಾರ. ವಿದ್ಯಾಲಯಗಳಲ್ಲಿ ಭಾಷೆ ಅಧ್ಯಾಪಕ ಹುದ್ದೆ. ವೃತ್ತಾಂತ ಪತ್ರಿಕೆಗಳಲ್ಲಿ ನೌಕರಿ. ಗಣಿತ ಪಾಂಡಿತ್ಯ ಇತ್ಯಾದಿ ಫಲಗಳು ಕಂಡು ಬರುತ್ತವೆ. ಮನೆ ಗ್ರಹ ಬುಧನಾಗಿ ಈ ವರುಷದಲ್ಲಿ ಸರಕಾರದ ಸಹಾಯದಿಂದ ಮನೆ ನಿವೇಶನ ದೊರಕುತ್ತೆ. ಹಾಗಿಲ್ಲ. ಸರಕಾರದಿಂದ ಮನೆಯೇ ದೊರಕೀತು. ಈ ರೀತಿ ಸೂರ್ಯದೆಶೆ ಬುಧ ಭುಕ್ತಿಯಂತೆ ಫಲ ಅನುಭವಕ್ಕೆ ಬರುತ್ತದೆ. ಇದು ಬುದ್ಧಿ ಚಾತುರ್ಯದ ಯೋಗ. ಈ ಕಾರಣ ಈ ಮೂವತ್ತೆರಡನೆಯ ಆಂಗ್ಲ ಇಸ್ವಿಯಲ್ಲಿ ಹುಟ್ಟಿದ ಮಂದಿಗೆ ಮೇಲಿನ ಗುಣ ಸಹಜ.

## ಮೂವತ್ತಮೂರನೆಯ ವರುಷ ಫಲ

ಮೂರು ಸಂಖ್ಯೆಗೆ ಕುಜ-ಶನಿ ಯೋಗ. ಮೂವತ್ತು ಸೂರ್ಯನ ದಶಕ ಸಂಖ್ಯೆ. ಇಲ್ಲಿ ಸೂರ್ಯನಿಗೆ ಮಂಗಳನ ದೋಷ. ಇದರಿಂದ ನೌಕರಿಯಲ್ಲಿ ಊರು ಬದಲಾವಣೆ. ಸೋದರ ವರ್ಗದಲ್ಲಿ ವಿರಸ. ರೋಗ ರುಜಿನಗಳಿಗೆ ಶಸ್ತ್ರ ಚಿಕಿತ್ಸೆ. ಹಾಗಿಲ್ಲ, ಈ ವರುಷ ಹುಟ್ಟಿದ ಮಂದಿ ಶಸ್ತ್ರ ವೈದ್ಯ ವೃತ್ತಿಯಿಂದ ಜೀವನ ಮಾಡುತ್ತಾರೆ. ಸಂಸಾರದಲ್ಲಿ ನೌಕರಿಯ ಕಾರಣ ಗಂಡ ಒಂದೆಡೆ ಹೆಂಡತಿ ಮತ್ತೊಂದು ಕಡೆಯಾಗಿ ದಾಂಪತ್ಯ ಸುಖಕ್ಕೆ ವಿಘ್ನ. ಸಾಧಾರಣ ಈ ಮಂದಿ ಯಂತ್ರಾಲಯದ ಮಂದಿ. ಹಾಗಿಲ್ಲ, ಯಂತ್ರ ಸಂಬಂಧದ ಇಂಜಿನಿಯರುಗಳು. ಹಾಗಿಲ್ಲ. ಯಂತ್ರ ಉಪಕರಣಗಳ ವ್ಯಾಪಾರ ಮತ್ತು ಉದ್ಯಮದಿಂದ ಊರೂರು ಅಲೆದಾಡುವ ಮಂದಿ. ತಂದೆ ಗ್ರಹವಾದ ಸೂರ್ಯನಿಗೆ ಕುಜನ ದೋಷ ಬಂದು ತಂದೆಗೆ ಕಷ್ಟ. ಊಟ ಉಪಚಾರಾದಿ ಗಳಿಗೆ ತೊಂದರೆ. ಉದರ ಬೇನೆ, ವ್ಯಥಾ ಅಲೆತ, ದಾಂಪತ್ಯದಲ್ಲಿ ಬ್ರಹ್ಮಚರ್ಯ ಜೀವನದಿಂದ ಬೇಸರ. ಇದೇ ಯೋಗದಿಂದ ಅವರಿಗೆ ವಾಹನಗಳಿಂದ ಅಪಘಾತವಾಗಿ ತಲೆಗೆ ಪೆಟ್ಟೂ ಸಹ ಆದೀತು. ಆದರೆ ಮಂಗಳನ ಅರಿಷ್ಟದಿಂದ ತಂದೆ ಸಂಪಾದಿಸಿದ ಭೂಮಿ ಕಾಣಿಗಳೂ ಕೈ ಬಿಡುತ್ತವೆ. ಮೊತ್ತದಲ್ಲಿ ಈ ವರುಷ ಹುಟ್ಟಿದ ಮಂದಿ ಬೇರೆ ಊರಿನಿಂದ ಬಂದು ನಗರದಲ್ಲಿ ನೆಲೆಸಿದ ಮಂದಿ ಅನ್ನಬಹುದು.

## ಮೂವತ್ತನಾಲ್ಕನೆಯ ವರುಷ ಫಲ

ಬಿಡಿ ಸಂಖ್ಯೆ ನಾಲ್ಕು. ಇದಕ್ಕೆ ಚಂದ್ರ ಅಧಿಪ ಗ್ರಹ. ದಶಕ ಸಂಖ್ಯೆ ಮೂವತ್ತು. ಇದು ಸೂರ್ಯನ ಶುಭಗುಣ ಸಂಖ್ಯೆ. ಇಲ್ಲಿ ಸೂರ್ಯ ದೆಶೆಯಲ್ಲಿ ಚಂದ್ರ ಭುಕ್ತಿಯಂತೆ ಫಲ. ಈ ಯೋಗದಿಂದ ವ್ಯಾಪಾರಿಗೆ ಸರಕಾರದಿಂದ ಸಹಾಯವಿದೆ. ಜಲಗ್ರಹದ ಯೋಗದಿಂದ ಪೂರ್ವ ಸಮುದ್ರ ತೀರದಲ್ಲಿ ವ್ಯಾಪಾರ. ಉದ್ಯಮ. ಪ್ರಗತಿ. ಕೆಲವರಿಗೆ ಪೂರ್ವ ದಿಕ್ಕಿನ ವಿದೇಶಕ್ಕೆ ವಲಸೆ ಹೋಗುವ ಯೋಗ. ವೈದ್ಯ ವೃತ್ತಿಯಲ್ಲಿ ಇದು ಕಣ್ಣಿನ ಚಿಕಿತ್ಸೆಯ ಯೋಗ. ಈ ವರುಷದಿಂದ ವೈದ್ಯರಿಗೆ ಸುಯೋಗ ಪ್ರಾಪ್ತಿ. ಕನ್ನಡಕಗಳ ವಿತರಣೆ ಮಾಡುವ ವ್ಯಾಪಾರದಿಂದ ಕೆಲವರಿಗೆ

ಹೇರಳ ಲಾಭ ಬಂದೀತು. ಈ ವರುಷ ಹುಟ್ಟಿದ ಮಂದಿ ಮಾತಾಪಿತೃ ಪ್ರಿಯರು. ಸರಕಾರದ ಸಹಾಯದಿಂದ ಮುಂದೆ ಬರುವ ಮಂದಿ. ಮಧ್ಯ ವಯಸ್ಸಿನಲ್ಲಿ ನೇತ್ರ ಬಾಧೆ ಉಳ್ಳವರೂ ಆಗುತ್ತಾರೆ. ಚಂದ್ರ ಕೆಟ್ಟು ಫಲ ಅಶುಭ. ಆಗ ತೀರ್ಥ ಯಾತ್ರೆ. ಶಿರೋಸ್ನಾನದಿಂದ ಕಷ್ಟ ಪರಿಹಾರ.

## ಮೂವತ್ತೈದನೆಯ ವರುಷ ಫಲ

ಐದು ಸಂಖ್ಯೆಗೆ ಗುರು. ಮೂವತ್ತು ಸಂಖ್ಯೆಗೆ ಸೂರ್ಯ. ಮೂವತ್ತೈದನೆಯ ವರುಷದ ಫಲ ಸೂರ್ಯನ ದೆಶೆ ಗುರು ಭುಕ್ತಿಯ ಫಲದಂತೆ ನಡೆಯುತ್ತೆ. ಇದು ತಂದೆ ಮಕ್ಕಳ ಯೋಗ. ಇದರಿಂದ ಈ ವರುಷದಲ್ಲಿ ಸಂತಾನದಿಂದ ಶುಭ. ವಿದ್ಯೆಯಿಂದ ನೌಕರಿ ಪ್ರಗತಿ. ಬೃಹತ್ ಉದ್ಯಮ ಗಳಲ್ಲಿ ಸರಕಾರದಿಂದ ನೆರವು. ಕುಲಗುರು ಸೇವೆಯಿಂದ ವ್ಯವಹಾರ. ವೃತ್ತಿಯಲ್ಲಿ ಹೆಚ್ಚಿನ ಲಾಭ. ಅನುಕೂಲ. ಇದು ಕೆಲವರಿಗೆ ನ್ಯಾಯಾಂಗದಲ್ಲಿ ಅಧಿಕಾರವನ್ನು ಕೊಡುತ್ತೆ. ಮೊತ್ತದಲ್ಲಿ ಈ ವರುಷದಲ್ಲಿ ಹುಟ್ಟಿದ ಮಂದಿ ವಿದ್ಯಾಸಂಪನ್ನರು. ಉನ್ನತ ಅಧಿಕಾರವನ್ನು ನಿರ್ವಹಿಸುವ ಮಂದಿ. ವಿದ್ಯಾಪ್ರಚಾರದಿಂದ ಕೆಲವರಿಗೆ ಜೀವನ. ಹಲವಾರು ಜನಗಳಿಗೆ ಬ್ಯಾಂಕಿನ ಉದ್ಯಮ ಉತ್ತಮ. ಗುರುವಿನ ಸಂಖ್ಯೆಯ ಕಾರಣ ಇವರು ಸಂಪ್ರದಾಯ ಶರಣರು ಅಂದರು. ಇಲ್ಲಿ ಗುರು ಕೆಟ್ಟು ಅಪ್ರಿಯ ಫಲಗಳು ಕಂಡರೆ ಆಗ ಶ್ರೀರಾಮನ ಆರಾಧಕರಾದ ಗುರು ಮಹಾತ್ಮರನ್ನು ಪೂಜೆ ಮಾಡಬೇಕು. ಐದು ತಿಂಗಳಿನ ನಂತರ ಅಶುಭ ಪರಿಹಾರ. ಗುರು ಕೃಪೆಯಿಂದ ಮಕ್ಕಳಿಂದ ಸುಯೋಗ. ಉನ್ನತ ಹುದ್ದೆ ಬೇರೆ. ವಿದ್ಯಾರ್ಥಿಗೆ ವಿದ್ಯಾಜಯ. ಮೊತ್ತದಲ್ಲಿ ಈ ವರುಷದ ಮಂದಿ ಇತರರಿಗಿಂತ ತಾವು ಶ್ರೇಷ್ಠರು, ಎಂದು ಹೊಗಳಿಸಿಕೊಳ್ಳುವ ಆಸೆ. ಇದಕ್ಕಾಗಿ ಇವರದು ನಿಯತಶ್ರದ್ಧೆ. ದಕ್ಷತೆಯ ದುಡಿಮೆ ಬೇರೆ. ಇವರು ಸಾಧಾರಣ, ಸಮಾನರಲ್ಲಿ ಉತ್ತಮರು.

## ಮೂವತ್ತಾರನೆಯ ವರುಷ ಫಲ

ಆರು ಕುಜನ ಮಂಗಳಕರ ಸಂಖ್ಯೆ. ಇದಕ್ಕೆ ಕುಜ ಶುಕ್ರ ಯೋಗ. ಆದರೆ ಸೂರ್ಯನ ದಶಕದಲ್ಲಿ ಈ ಕುಜನ ದೋಷ ಪ್ರಧಾನ. ಇದರಿಂದ ಇಲ್ಲಿ ಆರು ಕುಜ ಶುಕ್ರ ಯೋಗಕ್ಕೆ ಶನಿಯ ಸಂಬಂಧವನ್ನು ತೋರಿಸುತ್ತೆ. ಆದರೆ ಇಲ್ಲಿ ಕುಜನು ಮೂರು ಸಂಖ್ಯೆಯಲ್ಲಿನಷ್ಟು ಕೆಡನು. ಮೂವತ್ತು ಸೂರ್ಯನ ದಶಕ ಸಂಖ್ಯೆ. ಇದರಲ್ಲಿ ಆರು ಬಂದಾಗ ಇದು ಸೋದರ ವರ್ಗದಲ್ಲಿ ಮಂಗಳಕಾರ್ಯವನ್ನು ತೋರಿಸುತ್ತೆ. ಅಲ್ಲದೆ ಶುಕ್ರ ಶನಿ ಯೋಗದ ಮಂಗಳನಿಂದ ವಾಹನ ಸಂಬಂಧ ಉದ್ಯಮದಲ್ಲಿ ಪ್ರಗತಿ ಬೇರೆ. ಸರಕಾರದ ಅಧಿಕಾರಿಗಳಿಗೆ ಇದು ವಾಹನ ಸುಖವನ್ನು ಕೊಡುತ್ತೆ. ಮಂಗಳನ ಮಹಿಮೆಯಿಂದ ಮಂದಿಗೆ ಈ ಕಾಲದಲ್ಲಿ ಭೋಗಲಾಲನೆ ಹೆಚ್ಚು. ಕೆಲವರಿಗೆ ಪತ್ನೀ ಸಮೇತರಾಗಿ ದಕ್ಷಿಣ ದೇಶದ ತೀರ್ಥ. ಕ್ಷೇತ್ರಗಳ ದರ್ಶನ ಮಾಡುವುದರಿಂದ ವಿಶೇಷ ಸುಯೋಗ ನಡೆದೀತು. ಈ ವರುಷದಲ್ಲಿ ಹುಟ್ಟಿದ ಮಂದಿ ವಾಹನ ಸಂಬಂಧದ ಇಂಜಿನಿಯರುಗಳು. ವಾಹನಗಳಿಂದ ಪ್ರಗತಿ. ಎರಡು ಹೆಣ್ಣುಗಳ ಯೋಗದವರು.

ದೇಶಾಟನ ಪ್ರಿಯರು. ದೇವೀ ಪೂಜೆ ಮಾಡುವ ಮಂದಿ. ಪಟ್ಟಣಗಳಲ್ಲಿ ಇವರಿಗೆ ಜೀವನ ನಡೆದೀತು. ಇವರದು ದಮನಕಾರಿ ಪ್ರವೃತ್ತಿ.

## ಮೂವತ್ತೇಳನೆಯ ವರುಷ ಫಲ

ಮೂವತ್ತೇಳು ಸಂಖ್ಯೆಗೆ ಸೂರ್ಯ ರಾಹು ಯೋಗ. ಕಾರಣ ಏಳು ಸಂಖ್ಯೆಗೆ ರಾಹು. ದಿನ ಸಂಖ್ಯೆ ತಿಂಗಳ ಸಂಖ್ಯೆ ಒಂದು ಅಲ್ಲದೇ ಇದ್ದರೆ ಈ ಯೋಗ ರಾಜಯೋಗವನ್ನು ಕೊಟ್ಟೀತು. ಇದು ಆಡಳಿತದಲ್ಲಿ ಕೇಂದ್ರದ ಪ್ರಭಾವವನ್ನು, ಹೆಚ್ಚಿಗೆ ತೋರಿಸುತ್ತೆ. ಇದನ್ನು ಚಕ್ರಯೋಗ ಅಂದರು. ಇಲ್ಲಿ ಯಾವುದೇ ರೀತಿಯ ಶನಿ ಸಂಖ್ಯೆಗಳ ಯೋಗ ಬರಬಾರದು. ಶನಿ ಸಂಖ್ಯೆ ಬೆರೆತರೆ ಇದು ಅವಯೋಗವಾಗಿ ತಂದೆಗೆ ಕಂಟಕ. ನೌಕರಿಯಲ್ಲಿ ಅಪಮಾನ. ಸರಕಾರದಿಂದ ಹಿಂಸೆ. ತೆರಿಗೆ ಅಧಿಕಾರಿಗಳ ಹಾವಳಿ. ಈ ಯೋಗದಲ್ಲಿ ನವರತ್ನ ಉಂಗುರವ ಧಾರಣೆ ಅನುಕೂಲಕರ ಶಾಂತಿ. ಈಶ್ವರ ಕ್ಷೇತ್ರ ದರ್ಶನದಿಂದಲೂ ಅದೇ ಫಲಪ್ರಾಪ್ತಿ. ಹಾಗಿಲ್ಲ, ಗ್ರಹಾರಿಷ್ಟದಿಂದ ಎಲ್ಲಾ ಕಡೆಗಳಿಂದಲೂ ಕಷ್ಟ ನಷ್ಟ ಅಪಮಾನ. ಈ ವರುಷದಲ್ಲಿ ಹುಟ್ಟಿದವರು ಸಣ್ಣತನದಿಂದ ಧೋರಣೆಯ ಸ್ವಭಾವದವರು. ಹಿರಿಯರಿಗಿಂತ ಪ್ರಗತಿಯನ್ನು ಸಾಧಿಸುವ ಮಂದಿ. ದೇಶವಿದೇಶಗಳಲ್ಲಿ ಸುತ್ತಾಡಿ ಕಲಿತವರು. ಉತ್ತಮ ವೈದ್ಯರು. ಹೊರ ನೋಟಕ್ಕೆ ಈ ಮಂದಿ ಹಿರಿಯರಿಗೆ ಮರ್ಯಾದೆ ಇಲ್ಲದವರಂತೆ ಕಾಣುತ್ತೆ. ಆದರೆ ನಿಜ ಹಾಗಿರದು. ಒಂದು ನಮೂನೆ ಕ್ರಾಂತಿಕಾರಿ ಮಂದಿ ಅಂದರೆ ತಪ್ಪಾಗದು.

## ಮೂವತ್ತೆಂಟನೆಯ ವರುಷ ಫಲ

ಎಂಟು ಶನಿಯ ಸಂಖ್ಯೆ ಇಲ್ಲಿ ಶನಿಗೆ ಬುಧನ ಯೋಗ ಇರುತ್ತೆ. ಇದು ಬುದ್ಧಿಯ ಮಂಕುತನ. ಅಲ್ಲದೆ ಇದು ಒಂದು ಸಂಖ್ಯೆಯ ಶನಿಯ ಒಂದು ನಮೂನೆ. ಇದು ಮೊತ್ತದಲ್ಲಿ ಬುಧನ ಅರಿಷ್ಟದ ಸಂಖ್ಯೆ. ಬಂಧುಗಳಿಂದ ಕಷ್ಟ, ಅಪವಾದ, ಬಾಲಬುದ್ಧಿ ತಬ್ಬಲಿತನಗಳ ಸಂಕೇತ. ರೋಗ ಗಳಲ್ಲಿ ಇದು ನರವ್ಯಾಧಿ, ಸುಸ್ತು, ಬುದ್ಧಿ ಭ್ರಮೆ ವಿವಿಧ ರೀತಿಯ ಚರ್ಮವ್ಯಾಧಿಗಳು. ಬೆದರಿಕೆ ಬೀಳಿಸುವ ಹೃದಯರೋಗ, ಪಿತ್ತ ವ್ಯಾಧಿ ವಾತ ಪಿತ್ತದ ಮೂರ್ಛೆ ಇತ್ಯಾದಿಗಳು. ಇವುಗಳ ದೋಷವನ್ನು ಪರಿಹಾರ ಮಾಡುವ ಸೂರ್ಯನ ದಶಕವಾದ ಮೂವತ್ತರಲ್ಲಿ ಈ ನಮೂನೆ ಶನಿಯ ಬಿಡಿ ಸಂಖ್ಯೆಯ ವರುಷ ನಡೆದಾಗ ಈ ಕಷ್ಟ ಪರಿಹಾರ. ಈ ವ್ಯಾಧಿಗಳನ್ನು ಪರಿಹಾರ ಮಾಡುವ ಮಂದಿ ಈ ಮೂವತ್ತೆಂಟು ಸಂಖ್ಯೆಯ ವರುಷದಲ್ಲಿ ಹುಟ್ಟುತ್ತಾರೆ.

ಬಾಲಕರಿಗೆ ಸುಲಭವಾಗಿ ಅರ್ಥ ಹೇಳಿ ವಿಷಯ ಮನದಟ್ಟು ಮಾಡಿಕೊಡುವ ಸಣ್ಣ ಸಣ್ಣ ಬಾಲಬೋಧೆಗಳನ್ನು ಬರೆದು ಪ್ರಕಟನೆ ಮಾಡುವ ಉದ್ಯಮ ಈ ವರ್ಷದ ಮಂದಿಗೆ ಲೇಸು. ಸುಲಭ ಉಪಾಯಗಳಿಂದ ಅರಿವನ್ನು ಮೂಡಿಸುವ ಸಾಮರ್ಥ್ಯ ಇವರಿಗೆ ದೇವದತ್ತ. ಸಾಧಾರಣ ವೈದ್ಯರಿಂದ ವಾಸಿಯಾಗದ ಬುಧನ ರೋಗಗಳನು ವಾಸಿ ಮಾಡುವ ಗಿಡ ಮೂಲಿಕೆಗಳ ವೈದ್ಯ ಕೆಲವರಿಗೆ ಕರಗತ. ಈ ರೋಗಿಗಳಿಗೆ ಈ ವರ್ಷ ಬಂದಾಗ ಮಾಡುವ ವೈದ್ಯ ಚಿಕಿತ್ಸೆ ಜಯಪ್ರದ. ಅದೇ ರೀತಿ ಆಶ್ರಯವಿಲ್ಲದ ಮಂದಿಗೆ ಆಶ್ರಯ ನೀಡಿ ಸಹಾಯ

ಮಾಡುವ ಅಬಲಾಶ್ರಮಗಳ ಉಸ್ತುವಾರಿಕೆಯ ಹೊಣೆ ಕೆಲವರಿಗೆ. ಅಂತೂ ಔದಾರ್ಯ ಇವರಿಗೆ ಸಹಜಗುಣ.

ಈ ವರುಷದ ಮಂದಿಗೆ ವೈದ್ಯವೃತ್ತಿ. ಬಾಲಕರಿಗಾಗಿ ಸಾಹಿತ್ಯ ರಚನೆ. ಅರಿವು ಮೂಡಿಸುವ ವೃತ್ತಪತ್ರಿಕೆಯ ಕೆಲಸ. ಮನೋರೋಗ ನಿವಾರಕ ಚಿಕಿತ್ಸಕರು. ಕಷ್ಟದಲ್ಲಿ ಶಾಂತಿ ನೀಡುವ ಜ್ಯೋತಿಷ್ಯದ ಕರ್ಮಕಾಂಡ ಇತ್ಯಾದಿ ಉದ್ಯಮಗಳು ಲೇಸು. ಮೊತ್ತದಲ್ಲಿ ಸುತ್ತಮುತ್ತ ಇರುವ ಮಂದಿಗೆ ಸುಖ ಶಾಂತಿ ಆರೋಗ್ಯ ಕೊಡುವ ಯಾವ ಉದ್ಯಮವಾದರೂ ಸಹ ಈ ಸಂಖ್ಯೆಯ ಉದ್ಯಮ ಆದೀತು. ಗೃಹನಿರ್ಮಾಣ ಶಿಲ್ಪ ಕೂಡ ಇದರಲ್ಲಿ ಬರುತ್ತೆ. ಸಣ್ಣ ಸಣ್ಣ ಕತೆಗಳ ಲೇಖಕರೂ ಈ ವರುಷದಲ್ಲಿ ಜನನ.

ಮೊತ್ತದಲ್ಲಿ ಈ ಸಂಖ್ಯೆ ಜನೋಪಾಕಾರಿ ಸಂಖ್ಯೆ. ಈ ವರುಷದ ಮಂದಿ ಜನೋಪಕಾರಿಗಳು. ಕಷ್ಟದ ಮಂದಿ ಮಧ್ಯೆ ಇದ್ದು ಅವರ ಕಷ್ಟವನ್ನು ನೀಗುವ ಮಂದಿ. ಬಾಲಕರ ಬೌದ್ಧಿಕ ಬೆಳವಣಿಗೆಗೆ ದುಡಿಯುವ ಮಂದಿ. ಇವರ ಹೆಸರು ಇವರ ಔದಾರ್ಯದ ನೆನಪುಗಳ ಸಂಗ್ರಹ. ಈ ಮಂದಿಯನ್ನು ಜನರು ಮರೆಯರು.

## ಮೂವತ್ತೊಂಭತ್ತು ಸಂಖ್ಯೆಯ ವರುಷ ಫಲ

ಮೂವತ್ತು ಸೂರ್ಯನ ದಶಕ ಸಂಖ್ಯೆ. ಒಂಭತ್ತು ಅದೇ ಸೂರ್ಯನ ಬಿಡಿ ಸಂಖ್ಯೆ. ದೋಷ ರಹಿತನಾದ ಸೂರ್ಯನಿಗೆ ದೋಷ ಪರಿಹಾರ ಎಂತು? ಸೂರ್ಯನು ಉದ್ಯೋಗ ಉದ್ಯಮವನ್ನು ತೋರಿಸುತ್ತಾನೆ. ಈ ನೌಕರಿ. ವೃತ್ತಿಯಲ್ಲಿ ಸಹಜವಾದ ದೋಷಗಳು ಕಂಡಾಗ ಅದರ ಪರಿಹಾರವನ್ನು ಸೂರ್ಯನೇ ತನ್ನ ದಶಕದಲ್ಲಿ ಪರಿಹಾರ ಮಾಡುವ ಯೋಗ ಇದು. ವೃತ್ತಿಯ ಲೋಪ ದೋಷಗಳನ್ನು ಪತ್ತೆ ಮಾಡಿ ಅದನ್ನು ನಿವೃತ್ತಿ ಮಾಡುವ ತಜ್ಞರ ವೃತ್ತಿ ಎಂದಾದೀತು. (ಸ್ಪೆಷಲಿಸ್ಟ್). ಹಾಗಿಲ್ಲ. ನೌಕರಿ ಇರದ ಮಂದಿಗೆ ನೌಕರಿ ಹಂಚಿಕೊಡುವ ಅಧಿಕಾರಿಯನ್ನು ತೋರಿಸುತ್ತೆ. (ಪಬ್ಲಿಕ್ ಸರ್ವಿಸ್ ಕಮಿಷನ್. ಎಂಪ್ಲಾಯ್‌ಮೆಂಟ್ ಎಕ್ಸ್‌ಚೇಂಜ್ ಇತ್ಯಾದಿಗಳ ನಮೂನೆ.)

ಎರಡನೆಯದಾಗಿ ಅಧಿಕಾರ ಮಾಡುವ ಮಂದಿಯ ಕಷ್ಟಗಳನ್ನು ನಿವಾರಣೆ ಮಾಡಲು ಕಾಯ್ದಿರಿಸಿರುವ ಹುದ್ದೆ ಎನ್ನಬಹುದು. ರಾಜನ ಕಷ್ಟ ಪರಿಹಾರ ಮಾಡುವ ಮಂತ್ರಿ ಇದ್ದಂತೆ. ಮೊತ್ತದಲ್ಲಿ ದಶಕ ಸಂಖ್ಯೆಯ ಸೂರ್ಯನಿಗೆ ಗುರುಬಲವೂ. ಬಿಡಿ ಸಂಖ್ಯೆಯ ಸೂರ್ಯನಿಗೆ ಶನಿ ಯೋಗವೂ ಇರುತ್ತೆ ಎಂದು ಕೆಲವರ ಮತ. ಅನ್ಯವೃತ್ತಿ ಪಂಡಿತರು ದಶಕದ ಸೂರ್ಯನಿಗೆ ಎಲ್ಲಾ ಗ್ರಹಗಳ ದಶಕದಂತೆ ಶುಕ್ರನ ಯೋಗವೇ ಇರುತ್ತೆ ಅಂದರು. ಭಿನ್ನಮತಕ್ಕೆ ಸೂರ್ಯನಿಗೆ ಶುಕ್ರನು ಶತ್ರು ಎಂಬ ಅಂಶವೇ ಕಾರಣ ಇದ್ದೀತು. ಆದರೆ ಕಾಯಿದೆಯಂತೆ ಸೂರ್ಯನಿಗೆ ದಶಕ ಯೋಗದಲ್ಲಿ ಶುಕ್ರನ ಯೋಗವೇ ಒಪ್ಪತಕ್ಕದ್ದು.

ಮೊತ್ತದಲ್ಲಿ ಸೂರ್ಯನು ತನ್ನ ದಶಕ ಸಂಖ್ಯೆಯ ವರುಷಗಳಲ್ಲಿ ತನ್ನ ಗುಣವಾದ ಪ್ರತಿಭೆ ಪ್ರಭಾವ ಮುನ್ನುಗ್ಗುವ ಪ್ರವೃತ್ತಿಗಳಿಂದ ತನ್ನ ದಶಕದ ಬಿಡಿ ಸಂಖ್ಯೆಯ ಲೋಪ ದೋಷಗಳನ್ನು ಪರಿಹಾರ ಮಾಡುತ್ತಾನೆ ಅನ್ನಬಹುದು.

# ನಲವತ್ತರ ದಶಕದ ಸಂವತ್ಸರಗಳ ಫಲ

ನಲವತ್ತು. ನಾಲ್ಕು ಸಂಖ್ಯೆ ಚಂದ್ರನ ಗುಣಸಂಖ್ಯೆ. ಇದರಿಂದ ನಲವತ್ತು ಸಂಖ್ಯೆಗೆ ಚಂದ್ರಶುಕ್ರ ಯೋಗ. ಚಂದ್ರನು ದಶಾನಾಯಕನಂತೆ ವರ್ತಿಸುತ್ತಾನೆ. ಏಕಾಂಕ ಸಂಖ್ಯೆಯ ಗ್ರಹ ಭುಕ್ತಿನಾಥನಂತೆ ಫಲ ಕೊಡುತ್ತಾನೆ. ಚಂದ್ರ ಮನಸ್ಸು. ಈ ಕಾರಣ ಮುಂದಿಗೆ ನಲವತ್ತನೆಯ ವರುಷದಿಂದ ಚಂದ್ರ ಬಲದಿಂದ ದೃಢ ಮನಸ್ಸು ರೂಢಿಯಾಗುತ್ತದೆ. ಈ ಕಾರಣ ಕೆಲವರು ಜ್ಯೋತಿಷ್ಯ ಶಾಸ್ತ್ರದಲ್ಲಿ ನಲವತ್ತನೆಯ ವರುಷದಿಂದ ಚಂದ್ರಲಗ್ನದಿಂದ ಫಲ ಹೇಳುತ್ತಾರೆ.

ಸಾಮುದ್ರಿಕ ಶಾಸ್ತ್ರ ತಜ್ಞರೂ ಸಹ ಚಂದ್ರನ ದಳ ಉಬ್ಬಿದರೆ ಈ ದಳದಿಂದ ಸುಯೋಗ ನಲವತ್ತನೆಯ ವರುಷದ ನಂತರ ನಡೆಯುತ್ತದೆ ಎಂದರು. ಮೊತ್ತದಲ್ಲಿ ಚಂದ್ರನ ಕಾರಕ ಗುಣಗಳು ಆಗ ಲಭ್ಯವಾಗುತ್ತೆ. ಈ ಕಾರಣ ಈ ಕಾಲವನ್ನು ಜೀವನದ ದ್ವಿತೀಯ ಭಾಗದ ನಾಂದಿ ಅಂದರು. ಜೀವನದ ಪ್ರಧಾನ ಬದಲಾವಣೆಗಳು ಇಲ್ಲಿ ನಡೆದೀತು. ಪೂರ್ವಾರ್ಧ ನರಳಿದವರಿಗೆ ಉತ್ತರಾರ್ಧದಲ್ಲಿ ಕ್ಷೇಮದ ಕಾಲ ಆದೀತು.

ಸಾಧಾರಣ. ಜನರು ನಲವತ್ತರ ನಂತರ ತಮಗೆ ವಯಸಾಯಿತು ಎಂಬ ಅನಿಸಿಕೆಗೆ ಬಲಿ. ಉತ್ಸಾಹ, ಉದ್ವೇಗ, ಉಲ್ಲಾಸಗಳಲ್ಲಿ ಆಸಕ್ತಿ ಕುಗ್ಗಿ ನೀರಸ ಭಾವನೆಗಳು ರೂಢವಾಗುತ್ತದೆ. ಊಟ ಉಪಚಾರಗಳಲ್ಲಿ ತಿಂಡಿ ತಿನಿಸುಗಳಲ್ಲಿ ಎಚ್ಚರ ಬೇರೆ. ಬೇಜವಾಬ್ದಾರಿಯ ಕೆಲಸಗಳಿಗೆ ಕೈ ಹಾಕರು. ಹಿಂದು ಮುಂದು ಆಲೋಚನೆ ಮಾಡಬೇಕಾದ ಅಗತ್ಯ ಕಾಣುತ್ತೆ. ಕಾರಣ ಇವರು ಒಂದು ನಮೂನೆ ಭಯಕ್ಕೆ ತುತ್ತು. ಜೀವನದ ರಸವತ್ತ ಭಾಗ ಇವರಿಗೆ ಕಳೆದಂತೆ. ಇದು ಸಲ್ಲದ ಮಾನಸಿಕ ಭಯ. ಇದರಿಂದ ಇವರ ಚಟುವಟಿಕೆಗಳು ನಿರ್ಣಯವಾಗುತ್ತವೆ. ಆದರೆ ಇತ್ತೀಚಿನ ಮಾನಸಿಕ ತಜ್ಞರಂತೆ ಇದೇ ಕಾಲ ಮುಂದಿಗೆ ಸರಿಯಾದದ್ದು. ಕೆಲಸ ಕಾರ್ಯಗಳಿಗೆ ಅಗತ್ಯ ಬೇಕಾದ ಮಾನಸಿಕ ಸ್ಥಿತಿ ಏರ್ಪಡುವುದು ಈ ವಯಸ್ಸಿನಲ್ಲಿಯೇ ಸರಿ. ಸುಖ ದುಃಖಗಳ ಅನುಭವ ಸಾಕಷ್ಟು. ಉದ್ವೇಗರಹಿತ ಸಮತೋಲನೆಯ ದೃಷ್ಟಿ ಬೇರೆ. ಆಲೋಚನಾ ಶಕ್ತಿಯೂ ಸಹ ಬೆಳೆದಿರುತ್ತದೆ. ಹೊಣೆಗಾರಿಕೆಯ ಮಹತ್ವ. ಗುರಿ ಸಾಧನೆಯ ಪ್ರಯೋಜನ. ದುಂದುಗಾರಿಕೆಯ ಅವಿವೇಕ ಎಲ್ಲದರ ಅನುಭವದ ಅರಿವು ಇವರಿಗೆ ಮೂಡಿರುತ್ತದೆ. ಇನ್ನು ಇದಕ್ಕಿಂತ ಮಿಗಿಲಾದ ಮಾನಸಿಕ ಯೋಗ್ಯತೆ ವ್ಯವಹಾರಗಳಲ್ಲಿ ಏಕೆ? ವಿಶೇಷದ ಮಹತ್ವ ಅಂದರೆ ಇವರಿಗೆ ಸಾಮಾಜಿಕದಲ್ಲಿ ತಮ್ಮ ಸ್ಥಾನಮಾನಗಳನ್ನು ಉಳಿಸಿಕೊಂಡು ಜೀವನದಲ್ಲಿ ಏನಾದರೂ ಸಾಧನೆ ಮಾಡಲು ಅಗತ್ಯ ಬೇಕಾದ ಸನ್ನಿವೇಶಗಳು ಒದಗುತ್ತವೆ. ಇದನ್ನು ತಮಗಾಗಿ ಬಳಸಿಕೊಳ್ಳುವ ಸಾಮರ್ಥ್ಯ ಸಹ ಬಂದಿರುತ್ತದೆ.

ಚಂದ್ರ ಮನಸ್ಸಿನ ಗ್ರಹ. ಇದರಿಂದ ಅವನ ದಶಕದಲ್ಲಿ ಮುಂದಿಗೆ ಮನಸ್ಸು ಜಾಗೃತ. ಕೆಲವರಿಗೆ ಮಾನಸಿಕ ಚಿಂತೆ. ಮನೋರೋಗಿಗಳಿಗೆ ಉಲ್ಬಣದ ಕಾಲ. ಈ ಕಾರಣ ಮನೋರೋಗ ವೈದ್ಯರಿಗೆ ಉತ್ತಮ ಕಾಲ. ಪ್ರೇಮ, ವಿರಹ, ಭಯ, ಗತ ಸ್ಮರಣೆ ಇತ್ಯಾದಿಗಳ ಬಾಧೆಗೂ ಇದು ಕಾಲ. ಸುಮಾರು ಜನರಿಗೆ ಈ ದಶಕದಲ್ಲಿ ಅಭಿಮಾನಿ ಪ್ರೇಯಸಿಯ ಸಂಬಂಧ ಸಹ ಆದೀತು. ಹಾಗಿಲ್ಲ ಕೆಲವರಿಗೆ ಬೇಸರ ಕಳೆಯಲು ವಿಹಾರದ ಪ್ರವಾಸಗಳು ಆದೀತು.

ವ್ಯಾಪಾರ ಚಂದ್ರನ ಉದ್ಯಮ. ಇವನ ದಶಕವಾದ ನಲವತ್ತು ಇದಕ್ಕೆ ಪ್ರಗತಿಕೊಡುವ ಸಂಖ್ಯೆ. ಈ ದಶಕದಲ್ಲಿ ವ್ಯಾಪಾರಿಗೆ ಪ್ರಗತಿ. ಸಮುದ್ರದ ರೇವುಗಳಲ್ಲಿ ಅಭ್ಯುದಯ ಬೇರೆ. ಹುಟ್ಟು ಜಾತಕದಲ್ಲಿ ಚಂದ್ರನು ಕೇಡಿನ ಸ್ಥಳದಲ್ಲಿದ್ದಾನೆ. ಆಗ ಈ ದಶಕದಲ್ಲಿ ವರುಷದಿಂದ ವರುಷಕ್ಕೆ ವ್ಯಾಪಾರದಲ್ಲಿ ನಷ್ಟವಾಗಿ ಕೊನೆಗೆ ಊರು ಕೇರಿ ಬಿಡುವಂತೆ ಆಗುತ್ತೆ. ಆದರೆ ಚಂದ್ರನ ಜೊತೆ ಇನ್ನೊಂದು ಗ್ರಹ. ಆಗ ಆ ಗ್ರಹದ ಬಿಡಿ ಸಂಖ್ಯೆಯ ವರುಷ ಬಂದಾಗ ಈ ದೋಷ ಪರಿಹಾರ. ಮಾತೃಕಾರಕ ಚಂದ್ರ. ಇವನ ದಶಕದಲ್ಲಿ ತಾಯಿ ಜೀವಂತವಿದ್ದು ಆರೋಗ್ಯಕಾಯರಿದ್ದಾರೆ. ಆಗ ಇವರಿಗೆ ಚಂದ್ರನ ಯೋಗ ಚೆನ್ನ ಎಂದರ್ಥ. ಆಗ ಈ ದಶಕದ ಕಾಲದಲ್ಲಿ ಉತ್ತಮ ಯೋಗ.

## ನಲವತ್ತು ದಶಕದ ಏಕಾಂಕ ಸಂಖ್ಯೆ ವರುಷ ಫಲ

ನಲವತ್ತು ಚಂದ್ರನ ಗುಣಸೂಚಕ ದಶಕ. ಇವನ ಫಲ ದಶಾಗ್ರಹದಂತೆ. ಒಂದನೆಯ ವರುಷ ಸಂಖ್ಯೆಯ ಶನಿ, ಭುಕ್ತಿ ಗ್ರಹದಂತೆ ಫಲ. ಇದು ಚಂದ್ರ ಶನಿಯೋಗ. ಈ ಕಾರಣ ಈ ವರುಷಧಲ್ಲಿ ಮುಂದಿಗೆ ಮನಸ್ಸಿನ ಮಲ ತೊಳೆಯಲು ತೀರ್ಥಯಾತ್ರೆಗಳು ಶುಭ. ಮಾಡದಿದ್ದರೆ, ಇಂದು ಏನು, ನಾಳೆ ಏನು ಎನ್ನುವಂತೆ ಕಷ್ಟದ ಅನುಭವ. ತಾಯಿ ಇದ್ದರೆ ಅವರಿಗೆ ಕಾಯಿಲೆ. ಇಲ್ಲ, ಗಂಡದ ಕಾಲ. ಈ ಇಬ್ಬರ ಸಂಯೋಗದ ಹತ್ತಿ ಬಟ್ಟೆಯ ವ್ಯಾಪಾರ ಅನುಕೂಲ. ಶ್ರೀ ಶಿವಕ್ಷೇತ್ರ ದರ್ಶನದಿಂದ ಹೆಚ್ಚಿನ ಲಾಭಕ್ಕೆ ದಾರಿ. ಶನಿ ಅಂದರೆ ಕೊಳೆ. ಚಂದ್ರ ಅಂದರೆ ನೀರು. ಎರಡರ ಸಂಯೋಗದಿಂದ ಉತ್ಪತ್ತಿಯಾದ ಒಳಚರಂಡಿಗಳ ಉದ್ಯಮದಲ್ಲಿ ಪ್ರಗತಿ. ಲಾಭ ಬೇರೆ. ಜಲಮಂಡಳಿಯ ನೌಕರರಿಗೆ ಹೆಚ್ಚಿನ ಬಡ್ತಿಯಿಂದ ಅನುಕೂಲ. ಈ ಸಂಖ್ಯೆಯ ಆಂಗ್ಲ ವರುಷದಲ್ಲಿ ಯಾಂತ್ರಿಕರು, ಪ್ರವಾಸಿಗರು ಹೆಚ್ಚು. ಸಮುದ್ರದ ವ್ಯವಹಾರದ ಉದ್ಯಮಕ್ಕೆ ಹೆಚ್ಚಿನ ಪ್ರಗತಿಯ ಕಾಲ.

ನಲವತ್ತೊಂದನೆ ವರುಷಕ್ಕೆ ಚಂದ್ರಶನಿಯೋಗ. ಇದರಿಂದ ಮುಂದಿಗೆ ಮನೋಕಷ್ಟ. ಇದರ ಪರಿಹಾರಕ್ಕೆ ಮಂತ್ರ ಸಾಧನೆ. "ಮನಂತ್ರಾಯತೀತಿ ಮಂತ್ರ" ಅಂದರು. ಅದರಲ್ಲಿಯೂ ಚಂದ್ರ ತಾಯಿ ಗ್ರಹ. ಇದರಿಂದ ತಾಯಿಯ ಪೂಜೆ ಅಂದರೆ ಶಕ್ತಿ ಉಪಾಸನೆ ಕೆಲವರಿಗೆ ಸೂಕ್ತ. ಇನ್ನು ಕೆಲವರಿಗೆ ಸೋಮವಾರ ಪೂಜೆಯ ದೇವರಾದ ಪರಶಿವನು ಅನುಗ್ರಹಕರ್ತ. ಅಂತೂ ಮುಂದಿಗೆ ಈ ವರುಷ ಭಕ್ತಿಯ ಉದಯಕಾಲ ಎನ್ನಬಹುದು.

## ನಲವತ್ತೆರಡು ಅಥವಾ ಆಂಗ್ಲ 1942

ಏಕಾಂಕ ಸಂಖ್ಯೆ ಇಲ್ಲಿ ಎರಡು. ಇದಕ್ಕೆ ಬುಧ ಗುರು ಯೋಗ. ಈ ಕಾರಣ ಈ ವರುಷ ಲೇಖಕರಿಗೆ ಸ್ಫೂರ್ತಿದಾಯಕ. ಬುಧ ಗುರು ಯೋಗ. ಶಾಸ್ತ್ರ ಅಧ್ಯಯನದ ಯೋಗ. ಇದರಿಂದ ಪ್ರಾಚೀನ ಶಾಸ್ತ್ರಗಳ ಪ್ರಚಾರಕರಿಗೆ ಸುಯೋಗ. ಗ್ರಂಥಕರ್ತರಿಗೆ, ಗ್ರಂಥಗಳ ಮಾರಾಟ ಮಾಡುವವರಿಗೆ ಲಾಭದಾಯಕ. ಈ ಕಾಲದಲ್ಲಿ ಮುಂದಿಗೆ ಬುದ್ಧಿ ಹೆಚ್ಚು. ಓದುವ ಹವ್ಯಾಸ ಹೆಚ್ಚಳದ ಕಾರಣ ಗ್ರಂಥಾಲಯಗಳ ಸ್ಥಾಪನೆ ಬೇರೆ. ಈ ವರುಷದಲ್ಲಿ ಜನನವಾದವರು ತೀವ್ರ

ಬುದ್ಧಿವಂತರು. ಲೇಖಕರು. ಕಲ್ಪನಾ ಚತುರರು. ವಿದ್ಯಾಪ್ರಚಾರಕ್ಕಾಗಿ ದುಡಿಯುವ ಮಂದಿ. ಪ್ರಾಚೀನ ಸಂಶೋಧಕರು ಬೇರೆ. ಈ ವರುಷದಲ್ಲಿ ಯುವಕ ಬರಹಗಾರರು ಜಾಸ್ತಿ.

## ನಲವತ್ತಮೂರು ಅಥವಾ ಆಂಗ್ಲ 1943

ಇಲ್ಲಿ ಮೂರು ಸಂಖ್ಯೆ ಏಕಾಂಕ ಸಂಖ್ಯೆ. ಇದಕ್ಕೆ ಕುಜಶನಿ ಯೋಗ. ಇದು ಬರವ ಸಂಖ್ಯೆ. ಮಂದಿಗೆ ಬರಗಾಲದಿಂದ ಕಷ್ಟ. ಆದರೆ ನಲವತ್ತರ ಗುಣ ಚಂದ್ರನದು. ಇದರಿಂದ ಬೇಸಾಯವಿಲ್ಲದೆ ಭೂಮಿಗೆ ನೀರು ಹಾಯಿಸಿ ಕೃಷಿಗಾರರಿಗೆ ಸಹಾಯ. ಬರವೂ ಪರಿಹಾರ. ನೀರಾವರಿ ಯೋಜನೆಗಳಿಗೆ. ಭಾವಿ ಇತ್ಯಾದಿಗಳ ನಿರ್ಮಾಣಕ್ಕೆ ಅನುಕೂಲ. ಅಲ್ಲದೆ ಕುಜ ಶನಿ ಯೋಗ ಯಂತ್ರಗಳ ನಿರ್ಮಾಣಕ್ಕೆ ಇಂಜಿನಿಯರಿಂಗ್ ಉದ್ಯಮಕ್ಕೆ ಸರಿ. ಈ ಕಾಲದಲ್ಲಿ ಉದ್ಯಮಿ ಗಳಿಗೆ ಹೆಚ್ಚಿನ ಪ್ರಗತಿ. ಕೆಟ್ಟದ್ದು ಹೋಗಿ ಅಗತ್ಯದ ಲಾಭ ಮಾತ್ರ ಪ್ರಾಪ್ತಿ. ಈ ವರುಷದಲ್ಲಿ ಹುಟ್ಟಿದವರು ಬಡ ಜನರಿಗೆ ಆಶ್ರಯ ಕೊಡುವ ಮಂದಿ. ಅನ್ನದಾನ ನೌಕರಿ ದಾನ ಇತ್ಯಾದಿಗಳಿಂದ ಕಾರ್ಮಿಕರಲ್ಲಿ ಉತ್ತಮ ಹೆಸರು ಬೇರೆ. ಇನ್ನು ಕೆಲವರಿಗೆ ಕುಜ ಶನಿ ಯೋಗದ ಪರದೇಶ ಯಾತ್ರೆ. ವಿದೇಶಗಳಲ್ಲಿ ಮನ್ನಣೆ ಇತ್ಯಾದಿ. ಮೂರು ಎಲ್ಲೆಡೆ ಕೆಟ್ಟದ್ದು. ಆದರೆ ನಲವತ್ತರ ದಶಕದಲ್ಲಿ ಮಾತ್ರ ಇದು ಶುಭದಾಯಕ.

## ನಲವತ್ತನಾಲ್ಕು ಅಥವಾ ಆಂಗ್ಲ 1944

ಈ ಸಂಖ್ಯೆಯಲ್ಲಿ ದಶಕದ ಸಂಖ್ಯಾ ಗ್ರಹ ಚಂದ್ರ. ಏಕಾಂಕ ಸಂಖ್ಯಾಗ್ರಹವೂ ಚಂದ್ರ. ಇದು ಸರಿ ಸಮಾನ ಬಲ ಗುಣಗಳುಳ್ಳ ಮಂದಿಯಲ್ಲಿ ಪೋಟಿಯನ್ನು ತೋರಿಸುತ್ತೆ. ಒಂದರಂತೆ ಒಂದು ಇರುವ ಆದರೆ ಅದೇ ಅಲ್ಲದ ವಸ್ತುವಿನ ನಕಲು ತತ್ವವನ್ನು ಸಾಧನೆ ಮಾಡಿ ಸತ್ಯದ ಸ್ವರೂಪವನ್ನು ಹೊರಗೆಡುಹುವ ಸಂಖ್ಯೆ. ಅಸಲು ಮತ್ತು ನಕಲುಗಳ ನಡುವೆ ಏರ್ಪಡುವ ಅಳಿವು ಉಳಿವಿನ ತಿಕ್ಕಾಟ ಇದರ ತತ್ವ. ಇದರಲ್ಲಿ ಗೆಲುವಿಗೆ ಗುರು ಬಲ ಅಗತ್ಯ. ಗುಣಮೌಲ್ಯಗಳ ಜಯ ಇದರ ಸಾಧನೆ. ಈ ವರುಷದ ಮಂದಿ ಯಾವಾಗಲೂ ಸರಿಸಮಾನರಲ್ಲಿ ಹೊಡೆದಾಡಿ ತಮ್ಮ ಜೀವನೋಪಾಯವನ್ನು ಸಾಧಿಸುತ್ತಾರೆ. ರಾಜಕೀಯದಲ್ಲಿ ಇದು ದೇಶೀಯರಂತೆ ಕಾಣುವ ವಿದೇಶೀ ಗೂಢಚಾರರನ್ನು ತೋರಿಸುತ್ತೆ. ಇದು ಎಲ್ಲರಿಗೂ ಪರೀಕ್ಷೆಯ ಕಾಲ.

## ನಲವತ್ತೈದು ಅಥವಾ ಆಂಗ್ಲ 1945

ಇಲ್ಲಿ ಏಕಾಂಕ ಸಂಖ್ಯೆ ಐದು. ಇದರ ಅಧಿಪತಿ ಗುರು. ದಶಕ ಸಂಖ್ಯೆಯ ಗ್ರಹ ಚಂದ್ರ. ಇದು ಚಂದ್ರನ ದೆಶೆ ಗುರುಭಕ್ತಿಯಂತೆ ಫಲ. ಇದು ವಿದ್ಯಾರ್ಥಿಗಳಿಗೆ ಜಯ ಕೊಡುವ ವರುಷ. ದೇವತಾ ಶ್ರದ್ಧೆಯಿಂದ ಜೀವನದ ಪ್ರಗತಿಸಾಧನೆ. ಧನ ವ್ಯವಹಾರಗಳು ಈ ವರ್ಷ ಸುಗಮ. ಬೃಹತ್ ವ್ಯವಹಾರಗಳಲ್ಲಿ ಪ್ರಗತಿ. ಉತ್ತಮ ಸಂತಾನ ಯೋಗದಿಂದ ಜೀವನದಲ್ಲಿ ಏರುಗಡೆ ಬೇರೆ. ಮಗಳಿಗೆ ಸುಯೋಗ. ಅಭಿಮಾನಿ ದೇವತೆ. ಇದಕ್ಕೆ ಶಾರದೆ. ಈ ವರುಷ ಹುಟ್ಟಿದವರು

ವಿದ್ಯಾವಂತರು. ಕುಶಲಮತಿಗಳು. ವ್ಯವಹಾರಶೀಲರು ಮತ್ತು ಧನದಾಹದವರು. ಆದರೆ ಮೊತ್ತದಲ್ಲಿ ಇವರು ಗುಣಿಗಳು.

### ನಲವತ್ತಾರು ಅಥವಾ ಅಂಗ್ಲ 1946

ದಶಕದ ಗ್ರಹ ಚಂದ್ರ. ಬಿಡಿ ಸಂಖ್ಯಾಗ್ರಹ ಕುಜ. ಆದರೆ ಇಲ್ಲಿ ಕುಜನು ಮಂಗಳನು. ಶುಕ್ರಯೋಗದಿಂದ ಶುಭನು. ನಲವತ್ತಮೂರನೆಯ ವರುಷದಲ್ಲಿ ಪ್ರಾರಂಭವಾದ ಕಷ್ಟವನ್ನು ಈ ವರುಷ ಹೋಗಲಾಡಿಸಿ ಮನೆಯಲ್ಲಿ ಕಲ್ಯಾಣವಾಗುವ ಯೋಗ. ಮಾನಸಿಕ ಸಿಕ್ಕುಗಳು ಈ ವರುಷ ಇರದು. ಇದು ಭೋಗದಾಯಕ ವರುಷ. ಈ ವರುಷದ ಮಂದಿ ಕಾಮಲಾಲಸೆಯವರು. ಮದುವೆಯ ನಂತರ ಸುಯೋಗ. ಸುಖಾಭಿಲಾಷೆಯಿಂದ ಮನೋದೌರ್ಬಲ್ಯ ಇವರಿಗೆ ಊನ. ಚಂದ್ರ ತಾಯಿ ಗ್ರಹ. ಮಂಗಳನು ಶುಕ್ರಯೋಗದಲ್ಲಿ ದುರ್ಗಾಕ್ಷೇತ್ರವನ್ನು ತೋರಿಸುತ್ತಾನೆ. ಈ ಕಾರಣ ನಲವತ್ತಾರನೆಯ ವರುಷದಲ್ಲಿ ಚಾಮುಂಡೇಶ್ವರೀ ರೂಪದ ಮಹಾಲಕ್ಷ್ಮೀಯನ್ನು ಪೂಜೆ ಮಾಡುವ ಊರುಗಳಲ್ಲಿ ಪ್ರಗತಿ. ವ್ಯಾಪಾರ ವ್ಯವಹಾರಗಳೂ ಲಾಭದಾಯಕ. ಕಲಕತ್ತೆ. ಮೈಸೂರು ಮತ್ತು ಮುಂಬೈ ನಗರಗಳಲ್ಲಿ ಇವರಿಗೆ ಈ ವರುಷ ಭಾಗ್ಯೋದಯ ಅಂದರು. ಈ ಸಂಖ್ಯೆಗೆ ಅಭಿಮಾನಿ ದೇವತೆ ಶ್ರೀ ಚಾಮುಂಡೇಶ್ವರೀ ದೇವಿ. ಕಷ್ಟ ಬಂದರೆ ಆಕೆಯ ಪೂಜೆ ಒಂದು ಪರಿಹಾರ.

### ನಲವತ್ತೇಳು ಅಥವಾ ಅಂಗ್ಲ 1947

ಏಳು ಸಂಖ್ಯೆಗೆ ರಾಹು. ರಾಹು ಎರಡು ಪರ್ವಗಳ ಸಂಧಿಕಾಲ. ಚಂದ್ರ ಮನಸ್ಸು. ರಾಹು ಅದರ ಅಂತರಾಳದ ಲಹರಿಗಳ ಗ್ರಹ. ನಲವತ್ತೇಳು ಸಂಖ್ಯೆಯ ವರುಷ ಜೀವನದ ತಿರುವಿನ ಕಾಲ. ವಿದೇಶದ ಯಾತ್ರೆ ಕೆಲವರಿಗೆ ನಡೆದೀತು. ವ್ಯಾಪಾರ ವ್ಯವಹಾರಗಳಲ್ಲಿ ಸೂಕ್ಷ್ಮದ ಬದಲಾವಣೆಗಳು ಬೇರೆ. ಇದು ಒಂದು ನಮೂನೆ ಸುಧಾರಣೆಯ ವರುಷ. ಮಾನಸಿಕ ರೋಗಿಗಳಿಗೆ ಮಾತ್ರ ಉಲ್ಬಣದ ಕಾಲ. ಈ ವರುಷ ಹುಟ್ಟಿದವರು ಬಹು ಸೂಕ್ಷ್ಮದ ಮನಸ್ಸುಳ್ಳವರು. ಒಂದು ಹೇಳಿದರೆ ಹೆಚ್ಚು. ಇನ್ನೊಂದು ಹೇಳಿದರೆ ಕಡಿಮೆ. ಜಲಾಂತರ ಪ್ರವಾಸದಿಂದ ಇವರಿಗೆ ಸುಯೋಗ. ಮನೋರೋಗ ಚಿಕಿತ್ಸೆ ಸಹ ಇವರಿಗೆ ಉತ್ತಮ ಜೀವನೋಪಾಯ.

### ನಲವತ್ತೆಂಟು ಅಥವಾ ಅಂಗ್ಲ 1948

ನಲವತ್ತೆಂಟು ಇದು ಉತ್ತಮ ಸಂಖ್ಯೆ. ಈ ಕಾರಣ ಇದನ್ನು ಸೇವಾಕಾಲದ ಪರಿಮಿತಿಯಲ್ಲಿ ಬಳಸಿದರು. ಇದನ್ನು ಒಂದು ಮಂಡಲ ಎಂದರು. ಈ ಸಂಖ್ಯೆಯ ಏಕಾಂಕ ಸಂಖ್ಯೆ ಎಂಟು. ಇದಕ್ಕೆ ಬುಧ ಶನಿ ಯೋಗ. ಇದು ಕಷ್ಟದ ಕಾಲ. ಚಂದ್ರನ ದಶಕದ ಸಂಖ್ಯೆ ನಲವತ್ತು. ಚಂದ್ರನ ದೆಸೆಯಿಂದ ಈ ಬುಧಶನಿ ಯೋಗದ ಕಷ್ಟ ಪರಿಹಾರ. ಚಂದ್ರ ಉಪಚಾರದ ಗ್ರಹ. ಅವನ ಹದಿನಾರು ಕಲೆಗಳಿಗೆ ಹದಿನಾರು ಉಪಚಾರಗಳನ್ನು ಹೇಳಿದರು. ಇದನ್ನು ಷೋಡಶೋಪಚಾರ ಅಂದರು. ಈ ವರುಷದಲ್ಲಿ ಜೀವನದ ಅನೇಕ ಕಷ್ಟಗಳು ಪರಿಹಾರ. ಸೂಕ್ತ ಕಾಲ

ದಲ್ಲಿ ಅಗತ್ಯದ ಜನಗಳಿಂದ ಸಹಕಾರ ಬೇರೆ. ಮೊತ್ತದಲ್ಲಿ ಅನುಕೂಲದ ವಾತಾವರಣ ಇರುತ್ತೆ. ಈ ಸಂಖ್ಯೆಯ ಇಸ್ವಿಯಲ್ಲಿ ಹುಟ್ಟಿದ ಮಂದಿ ಸಮಾಜಸೇವಕರು. ಇತರರ ಕಷ್ಟ ಪರಿಹಾರ ಮಾಡುವ ಉದ್ಯೋಗ ಉದ್ಯಮದಲ್ಲಿ ಆಸಕ್ತಿ ಬೇರೆ. ಬುಧ ಶನಿಯೋಗ ಶಿಲ್ಪದ ಯೋಗ. ಇದರಿಂದ ಇವರು ಉತ್ತಮ ಶಿಲ್ಪಿಗಳು. ಭರತನಾಟ್ಯ ನಿಪುಣರು. ಕಲಾವಿದರು. ಚಿತ್ರ ಲೇಖಕರು ಮತ್ತು ಕಲ್ಪನಾ ವಿಲಾಸಿಗಳು.

### ನಲವತ್ತೊಂಭತ್ತು ಅಥವಾ ಆಂಗ್ಲ 1949

ಚಂದ್ರನ ದಶಕದ ನಲವತ್ತರ ಕೊನೆಯ ವರುಷ ಈ ಕಾಲ. ಈ ಕಾರಣ ಇಲ್ಲಿ ಚಂದ್ರನ ದೋಷ ಪರಿಹಾರ. ಒಂಭತ್ತು ಸಂಖ್ಯೆಯ ಸೂರ್ಯನಿಂದ ಈ ಪರಿಹಾರ ಇದು ಸೂರ್ಯ ಚಂದ್ರರ ಸಂಯೋಗದ ಫಲ. ಈ ಕಾರಣ ಈ ವರುಷದಲ್ಲಿ ಮುಂದಿಗೆ ಈಶ್ವರನ ಪ್ರಸಾದಪ್ರಾಪ್ತಿ. ಶಿವಕ್ಷೇತ್ರ ದರ್ಶನ ಬೇರೆ. ಮುಂಬರುವ ಐವತ್ತರ ಗುರುವಿನ ಜ್ಞಾನಪ್ರಾಪ್ತಿಗಾಗಿ ಬೇಕಾದ ದೃಷ್ಟಿಕೋನ ಈ ವರುಷದಲ್ಲಿಪ್ರಾಪ್ತಿ. ಕಣ್ಣುಗಳ ಬೇನೆಗೆ ಸರಿ ಚಿಕಿತ್ಸೆಯಿಂದ ಪರಿಹಾರವೂ ಆದೀತು. ಚಂದ್ರ ಜಲಗ್ರಹ. ಸೂರ್ಯ ಪೂರ್ವ ದಿಕ್ಕಿಗೆ ಅಧಿಕಾರಿ. ಇದರಿಂದ ಪೂರ್ವ ಸಮುದ್ರ ತೀರದಲ್ಲಿ ಇವರಿಗೆ ಸುಯೋಗ ನಡೆಯುತ್ತೆ. ಸೂರ್ಯ ಚಂದ್ರಯೋಗ ಮಾತಾಪಿತೃ ಸುಖದ ಯೋಗ. ಬೇರೆ ಉದ್ಯೋಗದಲ್ಲಿದ್ದರೂ ಸಹ ಈ ವರುಷ ತಂದೆ ತಾಯಿಗಳ ಸಾನ್ನಿಧ್ಯ ಪ್ರಾಪ್ತಿ. ವ್ಯಾಪಾರಿಗಳಿಗೆ ಉನ್ನತ ಅಧಿಕಾರಿ ದರ್ಶನದಿಂದ ಸಹಾಯವಾಗಿ ಪ್ರಗತಿ. ಸಮುದ್ರಾಂತರ ವ್ಯಾಪಾರದಲ್ಲಿ ಮುನ್ನಡೆ ಬೇರೆ. ಈ ವರುಷ ಹುಟ್ಟಿದ ಜನಗಳು ತಾಯಿ ತಂದೆಗಳಿಗೆ ಪ್ರಿಯರು. ಸುಂದರ ಕಣ್ಣುಗಳು ಇವರಿಗೆ ಒಂದು ಆಕರ್ಷಣೆ. ಪೂರ್ವ ಸಮುದ್ರ ತೀರದಲ್ಲಿ ಇವರಿಗೆ ಸುಯೋಗ. ಇವರು ಅಧಿಕಾರ ಪ್ರಿಯರು. ಉಪಚಾರ ಸತ್ಕಾರಗಳಿಂದ ಮೇಲಿನವರನ್ನು ತಮ್ಮವರಾಗಿಸಿಕೊಂಡು ಮುಂಬರುವ ಮಂದಿ.

ಮೊತ್ತದಲ್ಲಿ ಚಂದ್ರನ ಈ ಹತ್ತುವರುಷಗಳ ಕಾಲದಲ್ಲಿ ಮುಂದಿಗೆ ಸಾಕಷ್ಟು ಅನುಭವ ದಿಂದ ಪ್ರಪಂಚದ ಜ್ಞಾನ ಲಾಭವಾಗುತ್ತದೆ. ಸಮಯ ಸಂದರ್ಭಗಳ ವಿವೇಚನೆ ಬೇರೆ. ಪೂರ್ವದ ಸಂಪ್ರದಾಯಗಳ ಬಗ್ಗೆ ಗೌರವ ಪ್ರಾಪ್ತಿಯಿಂದ ಹಿರಿಯರಲ್ಲಿ ವಿಶ್ವಾಸ ಬೆಳೆಯುತ್ತದೆ. ತಾವು ಹಿರಿಯರು ಎಂಬ ಭಾವನೆ ಶುರು. ಇದರಿಂದ ಯುವ ಜನಾಂಗದ ಮೇಲೆ ಬುದ್ಧಿ ಹೇಳುವ ಚಾಪಲ್ಯ ಹುಟ್ಟುತ್ತದೆ. ಇತರರ ಅಭಿಪ್ರಾಯಗಳಿಗೆ ಸರಿ ಎನ್ನುವ ಮನೋಭಾವ ತಪ್ಪುತ್ತದೆ. ಒಟ್ಟಿನಲ್ಲಿ ಮುಂದಿಗೆ ಹಿರಿಮೆಯ ಧೋರಣೆ ರೂಢಿಯಾಗಿ ದೊಡ್ಡವರು ಅನ್ನಬೇಕು. ಈ ಇಷ್ಟು ಇವರಿಗೆ ಮೊತ್ತದಲ್ಲಿ ಮುದಿತನದ ನಾಂದಿ ಅಲ್ಲದೆ ಮುದುಕರ ಊನಗುಣಗಳೂ ಸಹಜ.

## ಐವತ್ತರ ದಶಕ ವರುಷಗಳ ಫಲ

ಐದು ಗುರುವಿನ ಸಂಖ್ಯೆ. ಐದು ಐವತ್ತಾದಾಗ ಗುರುವಿನ ಗುಣಸಂಖ್ಯೆ ಆಗುತ್ತೆ. ಇದಕ್ಕೆ ಗುರು-ಶುಕ್ರ ಸಂಯೋಗದ ಗುಣಗಳು. ಒಟ್ಟನಲ್ಲಿ ಐವತ್ತರ ಮಾಲೆಯಲ್ಲಿ ಗುರುಶುಭನು. ಈ ಕಾರಣ ಹುಟ್ಟಿದಾಗ ಗುರು ಚೆನ್ನಿಲ್ಲ. ಈಗ ಅದರ ದೋಷದ ಪರಿಹಾರ. ಇದರಿಂದ ಈ

ಕಾಲದಲ್ಲಿ ಮುಂದಿಗೆ ದೈವದಲ್ಲಿ ವಿಶ್ವಾಸ. ಹಿರಿಯರಲ್ಲಿ ಗೌರವ. ವಿದ್ಯಾವಂತರಿಗೆ ಮನ್ನಣೆಯ ಭಾವ ಬೆಳೆದು ಬರುತ್ತದೆ. ಈ ಕಾಲ. ಅಂದರೆ ಐವತ್ತನೆಯ ವರುಷದ ನಂತರ ಗುರು ದೆಶೆ ಅಥವಾ ಗುರುಭಕ್ತಿ ಬಂದರೆ (ಗುರು ಜಾತಕದಲ್ಲಿ ಬಲ ಇಲ್ಲದಿದ್ದರೂ) ಶುಭವನ್ನು ಕೊಡುತ್ತಾನೆ. ಕಾರಣ ಗುರುವಿನ ಫಲ ಕೊಡುವ ಸಂಖ್ಯಾ ವರುಷಗಳು ಒಂದೆರಡು ಬಾರಿ ಬಂದು ಹೋಗಿರುತ್ತವೆ. ಅನುಭವದ ಕಾರಣ ವಿವೇಕವೂ ಸಹ ಬಂದಿರುತ್ತದೆ.

ಮುಹೂರ್ತದ ಪ್ರಮಾದ. ಪ್ರಶ್ನಕಾಲದ ಗುರುವಿನ ಅರಿಷ್ಟದ ಪ್ರಭಾವಗಳಿಂದ ಕೇಡಿನ ಫಲವಿದ್ದರೆ ಅದಕ್ಕೆ ಕಾಲಮಿತಿ ಐವತ್ತು ದಿನಗಳು. ಇದು ಆ ಗ್ರಹದ ಗರಿಷ್ಠ ಮಿತಿ. ಇದಕ್ಕೂ ಕಡಿಮೆಯ ಕಾಲಮಿತಿ ಅಂದರೆ ಗುರುವಿನ ಇನ್ನೊಂದು ಗುಣ ಸಂಖ್ಯೆಯಾದ ಇಪ್ಪತ್ತು ದಿನಗಳು. ಉದಾಹರಣೆಗೆ ಮುಂದಿ ಮಾಡುವ ಕರ್ಮ ಗುರುವಿನದು. ಗುರು ಶನಿ ಸಂಬಂಧ ಅಥವಾ ಇತರ ಸ್ಥಾನ ದೋಷಗಳಿಗೆ ಗುರು ಗುರಿ. ಆಗ ಈ ಕರ್ಮದಲ್ಲಿ ಇವರಿಗೆ ಮುನ್ನಡೆ ಕಷ್ಟ. ಈ ದೋಷ ಕರ್ಮ ಶುರು ಮಾಡಿದ ಇಪ್ಪತ್ತು ದಿನಗಳು ಇಲ್ಲ. ಇಪ್ಪತ್ತು ವರುಷಗಳು ಇರುತ್ತೆ. ಇಪ್ಪತ್ತು ವರುಷಗಳ ನಂತರ ಆ ಕರ್ಮದಲ್ಲಿ ಪೌರಮನ್ನಣೆ. ಧನಾಗಮ ಇತ್ಯಾದಿ ಕರ್ಮಸಿದ್ಧಿಯ ಲಕ್ಷಣಗಳು ಕಂಡು ಬರುತ್ತವೆ. ಆದರೆ ಈ ಕಾಲಮಿತಿಯಲ್ಲಿ ಬೇರೆ ಯಾವ ಕೆಲಸವನ್ನೂ ಮಾಡದೆ ಇದನ್ನೇ ಆಶ್ರಯವನ್ನಾಗಿ ಪಡೆದಿರಬೇಕು. ಪ್ರಧಾನವಾಗಿ ಗುರುವಿನ ಕರ್ಮ. ಕಲಿತ ವಿದ್ಯೆಯಿಂದ ಬದುಕುವುದು. ಈ ಬದುಕು ಶುರು ಮಾಡಿದ ಇಪ್ಪತ್ತು ವರುಷಗಳ ನಂತರ, ಇಲ್ಲ, ಐವತ್ತರ ನಂತರ ಸಾರ್ಥಕ ಆಗುತ್ತದೆ. ಈ ಕಾಲಮಿತಿ ಕಳೆಯಿತು. ಗುರುವಿನ ಅರಿಷ್ಟದಿಂದಾದ ಚಿಂತೆ ಪರಿಹಾರ. ಅಂದರೆ ಆ ಕೇಡಿನ ಫಲ ಮನಸ್ಸಿನಿಂದ ಹೊರಗಾಗುತ್ತೆ. ಇದು ಅಪೇಕ್ಷೆಯ ಸಿದ್ಧಿ ಅಥವಾ ಆ ಅಪೇಕ್ಷೆಯ ಉಪೇಕ್ಷೆ ಯಾವುದರಿಂದಾದರೂ ಆದೀತು. ಅಂತೂ ಈ ಚಿಂತೆ ಇವರಿಗೆ ಇರದು ಅಂದರ್ಥ.

ಗುರುವಿಗೆ ಬಲ ಇಲ್ಲ. ಆಗ ಆ ಗ್ರಹದ ಫಲ ಏನೂ ನಡೆಯದು. ಶುಭ ಅಶುಭ ಎರಡೂ ಅಷ್ಟೆ. ಪ್ರಾಯ ಐವತ್ತಿಲ್ಲ. ಆದರೆ ಆಂಗ್ಲದ ಐವತ್ತನೆಯ ಇಸ್ವಿಯ ದಶಕ ಪ್ರಾರಂಭ ಆಗುತ್ತದೆ. ಆಗ ಗುರುವಿನ ಫಲ ನಡೆಯುತ್ತದೆ. ಬಲ ಹೆಚ್ಚು. ಶುಭ ಬಲ ಕಡಿಮೆ ಫಲ ಅಶುಭ. ಆದರೆ ಜನ್ಮ ಪ್ರಾಯ ಐವತ್ತು ವರ್ಷಗಳ ನಂತರ ಕೆಟ್ಟಿದ್ದರೂ ಸಹ ಅದರ ಬಾಧೆ ಇವರಿಗೆ ಇರದು. ಇದೇ ಈ ಎರಡು ಸಂಖ್ಯಾಮಾಲೆಗಳಿರುವ ವ್ಯತ್ಯಾಸ.

ಗುರು ಐದು ಸಂಖ್ಯೆಯ ಗ್ರಹ. ಇವನಿಗೆ ಮಂಗಳನ ದೋಷ. ಬಹುಷಃ ಪುರಾಣಗಳಲ್ಲಿ ಗುರುವಿಗೆ ಹೊಟ್ಟೆನೋವು ಎಂದಿದಕ್ಕೆ ಇದು ಕಾರಣ ಇದ್ದೀತು. ಎರಡನೆಯದು ಗುರುಗಳಿಗೂ ಯತಿಗಳಿಗೂ ಇದೇ ಕಾರಣದಿಂದ ಸಮನ್ವಯ ಇದ್ದೀತು. ಯತಿಯೋಗ ಕುಜ ಶನಿಗಳ ಸಂಯೋಗದ ಒಂದು ನಮೂನೆ. ಗುರುವಿಗೆ ಹತ್ತನೆಯ ಸಂಖ್ಯೆಯ ದೋಷ ಶನಿಯಿಂದ ಬಂದರೂ ಇದು ಗುರುವಿನ ಇಪ್ಪತ್ತು ಸಂಖ್ಯೆಯಲ್ಲಿ ಹೋಗುತ್ತೆ. ಕಾರಣ ಇಲ್ಲಿ ಗುರುವಿಗೆ ಮಂಗಳನ ದೋಷ ಪ್ರಾಪ್ತಿ. ಕೆಲವು ಕಡೆ ಹೆಣ್ಣುಮಕ್ಕಳಿಗೆ ಇಪ್ಪತ್ತು ವರುಷಗಳ ನಂತರ ಮದುವೆ ಇಲ್ಲ. ಆಗ ಇದು ಕುಜ ದೋಷ ಲಕ್ಷಣ ಅಂದರು. ಈ ಗುರುವಿನ ಮಂಗಳ ದೋಷ ಪರಿಹಾರವಾಗುವುದು ಗುರುವಿನ ಗರಿಷ್ಠ ಸಂಖ್ಯೆಯಾದ ಐವತ್ತು ಬಂದಾಗ. ಕಾರಣ ಈ ಐವತ್ತಕ್ಕೆ ಗುರು ಶುಕ್ರ ಯೋಗ. ಇಲ್ಲಿ ಗುರುವಿಗೆ ಶುಕ್ರನ ಮಹಿಮೆಯಿಂದ ಬುಧನ ದೋಷಕ್ಕೆ ತಿರುಗಿ ಮಂಗಳನ ದೋಷ

ಪರಿಹಾರ. ಈ ಕಾರಣ ಐವತ್ತರ ನಂತರ ಯತಿಗಳು ಗ್ರಂಥರಚನೆ. ಶಿಷ್ಯರಿಗೆ ಪಾಠ ಪ್ರವಚನಗಳಲ್ಲಿ ಆಸಕ್ತಿ ತೋರಿಸುತ್ತಾರೆ. ಅಲ್ಲದೆ ಈ ದೋಷದಿಂದ ಬುಧನ ಅಧಿದೇವತೆಯಾದ ಹರಿಯ ಭಕ್ತಿ ಸಹಜವಾದುತ್ತದೆ. ಕುಜನ ದೋಷ ಪರಿಹಾರದ ಕಾರಣ ಅಲೆಮಾರಿ ಜೀವನವೂ ನಿಂತು ಗುರು ಸುಖಿ.

ಐವತ್ತು ಸಂಖ್ಯೆಗೆ ಗುರುಶುಕ್ರ ಯೋಗ. ಇವಕ್ಕೆ ಬುಧನ ದೋಷ. ಬುಧನ ದೋಷ ಸಂಖ್ಯೆ ಎಂಟು. ಎಂಟಕ್ಕೆ ಬುಧ ಶನಿಯೋಗ. ಇದರಿಂದ ಐವತ್ತರ ದಶಕದಲ್ಲಿ ಎಂಟನೆಯ ವರುಷ ಬಂದಾಗ ಆ ದೋಷವನ್ನು ಗುರು ಧಾರಣೆ ಮಾಡಿಕೊಂಡು ಕಳೆಯುತ್ತಾನೆ. ಅಂದರೆ ಬುಧಶನಿ ಯೋಗ ಮಂದಬುದ್ಧಿಯ ಶಿಷ್ಯರನ್ನು ತೋರಿಸುತ್ತದೆ. ಹಾಗಿಲ್ಲ. ಈ ಸಂಖ್ಯೆಯ ವರುಷದಲ್ಲಿ ಗುರುವಿಗೆ ಬುಧಾರಿಷ್ಟದಿಂದ ಕಾಯಿಲೆ. ಇದೇ ಕಾಲದಲ್ಲಿ ಅಲ್ಲಿಯವರೆಗೆ ಅಧ್ಯಯನ ಮಾಡಿದ ವಿದ್ಯೆಯ ಬಗ್ಗೆ ಗ್ರಂಥ ರಚನೆಯಿಂದ ಈ ದೋಷ ನಿರ್ವಹಣೆ ಅಂದರು.

## ಐವತ್ತರ ದಶಕದಲ್ಲಿ ಬಿಡಿ ಸಂಖ್ಯಾ ವರುಷಗಳ ಫಲ

ಒಂದು ಸಂಖ್ಯೆಗೆ ಶನಿ ಗ್ರಹ. ಐವತ್ತಕ್ಕೆ ಗುರು ಶುಕ್ರ ಯೋಗ. ಐವತ್ತೊಂದು ಸಂಖ್ಯೆಯಲ್ಲಿ ಗುರು ಶನಿ ಯೋಗದ ದೋಷ. ಇದು ಕರ್ಮ ಸಂಬಂಧದ ಆರಿಷ್ಟ. ಅಂದರೆ ಪೂರ್ವ ಜನ್ಮಾರ್ಜಿತ ಪಾಪದ ಫಲ. ಈ ದೋಷ ಪರಿಹಾರಕ್ಕಾಗಿ ಈ ವರುಷದಲ್ಲಿ ಮಂದಿ ದೇವರ ಕ್ಷೇತ್ರ ದರ್ಶನ. ಸೇವೆಗಳಿಂದ ಪುಣ್ಯಾರ್ಜನೆ ಮಾಡುತ್ತಾರೆ. ಈ ಕಾರಣ ಇದು ಕರ್ಮಶಾಂತಿ ವರುಷ. ಕೆಲವರ ಮತದಂತೆ ಗುರುಮಕ್ಕಳ ಗ್ರಹ. ಶುಕ್ರ ವಿವಾಹ ಗ್ರಹ. ಎರಡರ ಯೋಗದಿಂದ ಮಗಳ ವಿವಾಹ ಅಂದರೆ ಕನ್ಯಾದಾನ ಮಾಡುವುದರಿಂದ ಕರ್ಮಶಾಂತಿ ಅಂದರು. ಐವತ್ತೊಂದು ಸಂಖ್ಯೆಯಲ್ಲಿ ಗುರು ಶುಕ್ರಯೋಗಕ್ಕೆ ಶನಿ ಸಂಬಂಧ. ಇದರಿಂದ ಶುಕ್ರ ಗ್ರಹದ ತತ್ವಗಳು ಮಂದಗತಿ. ಈ ಕಾರಣ ಗುರು ಬಲವನ್ನು ಹೊಂದಿ ದೇವತಾ ಪ್ರಸಾದ. ಜ್ಞಾನಾರ್ಜನೆ ವಿವೇಕವನ್ನು ಕೊಡುತ್ತಾನೆ. ಈ ವರುಷ ಹುಟ್ಟಿದ ಮಂದಿಗೆ ಸ್ತ್ರೀಯ ಪ್ರಭಾವ ಕಡಿಮೆ. ಅವರ ಸನಿಹದ ಮಾನಸಿಕ ಒತ್ತಡ ಇದ್ದೀತು. ಇದ್ದರೂ ಅದು ಸ್ವಲ್ಪ ಕಾಲ ಮಾತ್ರ. ಇವರು ಆಜೀವ ವಿದ್ಯಾರ್ಥಿಗಳು. ವೇದಾಂತದ ಮೋಹ ಬೇರೆ. ಕೆಲಸದಲ್ಲಿ ಪಾಪ ಭಯದಿಂದ ದೇವತಾರ್ಚನೆ ಮಾಡುವ ಮಂದಿ. ಧರ್ಮಬುದ್ಧಿಯಿಂದ ಇತರರಿಗೆ ಸಹಾಯ ಮಾಡುವ ಹವ್ಯಾಸ. ಇವರು ಒಂದು ನಮೂನೆ ಲೋಕ ಕಲ್ಯಾಣ ಮಾಡುವ ಮಂದಿ.

ಆಂಗ್ಲ ವರುಷ 1952 ಅಥವಾ ಪ್ರಾಯ ಐವತ್ತೆರಡನೆಯ ವರುಷ. ಇಲ್ಲಿ ಏಕಾಂಕ ಸಂಖ್ಯೆ ಎರಡು. ಇದಕ್ಕೆ ಬುಧ ಗುರು ಯೋಗ. ಇದು ಸಾಹಿತ್ಯ, ವಿದ್ಯಾಪ್ರಚಾರ, ಪ್ರಾಚೀನ ಗ್ರಂಥಗಳ ಪ್ರಕಟನೆಗೆ ಅನುಕೂಲದ ಕಾಲ. ಪ್ರಧಾನವಾಗಿ ಈ ಮಂದಿ ವಿದ್ಯಾಜೀವಿಗಳು. ವಿದ್ಯಾಸಂಸ್ಥೆಗಳ ಪಾಲಕರು. ಪೋಷಕರು. ಪೋಷಕರು ಇಲ್ಲ ಸಂಸ್ಥಾಪಕರು. ಜ್ಞಾನ, ವಿಜ್ಞಾನಕ್ಕೆ ಇವರ ಜೀವನ ಮುಡಿಪು. ಎರಡು ಮೂರು ಭಾಷೆಗಳಲ್ಲಿ ಪಂಡಿತರು. ಉತ್ತಮ ಲೇಖಕರು ಮತ್ತು ಭಾಷಣಕಾರರು. ಆದರೆ ಇವರಿಗೆ ಏನೇ ಮಾಡಲಿ ಒಂದು ಪ್ರಾಚೀನ ಗ್ರಂಥ

ಆಧಾರ ಇರುತ್ತೆ. ಈ ವರುಷ ನಡೆಯುವಾಗ ಮಗನಿಗೆ ಅದರಲ್ಲಿಯೂ ಎರಡನೆಯವನಿಗೆ ಸುಯೋಗ. ಕೆಲವರಿಗೆ ಗೃಹಪ್ರಾಪ್ತಿ ಯೋಗ ಬೇರೆ.

ಪ್ರಾಯ ಐವತ್ತಮೂರನೆಯ ವರುಷ ಅಥವಾ ಆಂಗ್ಲ 1953. ಇಲ್ಲಿ ಬಿಡಿ ಸಂಖ್ಯೆ ಮೂರು. ಇದಕ್ಕೆ ಕುಜ-ಶನಿ ಯೋಗ. ಇದು ದರಿದ್ರ ಯೋಗ. ಇದರ ಪರಿಹಾರ ಐವತ್ತು ದಶಕದ ಗುರು ಶುಕ್ರ ಯೋಗದಿಂದ. ಹಸಿವು ಕುಜ ಶನಿಯ ಲಕ್ಷಣ. ಈ ಕಾರಣ ಈ ವರುಷ ಅನ್ನ ದಾನಾದಿ ಕರ್ಮಗಳಿಂದ ಈ ದೋಷ ಪರಿಹಾರ. ಪ್ರತಿಫಲ ಮಕ್ಕಳಲ್ಲಿ ಒಬ್ಬರಿಗೆ. ಅದೂ ಹೆಣ್ಣಿಗೆ ಕಲ್ಯಾಣ ಯೋಗ ಪ್ರಾಪ್ತಿ. ಕುಜ ಶನಿ ವಿದೇಶ ಪ್ರವಾಸ, ಹಾಗಿಲ್ಲ, ಯಾತ್ರೆ. ದೇವೀ ಸೇವೆಯಿಂದ ಈ ಮೂರರ ಅಮಂಗಳ ಯೋಗ ಪರಿಹಾರ. ಕೆಲವು ಸಲ ಇವರತ್ತ ಯತಿಗಳ ಆಗಮನವಾಗಿ ಅವರ ಸೇವೆಯಿಂದ ಅನುಕೂಲ. ಯಂತ್ರವಾಹನಗಳ ಖರೀದಿಯಿಂದ ಸುಯೋಗ. ಈ ವರುಷ ಹುಟ್ಟಿದವರು ಕುಜ ಶನಿ ಯೋಗದ ಇಂಜಿನಿಯರಿಂಗ್ ವಿದ್ಯಾರ್ಥಿಗಳು. ಕಂಟ್ರಾಕ್ಟು ಕೆಲಸದವರಾದರೂ ಆದೀತು. ಕೆಲವು ಸಲ ಶಿಲಾ ಶಿಲ್ಪಿಗಳೂ ಈ ವರುಷ ಹುಟ್ಟುವರು. ಮೊತ್ತದಲ್ಲಿ ಈ ವರುಷ ಖರ್ಚಿನ ವರುಷ. ಬೋಗ ವಸ್ತುಗಳಿಂದ ಈ ಖರ್ಚು. ಸೋದರರಿಗೆ ಸಹಾಯ ಕೆಲವರಿಗೆ ಖರ್ಚಿಗೆ ದಾರಿ. ಆದರೆ ಈ ಖರ್ಚಿನಿಂದ ಮನಸ್ಸಿಗೆ ಬೇಸರ ಆಗದು.

ವರುಷ ಐವತ್ತನಾಲ್ಕು ಅಥವಾ ಇಸ್ವಿ 1954. ಈ ಸಂಖ್ಯೆಯ ಏಕಾಂಕ ಸಂಖ್ಯೆ ನಾಲ್ಕು. ಇದಕ್ಕೆ ಗ್ರಹ ಚಂದ್ರ. ಇವನ ದೋಷ ಈ ಗುಣಸಂಖ್ಯೆಯ ಗುರು ಶುಕ್ರ ಯೋಗ ದಿಂದ ಪರಿಹಾರ. ಚಂದ್ರ ಮನಸ್ಸು, ಮಾನಸಿಕ ಚಿಂತೆ ಈ ವರುಷದಲ್ಲಿ ಪರಿಹಾರ. ಹಾಗೆಯೇ ತಾಯಿಯ ಆರೋಗ್ಯ ಸುಧಾರಣೆ ಬೇರೆ. ವ್ಯಾಪಾರದಲ್ಲಿ ಎದುರಾಗುವ ಅಡ್ಡಿಗಳೂ ಪರಿಹಾರ. ಗುರು ಧನ ಗ್ರಹ. ಸಕಾಲಿಕ ಧನ ಸಹಾಯದಿಂದ ವ್ಯಾಪಾರದಲ್ಲಿ ಪ್ರಗತಿ ಆಗುತ್ತೆ. ಪುಣ್ಯ ನದಿಗಳಲ್ಲಿ ಸ್ನಾನದಿಂದ ಸಂತಸ. ಪುಣ್ಯ ಕ್ಷೇತ್ರಗಳ ಸೇವೆಯಿಂದ ಕಷ್ಟ ಪರಿಹಾರ. ಪ್ರಾಪ್ತ ದೇವತಾ ಪ್ರಸಾದದಿಂದ ಮಕ್ಕಳಿಗೆ ಸುಯೋಗ. ವರ್ಷಾದಂತ್ಯ ಶುಭಕಾರ್ಯ ಸಾಧನೆ ಬೇರೆ. ಈ ವರುಷದಲ್ಲಿ ಮಂದಿ ಶುಚಿವ್ರತರು ಅಂದರೆ ತಪ್ಪಲ್ಲ.

## ಐವತ್ತೈದನೆಯ ವರ್ಷ ಅಥವಾ ಆಂಗ್ಲ 1955

ಬಿಡಿ ಸಂಖ್ಯೆ ಐದರ ಗ್ರಹ ಗುರು. ಗುಣ ಸಂಖ್ಯೆಯ ಗ್ರಹವೂ ಗುರು. ಇದರಿಂದ ಸಾಮಾನ್ಯ ವಿದ್ಯೆಯ ನಂತರ ವಿಜ್ಞಾನ ಅದ್ಯಯನ ಪ್ರಯತ್ನಕ್ಕೆ ಶುಭ. ಕೆಳಗಿನ ನ್ಯಾಯಾಲಯದಲ್ಲಿ ವಿತರಣೆಯಾದ ತೀರ್ಪುಗಳ ತಿದ್ದುಪಡಿ ಮೇಲಿನ ನ್ಯಾಯಾಲಯದಲ್ಲಿ ದೊರಕುವುದು. ಕೆಲವರ ಮತದಂತೆ ನಪಾಸಾದ ವಿದ್ಯಾರ್ಥಿ ಮರು ಯತ್ನದಿಂದ ಕೀರ್ತಿಯ ತೇರ್ಗಡೆಯನ್ನು ಹೊಂದುವುದು. ಅನಾಚಾರದಿಂದ ಪ್ರಾಪ್ತ ಗುರುದೋಷವನ್ನು ಶ್ರಿಕೃಷ್ಣನ ಆರಾಧನೆ ಮೂಲಕ ಪರಿಹಾರ ಮಾಡಿಕೊಳ್ಳುವುದು. ಹಿರಿಯ ಮಗನಿಂದ ಬಂದ ಆತಂಕವನ್ನು ವಿವೇಕದಿಂದ ನಿವಾರಿಸಿಕೊಳ್ಳುವುದು. ಹೀಗೆ ಗುರು ದೋಷ ದೇವತಾರಾಧನೆಯಿಂದ ಪರಿಹಾರವಾಗುವ

ವರುಷ ಅಂದರು. ವಯಸ್ಸಿನ ಕಾರಣ ತಮಗೆ ನಡೆಯದ ಫಲ ತಮ್ಮ ಮಕ್ಕಳಿಗೆ ನಡೆಯುತ್ತೆ. ಇಲ್ಲ, ತಮ್ಮ ಕಣ್ಣೆದುರಿಗೆ ಇತರರಿಗೆ ನಡೆಯುತ್ತದೆ ಅಂದರು.

### ಐನತ್ತಾರನೆಯ ವರ್ಷ ಅಥವಾ ಆಂಗ್ಲ ವರ್ಷ 1956

ಈ ಸಂಖ್ಯೆಯಲ್ಲಿ ಬಿಡಿ ಸಂಖ್ಯೆ ಆರು. ಇದಕ್ಕೆ ಗ್ರಹ ಮಂಗಳ. ಇಲ್ಲಿ ಇವನಿಗೆ ಕುಜ ಶುಕ್ರ ಯೋಗ. ಆದರೆ ಐವತ್ತು ಸಂಖ್ಯೆಯಲ್ಲಿ ಗುರುವಿಗೂ ಸಹ ಶುಕ್ರನ ಯೋಗ ಇರುತ್ತೆ. ಇಂತಹ ವೇಳೆಯಲ್ಲಿ ಗುರುವಿಗೆ ಶುಕ್ರ ಯೋಗ. ಕುಜನಿಗೆ ಚಂದ್ರನ ಯೋಗವೂ ಪ್ರಾಪ್ತಿ ಎಂದು ಕೆಲವರ ಮತ. ಚಂದ್ರ ಮಂಗಳ ಯೋಗ ದೇವೀ ಪ್ರಸಾದದ ಯೋಗ. ಇದು ಸಹೋದರಿಯ ಯೋಗ ಬೇರೆ ಈ ಕಾರಣ ಆಶ್ರಯ ತಪ್ಪಿದ ಸಹೋದರಿಗೆ ಸಹಾಯವಾಗುತ್ತೆ. ಕೆಲವೆಡೆ ಅಂತಹ ಹೆಣ್ಣುಗಳಿಗೆ ಮರುವಿವಾಹ ಆದೀತು. ರೈತರಿಗೆ ಬೇಸಾಯದಿಂದ ಹೇರಳ ಧನ ಬಂದೀತು. ನೀರಾವರಿಯೂ ಸಹ ಅನುಕೂಲ. ಧಾನ್ಯ ವ್ಯಾಪಾರ, ಹೋಟೇಲು ದಂಧೆಯಲ್ಲಿಯೂ ಪ್ರಗತಿಯು ಕಾಣುತ್ತೆ. ಅಲ್ಲದೆ ಇಲ್ಲಿ ಮಧ್ಯೆ ಬರುವ ಗುರು ಮಂಗಳ ಯೋಗದಿಂದ ನ್ಯಾಯಾಂಗದಲ್ಲಿ ಜಯ. ಸ್ವರ್ಣ ಆಭರಣಾದಿಗಳ ಪ್ರಾಪ್ತಿ ಮುಂತಾದ ಶುಭ ಫಲಗಳೂ ನಡೆಯುತ್ತವೆ.

### ಪ್ರಾಯ ವರುಷ ಐವತ್ತೇಳು ಅಥವಾ 1957

ಇಲ್ಲಿ ಬಿಡಿ ಸಂಖ್ಯೆ ಏಳು. ಇದರ ಗ್ರಹ ರಾಹು. ರಾಹು ಸರ್ಪ ಅಥವಾ ವಿಷ ತತ್ವ. ಇದರ ದೋಷವನ್ನು ತೆಗೆಯಲು ಐವತ್ತರ ಗುರು ಶುಕ್ರ ಯೋಗ. ಈ ಕಾರಣ ಇವರು ವಿಷವನ್ನು ತೆಗೆಯುವ ಮಂತ್ರ ಬಲ್ಲವರು. ಹಾಗಿಲ್ಲ, ವಿಷದ ಚಿಕಿತ್ಸೆ ಬಲ್ಲ ವೈದ್ಯರು. ಐವತ್ತು ಸಂಖ್ಯೆಗೆ ಬುಧ ಶನಿ ಯೋಗ ಸಹಜ. ಇದರ ಜೊತೆಗೆ ರಾಹುವಿನ ದೋಷ ಸೇರಿದರೆ ಇದು ಶ್ವಾಸಬಂಧ ರೋಗ, ನರಬಂಧರೋಗ, ಪಾರ್ಶ್ವ ವಾತಗಳನ್ನು ತೋರಿಸುತ್ತೆ. ಈ ಸಂಖ್ಯೆಯವರು ಇದನ್ನು ಪರಿಹಾರ ಮಾಡುವ ವೈದ್ಯರು. ಅದರ ಮೂಲಿಕಾ ಚಿಕಿತ್ಸಕರು. ಸರ್ಪದ ಇನ್ನೊಂದು ತತ್ವ ದ್ವೇಷ. ಇದನ್ನು ತೆಗೆದು ಮನಸ್ಸಿಗೆ ಶಾಂತಿ ಕೊಡುವ ಮಂತ್ರ ಜ್ಞಾನಿಗಳು. ಎರಡು ತತ್ವಗಳ ಸೇರಿಕೆ ಅಥವಾ ಸಂಧಿ ತತ್ವ ರಾಹುವಿನದು. ಇದು ಅಂತರದ ಸ್ಥಿತಿ. ಗುರು ಜ್ಞಾನದ ಗ್ರಹ. ರಾಹುವಿನ ಯೋಗದಿಂದ ಇದು ಅಂತರ ಜ್ಞಾನವನ್ನು ತೋರಿಸುತ್ತೆ. ಇದು ಸೂಕ್ಷ್ಮದ ವಿಚಾರಗಳ ಅಧ್ಯಯನವನ್ನು ಮಾಡುವ ವಿಜ್ಞಾನ. ಇದಕ್ಕಾಗಿ ವಿದೇಶಗಳಲ್ಲಿ ಅಧ್ಯಯನ. ರಾಹು ಹೆಚ್ಚಿನಂಶ ಆಂಗ್ಲ ಬಾಷೆಯ ಗ್ರಹ. ಗುರು ಜ್ಞಾನ. ಇದರಿಂದ ಈ ವರ್ಷ ಹುಟ್ಟಿದ ಮಂದಿಗೆ ನಮ್ಮದೇ ಆದ ಭಾರತದ ಸಂಸ್ಕೃತಿಯ ವಿಷಯವಾದರೂ ಸಹ ಅದನ್ನು ಆಂಗ್ಲ ಭಾಷೆಯಲ್ಲಿ ಓದಿದರೇ ಅರ್ಥವಾಗುವುದು. ನಮ್ಮ ಭಾಷೆಯಲ್ಲಿ ಓದಿದರೆ ಆಗದು. ಗುರು ಸಂಪ್ರದಾಯದ ಗ್ರಹ. ರಾಹು ತಂತ್ರ ಗ್ರಹ. ಇವರು ಸಂಪ್ರದಾಯ ಶರಣರಲ್ಲ. ಸುಲಭದ ಆಧುನಿಕ ತಂತ್ರ ವಿಧಾನಗಳಿಂದ ವಿದ್ಯಾಪ್ರಚಾರ ಮಾಡುವ ಮಂದಿ. ಈ ದಿಸೆಯಲ್ಲಿ ಇವರು ಸಂಶೋಧಕರು. ರಾಹುವಿನ ಇನ್ನೊಂದು ತತ್ವ ಗ್ರಹಣ, ಹಿಡಿತ, ಗ್ರಹ

ಯಾವುದಿರಲಿ ಈ ರಾಹು ಅದರ ತತ್ವಗಳ ಸಂಗ್ರಹಣವನ್ನು ತೋರಿಸುತ್ತಾನೆ. ಇಲ್ಲಿ ಐವತ್ತರ ಗುರುವಿನಿಂದ ಇದು ಗುರು ತತ್ವಗಳ ಸಂಗ್ರಹಣ ಅಥವಾ ಸಂಗ್ರಹವನ್ನು ತೋರಿಸುತ್ತಾನೆ. ಉದಾಹರಣೆಗೆ ಸಂತಾನದ ಬಂಧನವಾದ ಗರ್ಭಧಾರಣೆ ಯೋಗ. ಧನ ಸಂಬಂಧದ ನಿಧಿ ಸಂಗ್ರಹ. ಮಕ್ಕಳ ಸಂಗ್ರಹವಾದ ಶಿಶುಪಾಲನಾ ಕೇಂದ್ರ ಅಥವಾ ಮಕ್ಕಳ ವಿದ್ಯೆಯ ನರ್ಸರಿಗಳು ಇತ್ಯಾದಿ. ಈ 1957 ವರ್ಷದಲ್ಲಿ ಹುಟ್ಟಿದ ಮಂದಿಗೆ ಇವು ಸೂಕ್ತ ಉದ್ಯಮಗಳೂ ಆದೀತು. ಅಲ್ಲದೆ ಈ ವರ್ಷದಲ್ಲಿ ಗರ್ಭಧಾರಣೆಗಳೂ ಹೆಚ್ಚು. ಠೇವಣಿ ಕ್ರಮಗಳ ಜಾರಿಗೂ ಸದವಕಾಶ. ಬೃಹತ್ ಪ್ರಮಾಣದ ಸಂಘ ಸಂಸ್ಥೆಗಳಿಗೆ ಹಣ ಸಂಗ್ರಹ ಮಾಡುವುದಕ್ಕೂ ಸರಿ. ಜಾತಿ ಮತಗಳ ಗ್ರಹ ಗುರು. ಇದಕ್ಕೆ ರಾಹುವಿನ ಯೋಗ ದಿಂದ ಅಂತರಜಾತೀಯ ವಿನಿಮಯ, ವಿವಾಹಗಳಿಗೆ ಜನದ ಬೆಂಬಲ ಸಿಗುತ್ತದೆ. ಅಲ್ಲದೆ ಅಂತರ ದೇಶಿಯ ಹಣದ ಚಲಾವಣೆಗೂ ಈ ವರ್ಷ ಲೇಸು. ಈ ವರ್ಷದ ಮಂದಿಗೆ ಸಂಪ್ರ ದಾಯದ ಕಟ್ಟು ಪಾಡಿಲ್ಲ. ಹಿರಿಯರ ಅಂಕೆಯೂ ಇರದು. ಇದಕ್ಕೆ ಮೂಲಾಧಾರವಾದ ನಂಬಿಕೆ ಯಂತೂ ಇರುವುದೇ ಇಲ್ಲ. ಇವರು ಬಿಚ್ಚುಮನದವರು ಎಂದರೆ ಬಹುಶಃ ಸರಿಯಾದೀತು.

## ಪ್ರಾಯ ವರುಷ ಐವತ್ತೆಂಟು ಅಥವಾ ಆಂಗ್ಲ ವರುಷ 1958

ಎಂಟು ಬುಧ ಶನಿಯೋಗದ ಸಂಖ್ಯೆ. ಬುದ್ಧಿಯ ಗ್ರಹ ಬುಧ. ಇವನಿಗೆ ಮಂದದ ಶನಿಯ ಯೋಗ. ಇದರಿಂದ ಮಂದಬುದ್ಧಿ. ನಿದ್ರೆ ಮಾಡುವ ಬುದ್ಧಿ. ಇದಕ್ಕೆ ಸೂರ್ಯ ಉದಯದಂತೆ ವಿಕಾಸ ಅಗತ್ಯ. ಈ ಬುದ್ಧಿಯ ಕತ್ತಲು ಹೋಗಲು ಗುರು ಕೃಪೆ ಆಗತ್ಯ. ಈ ಗುರುವಿನ ಅನುಗ್ರಹ ಅವನ ಗುಣಸಂಖ್ಯೆ ಐವತ್ತರಲ್ಲಿ ಅಡಗಿರುತ್ತದೆ. ಈ ಕಾರಣ ಈ ಸಂಖ್ಯೆ ಗುರು ಶಿಷ್ಯರ ಸಂಯೋಗದ ಸಂಖ್ಯೆ. ಬುಧನ ಎರಡು ಸಂಖ್ಯೆಯಲ್ಲಿ ಇದೋ ಅದೋ ಎನ್ನುವ ಭ್ರಮೆ ಅಡಗಿರುತ್ತೆ. ಹೌದೋ ಅಲ್ಲವೋ ಎನ್ನುವ ಸಂಶಯ ಬೇರೆ. ಈ ರೀತಿಯಾದ ಜ್ಞಾನಕಂಟಕ ವಾದ ಭ್ರಮೆ ಕೇವಲ ಪರಮಾತ್ಮ ತತ್ವಕ್ಕೆ ಶಾಶ್ವತ. ಇದನ್ನು ಪರಿಹಾರ ಮಾಡಿ ಭಕ್ತಿ ಜ್ಞಾನ ವನ್ನು ದಾನಮಾಡುವ ಗುರುವಿನ ಸಂಪರ್ಕವನ್ನು ಶಿಷ್ಯನಿಗೆ ಕೊಡುವ ಸಂಖ್ಯೆ ಇದೊಂದೇ. ಈ ಕಾರಣ ಈ ವರುಷ ಹುಟ್ಟಿದವರಿಗೆ ಗುರುಭಕ್ತಿ ಸಹಜ ಗುಣ. ವಿದ್ಯಾಶ್ರದ್ಧೆ ಒಂದು,ಚಟ. ತಮ್ಮ ಅರಿವಿನ ಸೀಮೆಯಲ್ಲಿ ಇತರರ ಸಂಶಯವನ್ನು ಪರಿಹಾರ ಮಾಡುವ ತವಕ ಬೇರೆ. ಮೊತ್ತದಲ್ಲಿ ಇದು ವಿದ್ಯಾ ಜೀವಿಗಳ ಸಂಖ್ಯೆ ಎಂದರೆ ತಪ್ಪಲ್ಲ.

ಬುಧ ಲೇಖಕ, ಲೇಖನ ಮತ್ತು ಲಿಪಿಗಳ ಗ್ರಹ. ಇವನಿಗೆ ಎಂಟರ ಸಂಖ್ಯೆಯಲ್ಲಿ ಶನಿಯ ಕಾರಣ ಧ್ಯಾನ ಬಿಂದು ಕಾಣದು. ಇಲ್ಲಿ ಶನಿ ಕತ್ತಲಿನಂತಿರುವ ಅಜ್ಞಾನದ ತೆರೆ. ಗುರು ಧ್ಯಾನ ಮತ್ತು ಸೇವೆ ಈ ತೆರೆಯನ್ನು ಕತ್ತರಿಸುತ್ತೆ. ಆಗ ವಿಷಯದ ಕೇಂದ್ರ ಬಿಂದುವಿನ ದರ್ಶನ. ನಂತರ ಅದರ ಸುತ್ತ ಹೆಣೆಯುವ ಕಲ್ಪನಾ ಲಹರಿಗಳು ಸುಗಮ. ಇದು ಗುರು ನೀಡುವ ಸ್ಪೂರ್ತಿ. ಹಾಗೆಯೇ ಲಿಪಿವಿದ್ಯಾಧ್ಯಯನ. ಪ್ರಾಚೀನ ಕಾಲದ ಬರಹಗಳ ಲಿಪಿಯ ಓದು ಮತ್ತು ಅದರ ಅರ್ಥದ ಅರಿವು. ಇದು ಈ ಸಂಖ್ಯೆಯ ಕೆಲಮಂದಿಗೆ ಉದ್ಯೋಗ ಆದೀತು. ಅಲ್ಲದೆ ಸಾಂಕೇತಿಕ ಲಿಪಿ ಅಥವಾ ಚಿಹ್ನೆಗಳ ಸ್ವರೂಪ ಗುಣ ಶೀಲಗಳನ್ನು ತಿಳಿದು ತಿಳಿಯ ಹೇಳುವುದು. ಮಂದ ಬುದ್ಧಿಯ ಬಾಲಕರಿಗೆ ಸುಲಭದ ಅರಿವಿಗಾಗಿ ಲಿಪಿ ವಿದ್ಯೆಯನ್ನು ಭೋಧೆ ಮಾಡುವ

ಕಲೆ ಇವರಿಗೆ ಕರಗತ. ಹಾಗಿಲ್ಲ, ಜಡವಾದ ಬುದ್ಧಿಯ ಮುದುಕರಿಗೆ ಪರಮಾತ್ಮ ತತ್ವಜ್ಞಾನಕ್ಕಾಗಿ ಸುಲಭ ಉದಾಹರಣೆಗಳೊಡನೆ ವಿದ್ಯೆಯ ಪ್ರಚಾರ ಮಾಡುವುದು. ಮೊತ್ತದಲ್ಲಿ ಈ ಸಂಖ್ಯೆ ಬುಧನ ದೋಷದ ಗುಣಗಳು ಏನೇ ಇರಲಿ ಅದನ್ನು ಹೋಗಲಾಡಿಸಿ ಅದರಿಂದ ಗುರುತ್ವವನ್ನು ಪಡೆಯುವುದು ಎಂದರ್ಥ.

ಬುಧನ ಇನ್ನೊಂದು ಕಲೆ ಅಂದರೆ ಪಾದಗಳ ನ್ಯಾಸ ವಿನ್ಯಾಸಗಳಿಂದ ಕೂಡಿ ಮನರಂಜನೆಗೆ ಮೂಲ ಆಧಾರವಾಗುವ ಭರತನಾಟ್ಯ ಕಲೆ. ಭಾಷೆ ಇಲ್ಲದ ಮೂಕಾಭಿನಯ. ಲಲಿತ ಕಲೆಯಾದ ಬರಹಮೂಲವಾದ ಚಿತ್ರಕಲೆ. ಜೊತೆಗೆ ವಾಸಮಾಡಲು ಅನುಕೂಲವಾಗುವ ಮನೆಗಳ ನಿರ್ಮಾಣ. ಕಲಾತ್ಮಕವಾಗಿರಲು ಅದರ ರೂಪ ವಿನ್ಯಾಸದ ಕಲೆ. (ಆರ್ಕಿಟೆಕ್ಚರ್). ಈ ಕಲೆ ಗಳ ಪ್ರಚಾರ ಮಾಡುವ ಕೆಲಸ. ಕೆಲವರ ಮತದಂತೆ ಅದನ್ನು ಅಭ್ಯಾಸ ಮಾಡುವದಕ್ಕಿಂತ ಬೋಧೆ ಮಾಡುವ ಕೆಲಸ ಅಂದರು. ಈ ಐವತ್ತರ ದಶಕದಲ್ಲಿ ಈ ಸಂಖ್ಯೆ ಅತ್ಯಂತ ಉಪಯುಕ್ತ. ಇದರಿಂದ ಅದು ಶ್ರೇಷ್ಠ.

ಬುಧ ಶನಿ ಯೋಗ ರೋಗಗಳಲ್ಲಿ ಚರ್ಮವ್ಯಾಧಿಯನ್ನು ತೋರಿಸುತ್ತೆ. ಇದಕ್ಕೆ ಪರಿಹಾರ ಕೆಲವು ಸಲ ಔಷಧಗಳಿಂದ, ಕೆಲವು ಸಲ ಗುರುಗಳ ಸೇವೆಯಿಂದ. ಈ ವರುಷದಲ್ಲಿ ಈ ನಮೂನೆ ರೋಗಗಳು ಸಮಾಧಿಯಲ್ಲಿ ಅಡಗಿ ತಪಸ್ಸು ಮಾಡುವ ಮಹಾತ್ಮರ ಸೇವೆಯಿಂದ ವಾಸಿ ಆದೀತು.

## ಪ್ರಾಯ ಐವತ್ತೊಂಭತ್ತು ವರುಷ ಅಥವಾ ಆಂಗ್ಲ ವರುಷ 1959

ಇಲ್ಲಿ ಬಿಡಿ ಸಂಖ್ಯೆ ಗ್ರಹ ಸೂರ್ಯ. ಗುಣ ಸಂಖ್ಯೆ ಐವತ್ತರ ಗ್ರಹ ಗುರು. ಇಲ್ಲಿ ಗುರುವಿಗೆ ಇದು ಗರಿಷ್ಠ ಸಂಖ್ಯೆ. ಈ ಕಾರಣ ಇದು ದೋಷ ರಹಿತ. ಇಲ್ಲಿ ಗುರು ಖಚಿತ ಜ್ಞಾನಿ. ಈ ನಮೂನೆ ಅರಿವಿನ ತೇಜಸ್ಸು ಬಿಡಿ ಸಂಖ್ಯೆ ಒಂಭತ್ತರ ಸೂರ್ಯ. ಐವತ್ತೆಂಟು ಸಂಖ್ಯೆಗೆ ಗುರುವಿಗೆ ಗುರುವಾದ ಶ್ರೀಕೃಷ್ಣ ಐವತ್ತೊಂಭತ್ತರಲ್ಲಿ ಜ್ಞಾನ ತೇಜೋಮಯನಾದ ಶ್ರೀ ನಾರಾಯಣನು. ಈ ಸಂಖ್ಯೆಯು ಮುಂದಿಗೆ ತಮ್ಮ ಅರಿವಿನ ಬಗೆಗೆ ಗೌರವ ಇರುತ್ತೆ. ದೇವರಲ್ಲಿ ಭಕ್ತಿ, ವಿದ್ಯೆಯಲ್ಲಿ ಕೀರ್ತಿ, ಕೆಲಸದಲ್ಲಿ ನೈಪುಣ್ಯಗಳಿಂದ ಉತ್ತಮ ಗುರುಗಳು. ಈ ವರುಷದಲ್ಲಿ ಇವರ ಸುಯೋಗದಿಂದ ಮಗನಿಗೆ ಉತ್ತಮ ಭವಿಷ್ಯ ರೂಪಿಸಲ್ಪಡುತ್ತೆ. ನ್ಯಾಯಾಂಗ ಹುದ್ದೆಗಳಲ್ಲಿ ಇದು ಶ್ರೇಷ್ಠ ನ್ಯಾಯಮೂರ್ತಿಯನ್ನು ತೋರಿಸುತ್ತೆ. ಇವರು ದೇವತೆಗಳ ಗುರು ಬೃಹಸ್ಪತಿಯಂತೆ. ಆಡಳಿತ ವ್ಯಕ್ತಿಗೆ ಉತ್ತಮ ಸಲಹೆಗಾರರೂ ಹೌದು. ಆದರೆ ಇವರಿಗೆ ಪ್ರಶಂಸೆ ಹೊಗಳಿಕೆ ಪ್ರಿಯ.

ಮೊತ್ತದಲ್ಲಿ ಈ ಐವತ್ತರ ದಶಕದಲ್ಲಿ ಗುರುವಿನ ತತ್ವಗಳಿಗೆ ಪುಷ್ಟಿ ಬಂದು ಸುಯೋಗ ಮೂಡುತ್ತೆ. ಮಕ್ಕಳಿಗೆ ವಿದ್ಯೆ, ಉದ್ಯಮ, ಉದ್ಯೋಗಗಳಲ್ಲಿ ಪ್ರಗತಿ. ಧನ ಸಂಬಂಧ ಕಷ್ಟಗಳೂ ಪರಿಹಾರ. ದೇವತಾ ಸೇವೆ ಆರಾಧನೆಗಳಿಂದ ಮನಸ್ಸಿಗೆ ನೆಮ್ಮದಿ. ತನಗಿಂತ ಕಿರಿಯವರಿಂದ ಗೌರವ ಪ್ರಾಪ್ತಿ. ದಾನ ಧರ್ಮ ಸಂಸ್ಥೆಗಳಲ್ಲಿ ಶ್ರದ್ಧೆ ಇತ್ಯಾದಿ ತಮಗೆ ಮತ್ತು ತಮ್ಮ ವಂಶದ

ಕೀರ್ತಿಯನ್ನು ಬೆಳಗಿಸುವ ಕಾರ್ಯಗಳನ್ನು ಮಾಡುತ್ತಾರೆ. ಒಟ್ಟಿನಲ್ಲಿ ಈ ದಶಕದಲ್ಲಿ ಗುರು ಜಾತಕದಲ್ಲಿ ಕೆಟ್ಟಿದ್ದರೆ ಆ ದೋಷ ಪರಿಹಾರ ಆಗುತ್ತೆ. ಅದರಿಂದ ಶುಭದ ಫಲ ನಡೆಯುತ್ತೆ.

## ಅರವತ್ತರ ದಶಕದ ವರುಷಗಳ ಫಲ

ಮೂರು ಮಂಗಳನ ಅಪ್ರಿಯ ಸಂಖ್ಯೆ. ಇದರ ದೋಷ ಆರನೆಯ ಸಂಖ್ಯೆಯಲ್ಲಿ ಪರಿಹಾರ. ಅರವತ್ತಾದಾಗ ಮಂಗಳನ ಗುಣ ಸಂಖ್ಯೆ ಆಗುತ್ತೆ. ಮೂರು ಮೂವತ್ತು ಆದಾಗ ಅದು ಸೂರ್ಯನ ವಿಶೇಷ ಸಂಖ್ಯೆ ಆಗುತ್ತೆ. ಮೊತ್ತದಲ್ಲಿ ಅರವತ್ತು ಮಂಗಳನ ಗುಣ ಸಂಖ್ಯೆ. ಈ ದಶಕದಲ್ಲಿ ಕುಜನ ಫಲ ಮಂದಿಗೆ ನಡೆಯುತ್ತದೆ. ಈ ಕಾರಣ ಮನೆಯಲ್ಲಿ ಮಂಗಳ ಕಾರ್ಯಗಳು ನಡೆಯುತ್ತವೆ. ಒಂದೊಂದಾಗಿ ಬರುವ ಏಕಾಂಕ ಸಂಖ್ಯೆಯ ವರುಷಗಳಲ್ಲಿ ಕುಜನ ಜೊತೆ ಯೋಗದಲ್ಲಿ ಬರುವ ಗ್ರಹಗಳ ಫಲಗಳು ಪ್ರಧಾನವಾಗಿ ನಡೆಯುತ್ತವೆ.

ಅರವತ್ತನೆಯ ವರುಷ : ಈ ವರುಷದಲ್ಲಿ ಮಂದಿಗೆ ಉಳಿದ ಒಂಭತ್ತು ಏಕಾಂಕ ಸಂಖ್ಯೆಗಳು ಶುಕ್ರನ ವಿಶೇಷ ಸಂಖ್ಯೆಗಳ ಫಲ ಸ್ಥೂಲವಾಗಿ ನಡೆಯುತ್ತೆ. ಆಯಾ ಸಂಖ್ಯೆಯ ತಿಂಗಳು ಬಂದಾಗ ಆಯಾ ಸಂಖ್ಯಾಗ್ರಹದ ಫಲ ಗೋಚರ. ಮೊದಲನೆಯ ತಿಂಗಳಿನಲ್ಲಿ ಶನಿಯ ಫಲ, ಎರಡನೆಯ ತಿಂಗಳಿನಲ್ಲಿ ಬುಧ-ಗುರು ಸಂಯೋಗ ಫಲ. ಮೂರನೆಯ ತಿಂಗಳಿನಲ್ಲಿ ಕುಜ-ಶನಿ ಸಂಯೋಗದ ಫಲ ಇತ್ಯಾದಿ. ಜನ್ಮ ಮಾಸದಿಂದ ಈ ತಿಂಗಳ ಫಲ ಅನುಭವಕ್ಕೆ ಬಂದೀತು. ಆಂಗ್ಲರ ಇಸ್ವಿ 1960 ಇದ್ದರೆ ಆ ವರುಷದ ಜನವರಿಯಲ್ಲಿ ಒಂದರ ಶನಿಯ ಫಲ, ಎರಡನೆಯ ಫೆಬ್ರುವರಿಯಲ್ಲಿ ಬುಧ-ಗುರು ಸಂಯೋಗ ಫಲ ಇತ್ಯಾದಿ. ಇದರಿಂದ ಆರು ಸಂಖ್ಯೆಯ ಪೂರ್ಣಾಂಕ ಅರವತ್ತರಲ್ಲಿ ಮುಂದೆ ನಡೆಯುವ ಇತರ ಬಿಡಿ ವರ್ಷಗಳ ಫಲ ಸೂಚ್ಯವಾಗಿ ಕಂಡೀತು. ಆಸಕ್ತಿಯಿಂದ ಗಮನಿಸಿದಲ್ಲಿ ತಿಳಿಯುತ್ತೆ.

ಜನ್ಮ ಜಾತಕದಲ್ಲಿ ಮಂಗಳನ ಯೋಗ ಕೂಡ ಈ ದಶಕದಲ್ಲಿ ನಡೆಯುತ್ತೆ. ಕುಜನ ಸಂಬಂಧದ ಗ್ರಹಗಳ ಫಲ ಆಯಾ ವರುಷ ಬಂದಾಗ ಅನುಭವ ಗೋಚರ. ಕುಜನ ಸಂಯೋಗದ ಗ್ರಹ ಹೆಚ್ಚು ಪ್ರಭಾವ ಬೀರುತ್ತೆ. ತ್ರಿಕೋಣದಲ್ಲಿರುವ ಗ್ರಹ ಪ್ರಭಾವ ಎರಡನೆಯದು. ವಿಷಮ ರಾಶಿಯ ಕುಜನಾದರೆ ಇತರ ವಿಷಮ ರಾಶಿಯಲ್ಲಿರುವ ಗ್ರಹಗಳ ಪ್ರಭಾವ ಮೂರನೆಯದು. ಕುಜನಿರುವ ನವಾಂಶ ಗ್ರಹದ ಪ್ರಭಾವ. ನಾಲ್ಕನೆಯದು. ಹಾಗಿಲ್ಲ, ಕುಜ ದೆಶೆಯಲ್ಲಿ ಬರುವ ಭುಕ್ತಿಗ್ರಹಗಳ ಫಲದಂತೆ ಬಿಡಿವರುಷಗಳ ಫಲ ನಡೆಯುತ್ತೆ.

ಸಾಮಾನ್ಯವಾಗಿ ಈ ದಶಕದಲ್ಲಿ ಸೋದರ ಸಂಬಂಧ ವಿಷಯಗಳು, ಮಂಗಳಕಾರ್ಯ ಯತ್ನ ಗಳು ಭೂಮಿ ಕಾಣಿ ಇತ್ಯಾದಿ ಆಸ್ತಿ ಸಮಸ್ಯೆಗಳು. ವಾಹನ ಸಂಬಂಧದ ಉದ್ಯಮ ಪ್ರಗತಿ, ತೀರ್ಥ ಯಾತ್ರೆಗಳು ತಮ್ಮ ಪ್ರಭಾವವನ್ನು ಬೀರುತ್ತವೆ. ಕಾರಣ ಇವು ಕುಜನ ಸಂಬಂಧದ ವಿಷಯಗಳು.

## ಅರವತ್ತೊಂದನೆಯ ವರ್ಷ - 1961

ಒಂದು ಸಂಖ್ಯೆಯ ಶನಿ ದೋಷಪ್ರದ. ಅರವತ್ತು ಸಂಖ್ಯೆಯ ಗ್ರಹಗಳು ಕುಜ ಶುಕ್ರರು. ಈ ವರುಷದಲ್ಲಿ ಶನಿ ದೋಷ ಪರಿಹಾರಕ್ಕಾಗಿ ಶಾಂತಿ ಮಾಡಿಕೊಳ್ಳುತ್ತಾರೆ. ಇದನ್ನು ಷಷ್ಠಿಪೂರ್ತಿ ಶಾಂತಿ ಅಂದರು. ಮಂಗಳನಿಗೆ ಇಲ್ಲಿ ಶನಿದೋಷ ನಿವಾರಣೆ. ಅಲ್ಲದೆ ಪುನಃ ವರುಷಗಳು ಒಂದೊಂದಾಗಿ ಬರುತ್ತವೆ. ಪ್ರಭವಾದಿ ವರುಷಗಳು ಪುನಃ ಬರುವ ಕಾರಣ ಕೇಡಿರಬಹುದು. ಈ ಶಂಕೆಗಾಗಿ ಶಾಂತಿ ಆಚರಣೆ. ವರ್ಷ ಅದರ ಅಧಿಪತಿ, ದೇವತೆ ಇತ್ಯಾದಿ ಪಂಚಾಂಗಗಳ ಅರಿಷ್ಟ ಶಾಂತಿ ಇದರಲ್ಲಿ ಸೇರುತ್ತೆ. ಜೊತೆಗೆ ವಿಶೇಷದ ಮಹತ್ವದ್ದು, ವೃದ್ಧ ಪತ್ನಿಗೆ ಪುನಃ ಮಾಂಗಲ್ಯಧಾರಣೆ, ತಂದೆ ತಾಯಿಗಳಿಗೆ ಪುನಃ ಮದುವೆಯಾದಂತೆ, ಮಕ್ಕಳು ಮೊಮ್ಮಕಳು ಮುಯ್ಯಿ ನೀಡುತ್ತಾರೆ. ಇದು ಒಂದು ಸಂತಸದ ಘಟನೆ. ಈ ಕಾಲದಲ್ಲಿ ತಂದೆ ವಿಧುರ. ಆಗ ಈ ಶಾಂತಿಯ ಅಗತ್ಯ ಇರದು. ಕಾರಣ ಕುಜದೋಷದ ಫಲ ಮುಂಚೆಯೇ ನಡೆದಿರುತ್ತೆ. ಈ ಶಾಂತಿಯ ಪ್ರಭಾವದಿಂದ ಸಂಸಾರದಲ್ಲಿ ಮಕ್ಕಳಲ್ಲಿ ಮದುವೆ ಆಗುತ್ತದೆ. ಈ ಶಾಂತಿ ಮಾಡದೇ ಇದ್ದರೆ ಈ ದೋಷದ ಪ್ರಭಾವದಿಂದ ದಾಂಪತ್ಯದಲ್ಲಿ ವಿರಸ, ಸುಖಭಂಗ ಇಲ್ಲಿ ಕೆಲವು ಸಲ, ವೈಧವ್ಯ ಪ್ರಾಪ್ತಿ. ಮಂಗಳ ಕಾರ್ಯಗಳೂ ಸಹ ಕಷ್ಟಸಾಧ್ಯ. ಸರಳ ಶಾಂತಿ ಮತ್ತೊಂದು ಅಂದರೆ ದಕ್ಷಿಣ ದೇಶದ ಕ್ಷೇತ್ರಗಳ ತೀರ್ಥಯಾತ್ರೆ.

ಈ ವರುಷದಲ್ಲಿ ವಾಹನ ಉದ್ಯಮಿಗಳಿಗೆ ಪ್ರಗತಿ. ವಾಹನ ಬಿಡಿ ಭಾಗಗಳ ವ್ಯಾಪಾರದಲ್ಲಿ ಹೆಚ್ಚಿನ ಲಾಭ ಬೇರೆ. ಮಹಾರಾಷ್ಟ್ರ ದೇಶದಲ್ಲಿ ಸಂಚಾರದಿಂದ ಸಂಪತ್ತು ಸಾಧನೆ. ಕೆಲಸ ಮಾಡುವ ಕಾರ್ಮಿಕರಿಗೆ ಶುಭೋಧಯ. ಈ ನಮೂನೆ ಮಂಗಳಕರ ಫಲಗಳ ಕಾಲ ಎನ್ನಬಹುದು.

## ಅರವತ್ತೆರಡನೆಯ ವರುಷ- 1962

ಎರಡು ಸಂಖ್ಯೆಗೆ ಬುಧ-ಗುರು ಯೋಗ. ಇದು ವಿದ್ಯೆಗೆ ಪೂರಕವಾದ ಶಾಸ್ತ್ರ ಗ್ರಂಥಗಳ ಯೋಗ. ಇದರಿಂದ ಈ ವರುಷ ಪುಸ್ತಕಗಳ ಮಾರಾಟಗಾರರಿಗೆ ಲಾಭದಾಯಕ. ಲೇಖಕರಿಗೂ ಉತ್ತೇಜನದಿಂದ ಕೃತಿನಿರ್ಮಾಣ ಸುಗಮ. ಮುದ್ರಣಕಾರರಿಗೂ ಉದ್ಯಮದಲ್ಲಿ ಮುನ್ನಡೆ. ಬುಧನ ಸುಯೋಗದಿಂದ ಕೆಲವರಿಗೆ ಗೃಹ ನಿರ್ಮಾಣಕ್ಕೂ ಸಹಾಯ ಆದೀತು. ವಿದ್ಯಾ ವಿಷಯಗಳ ಮುನ್ನಡೆಗೆ ಈ ವರುಷ ಲೇಸು.

## ಅರವತ್ತಮೂರನೆಯ ವರುಷ- 1963

ಬಿಡಿ ಸಂಖ್ಯೆ ಮೂರಕ್ಕೆ ಕುಜ-ಶನಿ ಯೋಗ. ಇದು ಅಮಂಗಳಕರ. ಇದರ ದೋಷ ಅರವತ್ತರ ಕುಜ ಶುಕ್ರರ ಯೋಗದಿಂದ ಪರಿಹಾರ. ಈ ಕಾಲದಲ್ಲಿ ಸೋದರವರ್ಗದಲ್ಲಿ ಮದುವೆ ಮಾಡಲು ಇವರಿಂದ ಸಹಾಯವಿದೆ. ಅನ್ನದಾನಾದಿ ಧರ್ಮ ಕಾರ್ಯಗಳಲ್ಲಿ ಆಸಕ್ತಿ, ಯತಿ ಮಹಾತ್ಮರ ಸೇವೆ ಬೇರೆ. ಇದರಿಂದ ಬಡವರಿಗೆ ಈ ಮಂದಿ ಅನುಕೂಲದ ಜನಗಳು. ಯಂತ್ರಾಲಯ ಪ್ರಗತಿಗಾಗಿ ಹೆಚ್ಚಿನ ಬಂಡವಾಳ ಹಾಕಿ ಅದನ್ನು ಊರ್ಜಿತ ಮಾಡುವ ಯತ್ನ ಸುಗಮ. ಒಟ್ಟಿನಲ್ಲಿ ಇವರಿಂದ ಎಲ್ಲರಿಗೂ ಅನುಕೂಲ.

## ಅರವತ್ತನಾಲ್ಕನೆಯ ವರುಷ - 1964

ಅರವತ್ತರ ಗ್ರಹಗಳು ಕುಜ ಮತ್ತು ಶುಕ್ರರು. ನಾಲ್ಕು ಸಂಖ್ಯೆಯ ಗ್ರಹ ಚಂದ್ರ. ಇಲ್ಲಿ ಚಂದ್ರನ ದೋಷ ಪರಿಹಾರ. ಮಾನಸಿಕ ಕಷ್ಟ ನಿವಾರಣೆಯಾಗಿ ನೆಮ್ಮದಿ. ಭೂಗ್ರಹ ಮಂಗಳನಿಗೆ ಶುಕ್ರನ ಯೋಗದಿಂದ ಫಲ. ಬೇಸಾಯದಲ್ಲಿ ಈ ವರುಷ ಪ್ರಗತಿ. ಸೋದರಿಗೆ ಮಂಗಳಕಾರ್ಯ ಸಾಧನೆ. ಚಂದ್ರನ ಸಂಚಾರ ಯೋಗದಿಂದ ದಕ್ಷಿಣ ದೇಶ ಪರ್ಯಟನೆಯಿಂದ ವ್ಯವಹಾರ ವ್ಯಾಪಾರದಲ್ಲಿ ಅನುಕೂಲ. ಕೆಲವರಿಗೆ ಶಸ್ತ್ರ ಚಿಕಿತ್ಸೆಯಿಂದ ಉದರಶೂಲೆ ರೋಗ ವಾಸಿ. ಆದರೆ ಈ ಅರವತ್ತನಾಲ್ಕು ಸಂಖ್ಯೆ ವಿದ್ಯಾಮಂಡಲದ ಕೀರ್ತಿಯನ್ನು ತೋರಿಸುತ್ತೆ ಅಂದರು. ಬಹುಶಃ ಹದಿನಾರು ಕಲಾತ್ಮಕವಾದ ಚಂದ್ರನ ಈ ಹದಿನಾರು ಕಲೆಗಳನ್ನು ಚಂದ್ರನ ಸಂಖ್ಯೆಯಾದ ನಾಲ್ಕರಿಂದ ಗುಣಿಸಿ ಬಂದ ಮೊತ್ತ ಅರವತ್ತನಾಲ್ಕನ್ನು ವಿದ್ಯಾಕಲೆಗಳೆಂದು ಭಾವಿಸಿರಬಹುದು. ಇದರ ಆಧಾರದ ಮೇಲೆ ಈ ವರುಷದಲ್ಲಿ ವಿದ್ಯಾಪ್ರಗತಿ ಎನ್ನಲು ಸಾಧ್ಯ. ಮೊತ್ತದಲ್ಲಿ ಕುಜ ಶುಕ್ರ ಚಂದ್ರರ ಯೋಗ ಇದರಲ್ಲಿ ಅಡಗಿದ್ದು ಅರವತ್ತನಾಲ್ಕು ಕೋಟಿ ಯೋಗಿನಿಗಳನ್ನು ಉದಾಹರಿಸಬಹುದು (ಲಲಿತಾ ಸಹಸ್ರ ನಾಮಾವಳಿ). ಇದರಿಂದ ಈ ವರ್ಷ ದುರ್ಗಾದೇವಿ ಪ್ರಸಾದ ಅನುಕೂಲ.

## ಅರವತ್ತೈದನೆಯ ವರ್ಷ - 1965

ಬಿಡಿ ಸಂಖ್ಯೆಯ ಗುರುವಿಗೂ ಅರವತ್ತರ ಮಂಗಳನಿಗೂ ಈ ವರ್ಷ ತಿಕ್ಕಾಟ. ಇದರಿಂದ ವಿದ್ಯಾರ್ಥಿಗಳಿಗೆ ವಿದ್ಯೆಯಲ್ಲಿ ತೊಡಕು. ಹಿರಿಯರಲ್ಲಿ ವಾದ ವಿವಾದದಿಂದ ಬೇಸರದ ಘಟನೆಗಳು. ಧನಸಂಬಂಧದ ವ್ಯವಹಾರಗಳಲ್ಲಿ ಕೋರ್ಟು ಕಟ್ಟಳೆಗಳು. ಶಸ್ತ್ರ ಚಿಕಿತ್ಸೆಯಿಂದ ತ್ರಾಸದ ಹೆರಿಗೆ. ಈ ರೀತಿಯಾದ ಗುರುವಿನ ದೋಷಗಳು ಕುಜ ಶುಕ್ರರ ಅಧಿದೇವತೆಯಾದ ಶ್ರೀ ಚಾಮುಂಡೇಶ್ವರೀ ಸೇವೆಯಿಂದ ಪರಿಹಾರ ಆಗುತ್ತವೆ. ಈ ವರ್ಷದಲ್ಲಿ ದೇವಿಯ ಕುಮಾರನಾದ ಗಣಪತಿಯ ಆರಾಧನೆ ಶುಭಪೂರಕ ಎಂದು ಕೆಲವರ ಮತ.

## ಅರವತ್ತಾರನೆಯ ವರ್ಷ - 1966

ಗುಣ ಸಂಖ್ಯೆಯ ಗ್ರಹ. ಬಿಡಿ ಸಂಖ್ಯೆಯ ಗ್ರಹ ಒಂದೇ. ಮಂಗಳನು ಈ ಗ್ರಹವಾಗಿ ತನ್ನ ದೋಷವನ್ನು ತಾನೇ ಪರಿಹಾರ ಮಾಡಿಕೊಳ್ಳುವ ಕಾಲ. ಅಂದರೆ ರಕ್ತ ಸಂಬಂಧದ ದಾಯವಾದಿ ಗಳಲ್ಲಿ ಆಸ್ತಿ ಪಾಸ್ತಿಗಳಿಗಾಗಿ ಪೈಪೋಟಿಯಾಗಿ ವರ್ಷದ ಅಂತ್ಯಕ್ಕೆ ಪರಿಹಾರ. ಸಮಾನ ಹಕ್ಕು ಭಾಧ್ಯತೆಗಳಿಂದ ಕೂಡಿದ್ದರೂ ಶುಕ್ರನ ಬಲ ಪೋಷಣೆಯಿಂದ ದಶಕದ ಆರು ಸಂಖ್ಯೆಯ ಮಂಗಳನಿಗೆ ಜಯ. ಸ್ತ್ರೀ ಜನ ಬೆಂಬಲದಿಂದ ತನ್ನ ಅಸ್ತಿತ್ವ ಸಾಧನೆ ಮಾಡುವ.ಯೋಗ ಅಂದರು. ಸಮಾನ ಅರ್ಹತೆ ಯೋಗ್ಯತೆಗಳಲ್ಲಿ ಪ್ರಭಾವದ ಮಧ್ಯ ಪ್ರವೇಶದಿಂದ ಜಯ ಎನ್ನಬಹುದು. ಮೊತ್ತದಲ್ಲಿ ಇದು ಉದ್ವೇಗಮಯ ತಿಕ್ಕಾಟದ ವರುಷ.

## ಅರವತ್ತೇಳನೆಯ ವರುಷ - 1967

ಏಳು ಸಂಖ್ಯೆಗೆ ರಾಹು. ಅರವತ್ತು ಮಂಗಳನ ಗುಣ ದಶಕದ ಸಂಖ್ಯೆ. ಇಲ್ಲಿ ಕುಜ ರಾಹು ಯೋಗದ ಸರ್ಪದೋಷ. ಇದರಿಂದ ಈ ವರುಷ ಶತ್ರುಗಳ ಕಾರ್ಯಾಚರಣೆಯನ್ನು ಎದುರಿಸಿ ಗೆಲ್ಲುವ ಯೋಗ. ಕೆಲವರ ಮತದಂತೆ ಇದು ವಿದೇಶಯಾತ್ರೆಯಿಂದ ಮಂದಿಯ ಪ್ರಗತಿಗೆ ಅನುಕೂಲ. ಹೊಂದಾಣಿಕೆ ಇಲ್ಲದ ಇಬ್ಬರು ಒಟ್ಟಿಗೆ ಇದ್ದು ಕಾಲ ಕಳೆಯಬೇಕಾದ ಸನ್ನಿವೇಶ. ದ್ವೇಷಾಸೂಯೆಗಳ ಪ್ರಭಾವ ಇಲ್ಲಿ ಹೆಚ್ಚು. ಇದರಿಂದ ಈ ಕಾಲದಲ್ಲಿ ಮಾನಸಿಕ ಶಾಂತಿ ಇರದು. ಆದರೆ ಪೋಲೀಸು ನೌಕರರಿಗೆ ಮಾತ್ರ ಅನುಕೂಲ ಕಾಲ.

## ಅರವತ್ತೆಂಟನೆಯ ವರುಷ - 1968

ಬಿಡಿ ಸಂಖ್ಯೆ ಎಂಟಕ್ಕೆ ಬುಧ ಶನಿ ಸಂಯೋಗ. ಇದು ಬುದ್ಧಿಗೆ ಮುಚ್ಚುವ ಕತ್ತಲು. ಸಂಶಯ. ಭ್ರಮೆ, ಬುದ್ಧಿ ಮಾಂದ್ಯ ಇತ್ಯಾದಿ ಬುದ್ಧಿಯ ದೋಷಗಳು. ಬುಧನ ಶತ್ರುವಾದ ಮಂಗಳನು ಈ ವರುಷದಲ್ಲಿ ಇವನ್ನು ಕತ್ತರಿಸಿ ಸರಿಯಾದ ಶಿಕ್ಷಣಕ್ಕೆ ದಾರಿ ಮಾಡಿಕೊಡುತ್ತಾನೆ. ಇಲ್ಲಿ ಗ್ರಂಥಗಳಿಗೆ ಸಂಶಯ ಭೇದಕ ಟಿಪ್ಪಣಿಗಳ ರಚನೆ ಮತ್ತು ಮಾರಾಟದ ಉದ್ಯಮವನ್ನು ತೋರಿಸುತ್ತೆ. ಬಂಧುಗಳಲ್ಲಿ ಮೂರನೆಯ ಅಜ್ಞಾತ ವ್ಯಕ್ತಿಯ ಕೈವಾಡದಿಂದ ಮೂಡಿದ ಅನುಮಾನಗಳು ಪರಸ್ಪರ ಭೇಟಿಯಾಗಿ ಪರಿಹಾರವಾಗುವ ಕಾಲ ಅಂದರು. ಬುಧನ ರೋಗಗಳಾದ ಚರ್ಮ ವ್ಯಾಧಿ, ಎದೆಬಡಿತ, ಅಪಸ್ಮಾರ, ಇತ್ಯಾದಿ ರೋಗಗಳಿಗೆ ಸೂಕ್ತ ಚಿಕಿತ್ಸೆ ದೊರಕಿ ನೆಮ್ಮದಿ. ಬುಧ ಶನಿ ಯೋಗ ಪಾದದ ಯೋಗ. ಇದರಿಂದ ಪಾದಕ್ಕೆ ಸಂಬಂಧಿಸಿದ ರೋಗಗಳೂ ಸಹ ಶಸ್ತ್ರ ಚಿಕಿತ್ಸೆಯಿಂದ ಪರಿಹಾರ. ಅಲ್ಲದೇ ಪಾದಕ್ಕೆ ಸಂಬಂಧಿಸಿದ ವಿದ್ಯೆ ಭರತನಾಟ್ಯದ ಶಿಕ್ಷಣಕ್ಕೂ ಪ್ರಶಸ್ತ ಅಂದರು. ಮೊತ್ತದಲ್ಲಿ ಈ ವರ್ಷದ ಆದಿಯಲ್ಲಿದ್ದ ಕಷ್ಟ ಅಂತ್ಯದಲ್ಲಿ ಇರದು. ಎಲ್ಲವೂ ಪರಿಹಾರ. ವೆಂಕಟೇಶ್ವರನ ಪ್ರಸಾದ ಇದಕ್ಕೆ ಕಾರಣ.

## ಅರವತ್ತೊಂಭತ್ತನೆಯ ವರುಷ - 1969

ಸೂರ್ಯನ ಪ್ರಭಾವ ಏಕಾಂಕ ಸಂಖ್ಯೆ ಒಂಭತ್ತರಿಂದ ಪ್ರಾಪ್ತಿ. ಇದರಿಂದ ಈ ವರುಷ ರಾಜಕೀಯ ವ್ಯಕ್ತಿಗಳ ಪ್ರಭಾವ ಹೆಚ್ಚು. ಇದರಿಂದ ಕೆಲಸಗಳು ಸುಗಮ. ಸರಕಾರದ ಕೆಲಸಗಳಲ್ಲಿ ಜಯ ಪ್ರಾಪ್ತಿ. ಜೊತೆಗೆ ಧನವೂ ಲಾಭ. ಚುನಾವಣೆ ಇತ್ಯಾದಿ ರಾಜ್ಯಾಂಗ ಮತ್ತು ರಾಜಕೀಯ ಚಟುವಟಿಕೆ ಗಳ ಬಿರುಸು ಬೇರೆ. ಸೋದರನಿಗೆ ಉನ್ನತ ಅಧಿಕಾರ ಪ್ರಾಪ್ತಿಯಿಂದ ಸುಯೋಗ. ಈ ವರುಷದಲ್ಲಿ ಹುಟ್ಟಿದ ಮಂದಿ ಸಾಧಾರಣ ತಮ್ಮ ಸಾಧನೆಗಳಲ್ಲಿ ಜಯ ಸಾಧಿಸದೇ ಬಿಡರು. ಇವರಿಗೆ ಅಗತ್ಯದ ಶಕ್ತಿ, ಪ್ರಭಾವಗಳೂ ದೈವದತ್ತ.

ಮಂಗಳನ ದಶಕವಾದ ಅರವತ್ತರ ಪ್ರಾರಂಭದಿಂದ ಹತ್ತು ವರುಷಗಳಲ್ಲಿ ಮಂದಿಗೆ ಕುಜನ ಫಲ ಪ್ರಧಾನ. ಜಾತಕಗಳಲ್ಲಿ ಕುಜ ದೆಸೆ ನಡೆಯದಿದ್ದರೂ ಸಹ ಈ ದಶಕದಲ್ಲಿ ಅವನ ಯೋಗ ನಡೆಯುವುದು. ರಾಜಕೀಯ ಗ್ರಹವಾದ ಮಂಗಳನ ಕಾರಣ ಈ ದಶಕದಲ್ಲಿ ರಾಜಕೀಯದ ಮಹತ್ವದ ಘಟನೆಗಳು ನಡೆದಾವು.

ಈ ದಶಕದಲ್ಲಿ ಮುಂದಿಗೆ ಮಂಗಳನ ಗುಣ ಧೈರ್ಯ ಹೆಚ್ಚು. ರಾಜಕೀಯ ಪ್ರಜ್ಞೆ ಸಹ ಚುರುಕು. ದೇಶ ವಿದೇಶಗಳ ಸಂಚಾರವೂ ಸಹ ಹೆಚ್ಚು. ಯಾಂತ್ರಿಕ ಉದ್ಯಮಗಳಲ್ಲಿ ಪ್ರಗತಿ ಬೇರೆ. ಕುಜನ ದೇವತೆಗಳಾದ ಸುಬ್ರಹ್ಮಣ್ಯ, ದುರ್ಗಾದೇವಿ, ಕಾಳಿ ಬಿಂಬಗಳಲ್ಲಿ ಭಕ್ತಿ ಶ್ರೇಯಸ್ಕರ.

## ಎಪ್ಪತ್ತನೆಯ ದಶಕದ ಫಲ

ಇದರಲ್ಲಿ ಕ್ರಮವಾಗಿ 71 ರಿಂದ 79ರವರೆಗೆ ಒಂಭತ್ತು ಸಂಖ್ಯೆಗಳು. ಇದಕ್ಕೆ ಕ್ರಮವಾಗಿ ಒಂಭತ್ತು ಗ್ರಹಗಳು. ಈ ಒಂಭತ್ತು ಗ್ರಹಗಳು ರಾಹುವಿನೊಡನೆ ಯೋಗಿಸುತ್ತವೆ. ಇದನ್ನು ಕೆಲವರು ದ್ವಿಗ್ರಹ ಯೋಗದಂತೆ ಫಲ ಕೊಡುತ್ತೆ ಅಂದರು. ಇನ್ನು ಕೆಲವರು ದಶಾಭುಕ್ತಿ ಫಲದಂತೆ ಫಲವನ್ನು ಹೇಳುತ್ತಾರೆ. ಆದರೂ ಸಹ ಇದು ಮೊತ್ತದಲ್ಲಿ ದ್ವಿಗ್ರಹ ಯೋಗಗಳಂತೆ ಫಲ ಕೊಡುತ್ತೆ ಅಂದರೆ ತಪ್ಪೇನೂ ಆಗದು. ಆದರೂ ಪ್ರತಿ ಸಂಖ್ಯೆಯ ಕಡೆ ದಶಕದಲ್ಲಿಯೂ ಹೊಸಹೊಸ ತಿರುವುಗಳಿರುವುದರಿಂದ ಪ್ರತಿ ದಶಕದ ಬಿಡಿ ಅಂಕಗಳ ಫಲವನ್ನು ವಿಮರ್ಶೆ ಮಾಡಬೇಕು.

### ಎಪ್ಪತ್ತನೆಯ ವರುಷ – (1970)

ಇದು ಸಾಮೂಹಿಕ ಸಂಖ್ಯೆ. ಈ ವರುಷದಲ್ಲಿ ಪ್ರತಿ ತಿಂಗಳ ಸಂಖ್ಯೆಯ ಗ್ರಹದ ಫಲ ಆಯಾ ತಿಂಗಳಿನಲ್ಲಿ ನಡೆಯುತ್ತದೆ. ಉದಾಹರಣೆಗೆ ಜನವರಿಯಲ್ಲಿ ಒಂದರ ಶನಿ ಫಲ, ಮಾರ್ಚಿಯಲ್ಲಿ ಕುಜ ಶನಿ ಯೋಗ ಇತ್ಯಾದಿ. ಇದನ್ನು ಸಮಷ್ಟಿ ಫಲ ಅಂದರು.

### ಎಪ್ಪತ್ತೊಂದನೆಯ ವರುಷ – (1971)

ಇದು ರಾಹು ಶನಿ ಯೋಗ. ಇದರಿಂದ ಗ್ರಂಥಗಳಲ್ಲಿ ರಾಹುದೆಶೆ ಶನಿಭುಕ್ತಿಯಲ್ಲಿ ಹೇಳಿದಂತೆ ಫಲ ನಡೆಯುತ್ತೆ. ಇದು ಕಾಯಿಲೆ, ಮೃತ್ಯುಯೋಗದ ವರುಷ. ಮನೆಯಲ್ಲಿ, ದೇಶದಲ್ಲಿ ಸಾವು ನೋವುಗಳು ಜಾಸ್ತಿ. ಜನ್ಮಾದಿ ವರುಷವಾದರೆ ಇದಕ್ಕೆ ಶಾಂತಿಯನ್ನು ಮಾಡುತ್ತಾರೆ. ಇದಕ್ಕೆ ಉಗ್ರ ರಥ ಶಾಂತಿ ಅಂದರು. ಇದೇ ಯೋಗದಲ್ಲಿ ಕೆಲವರಿಗೆ ರಾಹು ಯೋಗದಿಂದ ವೈದ್ಯಶಾಸ್ತ್ರ ಅಧ್ಯಯನ ಸಾಧಿಸುತ್ತೆ. ಅಲ್ಲದೆ ಮಹಾ ವಿಶೇಷದ ಔಷಧಗಳನ್ನು ಕಂಡುಹಿಡಿದು ಹೆಸರನ್ನೂ ಗಳಿಸುತ್ತಾರೆ. ಇದೇ ಜನನದ ಇಷ್ಟಿಯಾದರೆ ಅವರು ವೈದ್ಯರು, ಹಾಗಿಲ್ಲ ಯೋಗಿಗಳು ಅಂದರು. ಎರಡೂ ಇಲ್ಲ ಅಂದರೆ ಜಾತಮೃತ್ಯು ಯೋಗ. ಮಗು ಹುಟ್ಟಿದ ಕ್ಷಣ ಮಗುವೇ ಸಾಯುತ್ತೆ, ಹಾಗಿಲ್ಲ, ಮನೆಯಲ್ಲಿ ಸಾವು ಆಗುತ್ತದೆ.

### ಎಪ್ಪತ್ತೆರಡನೆಯ ವರುಷ – (1972)

ಈ ವರುಷ ರಾಹು ಬುಧ ಯೋಗ. ಇದು ಕಳ್ಳತನ, ಸುಳ್ಳು, ಅಪವಾದ ಆಪಾದನೆಗಳ ವರ್ಷ ಅಂದರು.. ಮನೆಯಲ್ಲಿ ಕಳ್ಳತನಗಳು ಹೆಚ್ಚು. ಬಂಧುಗಳಲ್ಲಿ ಅಪವಾದ ಬೇರೆ. ನಂಬಿದ ಬಂಧು

ಅಥವಾ ಮಿತ್ರರಿಂದ ಮೋಸ ಆದೀತು. ಈ ಕಾರಣ ದೇಶದಲ್ಲಿಯೂ ಸಹ ಮಂತ್ರಿಗಳು ಕೊಟ್ಟ ಮಾತಿನಂತೆ ನಡೆಯದೆ ಅಪವಾದಕ್ಕೆ ಗುರಿಯಾಗುತ್ತಾರೆ. ಬುಧ ಎರಡು ಸಂಖ್ಯೆಯ ಅಧಿಪತಿ. ಇವನಿಗೆ ಬುಧ ಗುರು ಯೋಗ. ಇದರಿಂದ ಶಾಸ್ತ್ರದಲ್ಲಿ ವಿಶೇಷವಾದ ವಿಜ್ಞಾನದತ್ತ ಪ್ರಗತಿಯನ್ನು ಕೊಡುತ್ತೆ. ಪ್ರತಿಸಲ ಎರಡು ಎರಡು ಸಲ ಪ್ರಯತ್ನ ಮಾಡುವುದರಿಂದ ಕೆಲಸ ಸುಗಮ ಅಂಧರು. ಈ ವರ್ಷದಲ್ಲಿ ಜನನವಾದವರು ಸೂಕ್ಷ್ಮ ಬುದ್ಧಿಯುಳ್ಳವರು. ಯೋಗ ಪ್ರಾಬಲ್ಯ ಇಲ್ಲದವರು ಕಳ್ಳರಾಗುತ್ತಾರೆ. ಉಳಿದವರು ಬಾಲ್ಯದಲ್ಲಿ ಸುಳ್ಳು ಮೋಸದ ಪ್ರಕೃತಿ ಇದ್ದು ತಮ್ಮ ಇಪ್ಪತ್ತನಾಲ್ಕು ವರ್ಷಗಳ ನಂತರ ಬುಧನ ಯೋಗ ಪ್ರಬಲ ಹೊಂದಿ ವಿಶೇಷ ಪ್ರಗತಿಯನ್ನು ಹೊಂದುವರು. ಇವರು ಸ್ವಂತ ಬುದ್ಧಿ ಚಾತುರ್ಯ, ಸಾಂಕೇತಿಕ ಲಿಪಿ ಲೇಖನ ವಾಚನಗಳಿಂದ ಬದುಕುವರು. ಶಾಸನಗಳ ಓದುವಿಕೆ ಬೇರೆ. ಸೂಕ್ಷ್ಮಗಣಿತಗಳ ವಿದಗ್ಧತೆ ಬೇರೆ. ಇವರಿಗೆ ಅಪವಾದ ತಪ್ಪಲು ನರಹರಿ ಆರಾಧನೆ ಶ್ರೇಷ್ಠ.

## ಎಪ್ಪತ್ತಮೂರನೆಯ ವರುಷ – 1973

ಇದು ಪರಸ್ಪರ ವೈಷಮ್ಯಗಳ ವರುಷ. ಈ ಕಾಲದಲ್ಲಿ ಸೋದರರಲ್ಲಿ ಆಸ್ತಿ ಪಾಸ್ತಿಗಾಗಿ ವಿರಸ. ಶತ್ರುಗಳ ಪ್ರಾಬಲ್ಯ. ದಾಂಪತ್ಯ ಜೀವನದಲ್ಲಿ ಕಿರಿಕಿರಿ. ಸರ್ಪದೋಷದ ಫಲಗಳು ಒಟ್ಟಾರೆ ನಡೆಯುತ್ತವೆ. ವಾಹನಗಳಿಂದ ಅಪಘಾತಗಳು. ರಾಜ್ಯದಲ್ಲಿ ಆಂತರಿಕ ರಾಜಕೀಯದಿಂದ ಗಲಭೆಗಳೂ ಹೆಚ್ಚು. ಸಾರ್ವಜನಿಕ ಆಸ್ತಿ ಪಾಸ್ತಿಗಳಿಗೂ ಹಾನಿ. ಇದು ಮೊತ್ತದಲ್ಲಿ ಅಶಾಂತಿ ವರ್ಷ. ಪೋಲೀಸರಿಗೂ ಎಡೆಬಿಡದೆ ಕೆಲಸ. ಈ ವರುಷ ಹುಟ್ಟಿದವರಿಗೆ ಮೂಗಿನ ಮೇಲೆ ಕೋಪ. ಹುಟ್ಟೂರು ಇವರಿಗೆ ಆಗದು. ಅನೇಕರಿಗೆ ವಿದೇಶಗಳಲ್ಲಿ ಪ್ರಗತಿ ಆದೀತು. ಯಂತ್ರಾಲಯಗಳಲ್ಲಿ ಇವರ ಜೀವನ ಸುಗಮ. ಈ ವರ್ಷದಲ್ಲಿ ಇವರಿಗೆ ಕೈಕಾಲಿಗೆ ಪೆಟ್ಟು. ಇದಕ್ಕೆ ಇವರು ಸುಬ್ರಹ್ಮಣ್ಯ ದೇವರನ್ನು ಆರಾಧಿಸಬೇಕು.

## ಎಪ್ಪತ್ತನಾಲ್ಕನೆಯ ವರುಷ – 1974

ಇದು ರಾಹು ಚಂದ್ರ ಯೋಗ. ಕಾರಣ ನಾಲ್ಕು ಸಂಖ್ಯೆಗೆ ಚಂದ್ರ ಅಧಿಪತಿ. ಇವನು ಸಂಚಾರ ಗ್ರಹ. ಇದರಿಂದ ಈ ವರುಷ ಜನಗಳು ತೀರ್ಥಯಾತ್ರೆ ಮಾಡುತ್ತಾರೆ. ಸಾಗರೋತ್ತರ ವ್ಯಾಪಾರ ಮಾಡುವವರಿಗೆ ವಿಶೇಷ ಪ್ರಗತಿಯಾಗುತ್ತೆ. ಮನೋಗ್ರಹವಾದ ಚಂದ್ರನಿಗೆ ರಾಹುವಿನಿಂದ ಗ್ರಹಣ ಯೋಗವಾಗಿ ಕೆಲವರಿಗೆ ಮಾನಸಿಕ ರೋಗಗಳು ಕಂಡೀತು. ಹೆಂಗಳಿಗೆ ಇದರ ಹಾವಳಿ ಹೆಚ್ಚು. ಗರ್ಭಕಾಲ. ಪ್ರಸೂತಿ ಕಾಲಗಳಲ್ಲಿ ಇದು ಕಾಣಿಸಿಕೊಳ್ಳುತ್ತೆ. ಕೆಲವರ ಮತದಂತೆ ಇತರರ ಮನಸ್ಸನ್ನು ವಿಶ್ಲೇಷಣೆ ಮಾಡುವ ಮನಃಶಾಸ್ತ್ರ ಅಧ್ಯಯನವನ್ನು ಕೊಡುತ್ತೆ. ರಾಹು ಹಗ್ಗದ ಸಂಕೇತವಾಗಿ ಇದರಿಂದ ನೂಲು. ತಂತಿ ವ್ಯಾಪಾರದಿಂದ ಹೇರಳ ಸಂಪಾದನೆಯಾಗುತ್ತೆ. ಈ ವರುಷ ಹುಟ್ಟಿದ ಮಂದಿ ಸೂಕ್ಷ್ಮಮತಿಗಳು.

ವಿಶೇಷ ಸಂಚಾರ ಮಾಡಿಕೊಂಡು ವ್ಯಾಪಾರದಲ್ಲಿ ಮುಂಬರುವ ಮಂದಿ. ಹಾಗಿಲ್ಲ. ಸಮುದ್ರಾಂತರ ವ್ಯಾಪಾರ ವ್ಯವಹಾರ ನಿಪುಣರು. ಆದರೆ ಇವರು ಬಹಳ ಚಪಲ ಚಿತ್ತರು.

ರಾಹು ತಾತನನ್ನು ತೋರಿಸುವುದರಿಂದ ಇವರು ಬಾಲ್ಯದಲ್ಲಿ ಅಜ್ಜನಿಂದ ಬೆಳೆದವರು. ಜೀವನದಲ್ಲಿ ಕಷ್ಟಗಳು ಪರಿಹಾರವಾಗಲು ಸೋಮಶೇಖರನನ್ನು ಪೂಜಿಸಬೇಕು.

## ಎಪ್ಪತ್ತೈದನೆಯ ವರುಷ - 1975

ಈ ಇಸ್ವಿಯ ವರುಷದ ಫಲಕ್ಕೆ ಏಳು ಸಂಖ್ಯೆಯ ರಾಹು ಮತ್ತು ಐದು ಸಂಖ್ಯೆಯ ಗುರು ಅಧಾರ ಗ್ರಹಗಳು. ಇದನ್ನು ರಾಹು ಗುರು ಯೋಗ ಅಂದರು. ರಾಹುದೆಶೆಯ ಗುರುಭುಕ್ತಿಯಂತೆ ಫಲ ಎಂದೂ ಕೆಲವರ ಮತ. ಗುರು ಸಂತಾನ ಗ್ರಹ. ರಾಹು ಗ್ರಹಣ ಮಾಡುವ ತತ್ವ. ಒಂದು ಗರ್ಭಧಾರಣೆಗೆ ನಮೂನೆ ಯೋಗ. ಈ ಕಾರಣ ಈ ವರ್ಷ ಜನನ ಸಂಖ್ಯೆ ಹೆಚ್ಚು. ಧನ ಕಾರಕನಾಗಿ ಗುರು ರಾಹು ಯೋಗ ಧನ ಸಂಗ್ರಹ ಯೋಗ ಬೇರೆ. ಇದರಿಂದ ದೇಶದಲ್ಲಿ ಜನಗಳಿಗೆ ಬ್ಯಾಂಕಿನಲ್ಲಿ ಠೇವಣಿ ಇಡುವ ಮನೋಭಾವ ಬೆಳೆಯುವುದು. ಬ್ಯಾಂಕಿನ ಶಾಖೆಗಳೂ ಹೆಚ್ಚು. ಬೃಹತ್ ವ್ಯಾಪಾರ ಮತ್ತು ವ್ಯವಹಾರಗಳಲ್ಲಿ ವಿಶೇಷ ಪ್ರಗತಿ. ಗುರು ರಾಹು ಯೋಗದಲ್ಲಿ ಜಾತ್ಯಂತರ ವಿವಾಹಗಳೂ ಆದೀತು ಎಂದು ಕೆಲವರ ಮತ. ಈ ವರ್ಷ ಜನನಗಳಲ್ಲಿ ವಿಶೇಷ ವಿದ್ಯಾವಂತರೂ ಧನಿಕರೂ ಶಿಕ್ಷಣವೇತ್ತರೂ ಜಾಸ್ತಿ. ತೊಂದರೆಗಳು ಬಂದಾಗ ಈ ವರ್ಷದಲ್ಲಿ ಆಂಜನೇಯನ ಪೂಜೆ ಲೇಸು.

## ಎಪ್ಪತ್ತಾರನೆಯ ವರುಷ - 1976

ಆರು ಸಂಖ್ಯೆಯನ್ನು ಹೊಂದಿರುವ ಈ ಇಸ್ವಿಯಲ್ಲಿ ಕುಜನು ಮಂಗಳಪ್ರದನು. ಎಪ್ಪತ್ತ ಮೂರನೆಯ ಇಸ್ವಿಯಲ್ಲಿ ಉಂಟಾದ ತೊಂದರೆ ಈ ವರ್ಷದಲ್ಲಿ ನಿವಾರಣೆ ಆಗುತ್ತೆ. ದಾಂಪತ್ಯ ದಲ್ಲಿ ಸುಖೋದಯ. ಜನಗಳಲ್ಲಿ ಜಗಳಗಳೂ ರಾಜಿ. ವಾಹನಗಳ ಉದ್ಯಮದಲ್ಲಿ ಹೇರಳ ಲಾಭ ಬೇರೆ. ದೋಷಗಳು ನಿವಾರಣೆಯಾಗುವುದರಿಂದ ಜನಗಳಿಗೆ ಈ ವರ್ಷ ಶ್ರೀ ಮಾತೆ ದುರ್ಗಾ ಮೇಲೆ ಭಕ್ತಿ ಹೆಚ್ಚು. ನದೀ ಮೂಲಗಳಿಂದ ನೀರಾವರೀ ಯೋಜನೆಗಳೂ ಯಶಸ್ವಿ. ಈ ವರ್ಷ ಬೆಳೆಗಳೂ ಸುಗಮ. ಆಹಾರಾದಿಗಳ ಬೆಲೆಗಳೂ ಇಳಿಮುಖ. ಜನರಿಗೆ ಈ ವರುಷ ಸುಖ.

## ಎಪ್ಪತ್ತೇಳನೆಯ ವರುಷ - 1977

ಈ ಇಸ್ವಿಯಲ್ಲಿ ಎರಡು ಏಳುಗಳು ಇವೆ. ಒಂದು ಏಳು ಶುಭ ಮತ್ತೊಂದು ಅಶುಭ. ಎರಡೂ ಒಂದೇಸಂಖ್ಯೆಯ ಎರಡು ಮುಖಗಳು. ಈ ಕಾರಣ ಸರಿಸಮಾನರಲ್ಲಿ ಪರಸ್ಪರ ಸ್ಫೋಟ ಹೆಚ್ಚು. ಸೋಗಿನ ಶತ್ರುಗಳನ್ನು ದಮನಮಾಡಿ ಕೀರ್ತಿ ಬರುವ ವರುಷ. ಈ ವರುಷ ರಾಜಕೀಯದಲ್ಲಿ ಗಡಿರಾಷ್ಟ್ರಗಳ ನಂಬಿಕೆ ದ್ರೋಹಗಳು ನಡೆದು ನಂತರ ಶಮನವಾಗುವುದು. ಅಂತ್ಯದಲ್ಲಿ ನೆರೆರಾಷ್ಟ್ರಗಳಿಗೆ ವಿವೇಕ ಮೂಡಿ ಶಾಂತಿ ಏರ್ಪಡುವುದು. ಆದರೆ ಜನಗಳಲ್ಲಿ ಕಾಲ್ಪನಿಕ ಶೂನ್ಯ ಮಾಟ ಇತ್ಯಾದಿಗಳ ದುರ್ಮಂತ್ರಗಳ ಭೀತಿ ಬೇರೆ. ಆದರೂ ಈ ವರ್ಷ ಧರ್ಮಿಷ್ಠರಿಗೇ

ಗೆಲವು. ಈ ವರ್ಷದ ಜನನಗಳಲ್ಲಿ ಅವರು ಪ್ರತಿ ಹಂತದಲ್ಲಿಯೂ ಶತ್ರುಗಳನ್ನು ಎದುರಿಸ ಬೇಕಾಗುವುದು. ದೇವಕೃಪೆಯಿಂದ ಇವರಿಗೆ ಕೂದಲೆಳೆಯಲ್ಲಿ ಜಯ ಪ್ರಾಪ್ತಿಯಾದೀತು.

### ಎಪ್ಪತ್ತೆಂಟನೆಯ ವರುಷ - 1978

ಎಂಟು ಸಂಖ್ಯೆಯ ಗ್ರಹ ಶನಿ. ಇಲ್ಲಿ ಶನಿಗೆ ಬುಧನ ಯೋಗವಿದೆ. ಇದು ವಾಯುವಿನ ಯೋಗ. ಇದಕ್ಕೆ ಏಳು ಸಂಖ್ಯೆಯ ರಾಹು ಬೆರತು ಇದು ಶ್ವಾಸಬಂಧ ಯೋಗ. ಇದರಿಂದ ಮುಂದಿಗೆ ಈ ವರುಷ ನೇಣು ಹಾಕಿಕೊಂಡು ಸಾಯುವ ಯೋಗ ಹೆಚ್ಚು. ಶ್ವಾಸರೋಗಗಳಾದ ಅಸ್ತಮಾ. ಹೃದಯ ಬೇನೆ. ಪಾರ್ಶ್ವವಾಯು ಪೀಡೆಗಳೂ ಅತಿ. ಇದು ಬುಧ ಶನಿಯೋಗದಿಂದ ಅರಿಷ್ಟದ ವರುಷ. ಆದರೆ ಹೈನುಗಾರಿಕೆ ಮಾತ್ರ ಹೆಚ್ಚಿನ ಪ್ರಗತಿಯನ್ನು ಹೊಂದುತ್ತೆ. ಹಸುಗಳಿಗೆ ರೋಗಗಳು ಬಂದರೂ ಸಹ ವೈದ್ಯರಿಂದ ಅದು ಗುಣಮುಖ. ಈ ಬುಧನ ದೋಷ ಹೋಗಲು ಈ ಕಾಲದಲ್ಲಿ ಹರಿಕ್ಷೇತ್ರಗಳಿಗೆ ಯಾತ್ರೆ ಮಾಡುವುದು ಲೇಸು. ಈ ವರ್ಷ ಛಳಿ ಗಾಳಿ ಹೊಡೆತದಿಂದ ಹೆಚ್ಚು ಜನ ಸಾಯುವರು. ಈ ವರ್ಷದಲ್ಲಿ ಹುಟ್ಟಿದವರು ಹೆಚ್ಚಿನಂಶ ವೈದ್ಯರು. ಹಾಗಿಲ್ಲ. ರಸಾಯನಿಕ ತಜ್ಞರು. ಕಷ್ಟ ಪರಿಹಾರ ಮಾಡುವ ಯೋಗ ಈ ವರುಷ ನರಹರಿಗೆ ಸೇರಿದ್ದು. ಅವನ ಪೂಜೆ ಲೇಸು.

### ಎಪ್ಪತ್ತೊಂಬತ್ತನೆಯ ವರುಷ - 1979

ಈ ವರುಷ ಜನಗಳಿಗೆ ಶ್ರೇಯಸ್ಸನ್ನು ತರುವ ಕಾಲ. ಸಕಲ ಕಷ್ಟಗಳನ್ನು ಪರಿಹಾರ ಮಾಡುವ ಸೂರ‍್ಯ ಒಂಭತ್ತು ಸಂಖ್ಯೆಯ ಗ್ರಹವಾಗಿರುವುದೇ ಕಾರಣ. ರಾಹು ರವಿಯೋಗ ಚಕ್ರವರ್ತಿ ಯೋಗ. ಇದನ್ನು ಸುದರ್ಶನ ಚಕ್ರಯೋಗ ಅಂದರು. ಈ ವರ್ಷದಲ್ಲಿ ಈ ಕಾರಣ ದೆಹಲಿಯ ಕೇಂದ್ರ ಸರಕಾರದ ಪ್ರಭಾವ ರಾಜ್ಯಗಳ ಮೇಲೆ ಇಮ್ಮಡಿ. ಕೆಲವೆಡೆ ರಾಷ್ಟ್ರಪತಿ ಆಡಳಿತದ ಸಂಭವ ಬೇರೆ. ಸರಕಾರದ ಪ್ರಭಾವ ಜನಗಳ ಮೇಲೆ ಹೆಚ್ಚಿ ಪ್ರತಿಯೊಂದಕ್ಕೂ ಸರಕಾರವನ್ನು ಎದುರು ನೋಡಬೇಕಾದೀತು. ದೇಶದ ಉನ್ನತ ಅಧಿಕಾರಿಗೆ ಅಂತರ ರಾಷ್ಟ್ರೀಯ ಪ್ರಶಸ್ತಿ ದೊರೆತು ಗೌರವ ಲಾಭ ಆಗುತ್ತೆ. ಈ ವರುಷ ಜನನದಲ್ಲಿ ವಿಶೇಷ ಪ್ರತಿಭಾವಂತರೂ. ಆಡಳಿತಗಾರರೂ ಹೆಚ್ಚು. ಎಂತಹ ಕಷ್ಟ ಬಂದರೂ ಚಾತುರ‍್ಯದಿಂದ ಎದುರಿಸಬಲ್ಲ ಬುದ್ಧಿ ಇವರಿಗೆ ದೈವದತ್ತ. ವಿಶ್ವದ ಅತ್ಯಂತ ಬಲಿಷ್ಠ ಚಕ್ರವರ್ತಿ ದೇಶಕ್ಕೆ ಭೇಟಿಯಾಗಿ ಮುಂದಿನ ಪ್ರಗತಿಗೆ ನಾಂದಿಯಾಗುವುದು.

ಏಳು ಸಂಖ್ಯೆಯ ದಶಕದ ವರ್ಷಫಲ ಸ್ಥೂಲವಾಗಿ ಹೇಳಿದೆ. ಇದರಿಂದ ಒಂದೊಂದು ಬಿಡಿ ಅಂಕಗಳ ಪ್ರಭಾವ ಪ್ರತಿ ವರುಷ ಬದಲು ಆಗುವುದಿಂದ ಫಲವೂ ಸಹ ಬದಲು ಆಗುತ್ತೆ. ಈ ಅಂಶ ಮೇಲಿನ ಫಲಕಥನದಿಂದ ತಿಳಿಯಬಹುದು. ಈ ರೀತಿ ಫಲ ಹೇಳುವುದು ಗ್ರಹಗಳ ದ್ವಿಗ್ರಹ ಯೋಗ ಫಲವನ್ನು ಹೊಂದಿಸುವುದು ಮುಖ್ಯ ಅಂಶ. ಹಿಂದಿನ ಮಹರ್ಷಿಗಳು ಪುರಾಣವನ್ನು ಬರೆಯುವಾಗ ಅಧ್ಯಾಯ ಸಂಖ್ಯೆಗಳಿಗೆ ಅನುಗಣವಾಗಿ ವಿಷಯವನ್ನು ಹೊಂದಿಸಿ ಬರೆದಿರುತ್ತಾರೆ. ಈ ನಿಯಮ ನೀತಿಯ ಸಾಮ್ಯ ಶ್ರೀಮತ್ ಭಾಗವತದ ದಶಮ ಸ್ಕಂದದ

ಎಪ್ಪತ್ತನೆಯ ಅಧ್ಯಾಯದಿಂದ ಒಂಬತ್ತು ಅಧ್ಯಾಯಗಳನ್ನು ಪರಿಶೀಲಿಸಿದರೆ ಯತ್ನ ಮಾರ್ಗದ ಅರಿವಾದೀತು.

ಜನ್ಮ ದಿನಾಂಕ ವಿಮರ್ಶೆ ಮಾಡುವಾಗ ಮೂವತ್ತು ಸಂಖ್ಯೆಗಳವರೆಗೆ ಫಲವನ್ನು ಹೇಳಿದೆ. ಆದರೆ ಅದರ ಮುಂದೆ ಇರುವ ಸಂಖ್ಯೆಗಳ ಫಲವನ್ನು ಈಗ ವರುಷ ಸಂಖ್ಯೆಯ ಫಲ ವಿಮರ್ಶೆ ಮಾಡುವಾಗ ಗಮನಕ್ಕೆ ಬರುವುದು. ಈ ವರುಷಫಲ ಜನ್ಮಾದಿ ವರ್ಷದಿಂದ ಎಣಿಸಿ ಬರುವ ವರುಷಕ್ಕೂ ಸಹ ಅನ್ವಯವಾಗುತ್ತದೆ. ಇಂಗ್ಲಿಷ್ ಕ್ಯಾಲಂಡರ್ ಇಸ್ವಿಯ ವರುಷಗಳಿಗೂ ಅನ್ವಯವಾಗುತ್ತದೆ. ಅಲ್ಲದೆ ಜಾತಕದಲ್ಲಿ ರಾಹುವಿನ ಯೋಗ ನಡೆಯಲು ಈ ಎಪ್ಪತ್ತನೆಯ ದಶಕ ಸರಣಿ ಶುರುವಾದಾಗ ಫಲಕ್ಕೆ ಬರಲು ಅವಕಾಶ ಹೆಚ್ಚು. ರಾಹು ದೆಶೆ ಜಾತಕದಂತೆ ನಡೆಯದಿದ್ದರೂ ಈ ಸಂಖ್ಯಾ ಸರಣಿ ವರುಷಗಳಲ್ಲಿ ಆ ರಾಹುವಿನ ಫಲ ನಡೆಯುವುದು. ಇದೇ ರೀತಿ ಇತರ ಗ್ರಹಗಳ ಯೋಗಗಳು ಆಯಾ ಗ್ರಹದ ಸಂಖ್ಯಾ ಸರಣಿಯ ವರುಷಗಳಲ್ಲಿ ನಡೆಯುತ್ತವೆಂಬುದು ಗಮನಾರ್ಹ ಸಂಗತಿ.

## ಎಂಭತ್ತು ಸಂಖ್ಯೆಯ ವರುಷ ಫಲ

ಹತ್ತು, ಇಪ್ಪತ್ತು, ಮೂವತ್ತು ಇತ್ಯಾದಿ ಪೂರ್ಣಾಂಕಗಳಲ್ಲಿ ಹತ್ತಕ್ಕೆ ಗುರು ಶನಿ ಯೋಗ. ಇಪ್ಪತ್ತಕ್ಕೆ ಗುರು ಚಂದ್ರ ಯೋಗ. ಉಳಿದ ಪೂರ್ಣಾಂಕಗಳಿಗೆ ಶುಕ್ರನ ಯೋಗ ಪ್ರಾಪ್ತಿಯಾಗುತ್ತದೆ. ಏಕಾಂಕ ಸಂಖ್ಯೆ ಪೂರ್ಣಾಂಕವಾದಾಗ ಆ ಏಕಾಂಕ ಸಂಖ್ಯೆಯ ಗ್ರಹಕ್ಕೆ ಶುಕ್ರನ ಯೋಗವಾಗುತ್ತೆ. ಅಲ್ಲದೆ ಆ ಏಕಾಂಕ ಸಂಖ್ಯೆಯ ಗ್ರಹದ ದೋಷ ಸಹ ಗುಣಕ್ಕೆ ತಿರುಗುತ್ತದೆ. ಹತ್ತು, ಇಪ್ಪತ್ತು, ಮತ್ತು ಮೂವತ್ತು ಸಂಖ್ಯೆಗಳು ಈ ನಿಯಮಕ್ಕೆ ಹೊರತು. ಕಾರಣ ಅವಕ್ಕೆ ವಿಶೇಷ ಗ್ರಹಯೋಗ ಇರುತ್ತೆ. ಮೂವತ್ತಕ್ಕೂ ಸಹ ಸೂರ್ಯ ಶುಕ್ರ ಯೋಗ ಅಂದರು. ನಿಯಮದ ಪ್ರಕಾರ ಮೂರು ಸಂಖ್ಯೆಯ ಕುಜ ಶನಿ ಯೋಗಕ್ಕೆ ಶುಕ್ರನ ಯೋಗ ಪ್ರಾಪ್ತಿ ಆಗಬೇಕು. ಆದರೆ ಇಲ್ಲಿ ತಿಂಗಳಿನ ದಿನ ಸಂಖ್ಯೆ ತೋರಿಸುವ ಮೂವತ್ತು (ತಿಂಗಳಿಗೆ ಮೂವತ್ತು ದಿನಗಳು) ಸೂರ್ಯ ಶುಕ್ರನ ಸಂಯೋಗಕ್ಕೆ ಸಂಖ್ಯೆ ವಿಶೇಷ. ಈ ಕಾರಣ ಮೇಲಿನ ನಿಯಮ ನಾಲ್ಕು ಸಂಖ್ಯೆ ಗ್ರಹ ಚಂದ್ರನಿಂದ ಶುರು ಎನ್ನಬಹುದು.

ಉದಾಹರಣೆಗೆ ಎಂಟು. ಇದು ಏಕಾಂಕ ಸಂಖ್ಯೆ. ಇದರ ಅಧಿಪತಿ ಶನಿ. ಇದು ಗುಣಸಂಖ್ಯೆ ಪೂರ್ಣಾಂಕವಾದಾಗ ಎಂಭತ್ತು ಆಗುತ್ತೆ. ಆಗ ಈ ಶನಿಗೆ ಶುಕ್ರನ ಯೋಗವಾಗುತ್ತೆ. ಶನಿ ಅಂದರೆ ಕಷ್ಟದ ಮಂದಿಗೆ ಶುಕ್ರ ಅಂದರೆ ಸುಖಪ್ರಾಪ್ತಿ ಎಂದರ್ಥ. ಈ ಕಾರಣ ಎಂಭತ್ತನೇ ವರುಷದ ಪ್ರಾಯದಲ್ಲಿ ಶನಿಯ ಫಲ ನಿವಾರಣೆಗೆ ಸಹಸ್ರ ಚಂದ್ರ ದರ್ಶನ ಶಾಂತಿಯನ್ನು ಮಾಡುತ್ತಾರೆ. ಇದು ಒಂದು ನಮೂನೆ ಆಯುಷ್ಯ ಹೋಮ ಅಂದರು.

ಆಂಗ್ಲರ ಇಸ್ವಿಯ ಸಂಖ್ಯೆಯ ಎಂಭತ್ತು ಅಂದರೆ ಸಾವಿರದ ಒಂಭೈನೂರ ಎಂಭತ್ತು ಇಸ್ವಿ ಪ್ರಾರಂಭದಿಂದ ಈ ಶನಿ ಶುಕ್ರ ಯೋಗ ಪ್ರಾರಂಭ. ಇದರಿಂದ ಈ ಹತ್ತು ವರುಷಗಳಲ್ಲಿ ಶನಿ ವರ್ಗದ ಜನಗಳಿಗೆ ಶುಕ್ರನ ಯೋಗ ನಡೆಯುವುದು. ಸೇವಾ ವೃತ್ತಿಯ ನಿಮ್ನವರ್ಗ ಜನಗಳಿಗೆ ಇತರವರ್ಗ ಜನಗಳಿಗಿಂತ ಸುಖಹೆಚ್ಚು. ಅದರಲ್ಲಿಯೂ ಬುಧ ಶನಿ ಯೋಗದ ಹರಿಜನರಿಗೂ

ಹರಿಯ ಭಕ್ತರಿಗೂ ವಿಶೇಷ. ಇದರಿಂದ ಈ ಕಾಲದಲ್ಲಿ ಹರಿಜನರಲ್ಲಿ ಒಬ್ಬರು ದೇಶದ ಉನ್ನತ ಅಧಿಕಾರವನ್ನು ಹೊಂದುತ್ತಾರೆ. ಈ ಎಂಭತ್ತರ ದಶಕದಲ್ಲಿ ಬುಧ-ಶನಿ ಯೋಗದ ಬುಧಾರಿಷ್ಟಕ್ಕೆ ವಿವಿಧ ರೀತಿಯ ಉಪಾಯಗಳು ಜನಕ್ಕೆ ಗೋಚರವಾಗುತ್ತೆ. ಇದರಿಂದ ಬುಧನು ಶುಭನಾದಾನು.

ಬುಧ ಶನಿ ಯೋಗದವರಿಗೆ ಸುಖ. ಬುಧನ ಕೆಲಸ ಮಾಡುವ ಮಂದಿಗೂ ಇದು ಅನ್ವಯ ಆದೀತು. ಬುಧನ ಕೆಲಸ ಅಂದರೆ ಲೇಖಕರು. ಗಣಿತಶಾಸ್ತ್ರ ತಜ್ಞರು, ಚಿತ್ರಕಾರರು, ಕಲಾ ಕುಶಲರು ಇತ್ಯಾದಿ ಮಂದಿಗೆ ಸುಯೋಗ ನಡೆಯುವುದು. ಬುದ್ಧಿಯ ಗ್ರಹ ಬುಧ. ಇದಕ್ಕೆ ಮಂಕು ಕವಿಸುವ ಶನಿಯ ಯೋಗವಾದಾಗ ಭ್ರಮೆ ಹಿಡಿಯುತ್ತೆ. ಸಂದೇಹ ಕೂಡ ಇದರ ಒಂದು ನಮೂನೆ. ಸಂದೇಹ ನಿವಾರಕ ಭಾಷ್ಯ ಬರೆದು ಮಂದಿಗೆ, ವಿಶೇಷವಾಗಿ ಮಂದ ಬುದ್ಧಿ ಇರುವ ಬಾಲಕರಿಗೆ ವಿದ್ಯಾಪ್ರಗತಿಗಾಗಿ ಸುಲಭ ಅರ್ಥವಾಗುವಂತೆ ಪುಸ್ತಕಗಳನ್ನು ಬರೆಯುವ ಬೋಧಕರಿಗೆ ಸುಯೋಗ ನಡೆಯುವುದು. ಶನಿ ಹಳೆತು ಕೊಳೆತಕ್ಕೆ ಹೆಸರು. ಬುಧ ಅಂದರೆ ಗ್ರಂಥಗಳು. ಇದರಿಂದ ಮೂಲೆಗೆ ಬಿಸಾಡಲ್ಪಟ್ಟ ಹಳೆಯ ಗ್ರಂಥಗಳನ್ನು ಹುಡುಕಿ ಅದರ ವಿಷಯ ಸುಲಭವಾಗಿ ಸಂದೇಹ ರಹಿತವಾಗಿ ಅರ್ಥವಾಗುವಂತೆ ಆಡುಭಾಷೆಯಲ್ಲಿ ಬರೆದು ಪ್ರಾಚೀನ ಗ್ರಂಥಗಳಿಗೆ ಪ್ರಚಾರ ಮಾಡುವ ಕಾಲ ಅಂದರು. ಇನ್ನೂ ಸುಲಭ ಗ್ರಹಣಕ್ಕಾಗಿ ಚಿತ್ರಗಳ ಮೂಲಕ ಗ್ರಂಥದ ವಿಷಯ ತಿಳಿಯುವಂತೆ ಮಾಡುವ ಸಚಿತ್ರ ಕತೆಗಳು ಲೇಖನಕ್ಕೂ ಈ ಕಾಲ ವಿಶೇಷ.

ಬುಧ ಶನಿಯೋಗ ಪಾದವನ್ನು ತೋರಿಸುತ್ತೆ. ಈ ಕಾರಣ ಹರಿಭಕ್ತರಿಗೆ ಹರಿ ಹರಿ ಪಾದವೇ ಗತಿ. ಪಾದಗಳ ಚಿತ್ರವಿಚಿತ್ರ ವಿನ್ಯಾಸದಿಂದ, ಬೆಡಗು ಬಿನ್ನಾಣಗಳಿಂದ ಮುಖ ಅಭಿನಯದ ಮೂಲಕ ಪೂರ್ವದ ಗ್ರಂಥಗಳ ಕತೆಗಳನ್ನು ತೋರಿಸುವ ಭರತನಾಟ್ಯ ಕಲೆಗೆ ವಿಶೇಷ ಪ್ರೋತ್ಸಾಹಕ್ಕೆ ಇದು ಸುಸಮಯವಾದೀತು. ಈ ಕಲಾಕಾರರಿಗೆ ದೇಶವಿದೇಶ ಗಳಿಲ್ಲಿಯೂ ಸಹ ಮನ್ನಣೆ ದೊರಕಿ ಭಾರತಕ್ಕೆ ಸುಯೋಗ ನಡೆದೀತು. ಶನಿ ಅಂದರೆ ಹಳೆತಾದ ಮರೆಯಲ್ಪಟ್ಟ ಭಾರತ ಸಂಸ್ಕೃತಿಯ ಪುನರುತ್ಥಾನದ ಕಾಲ ಅಂದರೆ ತಪ್ಪಲ್ಲ. ಮೊತ್ತದಲ್ಲಿ ಭಾರತೀಯರೇ ವಿದೇಶದ ಮೋಹದಿಂದ ಬಿಟ್ಟ ತಮ್ಮ ಸ್ವಂತ ಸಂಸ್ಕೃತಿಯ ಪುನಃ ಅನುಕರಣೆ ಈ ಕಾಲಕ್ಕೆ ಹೊಸ ನಮೂನೆಯ ನಡುವಳಿಕೆ(ಫ್ಯಾಶನ್) ಆದೀತು.

ಶನಿ ಆಯುಷ್ಯದ ಗ್ರಹ. ಬುಧ ಗ್ರಂಥ ತೋರಿಸುವ ಗ್ರಹ. ಎರಡರ ಯೋಗ ಹಳೆಯ ಆಯುರ್ವೇದ ಗ್ರಂಥಗಳು. ಈ ಗ್ರಂಥಗಳಿಗೆ ವಿಶೇಷ ಪ್ರಚಾರದ ಯೋಗವಾಗಿ ಪುರಾತನ ಪ್ರಸಿದ್ಧ. ಆಯುರ್ವೇದದ ಮಹಿಮೆ ಇಡೀ ವಿಶ್ವಕ್ಕೆ ವಿಸ್ಮಯ ಆದೀತು. ಪುನಃ ಗಿಡಮೂಲಿಕೆಗಳ ವೈದ್ಯ. ಎಲ್ಲಾ ನಮೂನೆ ವೈದ್ಯಗಳನ್ನು ಮೀರಿಸಿ ಪ್ರಸಿದ್ಧಿಯನ್ನು ಪಡೆದೀತು. ಸುಲಭವಾಗಿ ವಾಸಿಯಾಗದ ಬುಧನ ಅರಿಷ್ಟದ ಕಾಯಿಲೆಗಳಾದ ನರವ್ಯಾಧಿ, ಎದೆಯ ಬೇನೆ, ಅಸ್ತಮಾ, ಅದುರುವಾಯು, ಹೃದಯ ರೋಗ, ತೊನ್ನು ಇತ್ಯಾದಿ ಚರ್ಮವ್ಯಾಧಿಗೂ ಸುಲಭವಾಗಿ ಗುಣವಾಗುವ ಯೋಗ ಇದರಿಂದ ಹುಟ್ಟುತ್ತೆ.

ವ್ಯಾಪಾರಿಗಳಿಗೆ ಬುಧ ಶನಿ ಯೋಗದ ಎಂಭತ್ತನೆಯ ದಶಕ ವರುಷಗಳಲ್ಲಿ ಸುಗಂಧ ದ್ರವ್ಯಗಳ ವ್ಯಾಪಾರ ಪ್ರಗತಿಯನ್ನು ಕೊಡುತ್ತೆ. ಸುಗಂಧದ ಬತ್ತಿಗಳು. ಇದರ ಸಂಬಂಧಿಸಿದ ವಸ್ತುಗಳಿಂದ ವಿದೇಶೀ ವಿನಿಮಯದ ಗಳಿಕೆಯೂ ಹೆಚ್ಚು. ಅಂಗಗಳಲ್ಲಿ ಬುಧನು ಮೂಗಿನ

ಗ್ರಹವಾಗಿ ಶನಿ ವಾಯು ಗ್ರಹವಾಗಿ ಮೇಲಿನ ವಸ್ತು ವ್ಯಾಪಾರ ಪ್ರಗತಿ. ವಾಯು ಸಂಚಾರ, ವಾಯು ವಾಹನ ಸಂಚಾರವೂ ಸಹ ತೀರ ಸಾಧಾರಣದ ಸಾರಿಗೆಯಾಗಿ ಸರಕಾರಕ್ಕೆ ವರಮಾನ ಹೆಚ್ಚು. ಈ ದಶಕದ ಮತ್ತೊಂದು ವಿಶೇಷ ಅಂದರೆ ಪರಸ್ಪರ ನಂಬಿಕೆ. ಏಳನೆಯ ದಶಕದ ಎಪ್ಪತ್ತರ ದಶಕದಲ್ಲಿ ಪರಸ್ಪರ ನಂಬಿಕೆ ಹೋಗಿ ಮೋಸದ ಭಯ. ಆದರೆ ಎಂಟನೆಯ ದಶಕದ ಕಾಲದಲ್ಲಿ ಬುಧ ಶನಿ ಯೋಗಕ್ಕೆ ಭಕ್ತಿ, ನಂಬಿಕೆಗಳು ಮುಖ್ಯ. ಇದರಿಂದ ಈ ಕಾಲ ದಲ್ಲಿ ಪರಸ್ಪರ ಸಮ ಭಾವನೆಯೂ ಕೀಳುಮಟ್ಟದಲ್ಲಿ ನೋಡಲ್ಪಟ್ಟ ಜಾತಿಗಳಿಗೆ ಸಮಾನಾಧಿ ಕಾರಗಳೂ ಜನತೆಯ ಸ್ವೇಚ್ಛೆಯಿಂದ ಪ್ರಾಪ್ತಿಯಾಗುವುವು. ಅಲ್ಲದೆ ಕಾರ್ಮಿಕರಿಗೂ ಆಡಳಿತಗಾರರಿಗೂ ಪರಸ್ಪರ ಹಾರ್ದಿಕ ಶಾಂತಿ ಏರ್ಪಡುವುದು. ಇದರಿಂದ ದೇಶದಲ್ಲಿ ಉತ್ಪಾದನೆಯೂ ಹೆಚ್ಚು.

ಚರ್ಮಕಾರಕನಾದ ಬುಧನು ಅರಿಷ್ಟ ಭಂಗದ ಈ ದಶಕದಲ್ಲಿ ಚರ್ಮ ಅಂದರೆ ತೊಗಲಿನ ವ್ಯಾಪಾರದಲ್ಲಿ ಮುನ್ನಡೆ ಇದೆ. ಚರ್ಮರೋಗಗಳಿಗೆ ಪರಿಹಾರ ಕಾರ್ಯಕ್ರಮಗಳೂ ಹೆಚ್ಚಿ ಜನತೆಗೆ ಕ್ಷೇಮವಿದೆ. ಮೂಕ ಕಿವುಡರಿಗೆ ಅನಾಥಾಶ್ರಮಗಳ ಸಂಖ್ಯೆಯಲ್ಲಿಯೂ ಹೆಚ್ಚಳವಿದೆ. ಮನೆಯ ಗ್ರಹ ಬುಧನ ಯೋಗದಿಂದ ನಗರದ ಉತ್ತರ ದಿಕ್ಕಿನಲ್ಲಿ ಹೊಸ ಉಪನಗರ ಒಂದು ನಿರ್ಮಾಣವಾಗಿ ಮಧ್ಯಮ ವರ್ಗ ಜನಗಳಿಗೆ ವಸತಿ ಸೌಲಭ್ಯಗಳು ಹೆಚ್ಚುತ್ತೆ. ಈ ಕಾಲದಲ್ಲಿ ರಾಜ್ಯದ ಮುಖ್ಯ ಮಂತ್ರಿ ನಿಮ್ನ ವರ್ಗದವರಾಗಿ ಅವರಿಗೆ ವಿಶೇಷ ಕೀರ್ತಿಯೂ ಜನಾನುರಾಗ ಸಹ ಪ್ರಾಪ್ತಿಯಾಗುತ್ತದೆ.

ಈ ದಶಕದ ಕಾಲ ಒಂದು ಸಮನ್ವಯದ ಕಾಲ. ದೀನದಲಿತರಿಗೆ ಪ್ರಗತಿಯ ಕಾಲ. ಸಿರಿವಂತರು ಹಣ ಮಾಡಲು ಸಾಧ್ಯವಾಗದು. ಕಾರ್ಮಿಕರಲ್ಲಿ ತಮ್ಮ ಗಳಿಕೆಯನ್ನು ಸರಿಸಮ ವಾಗಿ ಹಂಚಿಕೊಂಡು ಶಾಂತಿ ಸಮಾಧಾನದಿಂದ ಉದ್ಯಮಗಳನ್ನು ನಡೆಸಿಕೊಂಡು ಹೋಗುವ ಕಾಲ ಅಂದರೆ ಬಹುಶಃ ತಪ್ಪಾಗದು. ಈ ದಶಕವು ಈ ಶತಕದಲ್ಲಿಯೇ ಮುಖ್ಯ ಬದಲಾವಣೆಯ ಕಾಲ. ಜನತೆಯ ಆಶೋತ್ತರಗಳು ಈಡೇರುವ ಕಾಲ. ಆರ್ತರಿಗೆ ಶರಣ್ಯ ನಾದ ಶ್ರೀಹರಿಯಭಕ್ತಿ ಜನರಲ್ಲಿ ಹೃದ್ಗತವಾಗಿ ದೇವಾಲಯಗಳಲ್ಲಿ ಜನಸ್ತೋಮ ನೆರೆದು ಸುಖ ಶಾಂತಿಗಳಿವೆ.

## ಎಂಟನೆಯ ದಶಕದ ಬಿಡಿ ವರುಷಗಳ ಫಲಂ

ಎಂಭತ್ತ ಒಂದನೆಯ ಇಸ್ವಿಯಲ್ಲಿ ಒಂದು ಸಂಖ್ಯೆಯ ಶನಿ ಕಷ್ಟ ಗ್ರಹ. ಈ ಕಷ್ಟ ಎಂಭತ್ತರ ಶನಿ-ಶುಕ್ರ ಯೋಗದಿಂದ ಪರಿಹಾರ. ಎಂಟು ಸಂಖ್ಯೆಯ ಶನಿ ಬುಧ-ಶನಿ ಯೋಗ. ಈ ಕಾರಣ ಹರಿ ಸೇವೆಯಿಂದ ಒಂದು ಸಂಖ್ಯೆಯ ದೋಷ ನೀಗಿ ಸುಖ. ಈ ಸಂಖ್ಯೆಯಲ್ಲಿ ಕುಚೇಲನಿಗೆ ಶ್ರೀಕೃಷ್ಣ ಸಂಪತ್ತನ್ನು ಕೊಟ್ಟದ್ದು. ಇದು ಎಲ್ಲರಿಗೂ ಸುಖದಾಯಕ ವರ್ಷ. ಉತ್ತರ ಹಿಂದುಸ್ಥಾನದಲ್ಲಿ ಕೆಲವರು ಈ ಕಾಲದಲ್ಲಿ ಕಲ್ಕಿ ಅವತಾರ ಆಗುತ್ತೆ ಎಂದು ನಂಬಿದ್ದಾರೆ. ದೇಹಶ್ರಮದಿಂದ ದುಡಿ ಯುವರಿಗೆ ಸುಗಮ ಧನಲಾಭ ಇದೆ. ಬುಧನು ಬಾಲಕ. ಇದರಿಂದ ಶಿಶುಗಳ ಆರೋಗ್ಯ ಉತ್ತಮ.

### ಆಂಗ್ಲರ ವರುಷ 1982

ಎರಡು ಸಂಖ್ಯೆಯ ಬುಧ-ಗುರು ಯೋಗದಿಂದ ಈ ವರ್ಷ ಪ್ರಾಚೀನ ಗ್ರಂಥಗಳ ಸುಲಭ ಭಾಷಾಂತರಗಳ ಪ್ರಕಟನೆ ಆಗುವುದು. ಸಂಸ್ಕೃತ ಭಾಷೆಯ ಪುನರುಜ್ಜೀವನ ಇದರ ಇನ್ನೊಂದು ಫಲ. ವಿದ್ಯಾರ್ಥಿಗಳಲ್ಲಿ ಶ್ರದ್ಧೆ ಹೆಚ್ಚಿ ಫಲಿತಾಂಶ ಉತ್ತಮ. ವೈಜ್ಞಾನಿಕ ಪ್ರಪಂಚದಲ್ಲಿ ಭಾರತಕ್ಕೆ ವಿಶ್ವಮನ್ನಣೆ ಬೇರೆ. ಈ ವರುಷ ಸರ್ವಭಾಷಾ ಸಮನ್ವಯವಾಗುವ ಹೊಸ ಲಿಪಿ ಅಸ್ತಿತ್ವಕ್ಕೆ ಬರುವ ಯೋಗವಿದೆ ಉತ್ತರ ಹಿಂದುಸ್ತಾನದಲ್ಲಿ ಭೂಗರ್ಭದಲ್ಲಿ ಹೊಸ ರಸಾಯನಿಕ ವಸ್ತು ದೊರತು ಸಂಪತ್ತು ಬೇರೆ. ಶಾಸನಗಳ ಇಲಾಖೆಯ ಕೆಲಸ ವಿಶೇಷ ಪ್ರಗತಿಯನ್ನು ಹೊಂದಿ ಪ್ರಾಚೀನ ಕಾಲದ ಅವಶೇಷಗಳು ದೊರೆತು ಭಾರತದ ಭವ್ಯ ಇತಿಹಾಸ ಕೀರ್ತಿ ಶಿಖರವನ್ನು ಮುಟ್ಟೀತು.

### ಆಂಗ್ಲರ ವರುಷ 1983

ಮೂರು ಸಂಖ್ಯೆಯ ಕುಜ-ಶನಿ ಯೋಗಕ್ಕೆ ಶುಕ್ರನ ಯೋಗದಿಂದ ದೇಶದಲ್ಲಿ ದರಿದ್ರ ತೊಲಗುವುದು. ಯಂತ್ರಾಲಯಗಳಲ್ಲಿ ವಿದೇಶದ ವ್ಯಾಪಾರ ಹೆಚ್ಚಿನ ಆದಾಯ ಪರಮಾವಧಿ ಯನ್ನು ಮುಟ್ಟುವುದು. ಕಾರ್ಮಿಕರಿಗೆ ಈ ಕಾಲ ಅತಿ ಹೆಚ್ಚಿನ ಹಣ ಸಿಕ್ಕಿ ಸಂತೋಷವನ್ನು ಹೊಂದುತ್ತಾರೆ. ಇಲ್ಲಿ ಇನ್ನೊಂದು ವಿಶೇಷ ಅಂದರೆ ದೇಶದ ಎಲ್ಲಾ ಭಾಷೆಗಳಲ್ಲಿಯೂ ಲಿಪಿ ಬೆರಳಚ್ಚು ಯಂತ್ರಗಳು ಚಾಲತಿಗೆ ಬರುತ್ತವೆ. ಕೈ ಬರಹ ದುರ್ಲಭ ಆದೀತು. ಭಾರತದಲ್ಲಿ ವಾಯು ವಾಹನಗಳ ಬಲ ಹೆಚ್ಚುತ್ತದೆ. ಶ್ರೀಸಾಮಾನ್ಯನೂ ಸಹ ಈ ವಾಹನಗಳ ಬಳಕೆಗೆ ಸಮರ್ಥನಾಗುತ್ತಾನೆ. ಯುದ್ಧ ಬಳಕೆಗಾಗಿ ಮತ್ತು ಸರ್ವತ್ರ ಬಳಕೆಗಾಗಿ ಹೊಸ ರೀತಿಯ ವಿಮಾನಗಳು ತಯಾರಾಗಿ ಕಡಿಮೆ ಹಣದಲ್ಲಿ ಪ್ರಯಾಣ ಮಾಡಲು ಸಾಧ್ಯ. ಇದು ಬಹು ಸಂಪತ್ತಿನ ವರುಷ.

### ಆಂಗ್ಲರ ವರುಷ 1984

ನಾಲ್ಕು ಸಂಖ್ಯೆಗೆ ಚಂದ್ರ. ಈ ವರುಷದಲ್ಲಿ ವಸ್ತ್ರ ವ್ಯಾಪಾರದಲ್ಲಿ ಪ್ರಗತಿ ಮತ್ತು ವ್ಯಾಪಾರ ವ್ಯವಹಾರಗಳಲ್ಲಿ ಧನಲಾಭ ಬೇರೆ. ಎಂಬತ್ತರ ದಶಕದ ನಾಲ್ಕನೆಯ ವರುಷದಲ್ಲಿ ನಾಲ್ಕರ ಚಂದ್ರನ ಫಲ ನಡೆಯುತ್ತೆ. ಇದರಿಂದ ವ್ಯಾಪಾರಿಗಳಲ್ಲಿ ತಮ್ಮ ಆಶ್ರಿತರಿಗೆ ಅನುಕೂಲದ ಮನೋಭಾವ ಬೆಳೆದು ಅದರಿಂದ ವ್ಯಾಪಾರ ಪ್ರಗತಿ ಮತ್ತು ಎರಡು ವರ್ಗಗಳಲ್ಲಿಯೂ ಹಾರ್ದಿಕ ಮನೋಭಾವ ಬೆಳೆಯುತ್ತೆ. ಪರಸ್ಪರ ಹೊಂದಾಣಿಕೆ ಉಪಚಾರ ಪೂರ್ವಕ ಮಾತುಕತೆಗಳಿಂದ ಸಾಧನೆಯಾಗುತ್ತೆ. ಅವರಿಗೆ ವಿಶ್ರಾಂತಿ ವೇತನ, ತೀರ್ಥಯಾತ್ರಾದಿ ಭಕ್ತಿ ವಿಹಾರಾದಿಗಳಿಗೆ ಅನುಕೂಲ ಆದೀತು. ಮಂದಿ ಹುರುಪಿನಿಂದ ಕೆಲಸ ಮಾಡುತ್ತಾರೆ. ಈ ದಶಕದಲ್ಲಿ ಕಾರ್ಮಿಕರು ಮಾಲೀಕರು ಎಂಬ ಮನೋಭಾವ ಸಹ ಹೋಗಿ ಪರಸ್ಪರ ಭಾಗೀದಾರರಾಗಿ ಕೆಲಸ ಮಾಡುವ ಯೋಗವಿದೆ. ಮನಸ್ಸಿನ ಗ್ರಹ ಚಂದ್ರ ಶುಭನಾಗಿ ಮನೋರೋಗಿಗಳ ಚಿಕಿತ್ಸೆಯೂ ಸಹ ಹೊಸ ರೀತಿ ನೀತಿಗಳಿಂದ ಪ್ರಗತಿಯಾದೀತು. ಹಿಂದಿನ ಋಷಿಗಳು ಹೇಳಿರುವ ಧ್ಯಾನ, ಭಕ್ತಿ, ಮಂತ್ರ ಇತ್ಯಾದಿ ಸಾಧನೆಗಳೂ ಸಹ ವಿಜ್ಞಾನ ದೃಷ್ಟಿಯಲ್ಲಿ ಮನ್ನಣೆಯನ್ನು ಪಡೆಯುತ್ತವೆ. ಇದರಿಂದ ದೇಶದಲ್ಲಿ ಸುಭಿಕ್ಷವೂ, ಸಕಾಲದ ಮಳೆ ಬೆಳೆಗಳೂ ಆಗಿ ಕ್ಷೇಮವಾದೀತು.

**ಆಂಗ್ಲರ ವರುಷ 1985**

ಐದು ಸಂಖ್ಯೆಯ ಗುರುವಿಗೆ ಎಂಟು ಸಂಖ್ಯೆ ಬುಧ ಶನಿ ಯೋಗದ ಶುಕ್ರನ ಫಲ ನಡೆದು ಗುರು ಜನಗಳಿಗೆ ಪುರೋಭಿವೃದ್ಧಿ ಆದೀತು. ಶ್ರೀ ಕೃಷ್ಣನು ತನ್ನ ಸತ್ತ ಆರು ಜನ ಸೋದರರನ್ನು ಪುನಃ ಬದುಕಿಸಿ ತಾಯಿಗೆ ತಲುಪಿದ ಸಂಖ್ಯೆ ಈ ಎಂಭತ್ತೈದು. ಇದರಿಂದ ಗುರುವಿನ ಕಷ್ಟ ಪರಿಹಾರ. ಬ್ರಾಹ್ಮಣರು, ದೇವರು ಇವರಲ್ಲಿ ನೈಜ ಗೌರವ ಜನಗಳಿಗೆ ಪ್ರಾಪ್ತಿಯಾಗುತ್ತೆ. ಅಲ್ಲದೆ ವಿದ್ಯಾದಾತ ಗುರುವಿಗೆ ಬಲ ಮೂಡಿ ದೇಶದಲ್ಲಿ ಬುದ್ಧಿವಂತ ವಿದ್ಯಾರ್ಥಿಗಳ ಸಂಖ್ಯೆ ಹೆಚ್ಚಿ ವಿದ್ಯಾಸಾಧನೆ ತ್ವರಿತ ಗತಿಯಲ್ಲಿ ಪ್ರಗತಿಯನ್ನು ಹೊಂದಿ ದೇಶ ಪ್ರಗತಿಯನ್ನು ಸಾಧಿಸೀತು. ಗುರುವಿಗೆ ಬಲ ಬಂದು ದೇಶದಲ್ಲಿ ಹಣ ವ್ಯವಹಾರ ಸುಗಮ. ಶ್ರೀಸಾಮಾನ್ಯನೂ ಧನಿಕ ನಾಗುವ ಯೋಗ. ಅಲ್ಲದೆ ಪ್ರಾಚೀನ ಶಾಸ್ತ್ರಗಳಿಗೆ ದೇಶವಿದೇಶಗಳಲ್ಲಿ ಮನ್ನಣೆ ಸಿಕ್ಕಿ ಭಾರತದ ಸಂಸ್ಕೃತಿ ಪುನಶ್ಚೇತನವನ್ನು ಹೊಂದುತ್ತೆ.

**ಆಂಗ್ಲರ ವರುಷ 1986**

ಆರು ಸಂಖ್ಯೆಯ ಗ್ರಹವಾದ ಕುಜನು ಶುಕ್ರನ ಯೋಗದಿಂದ ಶುಭನಾಗಿ ಮುಂದಿಗೆ ಶುಭವನ್ನು ಕೊಡುತ್ತಾನೆ. ಈ ವರುಷದಲ್ಲಿ ಯುವಕ ಯುವತಿಯರು ತಾವೇ ತಮ್ಮ ಬಾಳ ಸಂಗಾತಿಯನ್ನು ಹೊಂದಿಸಿಕೊಂಡು ಹಿರಿಯರಿಗೆ ಕಷ್ಟ ತಪ್ಪುವುದು. ಸರಿಸಮಾನದ ಸ್ಥಾನ ಮಾನಗಳನ್ನು ಹೊಂದಿ ಇಬ್ಬರೂ ಸಹಕಾರದಿಂದ ಕೂಡಿ ಸಂಸಾರ ಸುಗಮ. ಇನ್ನೊಂದು ವಿಶೇಷ ಅಂದರೆ ಇಬ್ಬರಿಗೂ ಲೈಂಗಿಕ ವಿಜ್ಞಾನದ ಅರಿವಿದ್ದು ಕಾಮ ಲಾಲಸೆ ತೊರೆದು ಸ್ನೇಹದಿಂದ ಬಾಳ್ವೆ ನಡೆಸುವ ಯೋಗ. ಹಿರಿತನ ಪ್ರಾಪ್ತಿಯಾದ ಸ್ವಲ್ಪ ಕಾಲದಲ್ಲಿಯೇ ಮದುವೆಯಾಗುವ ಬಯಕೆ ಇದ್ದು ಅದು ಸ್ನೇಹಮಯದ ಭಾವನೆಯಿಂದ ಕೂಡಿರುತ್ತೆ.

ಕುಜ ಶುಕ್ರರ ಯೋಗ ವಾಹನಗಳಿಗೆ ಸಂಬಂಧಿಸಿದ್ದು. ಬುಧ ಶನಿ ಯೋಗ ವಾಯುವಿಗೆ ಸೇರಿದ್ದು. ಈ ಎರಡರ ಯೋಗ ಎಂಭತ್ತಾರರಲ್ಲಿ ಸೇರಿ ಈ ವರ್ಷ ಹೊಸ ನಮೂನೆ ವಿಮಾನ ಒಂದು ತಯಾರಾಗಿ ಭಾರತಕ್ಕೆ ಅದರ ವಿಶೇಷ ಕೊಡುಗೆ ಇದೆ. ಈ ದಶಕದಲ್ಲಿ ಬುಧ ಶನಿ ಗ್ರಹ ಯೋಗದಿಂದ ಮುಂದಿಗೆ ವೀರ್ಯಬಲ ಕಡಿಮೆ. ಆದರೆ ಕುಜ ಶುಕ್ರರ ಯೋಗದಿಂದ ಪರಸ್ಪರ ಪ್ರೀತಿ ಹೆಚ್ಚು. ಕಾಮಲಾಲಸೆ ಕಡಿಮೆ. ನರನಾರಿಯರಿಗೆ ದೂರಕ್ಕೆ ಎದ್ದು ಕಾಣುವಂತೆ ವ್ಯತ್ಯಾಸ ಇರದು. ದಂಪತಿಗಳನ್ನು ನೋಡಿದರೆ ಅವಳಿ ಜವಳಿಯಂತೆ ಕಾಣುವ ಯೋಗ ಇದು.

**ಆಂಗ್ಲ ವರುಷ 1987**

ಏಳು ಸಂಖ್ಯೆಗೆ ಅಧಿಪತಿಯಾದ ರಾಹುವಿಗೆ ಎಂಭತ್ತರ ದಶಕದ ಬುಧ ಶನಿ ಯೋಗ ಸೇರಿ ಒಂದು ನಮೂನೆ ಮೃತ್ಯುವಿನ ಗಾಳಿ ಬೀಸುತ್ತದೆ. ಪ್ರಕೃತಿ ವಿಕೋಪ ರೂಪದ ಸುಂಟರ ಗಾಳಿ ಬೀಸಿ ಲಕ್ಷಾಂತರ ಮಂದಿ ಸಾಯುವರು. ಬುಧನ ರೋಗವಾದ ಹೃದಯ ಬೇನೆ ಸಹ ಹೆಚ್ಚಿನ ಮಂದಿಯನ್ನು ಆಹುತಿ ತೆಗೆದುಕೊಳ್ಳುತ್ತೆ. ಹೊಸ ರೀತಿಯ ಸಾಂಕ್ರಾಮಿಕ ಜಾಡ್ಯ ಹರಡಿ ಮಂದಿಯ ಮೂತ್ರಕೋಶಗಳು ಹಾಳಾಗಿ ಅಸಂಖ್ಯಾತ ಜನಹಾನಿ ಆದೀತು. ಹಿಮಾಲಯ

ಶ್ರೇಣಿಯ ಬುಡದಿಂದ ಈ ಆರಿಷ್ಟದ ಯೋಗದ ಗಾಳಿ ಬೀಸುವುದು. ನೈಜದ ಹರಿಭಕ್ತಿ ಒಂದೇ ಇದಕ್ಕೆ ಪರಿಹಾರ. ಚಂಡಾಲತ್ವದ ಯೋಗವುಳ್ಳ ಒಬ್ಬನು ದೇಶದಲ್ಲಿ ಪ್ರಬಲನಾಗಿದ್ದು ಈ ಅವಯೋಗ ನಡೆಯುತ್ತೆ. ಆದರೆ ಆಗ ಅವನಿಗೆ ಕ್ರಾಂತಿಕಾರನೊಬ್ಬನಿಂದ ಮೃತ್ಯುವಾಗಿ ಕಂಟಕ ಪರಿಹಾರ ಆದೀತು. ಬಹು ಭಯಾನಕವಾದ ವಾತಾವರಣ ವಿಶ್ವದಲ್ಲಿ ಆವರಿಸುವುದು. ಹೆಚ್ಚಿನಂಶ ಅಣುಯುದ್ಧ ಭಯ ಇದ್ದಿತು.

### ಆಂಗ್ಲ ವರುಷ 1988

ಇದು ಒಂದರಂತೆ ಇರುವ ಎರಡು ಸಂಖ್ಯೆಗಳ ಯೋಗ. ಅವಳಿ ಸಂಖ್ಯೆ ಅಂದರು. ಒಂದರಂತೆ ಇರುವ ಮತ್ತೊಂದು ಸಾಮಾನನ್ನು ತಯಾರಿಸಿ ಮೋಸ ಮಾಡುವ ಮಂದಿ ದೇಶದಲ್ಲಿ ಹೆಚ್ಚುತ್ತಾರೆ. ಹೊರ ದೇಶದ ಮಂದಿ ಸಹ ತಮ್ಮ ದೇಶದವರಂತೆ ನಟಿಸಿ ದ್ರೋಹ ಮಾಡಿಯಾರು. ಹೆಚ್ಚಿನಂಶ ಹೆಂಗಸಿನಂತೆ ಇರುವ ನಪುಂಸಕರು ಪರದೇಶಗಳಿಂದ ಬಂದು ಇಲ್ಲಿ ನೆಲಸಿ ಈ ಮಂದಿಯಲ್ಲಿ ಬೆರೆತು ಜೀವನದಲ್ಲಿ ಹೊಕ್ಕು ಬೇಹುಗಾರಿಕೆಯನ್ನು ಮಾಡುವ ಯೋಗ ಅಂದರು. ಇದು ದ್ರೋಹಕರ ವರುಷ. ಇದರಿಂದ ದೇಶದಲ್ಲಿ ಎಚ್ಚರದ ನುಡಿಗಳು ಕೇಳಿಬರುತ್ತೆ. ದೇಶದಲ್ಲಿ ಪರಸ್ಪರ ಹಾನಿಕರ ಮನೋಭಾವ ಬೆಳೆಯಲು ಸಾಕಷ್ಟು ಗೊಬ್ಬರ ಹರಡುತ್ತೆ. ಈ ಕಾಲದಲ್ಲಿ ದಕ್ಷ ಆಡಳಿತ ಮಾಡುವ ಜನಗಳ ಮಂಡಲಿವೊಂದು ರಚನೆಯಾಗಿ ಸರಕಾರದ ಹತೋಟಿಯನ್ನು ಹೊಂದುತ್ತದೆ. ಇದರಿಂದ ರಾಜ ರಾಜನಾಗಿ ಕೂಲಿ ಕೂಲಿ ಯಾಗುತ್ತಾನೆ. ಸಮಭಾವನೆ ನಾಶ ಹೊಂದುತ್ತದೆ. ಅಪ್ರತಿಮ ಪ್ರತಿಭಾವಂತರು ದೇಶವನ್ನು ಆಳುತ್ತಾರೆ. ಅವರ ತೇಜಸ್ಸಿನ ಮುಂದೆ ಎಲ್ಲರೂ ತಲೆಬಾಗುವಂತೆ ಆದೀತು.

### ಆಂಗ್ಲ ವರುಷ 1989

89 ರ ಸಂಖ್ಯೆಯ ಏಕಾಂಕ ಸಂಖ್ಯೆ 9 ದಶಕದ ಸಂಖ್ಯೆ 8. ಎಂಟರ ಗುಣ ಸಹ ಶನಿಯ ದಾದರೂ ಶುಕ್ರನ ಯೋಗದಲ್ಲಿ ಎಂಭತ್ತಾದಾಗ ಶುಭ. ಆದರೆ ಏಕಾಂಕ ಸಂಖ್ಯೆ 9 ಸತ್ವದ ಸಂಖ್ಯೆ. ಇದರಿಂದ ಎಂಭತ್ತರ ಶನಿ-ಶುಕ್ರ ಯೋಗದ ಸಹಾಯ ಅದಕ್ಕೆ ಅಗತ್ಯ ಇರದು. ಈ ಕಾರಣ ಮಂದಿ ಈ ಕಾಲದಲ್ಲಿ ಸ್ವಾವಲಂಬಿಗಳು. ಅಲ್ಲದೆ ಹಿಂದಿನವರಿಗಿಂತ ಬುದ್ಧಿ ತೇಜೋವಂತರು. ಚಿಗುರೆಲೆ ಮಂದಿ ಎಲೆಯನ್ನು ನೋಡಿ ನಗುವ ಕಾಲ. ಒಂಭತ್ತರ ಸೂರ್ಯನ ಯೋಗದಿಂದ ಹೇಳಿದ ಮಾತು ಕೇಳರು. ಆದರೆ ಇನ್ನು ಮುಂದೆ ಯುವಕರು ಪ್ರಗತಿಪರ ಪಥದಲ್ಲಿ ಸಾಗಿ ದೇಶದ ಮುನ್ನಡೆಯಲ್ಲಿ ಭಾಗಿಗಳು ಎಂದರೆ ತಪ್ಪಲ್ಲ.

## ನವಮ ದಶಕದ ಸಂಖ್ಯಾಫಲ

ಸಂಖ್ಯೆ ಮೂವತ್ತರ ದಶಕದ ಫಲಕಾಂಡದಲ್ಲಿ ಈ ದೇಶಕ್ಕೆ ಸೂರ್ಯನು ಪೂರ್ವಾರ್ಧ ಅಂಕದ ಗುಣ ಗ್ರಹ ಎಂದಿದೆ. ಈಗ ಏಕಾಂಕ ಸಂಖ್ಯೆ ಒಂಭತ್ತಕ್ಕೂ ಸೂರ್ಯನೇ ಗ್ರಹ. ಇನ್ನು ಒಂಭತ್ತರ ದಶಕದ ಸಂಖ್ಯೆಫಲಕ್ಕೂ ಸೂರ್ಯನೇ ಪೂರ್ವಾರ್ಧ ಸಂಖ್ಯೆಯ ಗ್ರಹ ಆಗುತ್ತಾನೆ. ಆದರೆ ಒಂದು

ವಿಶೇಷ ಇಲ್ಲಿ ಗಮನಾರ್ಹ. ಮೂವತ್ತರ ದಶಕದಲ್ಲಿ ಏಕಾಂಕ ಸಂಖ್ಯೆಯ ಗ್ರಹ ದೋಷ. ಕೇಳುವ ವರೆಗೇ ಸಲ್ಲುತ್ತದೆ. ಸೂರ್ಯನ ಪ್ರಭಾವದಿಂದ ಇದು ಆ ದಶಕದಲ್ಲಿ ಪರಿಹಾರ. ಆದರೆ ಸೂರ್ಯನ ಗರಿಷ್ಠ ಸಂಖ್ಯೆಯಾದ ಒಂಭತ್ತರ ದಶಕದಲ್ಲಿ ಏಕಾಂಕ ಸಂಖ್ಯೆಯ ಗ್ರಹದ ದೋಷ ಕೇಳುವವರಿಗೆ ಬಹುಶಃ ಇರದು. ಅದು ಅವರ ಸುತ್ತಮುತ್ತಲಿನ ಮುಂದಿಗೆ ಇರುತ್ತದೆ. ಈ ಗುಣ ಸಂಖ್ಯೆಯ ಗ್ರಹ ಸೂರ್ಯನ ಪ್ರಭಾವದಿಂದ ಪ್ರತ್ಯೇಕನಿಂದ ಅವರಿಗೆ ಪರಿಹಾರ ಸಿಗುತ್ತೆ ಎಂದು ಕೆಲವು ತಜ್ಞರ ಮತ.

ತೊಂಭತ್ತು ವರುಷಗಳು ತುಂಬಿದಾಗ ಈ ದಶಕದ ಫಲ ಪ್ರಾರಂಭ. ಈ ಪೂರ್ಣಾಂಕ ಸಂಖ್ಯೆಯ ವರುಷದಲ್ಲಿ ಮನೆಯಲ್ಲಿ ಒಬ್ಬರಿಗೆ ಸರಕಾರದ ಅಧಿಕಾರ ಲಾಭ ಅಗುತ್ತದೆ. ಹಾಗಿಲ್ಲ ಬಡ್ತಿಯಾದರೂ ಸರಿ. ಮನೆತನದ ಕೀರ್ತಿ ಎಲ್ಲೆಡೆ ಹರಡುತ್ತದೆ. ದೇಶದಲ್ಲಿ ಆಡಳಿತಕ್ಕೆ ದಕ್ಷ ಅಧಿಕಾರಿಗಳು ನೇಮಕಗೊಂಡು ಸರಕಾರಕ್ಕೆ ಪ್ರಗತಿಯಾದೀತು. ಕೆಲವು ಕಡೆಗಳಲ್ಲಿ ಮಾಜಿ ರಾಜರುಗಳು ಪ್ರಜೆಗಳಿಂದ ಚುನಾಯಿತರಾಗಿ ಆಡಳಿತವನ್ನು ವಹಿಸಿಕೊಂಡು ಸುಭಿಕ್ಷ ಏರ್ಪಾಡುತ್ತದೆ.

### ವರುಷ ತೊಂಭತ್ತೊಂದು ಅಥವಾ ಇಸ್ವಿ 1991

ಈ ವರುಷದಲ್ಲಿ ವೃದ್ಧರಿಗೆ ಕಾಯಿಲೆ. ದೇಶದಲ್ಲಿ ವ್ಯಾಪಕವಾಗಿ ವೈದ್ಯರ ಸೇವೆ ಹೆಚ್ಚಿ ಮುಂದಿಗೆ ಸುಲಭ ಚಿಕಿತ್ಸೆಯಿಂದ ಕ್ಷೇಮ. ಸರಕಾರದ ಅಡಳಿತದಲ್ಲಿ ಬದಲಾವಣೆಗಳಾಗಿ ಅನುಕೂಲ. ವಿಶೇಷದ ಮಳೆಯಿಂದ ವಿದ್ಯುತ್ತಿನ ತೊಡಕುಗಳು ಅಗಾಗ ಪ್ರಾಪ್ತಿ.

### ತೊಂಭತ್ತ ಎರಡನೆಯ ವರುಷ ಅಥವಾ 1992

ಬುಧನ ಯೋಗ ಪ್ರಾಬಲ್ಯದಿಂದ ಈ ವರುಷ ದೇಶದಲ್ಲಿ ಉನ್ನತ ಮಟ್ಟದ ಬುದ್ಧಿವಂತರೂ ಪ್ರತಿಭಾವಂತರೂ ಹುಟ್ಟುವ ಯೋಗ. ಜೋತಿಷ್ಯ ಶಾಸ್ತ್ರಕ್ಕೆ ವಿದ್ಯಾಲಯದಲ್ಲಿ ಮನ್ನಣೆಯ ಸ್ಥಾನ ಮಾನಗಳು ಪ್ರಾಪ್ತಿ. ಅಂತರ ರಾಷ್ಟ್ರೀಯ ಮಟ್ಟದಲ್ಲಿ ಭಾರತೀಯರಿಗೆ ಉತ್ತಮ ಪ್ರಶಸ್ತಿಗಳು ದೊರಕಿ ದೇಶದ ಕೀರ್ತಿ ಪ್ರಶಂಸೆಗೆ ಪಾತ್ರವಾದೀತು. ಆದರೆ ಈ ವಯಸ್ಸಿನ ವೃದ್ಧರಿಗೆ ರಕ್ತದ ಒತ್ತಡ ದಿಂದ ಆಲಸ್ಯ.

### ತೊಂಭತ್ತ ಮೂರನೆಯ ವರುಷ ಅಥವಾ 1993

ಮೂರು ಸಂಖ್ಯೆಯ ಕುಜ ಶನಿ ಯೋಗದ ದೆಸೆಯಿಂದ ಸರಕಾರದ ಅಧಿಕಾರಿಗಳು ವಿದೇಶ ಯಾತ್ರೆ ಮಾಡುವುದು ಹೆಚ್ಚು. ಅಲ್ಲದೆ ಕಾರ್ಮಿಕರಿಗೆ ಹೆಚ್ಚಿನ ಉದ್ಯೋಗ ದೊರೆಯಲು ಹೊಸ ಹೊಸ ಕೈಗಾರಿಕೆಗಳೂ. ಯಂತ್ರಾಲಯಗಳೂ ರಾಜ್ಯದಲ್ಲಿ ಸ್ಥಾಪನೆಯಾಗುತ್ತವೆ. ಶಿಲಾ ಉದ್ಯಮ. ಗಣಿ ಉದ್ಯಮಗಳು ಹೆಚ್ಚಿನ ಪ್ರಗತಿಯನ್ನು ಹೊಂದುತ್ತವೆ. ಅಲ್ಲದೆ ದೇಶದ ಪ್ರಮುಖ ಪ್ರವಾಸೀ ಕೇಂದ್ರ ರಾಜ್ಯದಲ್ಲಿ ಏರ್ಪಟ್ಟು ಆಕರ್ಷಣೆಗಳ ಬೀಡಾಗಿ ಮಾರ್ಪಾಡು ಹೊಂದುವುದು ಈ ವರುಷ ಕುಜನ ದೋಷದ ಕಾರಣ ಮದುವೆಗಳು ಕಡಿಮೆ. ಆದರೂ ಮದುವೆಯ ನಂತರ ಹೊರ ಊರುಗಳಲ್ಲಿ ಸಂಸಾರ ಮಾಡುವ ಯೋಗ.

### ತೊಂಭತ್ತ ನಾಲ್ಕನೆಯ ವರುಷ ಅಥವಾ 1994

ಈ ವರುಷ ನಾಲ್ಕನೆಯ ಸಂಖ್ಯೆಯ ಚಂದ್ರನ ಯೋಗ ಬಲದಿಂದ ಮಳೆ ಬೆಳೆಗಳು ಚೆನ್ನಾಗಿ ದೇಶದಲ್ಲಿ ಸುಭಿಕ್ಷ. ಪೂರ್ವ ಸಮುದ್ರದ ರೇವು ಬಹಳ ಪ್ರಮುಖವಾಗಿ ಅಂತರರಾಷ್ಟ್ರೀಯ ವ್ಯಾಪಾರದಲ್ಲಿ ವಿಶ್ವದಾಖಲೆಯನ್ನು ಸ್ಥಾಪಿಸುತ್ತದೆ. ವಿಶ್ವದ ಅತಿ ದೊಡ್ಡ ದೇಶದ ರಾಜ ದಂಪತಿಗಳು ಭಾರತಕ್ಕೆ ಭೇಟಿ ಕೊಡುವುದರಿಂದ ಉಭಯ ದೇಶಗಳ ಬಾಂಧವ್ಯ ಉತ್ತಮವಾಗಿ ದೇಶದ ಪ್ರಗತಿಗೆ ಪೂರಕವಾಗುತ್ತದೆ. ಆದರೆ ಈ ವಯಸ್ಸಿನ ವೃದ್ಧರಿಗೆ ನೇತ್ರ ಚಿಕಿತ್ಸೆಯ ಯೋಗವಿದೆ.

### ತೊಂಭತ್ತ ಐದನೆಯ ವರುಷ ಅಥವಾ 1995

ಐದು ಸಂಖ್ಯೆಯ ಗುರುವಿನ ಯೋಗದಿಂದ ಮನೆಯಲ್ಲಿ ಒಬ್ಬ ಮಗನಿಗೆ ಸುಯೋಗ. ವಿದ್ಯಾರ್ಥಿಗಳಿಗೆ ಕೀರ್ತಿಯ ತೇರ್ಗಡೆ. ಈ ವರುಷ ರಾಜ್ಯದಲ್ಲಿ ವ್ಯಾಪಕವಾಗಿ ವಿದ್ಯಾಪ್ರಚಾರ ಕಾರ್ಯಗತವಾಗುವುದು ತಂದೆ ಮಕ್ಕಳ ಸಂಬಂಧವೂ ಸಹ ಮಧುರ. ದಕ್ಷ ಅಧಿಕಾರಿಗಳ ಕಾರಣ ಸರಕಾರಕ್ಕೂ ಕೀರ್ತಿ ಇದೆ.

### ತೊಂಭತ್ತ ಆರನೆಯ ವರುಷ ಅಥವಾ 1996

ಆರು ಸಂಖ್ಯೆಯ ಕುಜನಿಗೆ ಶುಕ್ರ ಸಂಯೋಗ ಕಾರಣ. ಈ ವರುಷ ಮನೆಯಲ್ಲಿ ವಿವಾಹಾದಿ ಶುಭಕಾರ್ಯಗಳು ಸುಗಮ. ವಾಹನ ಉದ್ಯಮದಲ್ಲಿ ಪ್ರಗತಿ ಬೇರೆ. ದೇಶದಲ್ಲಿ ದೀನ ದಲಿತರ ಸಮಾಜ ಕಲ್ಯಾಣ ಕೆಲಸಗಳು ಹೆಚ್ಚುವುವು. ಕಾರ್ಮಿಕರಲ್ಲಿ ಸರಕಾರದ ಮನೋಭಾವದಿಂದ ಕೆಲಸ ಸುಗಮ.

### ತೊಂಭತ್ತ ಏಳನೆಯ ವರುಷ ಅಥವಾ 1997

ಈ ವರುಷ ಕೇಂದ್ರದ ಅಧಿಕಾರ ವ್ಯಾಪ್ತಿ ಹೆಚ್ಚುವುದು. ಒಂದು ವೇಳೆ ಭಾಷಾವಾರು ರಾಜ್ಯಗಳು ಹೋಗಿ ಕೇಂದ್ರದ ಶಾಖೆಗಳಂತೆ ರಾಜ್ಯ ಸರಕಾರಗಳು ಕೆಲಸ ಮಾಡುವ ಯೋಗ ಬರಬಹುದು. ಹಾಗಿಲ್ಲ ರಾಜ್ಯ ಸರಕಾರಗಳಿಗೆ ಹೆಚ್ಚಿನ ಅಧಿಕಾರಗಳು ಹೋಗಿ ಪ್ರತಿಯೊಂದಕ್ಕೂ ಕೇಂದ್ರದ ಅನುಮತಿ ಅಗತ್ಯ ಆದೀತು. ಈ ವರುಷ ದೇಶದಲ್ಲಿ ವಿಶ್ವಖ್ಯಾತಿಯ ಮಹಾಪುರುಷನ ಜನನವಾಗುವುದು.

### ತೊಂಭತ್ತೆಂಟನೆಯ ವರುಷ ಅಥವಾ 1998

ಎಂಟು ಸಂಖ್ಯೆಗೆ ಬುಧ ಶನಿ ಯೋಗ. ಇದು ಬುದ್ಧಿ ಮಾಂದ್ಯ ಯೋಗ. ಈ ವರುಷದಲ್ಲಿ ಮಂಕುತನ ಹೋಗಿ ಬುದ್ಧಿ ಉದಯವಾಗಿ ಚುರುಕಿನ ಕೆಲಸಗಳನ್ನು ಜನರು ಮಾಡುತ್ತಾರೆ. ಮಕ್ಕಳ ಕಾಯಿಲೆಗಳಿಗೆ ವೈದ್ಯರಿಗೆ ಹೆಚ್ಚಿನ ಕೆಲಸ ಬೇರೆ. ಹರಿಜನರಿಗೆ ಮತ್ತು ಇತರ ಹಿಂದುಳಿದ ಜನರಿಗೆ ಸರಕಾರದಿಂದ ಬೆಂಬಲ ಸಿಕ್ಕುತ್ತದೆ. ಚರ್ಮರೋಗ ಚಿಕಿತ್ಸೆಗಾಗಿ ಒಂದು ದೊಡ್ಡ ಆಸ್ಪತ್ರೆ ರಾಜ್ಯದಲ್ಲಿ ಸ್ಥಾಪನೆ ಆಗುತ್ತದೆ.

ಈ ವರುಷ ಪರ್ವಕಾಲ. ಆಡಳಿತದಲ್ಲಿ ಸಹ ಪರ್ವಕಾಲ. ಒಂದು ಶತಮಾನ ಹೋಗಿ ಮತ್ತೊಂದು ಶತಮಾನದ ಉದಯ. ಮಂದಿ ಮಾನಸಿಕ ಬದಲಾವಣೆಗಳಿಗೆ ತಯಾರಾಗುವ ಕಾಲ. ಈ ಕಾರಣ ವಿಶ್ವದಲ್ಲಿ ಎಲ್ಲೆಡೆ ಪ್ರಭಾವದ ಅದಲು ಬದಲುಗಳಿಗೆ ಅವಕಾಶ ಹೆಚ್ಚು.

ಇಪ್ಪತ್ತು ಶತಮಾನಗಳ ನಂತರ ಭಾರತ ದೇಶದಲ್ಲಿಗುರುವಿನ ದೋಷ ನೀಗಿ ಜನಗಳಿಗೆ ವಿದ್ಯಾಸಾಮರ್ಥ್ಯ ಹೆಚ್ಚು. ಅಂತರ ರಾಷ್ಟ್ರೀಯ ಗೌರವದ ಸ್ಥಾನಮಾನಗಳು ಪ್ರಾಪ್ತಿ. ಬುದ್ಧಿ ವಿದ್ಯಾವಂತ ಮಕ್ಕಳು ಹುಟ್ಟಿ ದೇಶದಲ್ಲಿ ಕ್ರಾಂತಿ ಹೋಗಿ ಶಾಂತಿಯು ನೆಲಸುತ್ತದೆ. ಧರ್ಮ ನ್ಯಾಯಬದ್ಧವಾದ ಆಡಳಿತದಿಂದ ಪ್ರಜೆಗಳಲ್ಲಿ ಸರಕಾರದ ಮೇಲೆ ಗೌರವ ನಂಬಿಕೆಗಳು ಮೂಡುತ್ತವೆ. ಯುದ್ಧಗಳ ಮೂಲಕ ಆಕ್ರಮಣ ಮನೋಭಾವ ಹೋಗಿ ಪರಸ್ಪರ ವಿನಿಮಯದ ಕಾರಣ ಜಗತ್ತು ಸುಖಮಯ.

## ಗ್ರಹಸಂಖ್ಯಾ ದಶಾಕಾಲ

ಜನ್ಮ ಜಾತಕ ಇಲ್ಲ. ಆದರೆ ಜನ್ಮ ತಾರೀಖು ಗೊತ್ತಿರುತ್ತೆ. ಆಗ ಅವರ ಜೀವನ ಕ್ರಮ ಗುಣಶೀಲಗಳ ಅಧ್ಯಯನ. ಯೋಗಕಾಲದ ವರುಷಗಳು ಆ ತಾರೀಖು. ದಿನಾಂಕ. ತೋರಿಸುವ ಗ್ರಹವನ್ನು ಹೊಂದಿಕೊಂಡಿರುತ್ತೆ. ಆದರೆ ಅವರಿಗೆ ಬೇರೆ ಬೇರೆ ಮಂದಿಯ ಸಂಗದಿಂದ ಬರುವ ಫಲವನ್ನು ತಿಳಿಯುವುದೂ ಅಷ್ಟೇ ಅಗತ್ಯ. ಇದಕ್ಕೆ ಬೇರೆ ಗ್ರಹಸಂಖ್ಯೆಗಳ ಪ್ರಭಾವ ಯಾವಾಗ ಇವರ ಮೇಲೆ ಬೀರುತ್ತೆ? ಪ್ರತಿಯೊಬ್ಬನಿಗೂ ಈ ಸಂಖ್ಯಾಗ್ರಹಗಳ ದೆಶೆಗಳು ನಡೆಯುವಾಗ ಆ ಸಂಖ್ಯೆಯ ಮಂದಿಯ ಪ್ರಭಾವ ಹೆಚ್ಚು. ಅಲ್ಲದೆ ಈ ಪ್ರಭಾವ ಅನುಕೂಲವೇ ವಿರೋಧವೇ? ಇದಕ್ಕೂ ಸಹ ಈ ಸಂಖ್ಯಾ ಗ್ರಹದ ದೆಶೆಯೇ ಆಧಾರ. ಈ ಕಾರಣ ಇದರ ಅರಿವು ಅಗತ್ಯ.

ಕೆಲವರ ಅಭಿಪ್ರಾಯದಂತೆ ಜೀವನದ ಫಲಗಳು ವಯಸ್ಸಿನ ಆರೋಹಣ ವರುಷಗಳ ಸಂಖ್ಯೆಯನ್ನು ಅನುಸರಿಸುತ್ತೆ. ಇದನ್ನು ವಯೋಮಾಲಾ ಕ್ರಮ ಅಂದರು. ಉದಾಹರಣೆಗೆ ಹತ್ತು ವರುಷಗಳಂತೆ ದಶಕಗಳು ಬದಲಾಗುವಾಗ ಆ ದಶಕದ ಸಂಖ್ಯಾ ಗ್ರಹದ ಫಲ ಅನುಭವ ಆಗುತ್ತೆ. ಜೀವನದಲ್ಲಿ ಆಂಗ್ಲ ಸಂಖ್ಯಾ ವರುಷಗಳು ನಡೆದಂತೆ ಆ ದಶಕಗಳ ಗ್ರಹದ ದೆಶೆಯ ಫಲ ಅನುಭವಕ್ಕೆ ಬಂದೀತು. ಇದು ವರುಷ ಸಂಖ್ಯಾಮಾಲಾ ಕ್ರಮ. ವಯೋ ಮಾಲೆಯಲ್ಲಿ ವೈಯಕ್ತಿಕ ವಿಷಯಗಳು ಜ್ಞಾನ. ವರುಷ ಸಂಖ್ಯಾ ಮಾಲೆಯಲ್ಲಿ ಲೋಕವ್ಯವಹಾರಕ್ಕೆ ಇವರ ಸಂಬಂಧದ ವಿಷಯಗಳ ಜ್ಞಾನ. ಉದಾಹಣೆಗೆ ಅರವತ್ತನೆಯ ವರುಷದಿಂದ ವಯೋಮಾಲೆಯಲ್ಲಿ ಕುಜನ ಸಂಖ್ಯಾ ಮೂರು. ಆರರ ಫಲ. ಏಕಾಂಕ ಸಂಖ್ಯಾ ವರುಷ ಗಳಲ್ಲಿ ಇತರ ಗ್ರಹಗಳ ಪ್ರಭಾವ. ಆಂಗ್ಲವರುಷ 1960ನೇ ಇಸ್ವಿ ಬಂದಾಗ ಒಂಭತ್ತು ವರುಷಗಳಲ್ಲಿ ಇತರ ಏಕಾಂಕ ಗ್ರಹಗಳ ಪ್ರಭಾವ ಅನುಭವಕ್ಕೆ ಬರುತ್ತದೆ.

ಆದರೆ ನಂದಿ ಈಶ್ವರ ಸಂವಾದದ ನಂದಿನಾಡೀ ಗ್ರಂಥದಲ್ಲಿ ಪ್ರಶ್ನ ಭಾಗದಲ್ಲಿ ಪ್ರತಿಯೊಂದು ಸಂಖ್ಯೆಗೂ ತನ್ನದೇ ಆದ ದೆಶೆಯ ಕ್ರಮಗಳನ್ನು ಅಲ್ಲಲ್ಲಿ ನೀಡಿರುವುದು ಕಂಡು ಬರುತ್ತದೆ. ಈ ಗ್ರಂಥದಲ್ಲಿ ಹೇಳಿರುವ ಕ್ರಮದಂತೆ ಇಲ್ಲಿಯೂ ಸಹ ಈ ದೆಶೆಯ ಕ್ರಮ

ವನ್ನು ಹೇಳುವುದು ಸೂಕ್ತ. ಇದರಂತೆ ಸಂಖ್ಯಾಗ್ರಹಗಳ ದಶಾಕ್ರಮ ಮೊದಲು ಚಂದ್ರನಿಂದ ಶುರು. ನಂತರ ಕುಜ ಸೂರ್ಯ ಗುರು ಶುಕ್ರ ಶನಿ ರಾಹು ಮತ್ತು ಬುಧ. ಇದೇ ಕ್ರಮವನ್ನು ಇಲ್ಲಿ ವಿವರಿಸಿದೆ. ಕೆಲವು ನಾಡೀ ಗ್ರಂಥಗಳಲ್ಲಿ ಬೇರೆ ರೀತಿಯ ಕ್ರಮವನ್ನು ಹೇಳಿರಬಹುದು. ಮೂಲತಃ ಕ್ರಮ ಒಂದೇ ಇದ್ದರೂ ಕೆಲವು ಗ್ರಹಗಳ ಕ್ರಮ ಮಾತ್ರ ಸ್ವಲ್ಪ ಬದಲಾವಣೆಯಿಂದ ಕೂಡಿರಲು ಶಕ್ಯ.

## ಸಂಖ್ಯಾದೆಶೆಗಳ ವೈಶಿಷ್ಟ್ಯ

ಸಂಖ್ಯೆಗೆ ಒಂದು ಗ್ರಹ. ಆ ಗ್ರಹಕ್ಕೆ ದೆಶೆ ಆ ಸಂಖ್ಯೆಯಷ್ಟೇ ವರುಷಕಾಲ. ಫಲಭಾಗದಲ್ಲಿ ಇದು ಚಿರಪರಿಚಿತ ಉಡುದೆಶೆಯಂತೆ ಇರುತ್ತೆ. ಆದರೆ ಅದರಲ್ಲಿ ದೆಶೆಯಲ್ಲಿ ಭುಕ್ತಿಕಾಲಗಳು ನೂರ ಇಪ್ಪತ್ತು ವರುಷ ಪೂರ್ಣಾಯುವಿನಲ್ಲಿ ದಶಾವರುಷಗಳ ಅನುರೂಪದ ಭಾಗವಾಗಿರುತ್ತೆ. ಆದರೆ ಈ ಸಂಖ್ಯೆ ಗ್ರಹ ದೆಶೆಗಳಲ್ಲಿ ಈ ನಮೂನೆ ಭಾಗವನ್ನು ತೆಗೆದುಕೊಳ್ಳುವುದಿಲ್ಲ. ಕಾರಣ ಸಂಖ್ಯೆಯ ಫಲ ಸಂಖ್ಯೆಯ ವರುಷ ಕಾಲ ಮಾತ್ರ. ಸಂಖ್ಯೆಗಳು ಮಾತ್ರ ಬದಲಾಗುವುದಿಲ್ಲ. ಉದಾಹರಣೆಗೆ ಏಳು ರಾಹುವಿನ ಸಂಖ್ಯೆ. ಇದರ ಕಾಲ ಏಳು ವರುಷಗಳು. ಭುಕ್ತಿಕಾಲ ಏಳು ತಿಂಗಳು. ಇನ್ನೂ ಸಣ್ಣ ಕಾಲ ಅಂದರೆ ಏಳು ದಿವಸಗಳು. ಅಂದರೆ ಏಳು ಸಂಖ್ಯೆ ಮಾತ್ರ ಬದಲು ಆಗಬಾರದು ಕಾರಣ ಏಳು ಏಳರ ಮಹತ್ವವನ್ನು ಕಳೆದುಕೊಳ್ಳುತ್ತೆ.

ಈಗ ಉದಾಹರಣೆಗೆ ಜನ್ಮ ತಾರೀಖಿನ ಸಂಖ್ಯೆ ನಾಲ್ಕು. ಈ ಸಂಖ್ಯೆಗೆ ಗ್ರಹ ಚಂದ್ರ. ಇವನ ದಶಾಕಾಲ ಗರಿಷ್ಠ ವರುಷಗಳು ಹದಿನೈದು. ಇದರಲ್ಲಿ ಚಂದ್ರನ ಭುಕ್ತಿಕಾಲ ನಾಲ್ಕು ವರುಷ. ನಂತರ ಕುಜನ ಕಾಲ ಆರು ವರುಷ ನಂತರ ಸೂರ್ಯನ ಕಾಲ ಒಂಭತ್ತು ವರುಷ. ಇಲ್ಲಿ ಮೊತ್ತದಲ್ಲಿ ಹದಿನೈದು ವರುಷ ಆದಾಗ ಸೂರ್ಯನಲ್ಲಿ ಐದು ವರುಷ ಕಳೆದಿರುತ್ತೆ. ಅಲ್ಲಿಗೇ ಸೂರ್ಯನ ದೆಶೆ ಮುಕ್ತಾಯ. ಇಲ್ಲಿಗೆ ಚಂದ್ರನ ದೆಶೆ ಹದಿನೈದು ವರುಷಗಳು ಮುಕ್ತಾಯ. ಮತ್ತೆ ಚಂದ್ರನ ಭುಕ್ತಿ ಇವರಲ್ಲಿ ನಾಲ್ಕು ವರುಷ. ಇದರಲ್ಲಿ ಚಂದ್ರನ ಅಂತರ ಭುಕ್ತಿ ಕಾಲ ನಾಲ್ಕು ತಿಂಗಳು. ನಂತರ ಕುಜನದು. ಆರು ತಿಂಗಳು. ನಂತರ ಸೂರ್ಯನದು ಒಂಭತ್ತು ತಿಂಗಳು. ನಂತರ ಗುರುವಿನದು ಇಪ್ಪತ್ತು ತಿಂಗಳು. ಹಾಗಿಲ್ಲ ಐದು ತಿಂಗಳು. ಶುಕ್ರನದು ಹನ್ನೆರಡು ತಿಂಗಳು ಶನಿಯದು ಒಂದು ತಿಂಗಳು. ನಂತರ ರಾಹುವಿನದು ಏಳು ತಿಂಗಳು. ನಂತರ ಬುಧನದು ಎಂಟು ತಿಂಗಳು. ಇಲ್ಲಿ ಕೊನೆಯಲ್ಲಿ ನಾಲ್ಕು ತಿಂಗಳು ಬುಧನ ಕಾಲ ಲುಪ್ತವಾಗುತ್ತದೆ. ಇನ್ನೂ ಸೂಕ್ಷ್ಮ ಕಾಲ ಚಂದ್ರನ ಅಂತರ ಭುಕ್ತಿ. ನಾಲ್ಕು ತಿಂಗಳಿನಲ್ಲಿ ನಾಲ್ಕು ದಿವಸ ಚಂದ್ರ ಆರು ದಿವಸಗಳು ಕುಜ ಒಂಭತ್ತು ದಿವಸಗಳು ಸೂರ್ಯನದು ನಂತರ ಇಪ್ಪತ್ತು ದಿನಗಳು ಗುರುವಿನದು (ಐದು ದಿನಗಳು ಗುರುವಿನದು) ಹನ್ನೆರಡು ದಿನಗಳು ಶುಕ್ರನದು. ನಂತರ ಒಂದು ದಿನ ಶನಿಯದು ನಂತರ ಏಳು ದಿನಗಳು ರಾಹುವಿನದು ಉಳಿದ ನಾಲ್ಕು ದಿನಗಳು ಬುಧನದು. ಇದು ಸಾಧಾರಣವಾಗಿ ಅನುಸರಿಸುವ ಕ್ರಮ.

ಈ ರೀತಿಯಾಗಿ ಜನ್ಮ ತಾರೀಖಿನಿಂದ ಆ ಸಂಖ್ಯೆಯ ಗ್ರಹದ ದೆಶೆ ಮೊದಲು ಶುರು. ಭುಕ್ತಿ ಕಾಲವಾದರೂ ಸರಿ ಅಂತರ ಭುಕ್ತಿಯಾದರೂ ಸರಿ ದಶಾಕಾಲ ಮಾತ್ರ ಆಯಾ ಸಂಖ್ಯೆಯನ್ನೇ ಅನುಸರಿಸುತ್ತದೆ. ಇದು ಗಮನವಿಡಬೇಕಾದ ಅಂಶ.

ಸಂಖ್ಯಾಗ್ರಹದ ದೆಶೆಗಳು ಕ್ರಮವಾಗಿ ಬರುತ್ತವೆ. ಜೊತೆಗೆ ಜೀವಿತಕಾಲದ ಮೊದಲಿನ ಹನ್ನೆರಡು ವರುಷಗಳ ಫಲ ಆಯಾ ವರುಷ ಸಂಖ್ಯೆಯ ಗ್ರಹವನ್ನು ಅನುಸರಿಸಿಕೊಂಡು ನಡೆಸುತ್ತವೆ. ಇದೂ ಅಲ್ಲದೆ ಮೂರನೆಯದಾಗಿ ಆಯಾ ಸಂಖ್ಯೆ ವಿಶೇಷ ಸಂಖ್ಯೆಯನ್ನು ತೋರಿಸುವ ವರುಷದಲ್ಲಿ ಆ ಗ್ರಹದ ವಿಶೇಷ ಫಲಗಳೂ ಸಹ ನಡೆಯುತ್ತವೆ. ಉದಾಹರಣೆಗೆ ಬುಧನಿಗೆ ಸಂಖ್ಯೆ ಇಪ್ಪತ್ತನಾಲ್ಕು, ಗುರುವಿಗೆ ಇಪ್ಪತ್ತೈದು, ಸೂರ್ಯನಿಗೆ ಮೂವತ್ತು ಇತ್ಯಾದಿ. ಈ ಮೂರು ವಿಧವಾದ ಫಲಗಳನ್ನೂ ಸಮನ್ವಯ ಮಾಡಿಕೊಂಡು ಜೀವಿತಕಾಲದ ಘಟನೆಗಳನ್ನು ಕಲ್ಪನೆ ಮಾಡುವುದು ಲೇಸು.

ಸಂಖ್ಯಾಶಾಸ್ತ್ರದಲ್ಲಿ ಗ್ರಹಗಳ ದೆಶೆಯ ಫಲ ಹೇಳುವಾಗ ಪ್ರಧಾನವಾಗಿ ಜನ್ಮ ದಿನಾಂಕ ಸಂಖ್ಯೆಯ ಗ್ರಹ ಮುಖ್ಯ. ಆಮೇಲೆ ಮುಂಬರುವ ದೆಶೆಗಳ ಗ್ರಹಗಳು ಈ ದಿನಾಂಕ ಸಂಖ್ಯಾ ಗ್ರಹಕ್ಕೆ ಶತ್ರು ಮಿತ್ರತ್ವ ಇತ್ಯಾದಿಗಳಿಂದ ಆಯಾ ದೆಶೆಗಳ ಫಲ ಸ್ವಭಾವಗಳನ್ನು ತಿಳಿಯುವುದು ಲೇಸು. ಜನ್ಮ ದಿನಾಂಕ ಒಬ್ಬೊಬ್ಬರಿಗೆ ಒಂದೊಂದು. ಈ ಕಾರಣ ಎಲ್ಲರಿಗೂ ಒಂದೇ ಸಂಖ್ಯೆಯ ಗ್ರಹದ ದೆಶೆ ಶುರು ಆಗದು. ಈ ಕಾರಣ ಒಂದು ಸಂಖ್ಯೆಯ ಗ್ರಹದ ದೆಶೆ ಮನುಷ್ಯನಿಗೆ ಅವನ ವಯಸ್ಸಿನ ಯಾವುದೇ ಭಾಗದಲ್ಲಿ ಬಂದೀತು. ಆಯಾ ಪ್ರಮಾಣದ ಮಿತಿಗನುಗುಣವಾಗಿ ಆ ಗ್ರಹಫಲವನ್ನು ಕೊಡುತ್ತೆ. ಈ ವಯೋಪ್ರಮಾಣ ಹತ್ತು ವರುಷ ಗಳಿಗೆ ಒಂದರಂತೆ ಒಂದೊಂದು ರಾಶಿಯಲ್ಲಿ ಆ ಗ್ರಹ ಇದ್ದಂತೆ ಫಲ ಕೊಡುತ್ತೆ. ಉದಾಹರಣೆಗೆ ಮೇಷಾದಿ ರಾಶಿಗಳನ್ನು ಎಣಿಸುವುದು ಒಂದು ಕ್ರಮ. ಆದರೆ ಈಗ ಅಭ್ಯಾಸದಲ್ಲಿರುವುದು ತುಲಾ ರಾಶಿಯಿಂದ ಹತ್ತು ವರುಷಗಳಿಗೆ ಒಂದರಂತೆ. ರಾಶಿಗಳಲ್ಲಿ ಆ ಸಂಖ್ಯಾಗ್ರಹ ಇದ್ದಂತೆ ಫಲವನ್ನು ನಡೆಸಬೇಕು. ಶ್ರೀ ಗಣಪತಿ ಜನದ ಚಿತ್ರಾ ನಕ್ಷತ್ರ ದಲ್ಲಿ, ಈ ಕಾರಣ ಶ್ರೀ ಗಣಪತಿ ಸಂಖ್ಯಾಶಾಸ್ತ್ರದಲ್ಲಿ ತುಲಾ ರಾಶಿಯಿಂದ ಗಣನೆ. ಕಾರಣ ಚಿತ್ರಾನಕ್ಷತ್ರ ಇರುವುದು ತುಲಾರಾಶಿಯಲ್ಲಿ. ಕನ್ಯಾ ರಾಶಿಯಲ್ಲಿ ಇದ್ದರೂ ಚಕ್ರ ಪ್ರಾರಂಭ ತುಲಾ ರಾಶಿಯಿಂದ ಅಂದರು.

ಜನನವಾರಭ್ಯ

| | | | |
|---|---|---|---|
| ಮೊದಲು ೧೦ ವರುಷಗಳು | | ತುಲಾ ರಾಶಿಯಲ್ಲಿ ಸಂಖ್ಯಾಗ್ರಹ | |
| ೧೦ ರಿಂದ ೨೦ ವರೆಗೆ | - | ವೃಶ್ಚಿಕ | " |
| ೨೦ರಿಂದ ೩೦ ರವರೆಗೆ | | ಧನು | |
| ೩೦ ರಿಂದ ೪೦ ರವರೆಗೆ | - | ಮಕರ | " |
| ೪೦ರಿಂದ ೫೦ ರವರೆಗೆ | | ಕುಂಭ | " |
| ೫೦ ರಿಂದ ೬೦ ರವರೆಗೆ | - | ಮೀನ | ಇತ್ಯಾದಿ |

# ಜನ್ಮ ದಿನಾಂಕ ಒಂದು (೧) –ದಶಾಕ್ರಮ–ಸಂಖ್ಯಾಗ್ರಹ ದಶಾ ಫಲವಿವರಣೆ

ಜನ್ಮ ದಿನಾಂಕ ಒಂದು (೧). ಇದಕ್ಕೆ ಗ್ರಹ ಶನಿ. ದಶಾಕ್ರಮದಂತೆ ಮೊದಲು ಶನಿ. ಶನಿಗೆ ಒಂದು (೧) ವರ್ಷ ರಾಹು ಏಳು (೭) - ಬುಧ ಎರಡು (೨) ಚಂದ್ರನಾಲ್ಕು (೪) ಕುಜ ಆರು (೬) -ಸೂರ್ಯ ಒಂಭತ್ತು (೯) - ಗುರು ಐದು (೫) ಶುಕ್ರ ಹನ್ನೆರಡು (೧೨) ಇದಕ್ಕೆ ಕೇವಲ ನಲವತ್ತಾರು. (೪೬) ವರುಷಗಳಾದವು. ಇದು ಮೊದಲು ಹಂತದ ದಶಾಕ್ರಮ. ಎರಡನೆಯ ಹಂತದಲ್ಲಿ ೨೯ ವರುಷಗಳ ನಂತರ ಬರುವ ಗುರು ದಶಾಕಾಲವನ್ನು ಐದರಿಂದ ಇಪ್ಪತ್ತಕ್ಕೆ ಏರಿಸಿದರೆ ಆಗ ಹದಿನೈದು ವರುಷಗಳು ಹೆಚ್ಚಾಗುತ್ತವೆ.

ಮೊದಲು ಹತ್ತುವರುಷಗಳು ತುಲಾ ರಾಶಿಯ ಯೋಗ. ಇದರಿಂದ ಶನಿ, ರಾಹು ಮತ್ತು ಬುಧರ ಕಾಲ ಈ ಗ್ರಹಗಳು ತುಲಾ ರಾಶಿಯಲ್ಲಿದ್ದಂತೆ ಫಲ ನಡೆಯುತ್ತದೆ. ಉದಾಹರಣೆಗೆ ತುಲಾ ರಾಶಿಯಲ್ಲಿ ಶನಿ. ಈ ಕಾರಣ ಮೊದಲನೆಯ ವರುಷ ಇವರಿಗೆ ಆಗಾಗ ಕಾಯಿಲೆ. ಮನೆಯಲ್ಲಿ ಹಿರಿಯರಿಗೆ ಮೃತ್ಯುಗಂಡ. ತೀರ್ಥಯಾತ್ರೆ ದೇವತಾ ಸೇವೆ ಮಾಡಿ ವರಪ್ರಸಾದ

ದಿಂದ ಇವರ ಜನನ. ಈ ಕಾರಣ ಆಯುಷ್ಯ ವೃದ್ಧಿ. ಮುಂದಿನ ಏಳು ವರುಷಗಳಲ್ಲಿ ರಾಹುವೂ ಸಹ ತುಲಾರಾಶಿಯೋಗ. ಇದರಿಂದ ಹುಟ್ಟಿದ ನಂತರ ಮನೆಯಲ್ಲಿ ತಂದೆಗೆ ವೈದ್ಯವೃತ್ತಿಯಲ್ಲಿ ಪ್ರಗತಿ. ಓದುಗರಿಗೆ ವಿದೇಶದಲ್ಲಿ ವಿದ್ಯಾಭ್ಯಾಸ. ಮುಸಲರ, ಅಥವಾ ವಿದೇಶೀಯರ ಮಧ್ಯೆ ಬೆಳವಣಿಗೆ. ಆಂಗ್ಲರ ಶಾಲೆಯಲ್ಲಿ ಕಲಿಕೆ ಬೇರೆ. ಹಿರಿಯರು ದೇವತಾಶ್ರದ್ಧೆಯಿಂದ ಕೂಡಿ ಮಡಿ ಆಚಾರಶೀಲರು ಬೇರೆ. ಕೆಲವರಿಗೆ ಮೃತ್ಯುದೋಷ ನಿವಾರಣೆಗಾಗಿ ದೇವಾಲಯದ ಬಳಿ ಇರುವ ಮನೆಯಲ್ಲಿ ವಾಸ. ಎಂಟನೆಯ ವರುಷ ಬಂದ ಮೇಲೆ ಬುಧನ ದೆಶೆಯಿಂದ ಬುದ್ಧಿ ವಿಕಾಸ. ಕಲಿಕೆಯಲ್ಲಿ ಪ್ರಗತಿ. ಆರೋಗ್ಯದಲ್ಲಿ ಸುಧಾರಣೆ ಬೇರೆ. ಇರುವ ಮನೆ ಬದಲಾಗಿ ಸಂಯೋಗ ಪ್ರಾಪ್ತಿ.

ಎರಡನೆಯ ಹತ್ತು ವರುಷಗಳಲ್ಲಿ ಚಂದ್ರನ ದಶಾಕಾಲ ನಾಲ್ಕು ವರುಷ. ಈ ಹತ್ತು ವರುಷಗಳ ಫಲ ವೃಶ್ಚಿಕದಲ್ಲಿ ನಡೆಯುತ್ತೆ. ಇಲ್ಲಿ ಚಂದ್ರನು ನೀಚತ್ವವನ್ನು ಹೊಂದಿ ಮಾತೃವಿಗೆ ದೇಹಾಲಸ್ಯ ಬೇರೆ ಹೆಂಗಸಿನ ಪೋಷಣೆಯಿಂದ ಪ್ರಗತಿ. ತಂದೆಗೆ ವ್ಯಾಪಾರದಲ್ಲಿ ಖರ್ಚು. ವೃಥಾ ಚಿಂತೆ. ಮುಂದಿಗೆ ಆಗಾಗ ಮಾನಸಿಕ ರೋಗದ ಭಯ ಬೇರೆ. (ತಿಕ್ಕಲು ಬುದ್ಧಿ). ಹದಿನಾಲ್ಕು ವರುಷಗಳ ನಂತರ ವೃಶ್ಚಿಕದಲ್ಲಿ ಕುಜನ ಯೋಗ ಶುರು. ಇದರಿಂದ ಅನುಕೂಲ. ಅಲ್ಲದೆ ವೃಶ್ಚಿಕ ರಾಶಿಯಲ್ಲಿ ಚಂದ್ರ ಮಂಗಳಯೋಗದ ದೆಸೆಯಿಂದ ಕೃಷಿಯಲ್ಲಿ ಸಂಪತ್ತು ಅಭಿವೃದ್ಧಿ. ಸೋದರಿಗೆ ಸುಯೋಗ ಬೇರೆ. ದೇವೀ ಸೇವೆಯಿಂದ ಮನೆಯಲ್ಲಿ ಮಂಗಳಕಾರ್ಯಕ್ಕೆ ಅನುಕೂಲ. ತಿಂಡಿ ಧಾನ್ಯ ವ್ಯಾಪಾರಿಗೆ ಪ್ರಗತಿ ಬೇರೆ.

ಇಪ್ಪತ್ತು ವರುಷಗಳ ನಂತರ ಒಂಭತ್ತು ವರುಷ ಸೂರ್ಯನ ದೆಶೆ. ಈ ಕಾಲ ಧನು ರಾಶಿ ಯಲ್ಲಿ ನಡೆಯುತ್ತೆ. ಈ ರಾಶಿಯಲ್ಲಿ ಸೂರ್ಯನು ಬಲಿಷ್ಠ. ಕಾರಣ ಇದರ ತ್ರಿಕೋಣ ರಾಶಿಯಾದ ಮೇಷದಲ್ಲಿ ಅವನಿಗೆ ಉಚ್ಚತ್ವ. ಇದರಿಂದ ತಂದೆಗೆ ಸರಕಾರದಿಂದ ಅನುಕೂಲ, ಕೆಲವರಿಗೆ ಅಧಿಕಾರ ಪ್ರಾಪ್ತಿ. ತನಗೇ ವಿದ್ಯೆಯಲ್ಲಿ ಕೀರ್ತಿ. ಇಲ್ಲ ಉತ್ತಮ ನೌಕರಿ ದೊರಕಿ.ಮಾನಪ್ರಾಪ್ತಿ. ಉನ್ನತಾಧಿಕಾರಿ ಗಳ ಪ್ರಭಾವದಿಂದ ಪ್ರಗತಿ.

ಮೂವತ್ತು ವರುಷಗಳ ನಂತರ ಬರುವ ಮಕರ ರಾಶಿಯ ಯೋಗದಲ್ಲಿ ಗುರುವಿನ ಹತ್ತು ವರ್ಷಗಳ ದೆಶೆ ನಡೆಯುವುದು. ಇಲ್ಲಿ ಗುರುವಿಗೆ ನೀಚತ್ವದಿಂದ ಮಗನು ತಂದೆಯಿಂದ ಬೇರೆ ಇರುವ ಯೋಗ. ಅಲ್ಲದೆ ಮಕ್ಕಳ ಚಿಂತೆ ಬೇರೆ. ಕೆಲವು ಸಲ ಇದೇ ನೀಚದ ರಾಶಿಯಲ್ಲಿ ಗುರುವಿಗೆ ನೀಚದ ಭಂಗತ್ವ ಆಗುತ್ತೆ. ಆಗ ಇವರಿಗೆ ಅಕಸ್ಮಾತ್ ಧನಯೋಗ. ಧನಿಕವಂಶದಲ್ಲಿ ಹುಟ್ಟಿದ ಕನ್ಯೆಯೊಡನೆ ವಿವಾಹ ಬೇರೆ. ಹಾಗಿಲ್ಲ. ಕೆಲವರಿಗೆ ಜಾತಿ ಭೇದದಿಂದ ವಿವಾಹ ಎಂದು ಕೆಲವರ ಮತ. ಕಾರಣ ಗುರುವಿನ ನೀಚತ್ವದ ಫಲ. ಗುರುಗಳ ದರ್ಶನವಾಗಿ ಅವರ ಸೇವಾ ಮಹಿಮೆಯಿಂದ ಜೀವನದಲ್ಲಿ ಪ್ರಗತಿ.

ನಲವತ್ತರ ನಂತರ ಕುಂಭರಾಶಿ ದೆಶೆಯಲ್ಲಿ ಗುರುವಿನ ನಂತರದ ಶುಕ್ರನ ದೆಶೆ ಪ್ರಾರಂಭ. ಇಲ್ಲಿ ತುಲಾ ರಾಶಿ ಶನಿಯ ಯೋಗದಲ್ಲಿ ಶುಕ್ರನು ಪರಿವರ್ತನೆಯ ಕಾರಣ ಬೆರೆತು ಕೆಲವರಿಗೆ ಮೊದಲ ಹೆಂಡತಿ ಸತ್ತು ಎರಡನೆಯ ವಿವಾಹ ಯೋಗ ಅಂದರು. ಹಾಗಿಲ್ಲ. ಎರಡನೆಯ ಸ್ತ್ರೀ ಸಂಬಂಧ ಎಂದು ಕೆಲವರ ಮತ. ಕುಂಭ ರಾಶಿ ರಹಸ್ಯದ ರಾಶಿಯಾಗಿ ರಹಸ್ಯದ ಪ್ರೇಮಕ್ಕೂ ಇಲ್ಲಿ ಅವಕಾಶ. ವಸ್ತ್ರಾಲಂಕಾರಗಳ ಮೇಲೆ ಅಭಿಮಾನ ಹೆಚ್ಚುತ್ತೆ. ಲಕ್ಷ್ಮೀದೇವೀ ಆರಾಧನೆ

ಯಲ್ಲಿ ಶ್ರದ್ಧೆ. ಸೌಂದರ್ಯವರ್ಧಕ ವಸ್ತುಗಳ ವ್ಯಾಪಾರಿಗೆ ಹೇರಳ ಲಾಭವಿದೆ. ಮರೆಯಲ್ಲಿ ಜರುಗುವ ರೇಡಿಯೋ ಕಲಾಕಾರರಿಗೂ ಈ ಕಾಲ ಉತ್ತಮ ಅಂದರು. ಪುಷ್ಪ ಉದ್ಯಾನದ ಹುಚ್ಚು ಕೆಲವರಿಗೆ. ಗಾಯನ ಶ್ರವಣ. ಕಲಾಭಿಮಾನದಿಂದ ಖರ್ಚು. ಕೆಲ ಸಲ ಹೆಂಡತಿಯೇ ಕಲಾವತಿ. ಈ ಕಾಲದಲ್ಲಿ ದ್ವಿತೀಯ ವಿವಾಹದಿಂದ ಸುಯೋಗ. ಮೊದಲನೆಯ ಹೆಂಡತಿ ಇದ್ದರೆ ಅವರಿಗೆ ಕಾಯಿಲೆ. ಸುಖಭಂಗ ಯೋಗ. ಆದರೆ ಕೊನೆಯ ಎರಡು ವರುಷಗಳ ಕಾಲ ಐವತ್ತರ ನಂತರ ಬರುವ ಮೀನಾ ರಾಶಿಯ ಯೋಗದಿಂದ ಸುಯೋಗ ನಡೆಯುತ್ತದೆ.

ಐವತ್ತಮೂರನೆಯ ವರುಷದಿಂದ ಪುನಃ ಶನಿಯೋಗ ಪ್ರಾರಂಭ. ಆದರೆ ಇಲ್ಲಿ ಶನಿ ಮೀನ ರಾಶಿ ಯೋಗದಲ್ಲಿ ರಾಹುವಿನೊಡನೆ ಯೋಗಿಸುವುದರಿಂದ ಆರೋಗ್ಯ ಕೆಡುತ್ತೆ. ಹಾಗಿಲ್ಲ, ವಿದೇಶದಲ್ಲಿ ವಾಸದಿಂದ ಸುಯೋಗ. ಈ ರೀತಿ ಜನ್ಮ ದಿನಾಂಕ ಒಂದರ ದಶಾಕ್ರಮ ಫಲವನ್ನು ನಡೆಸಬೇಕು. ಈ ಗಣಪತಿ ಮಂತ್ರ ಉಪಾಸನೆ. ಪೂಜಾಶ್ರದ್ಧೆಗಳಿಂದ ಇನ್ನೂ ಉತ್ತಮ ರೀತಿಯ ಫಲದ ಕಲ್ಪನೆ ಉಂಟಾಗಿ ಕೀರ್ತಿ ಬಂದೀತು.

## ಸಂಖ್ಯೆ ಎರಡು ಗ್ರಹಬುಧ-ದಶಾಕ್ರಮ

ಸಂಖ್ಯಾ ಗ್ರಹಗಳ ದಶಾಕ್ರಮದಂತೆ ಗ್ರಹಗಳ ಅತಿ ಕಡಿಮೆ ಸಂಖ್ಯಾ ವರುಷಗಳ ಮೊತ್ತ ಆಯುಷ್ಯ ಪ್ರಮಾಣ ನೂರ ಇಪ್ಪತ್ತು ವರುಷಗಳು ಆಗದು. ಈ ಕಾರಣ ದಿನಾಂಕದ ಸಂಖ್ಯಾಗ್ರಹದ ದೆಶೆ ಶುರುವಾದಾಗ ಆ ಗ್ರಹದ ಕನಿಷ್ಠ ಸಂಖ್ಯಾ ವರುಷಗಳ ಮಿತಿಯಲ್ಲಿ ಫಲವನ್ನು ನಡೆಸಬೇಕು. ಅನಂತರ ಇತರ ಗ್ರಹಗಳ ಸಂಖ್ಯಾ ವರುಷಗಳ ಮೊತ್ತ, ದಿನಾಂಕ ಸಂಖ್ಯಾಗ್ರಹದ ಅತಿ ಹೆಚ್ಚಿನ ಸಂಖ್ಯಾ ವರ್ಷ ಮಿತಿಯನ್ನು ಮುಟ್ಟಿದಾಗ ದಿನಾಂಕ ಸಂಖ್ಯಾ ಗ್ರಹದ ಗರಿಷ್ಠ ಕಾಲದಂತೆ ಪರಿಗಣನೆ ಮಾಡುವುದು ಸೂಕ್ತ ಎಂದು ಹಿರಿಯರ ಮತ.

ಉದಾಹರಣೆಗೆ ಎರಡು ಸಂಖ್ಯೆಗೆ ಗ್ರಹ ಬುಧ. ಇವನ ಗರಿಷ್ಠ ಕಾಲ ಮಿತಿ ಇಪ್ಪತ್ತುನಾಲ್ಕು ವರುಷಗಳು. ಸ್ಥೂಲವಾಗಿ ನೋಡುವಾಗ ಈ ಕಾಲ ಬುಧನ ದಶಾ ಫಲದಂತೆ. ಆದರೆ ಇದರಲ್ಲಿ ದಶಾಭುಕ್ತಿಯಂತೆ ನೋಡಬೇಕಾದರೆ ಬುಧನ ಕನಿಷ್ಠ ಸಂಖ್ಯೆಗಳಾದ ಎರಡು (ಬುಧ - ಗುರು ಸಂಯೋಗವಿದ್ದರೆ ) ಮತ್ತು ಎಂಟು ವರುಷ (ಬುಧ-ಶನಿ ಸಂಯೋಗವಿದ್ದರೆ) ಗಳ ಕಾಲ ಬುಧನ ಭುಕ್ತಿಯಂತೆ ಪರಿಗಣಿಸಬೇಕು. ನಂತರ ಚಂದ್ರ ಭುಕ್ತಿವರುಷ ನಾಲ್ಕು ವರುಷ ಕುಜನದು ಆರು ವರುಷ (ಕುಜ -ಶನಿ ಯೋಗದಲ್ಲಿ ಮೂರು ವರುಷ) ನಂತರ ಸೂರ್ಯನದು ಒಂಭತ್ತು ವರುಷ ನಂತರ ಗುರುವಿನದು ಐದು ವರುಷ (ಗುರು-ಶನಿ ಯೋಗದಲ್ಲಿ ಹತ್ತು ವರುಷ) ನಂತರ ಶುಕ್ರ ಹನ್ನೆರಡು ವರುಷ (ಶುಕ್ರ-ಶನಿ ಯೋಗದಲ್ಲಿದ್ದಿರೆ ಹನ್ನೊಂದು ವರುಷ) ನಂತರ ರಾಹು ಏಳು ವರುಷಗಳು. ಇಲ್ಲಿಗೆ ಬುಧನಿಂದ ಶುರುವಾದ ದಶಾಕ್ರಮ ಮುಕ್ತಾಯ. ಇಲ್ಲಿ ಬುಧನದು ಎಂಟು, ಚಂದ್ರನದು ನಾಲ್ಕು, ಕುಜನದು ಆರು, ಸೂರ್ಯನದು ಒಂಭತ್ತು ನಡೆಯುವಾಗ ಬುಧನ ದಸಾ ಪ್ರಮಾಣದ ಇಪ್ಪತ್ತುನಾಲ್ಕು ವರುಷಗಳ ಕಾಲ ಮುಗಿಯುತ್ತೆ. ಇಲ್ಲಿ ಸೂರ್ಯನ ಒಂಭತ್ತು ವರುಷದ ಫಲ ಪೂರ್ಣ ನಡೆಯುವುದಿಲ್ಲ. ಕಾರಣ ಸೂರ್ಯನ ಕಾಲದಲ್ಲಿ ಆರು ವರುಷ ಆಗಿರು ವಾಗ ಬುಧನ ಇಪ್ಪತ್ತನಾಲ್ಕು ವರುಷಗಳು ಮುಗಿಯುತ್ತವೆ. ಇಲ್ಲಿಸೂರ್ಯನಉಳಿದ ಮೂರು

ವರುಷಗಳ ಫಲ ಉಪ್ಪು. ಹೀಗೆ ಎರಡು ಅಥವಾ ಎಂಟನೆಯ ದಿನಾಂಕದಂದು ಹುಟ್ಟಿದ ಮಂದಿಗೆ ಮೊದಲು ಶುರು ಆಗುವ ಬುಧನ ದಶಾಕಾಲ ಇಪ್ಪತ್ತನಾಲ್ಕು ವರುಷಗಳ ಕಾಲದ ಭುಕ್ತಿ ಗ್ರಹಗಳ ಕ್ರಮದ ವಿವರಣೆ. ಅಂದರೆ ಬುಧನ ಇಪ್ಪತ್ತನಾಲ್ಕು ವರುಷಗಳು ನಡೆದ ನಂತರ ಬರುವ ಚಂದ್ರನ ನಾಲ್ಕು ವರುಷದ ಕಾಲ ಚಂದ್ರನ ದೆಶೆ ಎಂದು ತಿಳಿಯಬೇಕು. ಮೇಲಿನಂತೆ ಚಂದ್ರನ ದೆಶೆಯಲ್ಲಿ ಇತರ ಗ್ರಹಗಳ ಭುಕ್ತಿಯ ಕಾಲವನ್ನು ತಿಂಗಳುಗಳ ಸಂಖ್ಯೆಯಂತೆ ಮಾಡುವುದು ರೂಢಿ. ಕಾರಣ ವರುಷಗಳಲ್ಲಿ ಎಣಿಸಿದರೆ ಚಂದ್ರನ ನಾಲ್ಕು ವರುಷಗಳು ಸಾಲದು.

ದಿನಾಂಕ ಎರಡು (2) - ಎಂಟು (8) ಮತ್ತು ಇಪ್ಪತ್ತನಾಲ್ಕು (24)ಗಳಲ್ಲಿ ಜನನ. ಆಗ ಅವರಿಗೆ ಗುರುವಿನ ದೆಶೆ ಬುಧನದು. ಇಲ್ಲಿ ಮೊತ್ತದ ಕಾಲ ಇಪ್ಪತ್ತನಾಲ್ಕು ವರ್ಷಗಳು. ಅದರಲ್ಲಿ ಎಂಟು ವರುಷಗಳು ಬುಧನ ಭುಕ್ತಿ. ಇದರಲ್ಲಿ ಎರಡು ವರುಷಕಾಲ ಬುಧ-ಗುರು ಯೋಗದ ಫಲ ಈ ಯೋಗ ವಿದ್ಯಾಯೋಗ. ಶಾಸ್ತ್ರ ಅಧ್ಯಯನ ಯೋಗ. ಕೆಲವರು ಇದರ ಫಲವನ್ನು ಸವ್ಯಚಕ್ರವಾದ ಮೇಷ ರಾಶಿಯಲ್ಲಿ ನೆಡಸುತ್ತಾರೆ. ಇತರರು ಅಪಸವ್ಯ ಚಕ್ರವಾದ ತುಲಾರಾಶಿಯಲ್ಲಿ ಹೇಳುತ್ತಾರೆ. ಫಲ ಹೇಳುವ ಮಂದಿ ಗುರುಸ್ಥಾನದಲ್ಲಿ ಬಂದು ಪರಿಸ್ಥಿತಿಗೆ ಸರಿಹೊಂದುವಂತೆ ಚಕ್ರವನ್ನು ನಿರ್ಣಯ ಮಾಡಬೇಕು ಎಂದು ಹಿರಿಯರ ಮತ. ಈಚೆಗೆ ಶಾಸ್ತ್ರ ವ್ಯವಸಾಯಗಳು ಯಾವುದಾದರೂ ಒಂದು ಚಕ್ರವನ್ನು ಅಭ್ಯಾಸ ಮಾಡುವುದೇ ಲೇಸು ಅಂದರು. ಇದು ಯುಕ್ತವಾದುದು. ಇದರ ಜೊತೆಗೆ ಮೊದಲ ಹನ್ನೆರಡು ವರುಷಗಳ ಕಾಲ ವಯೋಮಾಲಾ ಗಣಿತದಂತೆ ವರ್ಷ ವರ್ಷ ಫಲವನ್ನು ಆಯಾ ವರುಷದ ಸಂಖ್ಯಾಗ್ರಹದ ಫಲಕ್ಕೆ ಸಮನ್ವಯ ಮಾಡಿಕೊಂಡು ಹೇಳುವುದು ಯಶಸ್ಕರ. ಉದಾಹರಣೆಗೆ ಮೊದಲನೆಯ ವರ್ಷ ಶನಿಯ ಫಲ. ಎರಡನೆಯದು ಬುಧ -ಗುರುವಿನ ಫಲ. ಮೂರನೆಯದು ಕುಜ-ಶನಿಗಳ ಫಲ. ನಾಲ್ಕನೆಯದು ಚಂದ್ರನ ಫಲ ಇತ್ಯಾದಿ. ಮೊತ್ತದಲ್ಲಿ ಫಲ ಹೇಳುವುದು ವ್ಯವಸಾಯಿಗಳ ಒಂದು ಕಲೆ.

ಸವ್ಯ ಚಕ್ರದಲ್ಲಿ ಬುಧನ ದೆಸೆಯಲ್ಲಿ ಮೇಷದ ಬುಧ-ಗುರು ಯೋಗ. ಇದರಿಂದ ಇವರ ಜನನ ಪಂಡಿತರ ಮನೆಯಲ್ಲಿ. ಸದಾಚಾರದಿಂದ ಕೂಡಿದ ಶಾಸ್ತ್ರಗಳ ಅಧ್ಯಯನ ಶೀಲರ ಸಹವಾಸದಲ್ಲಿ ಇವರ ಬೆಳವಣಿಗೆ. ಚುರುಕು ಬುದ್ಧಿಯ ಚಟುವಟಿಕೆಗಳಿಂದ ಬಾಲಕನು ಎಲ್ಲರಪ್ರೀತಿಗೆ ಪಾತ್ರನು. ಹಾಗಿಲ್ಲ. ವಿದ್ಯಾಸಂಸ್ಥೆಗಳ ಬಳಿ ಇವರ ಜನನ. ಆದರೆ ಬುಧನ ಎಂಟು ಸಂಖ್ಯೆಯ ದಿನಾಂಕದಂದು ಹುಟ್ಟಿದ್ದರೆ ಜನನ ಕಾಲದಿಂದ ಎಂಟು ವರ್ಷಗಳ ಕಾಲ ಮಗುವಿಗೆ ಮಂದ ಬುದ್ಧಿ. ಶ್ವಾಸಕೋಶದ ಗಡಿಬಿಡಿ ಬೇರೆ. ಬುಧ-ಶನಿಗಳ ಮೇಷ ಯೋಗ ದಿಂದ ನಗರವಲ್ಲದೆ ಗ್ರಾಮದಲ್ಲಿ ಜನನ. ಸ್ಫುಟವಾದ ಮಾತು ಎಂಟು ವರ್ಷಗಳ ಮೇಲೆ. ಅಲ್ಲಿಯವರೆಗೆ ಮೂಕ ಯೋಗದಂತೆ ಫಲ. ಹರಿಯ ಸೇವಾ ನ್ಯೂನತೆಯಿಂದ ಮಾತುಲ ವಂಶಕ್ಕೆ ಅರಿಷ್ಟದ ಫಲ. ಇದರ ದೆಸೆಯಿಂದ ಅನ್ಯ ಗೃಹದಲ್ಲಿ ಪೋಷಣೆ ಎಂದು ಕೆಲವರ ಮತ. ಐದು ವರುಷಗಳ ಕಾಲದ ನಂತರ ಹರಿಸೇವೆಯಿಂದ ದೋಷ ಪರಿಹಾರ. ಮನೆ, ಗ್ರಾಮದ ಬದಲು. ಇದರಿಂದ ಸುಯೋಗ ಪ್ರಾಪ್ತಿ. ಅದರೆ ಎಂಟನೆಯ ವರ್ಷ ನಡೆಯುವಾಗ ಮುಖ್ಯ ಬಂಧುವಿಗೆ

ಮೃತಿ. ಇಲ್ಲಿಗೆ ಬಂಧನ ಅಂತರ ಫಲಕ್ಕೆ ಕೊನೆ. ನಂತರ ಚಂದ್ರನ ನಾಲ್ಕು ವರುಷಗಳ ಭುಕ್ತಿ.

ಅಪಸವ್ಯ ಚಕ್ರದಲ್ಲಿ ತುಲಾರಾಶಿ ಯೋಗದಿಂದ ಬುಧನಿಗೆ ಗುರು ಯೋಗ. ಇದು ಎರಡನೆಯ ದಿನಾಂಕದಂದು ಹುಟ್ಟಿದ ಮಂದಿಗೆ ನಡೆಯುತ್ತದೆ. ಆಗ ಇದು ಶಾಸ್ತ್ರ ಗ್ರಂಥಗಳ ಮಾರಾಟದಿಂದ ಜೀವನ ಮಾಡುವ ಮನೆಯಲ್ಲಿ ಜನನ.

## ಎಂಟನೆಯ ದಿನಾಂಕದಂದು ಜನನ

ಇಲ್ಲಿ ಬುಧನಿಗೆ ಶನಿಯೋಗ. ಇದು ಅಪಸವ್ಯ ಚಕ್ರದಲ್ಲಿ ತುಲಾರಾಶಿಯ ಯೋಗದಿಂದ ಬಹು ಅಪಾಯಕಾರಿ. ಕಾರಣ ಶನಿ ಇಲ್ಲಿ ಉಚ್ಚನು. ಬುಧನಿಗೆ ಇವನ ಯೋಗದಿಂದ ಜನನ ಕಾಲದಲ್ಲಿಯೇ ಮೃತಿ ಯೋಗ. ಹಾಗಿಲ್ಲ, ಇವರ ಜನನದ ಕಾಲದಲ್ಲಿ ಮನೆಯಲ್ಲಿ ಹೃದಯ ಬೇನೆಯಿಂದ ಬಂಧುವಿಗೆ ಮೃತಿ. ಕೆಲವು ಸಲ ಇವರ ಜನನ ವೈದ್ಯರ ಮನೆಯಲ್ಲಿ. ಆಗ ವೈದ್ಯರಿಗೆ ಸುಯೋಗ. ಹಾಗಿಲ್ಲ. ತಂದೆಗೆ ಆಸ್ಪತ್ರೆಯಲ್ಲಿ ಉದ್ಯೋಗ. ಬಾಲಕನಿಗೆಂಟು ವರುಷಗಳ ಕಾಲ ಎಲ್ಲರಂತೆ ಇಂದ್ರಿಯ ಚಟುವಟಿಕೆಗಳೇ ಇರದು. ಇದಕ್ಕೆ ಕುಲದೇವತೆ ಹಾಗಿಲ್ಲ ನರಹರಿಯ ಉಪಾಸನೆ ಮಾಡುವುದು ಲೇಸು. ಆ ಹರಿಯು ಕ್ಷೇತ್ರ ದರ್ಶನ, ಸೇವೆಗಳಿಂದ ಆರೋಗ್ಯಕ್ಕೆ ಲೇಸು. ಹಾಗಿಲ್ಲ, ಪ್ರಬಲ ಪ್ರಾಣ ಗಂಡವನ್ನೇ ಎದುರಿಸಬೇಕಾದೀತು. ಹುಟ್ಟಿದ ಊರು, ಗ್ರಾಮ, ಮನೆ ಎಲ್ಲವನ್ನೂ ಕಳೆದುಕೊಂಡು ಕಂಡವರ ಆಶ್ರಯದಲ್ಲಿ ಬಾಳುವೆ ಇದರ ಫಲ. ಇಲ್ಲಿಯೂ ಸಹ ಐದನೆಯ ವರುಷದಲ್ಲಿ ಹರಿ ಪ್ರಸಾದದಿಂದ ಅರಿಷ್ಟದ ಪರಿಹಾರ. ಎಂಟನೆಯ ವರುಷದಲ್ಲಿ ಮಹಾವ್ಯಾಧಿಯ ಕಾರಣ ಬಂಧು ಮೃತಿ.

ಎರಡು ಮತ್ತು ಎಂಟನೆಯ ದಿನಾಂಕದಂದು ಹುಟ್ಟಿದ ಮಂದಿಗೆ ಎಂಟನೆಯ ವರುಷದಿಂದ ನಾಲ್ಕು ವರುಷ ಚಂದ್ರನ ಭುಕ್ತಿಯ ಕಾಲ. ಸವ್ಯ ಚಕ್ರದಲ್ಲಿ ಮೇಷ ರಾಶಿಯ ಚಂದ್ರನಿಗೆ ವೃಷಭ ರಾಶಿಯ ಚಂದ್ರನ ಪ್ರಗತಿ ಫಲ ಪ್ರಾಪ್ತಿ. ಇದರಿಂದ ಎಂಟು ವರುಷಗಳಂತರ ಬಾಲಕನಿಗೆ ವೃದ್ಧಿ ಕಾಲ. ವಿದ್ಯೆಯಲ್ಲಿ ಅಸಾಧಾರಣ ಪ್ರಗತಿ. ಆರೋಗ್ಯದಲ್ಲಿ ಅಚ್ಚರಿಯ ಗುಣ ಕಂಡು ಮನೆಯವರಿಗೆ ನಿರಾಸೆ ತೊಲಗಿ ಹುಡುಗನ ಬಗ್ಗೆ ಆಸೆ ಉದಯವಾಗುವುದು. ಇದೇ ಚಂದ್ರನ ದೆಸೆ ಅಪಸವ್ಯ ಚಕ್ರದಲ್ಲಿ ವೃಶ್ಚಿಕ ರಾಶಿಯಲ್ಲಿ ಹತ್ತು ವರುಷಗಳ ನಂತರ ನಡೆಯುತ್ತದೆ. ಇಲ್ಲಿ ಚಂದ್ರನಿಗೆ ನೀಚದ ಸ್ಥಾನ. ಇದರಿಂದ ಈ ಕಾಲದಲ್ಲಿ ತಾಯಿಯ ಸುಖ ಇರದು. ವ್ಯಾಪಾರದಲ್ಲಿ ತಂದೆಗೆ ಕಷ್ಟ. ಕೆಲವರಿಗೆ ಊರು ಬಿಟ್ಟು ಬೇರೆ ಊರಿನಲ್ಲಿ ಜೀವನ ಆದೀತು. ಅನೇಕ ವೇಳೆ ಸವ್ಯ ಚಕ್ರದಲ್ಲಿ ಫಲ ಹಾನಿಕರ. ಆಗ ಅಪಸವ್ಯ ಚಕ್ರದಲ್ಲಿ ಫಲ ಶುಭ ಇರುತ್ತೆ. ಕಾರಣ ಅದೇ ವಯಸ್ಸಿನ ರಾಶಿಗಳು ಎರಡು ಚಕ್ರಗಳಲ್ಲಿಯೂ ಪರಸ್ಪರ ಏಳನೆಯದು. ಈ ಕಾರಣ ಗ್ರಹಗಳು ಪರಸ್ಪರ ಏಳನೆಯ ರಾಶಿಯನ್ನು ನೋಡುತ್ತವೆ ಅಂದರು. ಉದಾಹರಣೆಗೆ ಇಲ್ಲಿ ಚಂದ್ರನಿಗೆ ಅಪಸವ್ಯದಲ್ಲಿ ನೀಚತ್ವ. ಆದರೆ ಸವ್ಯದಲ್ಲಿ ಉಚ್ಚತ್ವ. ನೀಚ ರಾಶಿಯ ಚಂದ್ರನಿಗೆ ಈಶ್ವರನನ್ನು ಪೂಜೆ ಮಾಡಿದರೆ ಆಗ ಚಕ್ರ ಬದಲಾಗಿ ಚಂದ್ರನಿಗೆ ಉಚ್ಚರಾಶಿಯ ಫಲ ಪ್ರಾಪ್ತಿ. ಕಾಲ ಚಕ್ರದಲ್ಲಿ ಆ ವಯಸ್ಸಿಗೆ ಈ ಚಕ್ರದಲ್ಲಿ ಒಂದು

ರಾಶಿಯಾದರೆ ಆ ಚಕ್ರದಲ್ಲಿ ಅದರ ಏಳನೆಯ ರಾಶಿಯಾಗುತ್ತದೆ. ಈ ಕಾರಣದಿಂದಲೇ ಪೂರ್ವಿಕರು ಶಾಂತಿ ಕರ್ಮಕ್ಕೆ ಜ್ಯೋತಿಷ್ಯದಲ್ಲಿ ಗೌರವ ಕೊಟ್ಟಿದ್ದು.

ಹದಿಮೂರನೆಯ ವರುಷದಿಂದ ಈ ಮಂದಿಗೆ ಮಂಗಳನ ಯೋಗ ಆರು ವರುಷಗಳು. ಸವ್ಯ ಚಕ್ರದಲ್ಲಿ ಮಂಗಳನಿಗೆ ಹದಿಮೂರನೆಯ ವರುಷವನ್ನು ತೋರಿಸುವ ವೃಷಭ ರಾಶಿಯಲ್ಲಿ ಯೋಗ ನಡೆಯುತ್ತದೆ. ಇದು ಅವನಿಗೆ ಬಲವಾದ ರಾಶಿಯೇನೋ ಹೌದು. ಅವನ ಉಚ್ಚ ರಾಶಿ ಮಕರ. ಅದರ ತ್ರಿಕೋಣ ಈ ವೃಷಭ. ಇದರಿಂದ ಇವರಿಗೆ ಉಚ್ಚ ರಾಶಿಯ ಮಂಗಳನಿರುವ ಮಂದಿಯ ಸ್ನೇಹವಾಗುತ್ತದೆ. ಆ ಫಲ ಇದರಿಂದ ಪ್ರಾಪ್ತಿ. ಇಲ್ಲಿ ರಾಜಕೀಯದಲ್ಲಿ ಬಲದಿಂದ ಕೂಡಿರುವ ಮಂದಿಯ ಸಹಾಯ. ಇದರಿಂದ ಇವರಿಗೆ ವಿದ್ಯೆ, ಉದ್ಯೋಗಗಳಲ್ಲಿ ಪ್ರಗತಿ. ಹಾಗಿಲ್ಲ. ಬಲದಿಂದ ಕೂಡಿದ ಮಂದಿಯ ಮನೆಯಲ್ಲಿ ಇವರ ಬೆಳವಣಿಗೆ. ಭೂಮಿ ಕಾಣಿ ಆಸ್ತಿಗಳೂ ಬಂದು ಸೇರುತ್ತವೆ. ಅಪಸವ್ಯ ಚಕ್ರದಲ್ಲಿ ವೃಶ್ಚಿಕದಲ್ಲಿ ಫಲ. ಇಲ್ಲಿ ಮಂಗಳನಿಗೆ ನೀಚದ ಚಂದ್ರನ ಯೋಗ. ಇದರಿಂದ ಇವರು ವ್ಯವಸಾಯಕ್ಕೆ ಬೇಕಾದ ಭಾವಿ ತೋಡಿ. ಕೆರೆಗಳನ್ನು ನಿರ್ಮಾಣ ಮಾಡುವ ಮಂದಿಯ ಮನೆಯಲ್ಲಿ ವಾಸ. ತಾಯಿಗೆ ಈ ಯೋಗ ಅಮಂಗಳಕಾರಿ. ಆದರೂ ಸಹ ತಗ್ಗು ಭೂಮಿಯ ಯೋಗದಿಂದ ವ್ಯವಸಾಯ ಜೀವನ ಲೇಸು.

ಹತ್ತೊಂಭತ್ತು ವರುಷಗಳ ಶುರುವಿನಿಂದ ಇವರಿಗೆ ಸೂರ್ಯನ ಯೋಗ. ಆರು ವರುಷಗಳಲ್ಲಿ ನಾಲ್ಕು ವರುಷಗಳು ಮಿಥುನ ರಾಶಿಯಲ್ಲಿ ನಡೆಯುತ್ತವೆ. ಇಲ್ಲಿಗೆ ಬುಧನ ಮಹಾದಶೆಯ ಇಪ್ಪತ್ತು ನಾಲ್ಕು ವರುಷಗಳು ಮುಗಿದಂತೆ ಆಯಿತು. ಸೂರ್ಯನ ಭುಕ್ತಿ ಒಂಭತ್ತು ವರುಷಗಳು. ಆದರೆ ಆರು ವರುಷಗಳು ಆಗಿರುವಾಗ ಬುಧನ ದೆಶೆ ಮುಗಿಯುವ ಕಾರಣ ಉಳಿಕೆ ಮೂರು ವರುಷಗಳು ಲುಪ್ತ. ಸವ್ಯ ಚಕ್ರದಲ್ಲಿ ಮಿಥುನದಲ್ಲಿ ಸೂರ್ಯನಿಗೆ ಫಲ. ಇಲ್ಲಿ ಆರುದ್ರಾ ನಕ್ಷತ್ರ ಯೋಗದಿಂದ ಸೂರ್ಯನಿಗೆ ಕೋಪ ಹೆಚ್ಚು. ಇಲ್ಲಿ ಮಂದಿಗೆ ನೌಕರಿ ಬದಲು. ಇಲ್ಲ. ಹಾನಿ. ತಂದೆಯವರಿಗೆ ಅವಯೋಗ. ಇಲ್ಲ. ಇವರೇ ತಂದೆಯಿಂದ ಬೇರೆ ಅದಾರು. ಬುಧನ ದೆಶೆಯ ಸೂರ್ಯನ ಭುಕ್ತಿ ಆರು ವರುಷಗಳಲ್ಲಿ ಎರಡು ವರುಷಗಳು ವೃಷಭದಲ್ಲಿ ನಡೆಯುತ್ತೆ. ಕಾರಣ ವಯಸ್ಸು ಇಪ್ಪತ್ತು ಆಗುವವರೆಗೆ ವೃಷಭ ರಾಶಿ ಫಲ. ಮಿಥುನದ ನಾಲ್ಕು ವರುಷಗಳಲ್ಲಿ ಈ ಹಾನಿಕರ ಸೂರ್ಯನ ಫಲ ನಡೆಯುತ್ತೆ. ಇಲ್ಲಿ ಸೂರ್ಯ ನಮಸ್ಕಾರ, ನವಗ್ರಹ ಶಾಂತಿ ಇತ್ಯಾದಿಗಳನ್ನು ಮಾಡುವುದು ಲೇಸು. ಇದರಿಂದ ಚಕ್ರ ಬದಲಾಗಿ ಅಪಸವ್ಯ ಚಕ್ರದಲ್ಲಿ ಸೂರ್ಯನಿಗೆ ಫಲ ಪ್ರಾಪ್ತಿ. ಅಪಸವ್ಯದಲ್ಲಿ ಸೂರ್ಯನಿಗೆ ಧನುರಾಶಿ ಫಲ. ಮೇಷ ರಾಶಿಯಲ್ಲಿ ಇವನಿಗೆ ಉಚ್ಚತ್ವ. ಅದರ ತ್ರಿಕೋಣದ ಧನುವಿನಲ್ಲಿ ಅವನಿಗೆ ಬಲ ಹೆಚ್ಚು. ಇದರಿಂದ ಸೂರ್ಯನ ಅರಿಷ್ಟ ಪರಿಹಾರ. ಹೊಸ ಉದ್ಯೋಗದಿಂದ ಅನುಕೂಲ. ಉನ್ನತ ಅಧಿಕಾರಿ ಸಹಾಯ ಬೇರೆ. ಅನ್ಯಸ್ಥಳ ಯೋಗದಿಂದ ತಂದೆಗೂ ಸಹ ಸುಯೋಗ ಪ್ರಾಪ್ತಿ. ಈ ಕಾಲದಲ್ಲಿ ವಿದ್ಯಾರ್ಥಿಗಳಿಗೆ ಕೀರ್ತಿ ತರುವ ವರ್ಗದಲ್ಲಿ ತೇರ್ಗಡೆಯಾಗುತ್ತದೆ. ವಿದ್ಯೆ ಮುಗಿಯುವ ಮೊದಲೇ ನೌಕರಿ ಸಿದ್ಧವಿರುತ್ತೆ. ಇಲ್ಲಿಗೆ ಎರಡು. ಎಂಟು ಮತ್ತು ಇಪ್ಪತ್ತನಾಲ್ಕು ಸಂಖ್ಯೆಗಳ ದಿನಾಂಕದಂದು ಜನನವಾದ ಮಂದಿಗೆ ಮೊದಲು ನಡೆಯುವ ಬುಧದೆಶೆ ಇಪ್ಪತ್ತು ನಾಲ್ಕು ವರುಷಗಳ ಫಲ.

ದಿನಾಂಕ ಎರಡು. ಎಂಟು ಮತ್ತು ಇಪ್ಪತ್ತನಾಲ್ಕು ದಿನಗಳಲ್ಲಿ ಹುಟ್ಟಿದ ಮಂದಿಗೆ ಮೊದಲಿನ ಸಂಖ್ಯಾಗ್ರಹ ದೆಶೆ ಆ ಬುಧನದು. ಆದರೆ. ಈ ಬುಧನು ತನ್ನ ಕಾಲದಲ್ಲಿ ಸುಯೋಗವನ್ನು ಕೊಡುತ್ತಾನೆ. ಇಲ್ಲ, ಅನಿಷ್ಟದ ಫಲಗಳು ನಡೆದೀತು. ದಿನಾಂಕ ಎರಡು ಆದರ ಆಗ ಎರಡು ಸಂಖ್ಯೆಯ ಬುಧನಿಗೆ ಗುರು ಯೋಗದಿಂದ ಸುಯೋಗವನ್ನು ಕೊಡುತ್ತಾನೆ. ದಿನಾಂಕ ಎಂಟು ಆದರೆ ಇಲ್ಲಿ ಬುಧನಿಗೆ ಶನಿಯೋಗದ ಕಾರಣ ಅಶುಭನು. ಇಲ್ಲಿ ಹಾನಿಕರ ಫಲಗಳು. ಆದರೆ ದಿನಾಂಕ ಇಪ್ಪತ್ತನಾಲ್ಕರಲ್ಲಿ ಜನನವಾದರೆ ಇದು ವಿಶೇಷ. ಕಾರಣ ಇದು ಬುಧನ ವಿಶೇಷದ ಸಂಖ್ಯೆ. ಈ ಮಂದಿಗೆ ಮೊದಲು ಕಷ್ಟದ ಜೀವನವಾದರೂ ನಂತರ ವಿಶೇಷದ ಆಭ್ಯುದಯದಿಂದ ಕೂಡಿದ ಜೀವನ ಇವರಿಗೆ ಹರಿಪ್ರಸಾದ. ಸಮರಲ್ಲಿ ಉತ್ತಮತೆಯನ್ನು ಸಾಧಿಸಿ ಕೀರ್ತಿಯನ್ನು ಪಡೆಯುವ ಮಂದಿ ಇವರೇ ಸರಿ.

ಬುಧನ ಸಂಖ್ಯೆಗಳ ದಿನಾಂಕದಂದು ಹುಟ್ಟಿದ ಮಂದಿಗೆ ಇಪ್ಪತ್ತನಾಲ್ಕು ವರುಷಗಳು ಬುಧನ ಕಾಲ ಕಳೆದ ನಂತರ ಚಂದ್ರನ ನಾಲ್ಕು ಅಥವಾ ಹದಿನೈದು ವರುಷಗಳ ದೆಶೆ ಪ್ರಾರಂಭವಾಗುತ್ತದೆ. ಹದಿನೈದು ವರುಷಗಳ ಕಾಲ ಮಹಾದೆಶೆಯ ಕಾಲ. ಅದರಲ್ಲಿ ನಾಲ್ಕು ವರುಷಗಳು ಚಂದ್ರನ ಭುಕ್ತಿಕಾಲ. ಇದು ಇಪ್ಪತ್ತೈದನೆಯ ವರುಷಕ್ಕೆ ಪ್ರಾರಂಭ. ಇಪ್ಪತ್ತೆಂಟು ವರುಷಗಳ ಪೂರ್ತಿ ನಡೆಯುವುದು. ಈ ಕಾಲ ಸವ್ಯಚಕ್ರದಲ್ಲಿ ಮಿಥುನ ರಾಶಿ. ಅಪಸವ್ಯ ಚಕ್ರದಲ್ಲಿ ಧನುರಾಶಿ ಆಗುತ್ತದೆ. ಮಿಥುನದ ಚಂದ್ರನಿಗೆ ಆರುದ್ರಾ ನಕ್ಷತ್ರದ ಯೋಗದ ಕಾರಣ ಮಾತೃವಿಗೆ ಕಷ್ಟ. ವ್ಯಾಪಾರದಿಂದ ಜೀವನ . ಆದರೆ ಶಿವನ ಕ್ಷೇತ್ರದಲ್ಲಿ ಜನಿಸಿದ ಮಂದಿಗೆ ಈ ಫಲ ಇಲ್ಲ. ಈಶ್ವರನ ಪೂಜೆ ಮಾಡುವ ಮಂದಿಗೆ ಚಕ್ರ ಬದಲು. ಧನು ರಾಶಿಯಲ್ಲಿ ಫಲ ನಡೆಯುತ್ತದೆ. ಧನು ರಾಶಿಯ ಚಂದ್ರ ಯೋಗದಲ್ಲಿ ಇವರು ವಿದ್ಯಾ ಹಾದಿಗಳಲ್ಲಿ, ಸರಕಾರದ ನೌಕರಿಗಳಲ್ಲಿ ಕೀರ್ತಿಯುತ ಜೀವನ ನಡೆಸುತ್ತಾರೆ.

ಇಪ್ಪತ್ತೊಂಭತ್ತನೆಯ ವರುಷದಿಂದ ಆರು ವರುಷಗಳು ಅಂದರೆ ಮೂವತ್ತ ನಾಲ್ಕು ವರುಷಗಳ ಪರ್ಯಂತ ಇವರಿಗೆ ಮಂಗಳನ ಯೋಗ. ಇಲ್ಲಿ ಮಂಗಳನಿಗೆ ಸವ್ಯಚಕ್ರದಲ್ಲಿ ಕಟಕಕ್ಕೆ ಫಲ. ಅಪಸವ್ಯ ಚಕ್ರದಲ್ಲಿ ಮಕರದಲ್ಲಿ ಸುಯೋಗ. ಸವ್ಯಚಕ್ರದ ಕಟಕ ರಾಶಿಯ ಮಂಗಳನು ಅವಯೋಗವನ್ನು ಕೊಡುತ್ತಾನೆ. ಆಗ ಮಂದಿ ದೇವೀ ಆರಾಧನೆ ಮಾಡುತ್ತಾರೆ. ಆಗ ಊರು ಕೇರಿ ಬದಲಾಗಿ ರಾಜಕೀಯದ ಪ್ರಧಾನತೆ ಇರುವ ಊರಿಗೆ ಬಂದು ಅನುಕೂಲವಾಗುತ್ತದೆ. ಕೆಲವರಿಗೆ ವಿದೇಶ ಯಾತ್ರೆಯಾಗಿ ಅಲ್ಲಿಯೇ ಕೆಲಸದಿಂದ ಜೀವನ ನಡೆಸಿಯಾರು. ಈ ಕಟಕ ರಾಶಿಯ ಮಂಗಳ ಯೋಗದಲ್ಲಿ ಮನೆಯಾಕೆ ಹೆಚ್ಚಿನಂಶ ಇರಳು. ಇದ್ದರೂ ಒಮ್ಮತ ಇರದು. ಅನೇಕರಿಗೆ ಮದುವೆಯೇ ಇಲ್ಲದೆ ಈ ಮಂಗಳನ ಯೋಗಕಾಲ ಕೊನೆಯಾದಾಗ (ಮೂವತ್ತನಾಲ್ಕು ವರುಷದ ನಂತರ) ಮದುವೆಯಾಗುತ್ತದೆ. ದಿನಾಂಕದ ಗ್ರಹ ಪ್ರಧಾನದ ಗ್ರಹ. ಅದರ ಗ್ರಹ ಬುಧನಿಗೆ ಈ ಯೋಗ ಕಾಲದ ಮಂಗಳನಿಗೂ ಶತ್ರುತ್ವ. ಇದರಿಂದ ಈ ಫಲ.

ಮಂಗಳನು ತನ್ನ ಕಾಲದಲ್ಲಿ ಅನೇಕ ವೇಳೆ ಕೈಗಾರಿಕೆಯ ಶಾಖೆಗಳಲ್ಲಿ ಉದ್ಯೋಗವನ್ನು ಕೊಡುತ್ತಾನೆ. ಆದರೆ ಅಲ್ಲಿಯಾದರೂ ಬರವಣಿಗೆಯ ಕೆಲಸವೇ ಹೆಚ್ಚು. ಕಾರಣ ಜನ್ಮ

ದಿನಾಂಕದ ಗ್ರಹ ಬುಧನು ಬರಹಗಾರ. ಹಾಗಿಲ್ಲ. ಲೆಕ್ಕ ಮಾಡುವ ಕೆಲಸ. ಕೆಲ ಸಲ ಮನೆ ಕಟ್ಟಲು ಬೇಕಾದ ಶಿಲ್ಪತಂತ್ರದ ಚಿತ್ರರೂಪಿಸುವ ಕೆಲಸ ಆದೀತು. ಅಂತೂ ಮಂಗಳನ ಕಾಲ ಈ ಮುಂದಿಗೆ ಮೂವತ್ತನಾಲ್ಕು ವರುಷಗಳಿಗೆ ಮುಗಿಯುತ್ತೆ.

ಮೂವತ್ತೈದನೆಯ ವರುಷದಿಂದ ಒಂಭತ್ತು ವರುಷಗಳ ಕಾಲ ಸೂರ್ಯನ ದಶಾ ಪ್ರಾರಂಭ. ಈ ಕಾಲದಲ್ಲಿ ಸರಕಾರದ ನೌಕರರಿಗೆ ಉತ್ತಮ ಕಾಲ. ಸೂರ್ಯ ಸಂಬಂಧದ ಪ್ರಕಾಶನ. ಪ್ರಕಾಶ ಕೊಡುವ ವಿದ್ಯುತ್ ಉದ್ಯಮಗಳು ಬೆಳಕು ಕತ್ತಲಿನ ಉದ್ಯಮವಾದ ಸಿನಿಮಾ ತಂತ್ರಗಳ ಜಯವಾಗಿ ವಿಶೇಷದ ಹಣ ಬಂದೀತು. ಇಲ್ಲಿ ಐದು ವರುಷಗಳು ಕಳೆದಾಗ ಹದಿನೈದು ವರುಷಗಳ ಮಹಾದಶೆ ಕಳೆಯುತ್ತದೆ. ಈ ಕಾಲದಲ್ಲಿ ಸೂರ್ಯನಿಗೆ ಸವ್ಯಚಕ್ರದಲ್ಲಿ ಕಟಕದಲ್ಲಿ ಅಪಸವ್ಯ ಚಕ್ರದಲ್ಲಿ ಮಕರದಲ್ಲಿ ಯೋಗ ನಡೆಯುತ್ತದೆ.

ಈ ಮುಂದಿಗೆ ಮಹಾದಶಾ ಕ್ರಮದಲ್ಲಿ ಇಪ್ಪತ್ತನಾಲ್ಕು ವರುಷಗಳು ಬುಧ ದಶಾ ನಂತರ ಚಂದ್ರನದು ಹದಿನೈದು ವರುಷಗಳು. ಮೂವತ್ತೊಂಭತ್ತು ವರುಷಗಳ ನಂತರ ಮಂಗಳನ ಮಹಾದಶೆ ಶುರು. ಸವ್ಯಚಕ್ರದಲ್ಲಿ ಮಂಗಳನಿಗೆ ಸಿಂಹದಲ್ಲಿಯೂ ಅಪಸವ್ಯ ಚಕ್ರದಲ್ಲಿ ಕುಂಭದಲ್ಲಿಯೂ ಫಲ ನಡೆಯುತ್ತದೆ. ಈ ಕಾಲವು ಆರು ವರುಷಗಳು. ನಂತರ ನಲವತ್ತಾರನೆಯ ವರುಷಕ್ಕೆ ಸೂರ್ಯನ ಮಹಾದಶೆ ಪ್ರಾರಂಭ. ಈ ಕಾಲದಲ್ಲಿ ಮಂಗಳನಿಗೆ, ಕುಂಭದ ಯೋಗ ದಿಂದ ಧಾನ್ಯ ವ್ಯಾಪಾರ, ಯಂತ್ರ ಕೈಗಾರಿಕೆ, ಬಿಡಿ ಭಾಗಗಳ ಮಾರಾಟ, ಅಥವಾ ಊರು ಸುತ್ತುವ ಉದ್ಯಮಗಳಿಂದ ಅನುಕೂಲವಿದೆ. ಆದರೆ ಇವರಿಗೆ ಸ್ವಗ್ರಾಮ, ಸ್ವಜನಗಳಿಂದ ಕೇಡು. ಆದರೆ ಇವರಿಗೆ ಆ ಊರು, ಸ್ವಂತ ಮಂದಿ ಎಂದರೆ ಇಷ್ಟ. ಅವರಿಗಾಗಿ ಸಹಾಯ ಮಾಡುವುದು ಇವರಿಗೆ ಪ್ರಿಯ. ಯಂತ್ರ ರಹಸ್ಯಗಳನ್ನು ತಿಳಿದು ಅದರಿಂದ ಉದ್ಯೋಗ ಉದ್ಯಮದಲ್ಲಿ ಮುಂಬರುವ ಮಂದಿ. ಸವ್ಯಚಕ್ರದಲ್ಲಿ ಈ ಕಾಲ ಸಿಂಹ ರಾಶಿಯಲ್ಲಿ ನಡೆಯುತ್ತದೆ. ಇಲ್ಲಿ ಮಂಗಳನಿಗೆ ಸೂರ್ಯನೊಡನೆ ಪರಿವರ್ತನೆಗೆ ಅವಕಾಶ. ಇದರಿಂದ ಮುಂದಿಗೆ ಸರಕಾರದಲ್ಲಿ ಉನ್ನತ ಅಧಿಕಾರ ಪ್ರಾಪ್ತಿಯಾದೀತು. ಉತ್ತಮ ಆಡಳಿತಗಾರ ರೆಂಬ ಕೀರ್ತಿಯೂ ಬಂದೀತು. ಯಂತ್ರಾಲಯಗಳಲ್ಲಿ, ಜಿಲ್ಲೆಗಳಲ್ಲಿ ಅಧಿಕಾರದಿಂದ ಅವರಿಗೆ ಅನುಕೂಲ. ಹೆಚ್ಚಿನ ಪ್ರಭಾವದ ಅವಕಾಶದಿಂದ ಪ್ರತಿಭೆಗೂ ಅವಕಾಶ. ಇದರಿಂದ ನಲವತ್ತಾರನೆಯ ವರುಷದಲ್ಲಿ ಸೂರ್ಯನ ಯೋಗ ಶುರು. ಆಗ ಇವರಿಗೆ ತಮ್ಮ ಶಾಖೆ ಯಲ್ಲಿ ಉನ್ನತ ಬಡ್ತಿಗೆ ಹಾದಿಯಾಗುತ್ತದೆ. ಈ ಯೋಗವು ಸೂರ್ಯನ ಕಾಲವಾದ ಒಂಭತ್ತು ವರುಷಗಳು ನಡೆಯುತ್ತವೆ.

ದಿನಾಂಕ ಎರಡು, ಎಂಟು ಮತ್ತು ಇಪ್ಪತ್ತನಾಲ್ಕು ಆದಾಗ ಅವರಿಗೆ ಐವತ್ತನಾಲ್ಕು ವರುಷಗಳ ವರೆಗೆ ಸೂರ್ಯನಯೋಗ. ಬುಧ(೨೪) ಚಂದ್ರ (೧೫) ಕುಜ (೬) ದೆಶೆಗಳು ನಲವತ್ತೈದು(೪೫) ಸೂರ್ಯನ ಯೋಗ ಒಂಭತ್ತು (೯) ವರುಷಗಳು. ಮೊತ್ತ ೫೪ ವರುಷಗಳು. ಇಲ್ಲಿ ಸೂರ್ಯನಿಗೆ ನಲ್ವತ್ತು ವರುಷಗಳ ನಂತರ ಶುರು ಆಗುವ ಸಿಂಹ ರಾಶಿಯ ಯೋಗ ಐವತ್ತು ವರುಷಗಳವರೆಗೆ ನಡೆಯುತ್ತದೆ. ಅಂದರೆ ಸೂರ್ಯದೆಶೆಯ ಪೂರ್ವಾರ್ಧದಲ್ಲಿ ಉತ್ತಮ ಸುಯೋಗ ನಡೆಯುತ್ತದೆ. ಸರಕಾರದಲ್ಲಿ ಉನ್ನತ ಅಧಿಕಾರ ಪ್ರಾಪ್ತಿ. ಇತರ ಉದ್ಯೋಗ ಮತ್ತು ಉದ್ಯಮಗಳಲ್ಲಿ ಪ್ರಗತಿಯಿಂದ ಕೀರ್ತಿ ಅದರಲ್ಲಿಯೂ ಐದನೆಯ ವರುಷ

ನಡೆಯುವಾಗ ಗುರುಯೋಗದಿಂದ ಪ್ರಬಲ ರಾಜಯೋಗ ನಡೆಯುತ್ತದೆ. ಉತ್ತರಾರ್ಧದ ನಾಲ್ಕು ವರ್ಷಗಳು ಕನ್ಯಾರಾಶಿಯಲ್ಲಿ ಹಿಂದಿನ ಯೋಗವನ್ನೇ ಮುಂದುವರೆಸುತ್ತವೆ. ಆದರೆ ಪ್ರಗತಿ ಏನನ್ನೂ ಕೊಡದು.

ಈ ಮುಂದಿಗೆ ಐವತ್ತನಾಲ್ಕು ವರುಷಗಳಿಗೆ ಸೂರ್ಯನ ಯೋಗ ಮುಕ್ತಾಯ. ನಂತರ ಗುರು ದೆಶೆ ಪ್ರಾರಂಭ. ಈ ದೆಶೆಯ ಕಾಲ ಕನಿಷ್ಠ ಐದು ವರುಷಗಳು. ಈ ಕಾಲದಲ್ಲಿ ಗುರು ಸಂಬಂಧದ ಉದ್ಯಮದಲ್ಲಿದ್ದರೆ ಆಗ ಅದು ಈ ಕಾಲದಲ್ಲಿ ಉತ್ತಮ ಸ್ಥಾನ ಮಾನಗಳನ್ನು ಕೊಟ್ಟು ಯೋಗ ನಡೆಸುತ್ತದೆ. ಬೇರೆ ಉದ್ಯೋಗದಲ್ಲಿ ಅದು ಸಾಮಾನ್ಯವಾಗಿ ನಡೆಸುತ್ತದೆ. ಆದರೆ ಧನಯೋಗ ಮೊದಲು ಮೊದಲು ಇದ್ದು ಅನಂತರ ಕಡಿಮೆ ಆಗುತ್ತದೆ. ಕಾರಣ ಗುರುವಿನ ಕಾಲ ಐವತ್ತರ ನಂತರ ಬರುವುದರಿಂದ ಇದು ಕನ್ಯಾರಾಶಿಯ ಯೋಗದಲ್ಲಿರುತ್ತದೆ. ಇದರ ತ್ರಿಕೋಣದ ರಾಶಿ ಮಕರದಲ್ಲಿ ಗುರುವಿಗೆ ನೀಚದ ರಾಶಿಯಾದ ಕಾರಣ ದಿನೇ ದಿನೇ ಈ ಯೋಗ ತನ್ನ ಬಲವನ್ನು ಕಳೆದುಕೊಳ್ಳುತ್ತದೆ. ಆದರೆ ಗಂಡು ಮಕ್ಕಳ ಮೂಲಕ ಇದು ಪ್ರಗತಿಯನ್ನು ಹೊಂದುತ್ತದೆ ಎಂದು ಕೆಲವರ ಮತ.

ಐವತ್ತಒಂಭತ್ತು ವರುಷಗಳ ನಂತರ ಬರುವ ಶುಕ್ರನ ದೆಶೆಗೆ ಅಷ್ಟು ಮಹತ್ವ ಇರದು. ಕಾರಣ ಶುಕ್ರನು ಪ್ರಾಯದಲ್ಲಿ ಸುಖ ಕೊಡುವ ಗ್ರಹ. ವಯಸ್ಸಾದ ನಂತರ ಮನೆಯಲ್ಲಿ ಇರುವ ಪ್ರಾಯದ ಹೆಣ್ಣು ಅಥವಾ ಗಂಡು ಮಕ್ಕಳಿಗೆ ಸುಯೋಗವನ್ನು ಕೊಡುತ್ತದೇ ವಿನಹ ಇವರಿಗೆ ನೇರದ ಸುಖವನ್ನು ಏನೂ ಕೊಡಲಾರದು. ಆದರೆ ಇವರನ್ನು ಈ ಯೋಗದ ದೆಸೆಯಿಂದ ಎಲ್ಲರೂ ಪ್ರೀತಿಯಿಂದ ನೋಡುತ್ತಾರೆ. ಇದೇ ಇವರಿಗೆ ಅಮೃತ ಆದೀತು. ಈ ರೀತಿ ದಿನಾಂಕದಿಂದ ದೆಶೆಗಳ ಫಲ ನಡೆಯುತ್ತವೆ.

## ಮೂರು ಮತ್ತು ಆರು ಸಂಖ್ಯೆಯ ದಿನಾಂಕದಂದು ಜನನಗಳ ದಶಾಕ್ರಮ

ಜನ್ಮ ದಿನಾಂಕ ಮೂರು ಅಥವಾ ಆರು. ಇಲ್ಲಿ ಆರರಲ್ಲಿ ಪೂರ್ವಾರ್ಧ ಮೂರರವರೆಗೆ ಕುಜನ ಶನಿಯೋಗದ ಫಲ. ಉತ್ತರಾರ್ಧ ಆರರವರೆಗೆ ಕುಜನಿಗೆ ಶುಕ್ರ ಯೋಗದ ಫಲ. ಕೆಲವರ ಮತದಂತೆ ಚಂದ್ರ ಮಂಗಳ ಯೋಗದ ಫಲ. ಇಲ್ಲಿ ಬಹುಶಃ ನಾಲ್ಕು ಸಂಖ್ಯೆಯ ವರುಷ ಬಂದಾಗ ಮಾತ್ರ ಕುಜನಿಗೆ ಚಂದ್ರನ ಯೋಗ ಆದೀತು. ಆದರೆ ಆರರ ಗ್ರಹಯೋಗ ಕುಜ ಶುಕ್ರ ಸಂಯೋಗ ಅನ್ನುವುದೇ ಸರಿ. ಕಾರಣ ಶುಕ್ರನಿಗೆ ಶನಿಯ ದೋಷವನ್ನು ಪರಿಹಾರ ಮಾಡಬಲ್ಲ ಶಕ್ತಿ ಇದೆ. ಕಾರಣ ಇವನು ಶನಿಗೆ ಗುರು. ರಾಕ್ಷಸರಿಗೆ ಗುರು. ಆದರೆ ಚಂದ್ರ ಮಾನಸಿಕ ಗ್ರಹ ಮನಸ್ಸು ವಿಕಾರಮಯ. ಇದರಿಂದ ಶನಿಗೆ ಬಲ ಹೆಚ್ಚು. ಈ ಕಾರಣ ಪೂರ್ವ ಋಷಿಗಳು ರಾತ್ರಿ ಜನನವಾದ ಮುಂದಿಗೆ ಶನಿ ಚಂದ್ರರು ತಾಯಿ ತಂದೆಗಳನ್ನು ತೋರಿಸುತ್ತೆ ಅಂದಿದ್ದು. ಚಂದ್ರನ ಸಂಬಂಧದಿಂದ ಮಂಗಳನಿಗೆ ಶನಿ ದೋಷ ಹೆಚ್ಚೇ ವಿನಾ ಕಡಿಮೆ ಆಗದು. ಪರಿಹಾರವಂತೂ ಆಗದ ಮಾತು. ಮೊತ್ತದಲ್ಲಿ ಆರು.

ಮೂರರ ದೋಷವನ್ನು ತೆಗೆಯುವ ಕಾರಣ ಈ ಶಕ್ತಿಯುಳ್ಳ ಪ್ರಭಾವದ ಶುಕ್ರನ ಸಂಯೋಗವೇ ಕುಜನ ಶುಭತ್ವಕ್ಕೆ ಕಾರಣ ಅನ್ನಬಹುದು.

ದಶಾ ಕ್ರಮದಂತೆ ಮೂರು ಮತ್ತು ಆರರ ದಿನಾಂಕದಂದು ಹುಟ್ಟಿದ ಮಂದಿಗೆ ಮೊದಲಿನ ದೆಶೆ ಕುಜನದು. ದಶಾಕಾಲ ಆರು ವರುಷ. ಇದರಲ್ಲಿ ಮೊದಲಿನ ಮೂರು ವರುಷಗಳು ಕಷ್ಟದ ಕಾಲ. ಮೊದಲು ಫಲ ಕೊಡುವ ತುಲಾ ರಾಶಿ ಯೋಗ ಹತ್ತು ವರುಷಗಳು. ಅದರಲ್ಲಿ ಮೂರು ವರುಷ ಕುಜನಿಗೆ ಶನಿಯೋಗದಿಂದ ಅಶುಭದ ಫಲ. ಈ ಕಾಲದಲ್ಲಿ ಭೂಮಿ ಕಾಣಿಗಳನ್ನು ಮಾರಿಕೊಂಡು ಊರು ಬಿಟ್ಟು ಹೊಸ ಊರಿನಲ್ಲಿ ಜೀವನ ಪ್ರಾರಂಭ. ಹಾಗಿಲ್ಲ, ಧಾನ್ಯ, ಯಂತ್ರ ಉದ್ಯಮ ಯಂತ್ರಾಲಯ ಉದ್ಯೋಗ ಮಾಡಿಕೊಂಡಿರುವ ಮಂದಿಯ ಮನೆಯಲ್ಲಿ ಇವರ ಜನನ. ವಾಹನಗಳಿಂದ ಮೂರನೆಯ ವರುಷದಲ್ಲಿ ಪ್ರಾಣ ಗಂಡ? ಕೆಲವರ ಮನೆಯಲ್ಲಿ ಯಾರಿಗಾದರೂ ವಿದೇಶಯಾತ್ರೆ ಆದೀತು. ಮಗುವಿಗೆ ಉಷ್ಣವ್ಯಾಧಿ ಬಾಧೆ. ಹಲ್ಲು ನೋವು. ಕಜ್ಜಿ ತುರಿ ಇತ್ಯಾದಿ ಚರ್ಮವ್ಯಾಧಿಗಳ ವ್ರಣರೂಪದ ನೋವು. ಹಠದಿಂದ ಎಲ್ಲರ ಕೈಲಿ ಏಟುಗಳನ್ನು ತಿನ್ನುವುದು. ಆರನೆಯ ವರುಷ ಬರುವವರೆಗೆ ಮಗುವಿಗೆ ಅಪಘಾತ, ಕೈ ಪೆಟ್ಟು, ಶಸ್ತ್ರ ಚಿಕಿತ್ಸೆ, ಇತ್ಯಾದಿ ರಕ್ತ ಚೆಲ್ಲುವ ಆಟಪಾಟಗಳಿಂದ ಪೀಡೆ. ಆರರ ನಂತರ ಸುಖ. ಆರೋಗ್ಯ ಲಾಭ. ಅನ್ಯ ಊರಿನಲ್ಲಿ ವಾಸದ ಬದಲು, ನಗರ ಪ್ರವೇಶದಿಂದ ಅನುಕೂಲ. ಹೀಗೆ ಆರು ವರುಷಗಳು ತುಲಾ ರಾಶಿಯಲ್ಲಿ ಮಂಗಳನ ಫಲದ ನಮೂನೆ ಅನುಭವಕ್ಕೆ ಬಂದೀತು.

ಆರು ವರುಷಗಳ ಕುಜನ ದೆಶೆಯ ನಂತರ ಬರುವುದು ಸೂರ್ಯನ ಒಂಭತ್ತು ವರುಷದ ದೆಶೆ. ಇಲ್ಲಿ ಪ್ರಥಮ ಹತ್ತು ವರುಷಗಳ ಫಲ ಕೊಡುವ ರಾಶಿ ತುಲಾ. ಇದರಲ್ಲಿ ಮೊದಲ ಆರು ವರುಷಗಳ ಕುಜನ ಫಲ. ಉಳಿದ ನಾಲ್ಕು ವರುಷಗಳ ಫಲ ಸೂರ್ಯನದು. ಇಲ್ಲಿ ಸೂರ್ಯನಿಗೆ ನೀಚದ ಫಲ. ಈ ಕಾರಣ ತಂದೆಗೆ ನೌಕರಿಯಲ್ಲಿ ಅದಲು ಬದಲು. ಮೇಲ ಧಿಕಾರಿಗಳ ತರಾಟೆ ಬೇರೆ. ವ್ಯಾಪಾರಿಗೆ ಸರಕಾರದ ತೆರಿಗೆ ಅಧಿಕಾರಿಯ ಕಿರಿಕಿರಿ. ಅಲ್ಲದೆ ಕೆಲವೆಡೆ ರಾಜಕೀಯದಿಂದ ಗಲಭೆಗಳು ಬೇರೆ. ಈ ಕಾಲದಲ್ಲಿ ಮಂಗಳ ಸೂರ್ಯರ ಅರಿಷ್ಟ ಫಲ. ಇದಕ್ಕೆ ಶಿವನ ಮಗನಾದ ಕುಮಾರಸ್ವಾಮಿಯನ್ನು ಆರಾಧಿಸಬೇಕು. ಇದರಿಂದ ತುಲಾ ರಾಶಿಯ ಫಲ ತಪ್ಪಿ ಚಕ್ರಯೋಗ ಬದಲು. ಮೊದಲ ಹತ್ತು ವರುಷಗಳ ಫಲ ಆಗ ಮೇಷದಲ್ಲಿ ನಡೆಯುತ್ತೆ. ಇಲ್ಲಿ ಕುಜನಿಗೆ ಸ್ವಂತ ಮನೆ. ಸೂರ್ಯನಿಗೆ ಉಚ್ಚದ ರಾಶಿ. ಇದರಿಂದ ಅರಿಷ್ಟ ಶಮನ ಮತ್ತು ಸುಯೋಗ. ಊರು ಬಿಟ್ಟರೂ ರಾಜಕೀಯ ಪ್ರಧಾನ ವಾದ ಪ್ರಸಿದ್ಧವಾದ ನಗರಕ್ಕೆ ನೌಕರಿ ಬದಲು ಆಗುವುದು. ಇದರಿಂದ ತಂದೆಗೆ ಅಧಿಕಾರ ಪ್ರಾಪ್ತಿ. ಈ ಮೇಷ ರಾಶಿಯ ಕಾಲ ಹತ್ತು ವರುಷಗಳು ಕಳೆಯುವ ಹೊತ್ತಿಗೆ ಸೂರ್ಯನ ಒಂಭತ್ತು ವರುಷಗಳಲ್ಲಿ ನಾಲ್ಕು ವರುಷಗಳು ಕಳೆದಿರುತ್ತೆ. ಉಳಿದ ಐದು ವರುಷಗಳು ಮುಂದಿನ ರಾಶಿಯಾದ ವೃಷಭದಲ್ಲಿ ನಡೆಯುತ್ತೆ.

ವೃಷಭದಲ್ಲಿ ಸೂರ್ಯನ ಐದು ವರುಷಗಳು. ಗುರುವಿನ ಐದು ವರುಷಗಳು. ಒಟ್ಟು ಹತ್ತು ವರುಷಗಳು. ವೃಷಭ ರಾಶಿಯಲ್ಲಿ ಅಧಿಪತಿ ಶುಕ್ರನ ದ್ವೇಷದಿಂದ ಈ ಎರಡು ಗ್ರಹಗಳ ಕಾಲ ಉತ್ತಮ ಫಲ ಕೊಡದು. ಸೂರ್ಯನು ಗುರುವಿನ ಜೊತೆಯಲ್ಲಿ ಶ್ರೀರಾಮನ

ದಯೆಯನ್ನು ತೋರಿಸುತ್ತಾನೆ. ಶ್ರೀರಾಮನ ಪೂಜೆಯಿಂದ ವೃಷಭ ರಾಶಿ ಚಕ್ರ ಬದಲು. ಅಪಸವ್ಯಚಕ್ರದ ಎರಡನೆಯ ಹತ್ತು ವರುಷಗಳನ್ನು ತೋರಿಸುವ ವೃಶ್ಚಿಕ ರಾಶಿ ದೆಶೆಯಲ್ಲಿ ಫಲ ನಡೆಯುತ್ತೆ. ಈ ಕಾಲದಲ್ಲಿ ತಂದೆಗೆ ಕುಲದೇವತಾ ಪ್ರಸಾದದಿಂದ ಅಧಿಕಾರ ಪ್ರಾಪ್ತಿ ಹಾಗಿಲ್ಲ. ಬಡ್ತಿ. ಹೇರಳ ಧನದ ಅನುಕೂಲ. ಮಗುವಿಗೆ ವಿದ್ಯಾಭಿವೃದ್ಧಿ. ಗುರುವಿನ ಯೋಗ ದಿಂದ ತಂದೆಗೆ ಸಂತಾನ ಲಾಭದಿಂದ ಸುಯೋಗ. ಮನೆಯಲ್ಲಿ ಗುರುಹಿರಿಯರಿಗೆ ಸನ್ಮಾನ ಯೋಗ ಬೇರೆ. ಇಲ್ಲಿಗೆ ಜನ್ಮಾದಿ ಇಪ್ಪತ್ತು ವರುಷಗಳು.

ಗುರುವಿನ ನಂತರ ಶುರುವಾಗುವುದು ಶನಿಯ ಒಂದು ವರುಷ ಮತ್ತು ಶುಕ್ರನ ಹನ್ನೆರಡು ವರುಷಗಳ ದಶೆ. ಇಪ್ಪತ್ತು ವರುಷಗಳ ನಂತರ ಹತ್ತು ವರುಷಗಳ ಫಲ ಕೊಡುವ ಧನುರಾಶಿ ಯಲ್ಲಿ ಈ ಎರಡು ಗ್ರಹಗಳ ಫಲ ನಡೆಯುತ್ತೆ. ಶನಿಯ ಕಾರಣ ಮೊದಲು ಮನೆಯಲ್ಲಿ ಹಿರಿಯರಿಗೆ ಸಾವು ಇಲ್ಲ. ತೀವ್ರದ ಕಾಯಿಲೆ. ತೀರ್ಥಯಾತ್ರೆ ಮಾಡಿದಲ್ಲಿ ಈ ದೋಷ ಹೋಗಿ ಶುಕ್ರನ ಶುಭದ ಕಾಲದಲ್ಲಿ ಮನೆಯಲ್ಲಿ ವಿವಾಹಾದಿ ಶುಭ ಕಾರ್ಯಗಳು ನಡೆಯುತ್ತೆ.

ಇಪ್ಪತ್ತೊಂದನೆಯ ವರುಷದಿಂದ ಒಂಭತ್ತು ವರುಷಗಳು ಶುಕ್ರನ ಕಾಲ ಧನು ರಾಶಿ ಯಲ್ಲಿ ನಡೆಯುತ್ತದೆ. ಈ ಕಾಲದಲ್ಲಿ ಹೆಣ್ಣು ಜನನವಾದರೆ ಮದುವೆಯಾಗುತ್ತದೆ. ಇಲ್ಲಿ ಕುಜನ ದೋಷ ಸಂಖ್ಯೆಯ (೨) ದಿನ ಜನನದ ಕಾರಣ ವಿಘ್ನ ಆದೀತು. ಅದಕ್ಕೆ ಕುಮಾರನ ಸೇವೆ ಮಾಡಬೇಕು. ಮದುವೆಯ ಯೋಗ ಬಂದಾಗ ಕುಜನ ದೋಷದ ಕಾರಣ ಬೇಡ ಎಂದು ಉಪೇಕ್ಷೆ ಮಾಡುವುದು. ಇದರಿಂದ ಮದುವೆ ಮುಂದೆ ಹಾಕಿದರೆ ಆಗುವುದೇ ಕಷ್ಟ ಆದೀತು. ವರನು ಕುಜನ ಮೇಲೆ ಹುಟ್ಟಿ ಕುಜನು ತುಲಾರಾಶಿ ಯೋಗದಿಂದ ಯಂತ್ರ ಉದ್ಯಮದಿಂದ ಬಾಳುವನು. ಸೂರ್ಯನ ತುಲಾ ಯೋಗದಿಂದ ವಿದ್ಯುತ್ ಸಂಬಂಧ ಇಂಜನಿಯರಿಂಗ್ ಕೆಲಸ ವಾದರೂ ಆದೀತು. ಇಲ್ಲಿ ಕುಮಾರನ ಸೇವೆಯಿಂದ ಮೇಷ ರಾಶಿಯೋಗ ಪ್ರಾಪ್ತಿ. ಆಗ ವರನು ಸರಕಾರದ ಉನ್ನತ ಅಧಿಕಾರಿ. ಹಾಗಿಲ್ಲ ರೆವಿನ್ಯೂ ಇಲಾಖೆಯ ಅಧಿಕಾರಿ ಆದಾನು. ಇಲ್ಲಿ ವರನು ಆರು ವರುಷಗಳ ಅಂತರ ಉಳ್ಳವನು. ಮದುವೆಯ ನಂತರ ವಧೂ ವರರು ತಮ್ಮ ತಮ್ಮ ಸಂಸಾರಗಳಿಂದ ಬೇರೆಯಾಗಿ ದಾಂಪತ್ಯ ಜೀವನ ಅಂದರು. ಇಲ್ಲಿ ವಧುವಿಗೆ ಇಪ್ಪತ್ತು ಮೂರು ಇಪ್ಪತ್ನಾರನೆಯ ವರುಷಗಳು ನಡೆಯುವಾಗ ಸಂತಾನದ ಯೋಗ ಬೇರೆ. ವಸ್ತು ವಾಹನಗಳಿಂದ ಸಿರಿಯ ಒಲುಮೆ ಆಗುತ್ತೆ. ಈ ರೀತಿ ಶುಕ್ರನ ಹನ್ನೆರಡು ವರುಷಗಳ ಕಾಲದಲ್ಲಿ ಒಂಭತ್ತು ವರುಷಗಳು ಧನು ರಾಶಿಯಲ್ಲಿ ನಡೆಯುತ್ತೆ. ಉಳಿದ ಮೂರು ವರುಷಗಳ ಫಲ ಮುಂದಿನ ಮಕರದಲ್ಲಿ ನಡೆಯುತ್ತೆ.

ಜನ್ಮಪ್ರಾಯ ಮೂವತ್ತು ವರುಷಗಳ ನಂತರ ನಡೆಯುವ ಮಕರ ರಾಶಿಯ ಯೋಗ ದಲ್ಲಿ ಶುಕ್ರನ ಉಳಿದ ಮೂರು ವರುಷಗಳೂ ರಾಹುವಿನ ಏಳು ವರುಷಗಳು ಫಲದ ಕಾಲ. ಈ ಕಾಲದಲ್ಲಿ ಮೂವತ್ತ ಮೂರನೆಯ ವರುಷದ ನಂತರ ರಾಹುವಿನ ಯೋಗದಲ್ಲಿ ಕೆಲವರಿಗೆ ವಿದೇಶದ ಯಾತ್ರೆ ಆದೀತು. ಮೂರನೆಯ ತಾರೀಖು ಜನನದವರಿಗೆ ಕುಜನ ಯೋಗ. ಕುಜ ರಾಹುಗಳು ಶತ್ರುಗಳು. ಈ ಕಾರಣ ಈ ಏಳು ವರುಷಗಳ ಕಾಲದಲ್ಲಿ ಏನು ಕೆಲಸವಾದರೂ ಅದಕ್ಕೆ ಶತ್ರುಗಳಿಂದ ವಿಘ್ನಗಳು. ವ್ಯಥಾ ದ್ವೇಷದಿಂದ ವಿರಸ. ಆದರೆ ಯಂತ್ರ ವಿಜ್ಞಾನದ ಮುಂದಿಗೆ ವಿಶೇಷದ ಸುಯೋಗ ನಡೆದು ದೇಶ ವಿದೇಶಗಳಲ್ಲಿ ಉದ್ಯೋಗ

ದಿಂದ ಧನ ಮತ್ತು ಕೀರ್ತಿಗಳ ಪ್ರಾಪ್ತಿ. ಈ ಕಾಲದಲ್ಲಿ ಸ್ವದೇಶದಲ್ಲಿದ್ದರೂ ವಿದೇಶೀಯರ ಸಂಪರ್ಕ ಮತ್ತು ನಡವಳಿಕೆಗಳ ಅನುಕರಣದಿಂದ ಸಂತಸದ ಯೋಗ. ಆದರೆ ಮೂವತ್ತೇಳನೆಯ ವರುಷ ನಡೆಯುವಾಗ ವಾಹನಗಳಿಂದ. ಯಂತ್ರಗಳಿಂದ ಅಪಘಾತದ ಯೋಗದಿಂದ ಕಷ್ಟ ಅಂದರು.

ನಲವತ್ತು ವರುಷಗಳ ನಂತರ ಎಂಟು ವರುಷಗಳ ಕಾಲ ಬುಧನದು. ಇಲ್ಲಿ ಬುಧನು ಸೂರ್ಯನಿಂದ ಐದನೆಯ ರಾಶಿ. ಇದು ಒಪ್ಪತಕ್ಕ ಗಣಿತಾಂಶವಲ್ಲ. ಈ ಕಾರಣ ಬುಧನು ಫಲ ಕೊಡುವಾಗ ಕುಂಭದಲ್ಲಿದ್ದರೂ ಸಹ ಗಣಿತದಲ್ಲಿ ಅವನು ಅದರ ತ್ರಿಕೋಣದ ತುಲಾರಾಶಿಯಲ್ಲಿ ಇದ್ದಂತೆ ಯೋಗ. ಜನ್ಮ ಪ್ರಾಯ ನಲವತ್ತರಿಂದ ಎಂಟು ವರುಷಗಳ ಬುಧನ ಯೋಗ ಕುಂಭದಲ್ಲಿ. ಈ ಕಾಲದಲ್ಲಿ ಮನೆ ಕೊಂಡುಕೊಳ್ಳುವ ಅಥವಾ ಮಾರುವ ಯೋಗದಿಂದ ಧನಲಾಭ. ಬುಧನು ನೀಚದ ಸೂರ್ಯನ ಸಂಬಂಧದಿಂದ ಪಿತ್ತವ್ಯಾದಿ. ನರಗಳ ದುರ್ಬಲತೆ. ಇತ್ಯಾದಿ ಕಾಯಿಲೆಗಳನ್ನು ಕೊಡಲು ಶಕ್ತನು. ಮತ್ತೆ ಕೆಲವರಿಗೆ ಈ ರೋಗಗಳನ್ನು ವಾಸಿ ಮಾಡುವ ಔಷಧಗಳ ಮಾರಾಟದಿಂದ ಜೀವನವನ್ನು ಕೊಡುತ್ತಾನೆ. ಬುಧನ ದೋಷದಿಂದ ಇವರಿಗೆ ಚರ್ಮ ವ್ಯಾಧಿಯಿಂದ ಕೂಡಿದ ಬಂಧುಗಳನ್ನೂ ಸಹ ತೋರಿಸುತ್ತಾನೆ. ಕೆಲವು ಸಲ ಇದು ಹೃದಯದ ರೋಗವನ್ನು ತೋರಿಸುತ್ತದೆ. ನಲವತ್ತ ನಾಲ್ಕು ವರುಷ ನಡೆಯುವಾಗ ಈ ವ್ಯಾಧಿಯಿಂದ ತೀವ್ರದ ಕಾಯಿಲೆ ಆದೀತು. ಇದಕ್ಕೆ ನರಹರಿ ಸೇವೆ ಸೂಕ್ತ ಶಾಂತಿ ಅಂದರು. ವಸ್ತುಗಳ ಮಾರಾಟದಿಂದ ಕೆಲವರಿಗೆ ಧನವನ್ನು ಕೊಟ್ಟೀತು. ಕುಂಭ ರಾಶಿ ದೆಶೆಯಲ್ಲಿ ಎಂಟು ವರುಷಗಳು ಬುಧನ ಫಲ. ನಂತರ ಚಂದ್ರನ ಯೋಗ ಹದಿನೈದು ವರುಷಗಳು. ಅದರಲ್ಲಿ ಕುಂಭದಲ್ಲಿ ಎರಡು ವರುಷಗಳು. ಮೀನದಲ್ಲಿ ಹತ್ತು ವರುಷಗಳು. ಮೂರು ವರುಷಗಳು ಮೇಷ ರಾಶಿ ದೆಶೆಯಲ್ಲಿ ಅನುಭವವಾದೀತು.

ಈ ಚಂದ್ರನ ಕಾಲದಲ್ಲಿ ಮುಂದಿಗೆ ವಿಶೇಷದ ಯೋಗ. ವ್ಯಾಪಾರಿಗೆ ಸಮುದ್ರ ತೀರದ ರೇವುಪಟ್ಟಣದಲ್ಲಿ ಪ್ರಗತಿ. ಹಾಗಿಲ್ಲ. ಸಮುದ್ರಾಂತರ ಯೋಗದಿಂದ ಧನಾಗಮ. ಚಂದ್ರನ ಕೊನೆಯ ಘಟ್ಟದಲ್ಲಿ ಮೇಷ ರಾಶಿಯೋಗದಿಂದ ಮಕ್ಕಳಲ್ಲಿ ಒಬ್ಬರು ವೈದ್ಯವಿದ್ಯೆಯಲ್ಲಿ ಮುಂದಕ್ಕೆ ಬರುವರು. ಜೀವಿತ ಕಾಲದಲ್ಲಿ ಸುಬ್ರಹ್ಮಣ್ಯ ಸ್ವಾಮಿ ಅನುಗ್ರಹ ಇವರಿಗೆ ವಿಶೇಷ. ಅವನ ಭಕ್ತಿಯಿಂದ ಶಿವನ ಕರುಣೆಯೂ ಪ್ರಾಪ್ತಿ. ಈ ರೀತಿ ಮೂರು ಮತ್ತು ಆರು ದಿನಾಂಕ ದಂದು ಹುಟ್ಟಿದ ಮುಂದಿಗೆ ಸಂಖ್ಯಾಗ್ರಹಗಳ ದಶಾಕ್ರಮ ಫಲ.

## ನಾಲ್ಕನೆಯ ತಾರೀಖು ಜನನಗಳ ಸಂಖ್ಯಾಗ್ರಹಗಳ ದಶಾಕ್ರಮ

ನಾಲ್ಕನೆಯ ತಾರೀಖು ಜನನ. ಇವರಿಗೆ ಸಂಖ್ಯಾಗ್ರಹ ದಶಾಕ್ರಮದಲ್ಲಿ ಚಂದ್ರನ ದೆಶೆಯೇ ಮೊದಲು. ಇವನ ವಿಶೇಷ ಸಂಖ್ಯೆ ಹದಿನೈದು. ಸಾಧಾರಣ ಸಂಖ್ಯೆ ನಾಲ್ಕು ಈ ಕಾರಣ ದಶಾವರುಷ ಹದಿನೈದು ವರುಷಗಳಾದರೂ ಭಕ್ತಿ ವರುಷಗಳು ನಾಲ್ಕು ಆಗುತ್ತವೆ. ಕ್ರಮವಾಗಿ ಚಂದ್ರ - ೧೫, ಕುಜ - ೬, ಸೂರ್ಯ - ೯, ಗುರು - ೫. ಶನಿ - ೧. ಶುಕ್ರ - ೧೨, ರಾಹು - ೭, ಬುಧ - ೮ ವರುಷಗಳು. ಇಲ್ಲಿಗೆ ೬೩ ವರುಷಗಳ ದಶಾಕಾಲ ಆಗುತ್ತದೆ.

ದಶಾ ಫಲ ನಡೆಸುವಾಗ ಮೇಷಾದಿರಾಶಿಗಳಿಗೆ ತಲಾ ಹತ್ತು, ಹತ್ತು, ವರುಷಗಳಂತೆ ಈ ದಶಾ ಕ್ರಮದ ವರುಷಗಳನ್ನು ಹಂಚಿ ಆ ರಾಶಿಗಳಲ್ಲಿ ಬರುವ ಗ್ರಹಗಳನ್ನು ಫಲದಲ್ಲಿ ಉಪಯೋಗಿಸಬೇಕು. ಉದಾಹರಣೆಗೆ ಚಂದ್ರನ ಹದಿನೈದು ವರುಷಗಳಲ್ಲಿ ಪ್ರಥಮ ಹತ್ತು ವರುಷಗಳು ಮೇಷದಲ್ಲಿ ಉಳಿದ ಐದು ವರುಷಗಳು ವೃಷಭದಲ್ಲಿ. ಅಪಸವ್ಯ ಚಕ್ರದಲ್ಲಿ ತುಲಾ ರಾಶಿಯಿಂದ ಎಣಿಸಬೇಕು. ಆಗ ಮೊದಲು ಹತ್ತು ವರುಷಗಳು ತುಲಾದಲ್ಲಿ ಉಳಿದ ಐದು ವರುಷಗಳು ವೃಶ್ಚಿಕದಲ್ಲಿ. ಕೆಲವರು ಮೇಷಾದಿ, ಇತರರು ತುಲಾದಿ ಅವರವರ ಕ್ರಮದಂತೆ ಗಣಿತ ಸಾಧನೆ ಮಾಡಿ ಫಲ ಹೇಳುವುದು ಲೇಸು.

ತುಲಾರಾಶಿಯ ಚಂದ್ರನ ದಶೆಯಲ್ಲಿ ಮೊದಲು ನಾಲ್ಕು ವರುಷಗಳು ಚಂದ್ರನದು. ಆರು ವರುಷಗಳು ಕುಜನದು. ಈಗ ತುಲಾರಾಶಿಯಲ್ಲಿ ಚಂದ್ರ ಕುಜರಿದ್ದಂತೆ ಫಲ ನಡೆಯುತ್ತದೆ. ಇದರ ಯೋಗದಿಂದ ಇವರ ಮನೆಯಲ್ಲಿ ವ್ಯಾಪಾರ ಮಾಡುವ ಮಂದಿ ಇರುತ್ತಾರೆ. ಹಾಗಿಲ್ಲ, ಪೇಟೆ ಬೀದಿಯಲ್ಲಿರುವ ಮನೆಯಲ್ಲಿ ಇವರ ವಾಸ. ಚಂದ್ರನು ತುಲಾರಾಶಿಯಲ್ಲಿ ಹುಟ್ಟಿದಾಗ ತಾಯಿಗೆ ಹೆಚ್ಚಿನ ರಕ್ತಸ್ರಾವವನ್ನು ತೋರಿಸಿ ಪ್ರಾಣಕ್ಕೆ ಸಂಚು ತಂದಾನು. ಆದರೆ ದೇವೀ ಆರಾಧನೆಯ ಫಲದಿಂದ ಇದು ನಿಂತು ತಾಯಿಗೆ ಆರೋಗ್ಯ ಕೂಡಿ ಬರುತ್ತೆ. ಕಾರಣ ಚಂದ್ರ ಮಂಗಳ ಯೋಗ ದೇವಿಯ ಋಣವನ್ನು ತೋರಿಸುತ್ತದೆ. ವ್ಯಾಪಾರಿ ಇಲ್ಲ. ಆಗ ಇದು ಮಂಗಳನ ಅರಿವ್ವದಿಂದ ಭೂಮಿ ಕಾಣೆ ಮಾರಿಕೊಂಡು ಊರು ಬಿಟ್ಟು ಬೇರೆ ಊರಿನಲ್ಲಿ ನೆಲಸಬೇಕಾದ ಸ್ಥಿತಿ ಬಂದೀತು. ಇಲ್ಲಿ ದೇವೀ ಆರಾಧನೆಯನ್ನು ಮಾಡಿದರೆ ಫಲಭಾಗದಲ್ಲಿ ಚಂದ್ರನು ಅಪಸವ್ಯ ಚಕ್ರದ ತುಲಾರಾಶಿಯನ್ನು ಬಿಟ್ಟು ಸವ್ಯಚಕ್ರದ ಮೇಷ ರಾಶಿಯಲ್ಲಿ ಫಲವನ್ನು ಕೊಡುತ್ತಾನೆ. ಆಗ ಇವರು ಮೇಷ ರಾಶಿಯ ಅಶ್ವಿನೀ ನಕ್ಷತ್ರದ ಯೋಗದಿಂದ ವೈದ್ಯ ಬಂಧುವಿನ ಆಶ್ರಯದಲ್ಲಿ ಬೆಳೆಯುತ್ತಾರೆ ಅಂದರು. ಹಾಗಿಲ್ಲ, ಆಸ್ಪತ್ರೆ ಹತ್ತಿರ ವಾಸ ಆದೀತು. ಮೊತ್ತದಲ್ಲಿ ಹತ್ತು ವರುಷದ ತುಲಾ ರಾಶಿ ಯೋಗದಲ್ಲಿ ಮಂದಿಗೆ ಆರು ವರುಷಗಳಲ್ಲಿ ತಾಯಿಗೆ ರಕ್ತವ್ಯಾಧಿ, ಮೂರು ವರುಷಗಳ ಕುಜನ ಯೋಗದಲ್ಲಿ ಶನಿಯ ಕಾರಣ ಊರು ಬದಲು.

ಕುಜನ ಆರು ವರುಷಗಳಲ್ಲಿ ಪ್ರಥಮ ಮೂರು ವರುಷ ಹಾನಿ. ಕಾರಣ ಮೂರು ಸಂಖ್ಯೆಯ ಕುಜ ಕ್ಷಾ ಭೋಗ. ಇದರಿಂದ ಮಗುವಿಗೆ ಹೊಟ್ಟೆ ನೋವು. ಇಲ್ಲ, ಕೆಳಗೆ ಬಿದ್ದು ಅಂಗಗಳಿಗೆ ಪೆಟ್ಟು ಇತ್ಯಾದಿ. ಆದರೆ ನಾಲ್ಕನೆಯ ವರುಷದಿಂದ ಆರೋಗ್ಯ ಕೂಡಿ ಬರುತ್ತದೆ. ಕುಜನ ಆರು ವರುಷಗಳಲ್ಲಿ ತುಲಾರಾಶಿ ದೆಶೆ ಮುಗಿಯುತ್ತದೆ. ನಂತರ ಬರುವ ಸೂರ್ಯನ ದೆಶೆ ಒಂಭತ್ತು ವರುಷಗಳು ನಡೆಯುತ್ತದೆ. ಈ ಕಾಲದಲ್ಲಿ ತಂದೆಗೆ ಅನುಕೂಲ. ಕೆಲವರಿಗೆ ನೌಕರಿ ಲಾಭ. ಅಂತೂ ಹತ್ತೊಂಭತ್ತು ವರುಷಗಳವರೆಗೆ ನಡೆಯುವ ಸೂರ್ಯನು ಇವರಿಗೆ ಶುಭವನ್ನು ಕೊಡುತ್ತಾನೆ. ಇಪ್ಪತ್ತನೆಯ ವರುಷ ದಿಂದ ಐದು ವರುಷಗಳು ಗುರುವಿನ ಕಾಲ. ಇದರಲ್ಲಿ ಮೊದಲ ಒಂದು ವರುಷ ವೃಶ್ಚಿಕದಲ್ಲಿ ಉಳಿದ ನಾಲ್ಕು ವರುಷಗಳು ಧನುವಿನಲ್ಲಿ ನಡೆದೀತು. ಧನು ರಾಶಿ ಗುರುವಿಗೆ ಸ್ವಂತ ಮನೆ, ಮೂಲ, ತ್ರಿಕೋಣ. ಈ ಕಾರಣ ಗುರು ಬಲ ಶುಭ, ವಿದ್ಯೆ, ಹಣ ಮತ್ತು ಸಂತಾನ ಲಾಭ ಇತ್ಯಾದಿ ಗುರುವಿನ ಯೋಗ ಫಲ ಕಂಡೀತು. ಗುರುವಿನ ಕಾಲ ಐದು ವರುಷಗಳು. ಆದರೆ ಇದು ಗುರುವಿನ ಮನೆಯಾದ ಧನು ರಾಶಿ ದೆಶೆಯ ಕಾರಣ

ಕೆಲವರು ಇಲ್ಲಿ ಗುರುವಿಗೆ ಪೂರ್ಣ ಹತ್ತು ವರುಷಗಳನ್ನು ಕೊಡುತ್ತಾರೆ. ಆಗ ಈ ರಾಶಿ ದೆಶೆ ನಡೆಯುವ ಮೂವತ್ತನೆಯ ವರುಷ ಪರ್ಯಂತ ಇವರಿಗೆ ಸುಯೋಗವನ್ನು ಕೊಡುತ್ತದೆ.

ನಂತರ ಬರುವ ಶನಿಯ ದೆಶೆ ಒಂದು ವರುಷ. ಅದರ ಬೆನ್ನಿಗೆ ಬಂದ ಹನ್ನೆರಡು ವರುಷದ ಶುಕ್ರನ ದೆಶೆ ಮೂವತ್ತರಿಂದ ನ'ಡೆಯುವ ಮಕರದಲ್ಲಿ ನಡೆಯುತ್ತದೆ. ಇಲ್ಲಿ ಮೊದಲು ಸಾವು ನೋವುಗಳೇ ಹೆಚ್ಚು. ಕಾರಣ ಶನಿಯ ಕಾಲದ ಒಂದು ವರುಷ. ಅನಂತರ ಶುಭದ ಶುಕ್ರನಿಂದಾಗಿ ವಿವಾಹಾದಿ ಯತ್ನಗಳು ಕೀರ್ತಿಯನ್ನು ತರುತ್ತವೆ. ಒಂದು ಸಮಯ ಶನಿಯ ಅನಿಷ್ಟದ ಫಲ ನಡೆಯದೇ ಹೋದರೆ ಉಳಿದ ಶುಕ್ರನ ವರುಷಗಳಲ್ಲಿ ನಡೆಯುವುದು ಸಂದೇಹ. ಕಾರಣ ಈ ಶನಿಯ ಫಲ ಶುಕ್ರನಿಗೆ ಬೆರೆತು ವಿವಾಹ ಯತ್ನಗಳಲ್ಲಿ ತಡೆಯನ್ನು ತಂದು ಕಷ್ಟ ಆದೀತು. ಹಾಗಿಲ್ಲ, ಪ್ರೀತಿ ಮಾಡಿದ ಹೆಣ್ಣು ಮತ್ತೊಬ್ಬನ ಮಡದಿಯಾಗಿ ಇವರಿಗೆ ಬೇಸರದಿಂದ ಮದುವೆ ಇಲ್ಲದೇ ಇದ್ದಾರು. ಹಾಗಿಲ್ಲ. ಇದರಿಂದ ಹೆಂಗಳ ಜಾತಿ ಯನ್ನೇ ದ್ವೇಷ ಮಾಡಿಯಾರು. ಈ ಕಾಲದಲ್ಲಿ ಇವರಿಗೆ ಮದುವೆಯೇ ಇಲ್ಲದ ಬ್ರಹ್ಮಚಾರಿ ಯತಿಗಳ ಸೇವೆ ಉತ್ತಮ. ವೇದಾಂತ ಅಧ್ಯಯನ ಕೆಲವರಿಗೆ ಹುಚ್ಚು ಹಿಡಿಸೀತು. ಯತಿ ಸೇವೆಯಿಂದ ಚಕ್ರ ಬದಲು. ಆಗ ಶುಕ್ರನು ಕಟಕದಲ್ಲಿ ಫಲ ನಡೆಸಿ ಅನುಕೂಲ ಆದೀತು. ಆದರೆ ಆಗ ಇವರ ಮನೆಯಲ್ಲಿ ಮದುವೆ ಆಗದ ಹೆಣ್ಣೊಂದು ಇರಬೇಕಾಗುತ್ತದೆ.

ನಲವತ್ತು ವರುಷಗಳಿಗೆ ಪ್ರಾಪ್ತಿಯಾಗುವ ಕುಂಭ ರಾಶಿಯ ದಶಾಕಾಲದ ಹತ್ತು ವರುಷಗಳಲ್ಲಿ ಶುಕ್ರನ ಹನ್ನೆರಡು ವರುಷಗಳಲ್ಲಿ ಉಳಿದ ಎರಡು ವರುಷಗಳ ಫಲ ನಡೆಯುತ್ತದೆ. ಅನಂತರ ಬರುವ ರಾಹುವಿನ ಏಳು ವರುಷಗಳ ಕಾಲ. ಇಲ್ಲಿ ರಾಹುವಿಗೆ ಶತಭಿಷಾ ನಕ್ಷತ್ರ ಯೋಗದ ನಾಲ್ಕು ವರ್ಷ ಕಾಲದಲ್ಲಿ ಮೊದಲಿನ ಧನುರಂಶಯೋಗದಿಂದ ಸಂತಾನ ಆಗುತ್ತದೆ. ಮದುವೆ ಆಗದೆ ಉಳಿದರೆ ಮನೆಯಲ್ಲಿ ಒಂದು ಸಂತಾನ ಪ್ರಾಪ್ತಿ. ಎರಡು ಮೂರನೆಯ ವರುಷಗಳಲ್ಲಿ ಶನಿಯಂಶದ ಯೋಗ. ಆಗ ಕೆಲವರಿಗೆ ವಿದೇಶದ ಯಾತ್ರೆ ಆಗುತ್ತೆ. ಹಾಗಿಲ್ಲ, ವೃದ್ಧರಿದ್ದರೆ ಅವರಿಗೆ ಪರಲೋಕದ ಯಾತ್ರೆ ಆದೀತು. ನಾಲ್ಕನೆಯ ವರುಷ ಪುನಃ ಗುರು ಅಂಶ ಯೋಗದಿಂದ ಹಣ ಸಂಚಯ ಆಗುತ್ತೆ. ಕೆಲವರ ಮತದಂತೆ ರಹಸ್ಯ ರಾಶಿ ಕುಂಭದ ಯೋಗದಿಂದ ಇದು ನಿಷೇಧ ಪದಾರ್ಥಗಳ ಕಳ್ಳ ಸಾಗಾಣಿಕೆಯ ಕೆಲಸದಿಂದ ಧನಪ್ರಾಪ್ತಿ ಅಂದರು. ಹಾಗಿಲ್ಲ, ಕೃತ್ರಿಮ ಜೀವನ. ತಜ್ಞರ ಮತದಂತೆ ಧನುರಾಶಿ ಗುರುವಿನ ದಶಾಯೋಗ ಹಿನ್ನೆಲೆಯಿಂದ ಈ ಕಾಲದಲ್ಲಿ ಇವರು ರಹಸ್ಯಶೋಧಕ ವಿಜ್ಞಾನದ ಕೆಲಸ ಮಾಡುವ ಯೋಗ ಅಂದರು. ಕುಂಭ ರಾಶಿಯ ದಶಾ ಕಾಲದ ಕೊನೆಯ ಎರಡು ವರುಷಗಳು ಗುರುವಿನ ದಶಾನಕ್ಷತ್ರದ ಯೋಗದಿಂದ ವಿಜ್ಞಾನ ದಲ್ಲಿ ಕೀರ್ತಿ ಧನಗಳನ್ನು ಕೊಟ್ಟು ಸುಯೋಗ ನಡೆಯುತ್ತದೆ.

ಐವತ್ತನೆಯ ವರುಷದಲ್ಲಿ ಶುರು ಆಗುವ ಬುಧನ ದೆಶೆ ಮೀನದಲ್ಲಿ. ಇದು ಅವನಿಗೆ ನೀಚದ ರಾಶಿ. ಈ ಕಾರಣ ಇವರು ದೀನ ದಲಿತರ ಸೇವೆ ಮಾಡುವ ಸಾರ್ವಜನಿಕ ಸಂಸ್ಥೆಗಳಲ್ಲಿ ಆಡಳಿತವನ್ನು ಮಾಡುತ್ತಾರೆ. ಲೇಖಕರಾದರೆ ಆಗ ಅಪವಾದ ಪರಿಹಾರ ಮಾಡುವ ಶಾಸ್ತ್ರ ಗ್ರಂಥಗಳನ್ನು ಬರೆದು ಕೀರ್ತಿ ಧನಗಳು ಬರುವ ಯೋಗ ಅಂದರು. ಇಲ್ಲಿ ಬುಧನ ಕಾರಣ ಮನೆಗಳನ್ನು ಕಟ್ಟುವ ಯೋಗ ಬೇರೆ. ಅದರೆ ಇಲ್ಲಿ ಕೆಲವರಿಗೆ ಹೃದಯ

ರೋಗ ಕಾಣಿಸಿಕೊಂಡು ತ್ರಾಸ ಆದೀತು. ಆಗ ಇವರು ಶ್ರೀಹರಿಯನ್ನು ಆರಾಧನೆ ಮಾಡುವುದು ಲೇಸು.

ಕೆಲವರ ಮತದಂತೆ ಪ್ರಾರಂಭದ ಚಂದ್ರನಿಗೆ ಹದಿನೈದು ವರುಷಗಳನ್ನು ಕೊಟ್ಟು ಧನರಾಶಿಯ ಗುರುವಿನ ಕಾಲವನ್ನು ಐದು ವರುಷಗಳಿಗೆ ಇಳಿಸಿ ಫಲ ಹೇಳುತ್ತಾರೆ. ಆಗ ಪ್ರಥಮ ಹತ್ತು ವರುಷ ತುಲಾದಲ್ಲಿ ಉಳಿದ ಐದು ವರುಷ ಚಂದ್ರ ಮತ್ತು ಐದು ವರುಷ ಕುಜ ವೃಶ್ಚಿಕ ದಲ್ಲಿ ಉಳಿದ ಒಂದು ವರುಷ ಕುಜ ಮತ್ತು ಒಂಭತ್ತು ವರುಷ ಸೂರ್ಯನ ದೆಶೆ ಧನುವಿನಲ್ಲಿ. ಗುರುವಿನ ಐದು ವರುಷ ಮಕರದಲ್ಲಿ ಜೊತೆಗೆ ಶನಿಯ ಒಂದು ವರುಷ ಮತ್ತು ಶುಕ್ರನ ಮೊದಲು ನಾಲ್ಕು ವರುಷ ನಡೆಯುತ್ತದೆ. ಕುಂಭದಲ್ಲಿ ಶುಕ್ರನ ಎಂಟು ವರುಷ ರಾಹುವಿನ ಏಳು ವರುಷದಲ್ಲಿ ಎರಡು ವರುಷ ನಡೆಯುತ್ತೆದೆ. ಮೀನದಲ್ಲಿ ರಾಹುವಿನ ಐದು ವರುಷಗಳು ಉಳಿದ ಐದು ವರುಷಗಳು ಬುಧನ ದಶೆ ನಡೆಯುತ್ತದೆ. ಈ ಕಾರಣ ಈ ನಾಲ್ಕು ಸಂಖ್ಯೆಯ ದಶಾಕ್ರಮದಲ್ಲಿ ಫಲಭೇದ ಆಗುತ್ತದೆ.

## ಗುರುವಿನ ಸಂಖ್ಯಾ ದಶಾಕ್ರಮದಲ್ಲಿ ವಿಶೇಷ

ಗುರುವಿನ ಸಂಖ್ಯೆಗಳಲ್ಲಿ ಮೂರು ಹಂತಗಳು. ಗುರುವಿನ ಶುದ್ಧ ಸಂಖ್ಯೆಗಳು ಎರಡನೆಯದು ಸಂಯುಕ್ತ ಸಂಖ್ಯೆಗಳು. ಮೂರನೆಯದು ಗುರು ಚಂದ್ರ ಯೋಗದ ಸಂಯುಕ್ತ ಸಂಖ್ಯೆಗಳು. ಮೊದಲಿನ ವರ್ಗದಲ್ಲಿ ಕೇವಲ ಗುರುವಿನ ಸಂಖ್ಯೆಗಳು. ಉದಾಹರಣೆಗೆ ಐದು (೫) ಹತ್ತು(೧೦) ಮತ್ತು ಇಪ್ಪತ್ತೈದು(೨೫). ಎರಡನೆಯ ವರ್ಗದಲ್ಲಿ ಗುರುವಿಗೆ ಮಂಗಳನ ಯೋಗದಿಂದ ಬಂದ ಸಂಯುಕ್ತ ಸಂಖ್ಯೆಗಳು. ಉದಾಹರಣೆಗೆ ಹದಿಮೂರು (೧೩)ಹದಿನಾರು (೧೬) ಇದರ ವರ್ಗದಲ್ಲಿ ಮಹತ್ತಮ ಸಂಖ್ಯೆ ಹತ್ತೊಂಭತ್ತು(೧೯). ಮೂರನೆಯ ವರ್ಗದಲ್ಲಿ ಇಪ್ಪತ್ತರ ನಂತರ ಬರುವ ಎಲ್ಲಾ ಏಕಾಂಕ ಸಂಖ್ಯೆಗಳು. ಉದಾಹರಣೆಗೆ ಇಪ್ಪತ್ತೊಂದರಿಂದ ಇಪ್ಪತ್ತೊಂಭತ್ತರವರೆಗೆ ಇರುವ ಸಂಖ್ಯಗಳು ಕೆಲವರ ಮತದಂತೆ ಇಪ್ಪತ್ತೈದೂ ಸಹ ಈ ಮೂರನೆಯ ವರ್ಗದಲ್ಲಿಯೇ ಇರುತ್ತೆ.

ಗುರುವಿನ ಶುದ್ಧ ಸಂಖ್ಯೆಗಳ ದಶಾಕ್ರಮದಲ್ಲಿ ಜನನದ ತಾರೀಖು ಐದಾಗಲೀ ಹತ್ತಾಗಲೀ ಇದರ ಮೊದಲಿನ ದೆಶೆ ಗುರುವಿನದು. ಇದು ಹತ್ತು ವರುಷಗಳ ಕಾಲ. ಇದರಲ್ಲಿ ಐದನೆಯ ತಾರೀಖಿಗೆ ಗುರು ಶುಭದ ಫಲವನ್ನು ಕೊಡುತ್ತಾನೆ. ಆದರೆ ಅದೇ ಹತ್ತನೆಯ ತಾರೀಖು ಜನನಕ್ಕೆ ಗುರುವಿಗೆ ಶನಿಯೋಗದಿಂದ ಅಶುಭ ಫಲವನ್ನು ಕೊಡುತ್ತಾನೆ. ಮಾಮೂಲಿನಂತೆ ಜನನದ ಹನ್ನೆರಡು ವರುಷಗಳ ಕಾಲದಲ್ಲಿ ಇದರ ಜೊತೆಗೆ ಬಿಡಿ ಸಂಖ್ಯೆಗಳ ಫಲಗಳು ಆಯಾ ಸಂಖ್ಯೆಯ ವರುಷ ಬಂದಾಗ ನಡೆದೀತು.

ಗುರುವಿನ ಶುದ್ಧ ಸಂಖ್ಯೆಗಳ ದಶಾಕ್ರಮದಂತೆ ಮೊದಲು ಹತ್ತು (೧೦) ವರುಷ ಗುರು. (೧) ಒಂದು ವರುಷ ಶನಿ. (೧೨) ಹನ್ನೆರಡು ವರುಷ ಶುಕ್ರ. (೭) ಏಳು ವರುಷ ರಾಹು (೮) ಎಂಟು ವರುಷ ಬುಧ (೧೫) ಹದಿನೈದು ಇಲ್ಲ. ನಾಲ್ಕು(೪) ವರುಷ ಚಂದ್ರ ನದು (೬) ಆರು ವರುಷ ಕುಜನದು (೯) ಒಂಭತ್ತು ವರುಷ ಸೂರ್ಯನದು.

ಮೊದಲಿನ ಹತ್ತು ವರುಷ ಗುರುವಿನ ದೆಶೆ. ಇದರಲ್ಲಿ ಐದನೆಯ ತಾರೀಖಿನ ಜನನಕ್ಕೆ ಗುರು ಶುಭನು. ಇದರಿಂದ ಅವರು ವಿದ್ಯಾವಂತರ ಮನೆಯಲ್ಲಿ ಹುಟ್ಟಿ ಇವರಿಗೂ ವಿದ್ಯಾ ಪ್ರಗತಿ. ಗುರುವಿನ ತುಲಾರಾಶಿ ಅಪಸವ್ಯದ ಚಕ್ರದ ದೆಶೆಯಲ್ಲಿ ಧನ ಸಂಬಂಧ ವ್ಯವಹಾರ ಗಳಲ್ಲಿ ಹಿರಿಯರು ನಿರತರು. ಹಾಗಿಲ್ಲ. ಸ್ವರ್ಣದ ವ್ಯಾಪಾರಗಾರರು. ಇಲ್ಲ ಬೃಹತ್ ವ್ಯವಹಾರದವರು. ಕೆಲವರಂತೆ ಇವರು ವಿದ್ಯಾಜೀವಿಗಳು. ಕಾರಣ ಈ ಗುರುವಿನ ಸಂಖ್ಯೆಗೆ ಗುರು ಮಂಗಳನ ಶುಭಯೋಗ. ಆದರೆ ಹತ್ತನೆಯ ತಾರೀಖು ಜನನಗಳಲ್ಲಿ ಗುರು ಶನಿ ಯೋಗದ ದೆಸೆಯಿಂದ ಇವರು ಧಾನ ಧರ್ಮ ನಿರತ ವಿದ್ಯಾವಂತರ ಮನೆಯಲ್ಲಿ ಯೋಗ. ಆದರೆ ಇವರಿಗೇ ದೈವ ದೋಷದಿಂದ ವಿದ್ಯಾವಿಘ್ನ. ಇವರ ಪೂರ್ವಿಕರು ವೇದಾಂತಪ್ರಿಯರು. ದೇವತಾ ಉಪಾಸಕರು. ವೈದಿಕ ಧರ್ಮದಿಂದ ಜೀವನ. ಹಾಗಿಲ್ಲ. ವಿದ್ಯಾ ಪ್ರಚಾರದಿಂದ ಜೀವನ.. ಹಾಗಿಲ್ಲ ಧನ ವ್ಯವಹಾರ ಮಾಡುವ ಸಂಸ್ಥೆಗಳಲ್ಲಿ ದುಡಿಮೆಯವರು ಹತ್ತು ಸಂಖ್ಯೆಯ ಮಂದಿಗೆ ಜನ್ಮಾದಿ ಹತ್ತು ವರುಷಗಳು ಕಷ್ಟ ಕಾಲ.

ಇವರಿಗೆ ಹತ್ತು ವರುಷಗಳ ನಂತರ ಒಂದು ವರುಷ ಶನಿಯ ದೆಶೆ. ಈ ಕಾಲದಲ್ಲಿ ಕೆಲವರಿಗೆ ಸ್ಥಾನ ಪಲ್ಲಟದಿಂದ ಸುಯೋಗ. ಹಾಗಿಲ್ಲ. ಹಿರಿಯರಲ್ಲಿ ಯಾರಿಗಾದರೂ ಪ್ರಾಣಾಪಾಯ ಅಥವಾ ತೀರ್ಥಯಾತ್ರೆಯಿಂದ ಅನುಕೂಲ ಆದೀತು. ಹನ್ನೆರಡನೆಯ ವರುಷದಿಂದ ಇವರಿಗೆ ಶುಕ್ರನ ದೆಶೆ ಹನ್ನೆರಡು ವರುಷ. ಈ ಕಾಲದಲ್ಲಿ ಮನೆಯಲ್ಲಿ ವಿವಾಹಾದಿ ಶುಭಕಾರ್ಯಗಳು ನಡೆಯುತ್ತವೆ. ಇದು ವಿದ್ಯೆಗೆ ಮುಖ್ಯವಾದ ಕಾಲ. ಇಲ್ಲಿ ಪ್ರೀತಿಯ ಗ್ರಹದ ದೆಶೆ ಬಂದು ವಿದ್ಯೆಗೆ ಮಂದಗತಿ ಆದೀತು. ಹೆಣ್ಣು ಜನನಗಳಲ್ಲಿ ಅವರ ಹದಿನಾರು ತಪ್ಪಿದರೆ ಹತ್ತೊಂಭತ್ತನೆಯ ವರುಷದಲ್ಲಿ ವಿವಾಹವಾದೀತು. ಇಪ್ಪತ್ತ ಮೂರನೆಯ ವರುಷದಲ್ಲಿ ಸುಯೋಗ ಕೊಡುವ ಸಂತಾನ ಲಾಭ ಬೇರೆ.

ಇಪ್ಪತ್ತೈದನೆಯ ವರುಷದಿಂದ ಏಳು ವರುಷಗಳ ಕಾಲ ರಾಹುವಿನ ಚಕ್ರದೆಶೆ. ಈ ಕಾಲದಲ್ಲಿ ಇವರಿಗೆ ಮಾತಾಮಹನ ಪ್ರಭಾವ ಇರುತ್ತದೆ. ಐದನೆಯ ತಾರೀಖಿನ ಜನರಿಗೆ ವಿದ್ಯೆಯೋಗ ಪ್ರಬಲ. ಈ ಕಾಲದಲ್ಲಿ ಇವರು ವಿದೇಶದಲ್ಲಿ ವಿದ್ಯಾಭ್ಯಾಸ ಮಾಡಿಯಾರು. ಹಾಗಿಲ್ಲ ವಿಜ್ಞಾನದಲ್ಲಿ ಅಧ್ಯಯನ. ಹಾಗಿಲ್ಲ ವಿದೇಶೀ ಸಂಸ್ಥೆಗಳಲ್ಲಿ ಉದ್ಯೋಗದಿಂದ ಕೀರ್ತಿಶಾಲಿಗಳು. ಈ ಮಂದಿಗೆ ಮೂವತ್ತೆರಡನೆಯ ವರುಷದಿಂದ ಬುಧನ ದೆಶೆ ಪ್ರಾರಂಭ. ಜನ್ಮದಿನಾಂಕ ಐದು ಅಥವಾ ಹತ್ತು ಯಾವುದಾದರೂ ಈ ಬುಧನ ದೆಶೆಯಲ್ಲಿ ಸುಯೋಗ ನಡೆಯುತ್ತದೆ. ಕಾರಣ ಇಲ್ಲಿ ಬುಧನಿಗೆ ನೀಚಭಂಗ ಯೋಗ ಆಗುತ್ತದೆ. ಈ ಕಾಲದಲ್ಲಿ ಮನೆ ಕಟ್ಟುವ ಕೆಲಸ ಸುಗಮ. ಬುದ್ಧಿವಂತರಿಗೆ ಸೂಕ್ತ ಪ್ರೋತ್ಸಾಹ ಬೇರೆ. ಲೇಖಕರಿಗೂ ಸುಯೋಗ. ಚಿತ್ರಕಲೆ ಸಂಗೀತ ನಾಟ್ಯಶಾಸ್ತ್ರಗಳಲ್ಲಿ ಪಾಂಡಿತ್ಯ ದೈವದತ್ತ. ಕೆಲವರಿಗೆ ಚಕ್ರಬಂಧ ಸ್ಪರ್ಧೆಗಳಲ್ಲಿ ಆಕಸ್ಮಾತ್ ಧನ ಬಂದೀತು. ಬಲಿಷ್ಠ ಪ್ರಭಾವದ ಗಣ್ಯರ ಸಖ್ಯ ಬೇರೆ. ಮೊತ್ತದಲ್ಲಿ ಇದು ಮಂದಿಗೆ ಮರೆಯುವ ಕಾಲ ಅನ್ನಬಹುದು.

ನಲವತ್ತನೆಯ ವರುಷದಿಂದ ಹದಿನೈದು ವರುಷಗಳು ಚಂದ್ರನಕಾಲ. ಈ ಕಾಲದಲ್ಲಿ ಕುಂಭರಾಶಿ ದೆಶೆ ಇದ್ದು ಇದು ವ್ಯಾಪಾರದ ರಾಶಿ ತುಲಾಕ್ಕೆ ತ್ರಿಕೋಣವಾಗಿ ಇವರಿಗೆ ವ್ಯಾಪಾರದಲ್ಲಿ ಹೆಚ್ಚು ಪ್ರಗತಿ ಇದೆ. ಹಾಗಿಲ್ಲ. ಸಂಚಾರೀ ಗ್ರಹ ಚಂದ್ರನ ಕಾರಣ ಯಾತ್ರೆ

ಗಳು ಹೆಚ್ಚು. ಇವರಿಂದ ಇವರಿಗೆ ಸಂಚಾರವನ್ನೇ ಮೂಲವಾಗಿರುವ ಕೆಲಸದಿಂದ ಪ್ರಗತಿ ಮತ್ತು ಧನಗಳಿವೆ. ಐವತ್ತೈದು ವರುಷಗಳ ನಂತರ ನಡೆಯುವ ಮಿಾನ ಅಥವಾ ಕನ್ಯಾರಾಶಿ ದಶೆಯ ಯೋಗದಿಂದ ಮಂಗಳನ ಕಾಲ ಸುಯೋಗದಾಯಕ. ಯಂತ್ರ ವಾಹನಗಳಿಂದ ಧನಯೋಗವು. ನಂತರ ಅರವತ್ತೊಂಭತ್ತು ವರುಷಕ್ಕೆ ಬರುವ ಸೂರ್ಯನ ದಶೆ ಒಂಭತ್ತು ವರುಷ ಕಾಲ ಕೀರ್ತಿದಾಯಕ ಕಾಲ.

## ಎರಡನೆಯ ವರ್ಗದ ಗುರುವಿನ ಸಂಖ್ಯೆಗಳ ದಶಾಕ್ರಮ

ಐದು ಹತ್ತು ಗುರುವಿನ ಶುದ್ಧ ಸಂಖ್ಯೆಗಳು. ಇವುಗಳಿಗೆ ಗುರುವಲ್ಲದ ಇತರ ಗ್ರಹಗಳ ಪ್ರಭಾವ ಇರದು. ಆದರೆ ಅದೇ ಹದಿಮೂರು, ಹದಿನಾರು ಮತ್ತು ಹತ್ತೊಂಭತ್ತು ಸಂಖ್ಯೆಗಳು ಮಂಗಳ ಮತ್ತು ಸೂರ್ಯನ ಪ್ರಭಾವದಿಂದ ಕೂಡಿರುವ ಸಂಖ್ಯೆಗಳು. ಈ ವರ್ಗದ ಸಂಖ್ಯೆಗಳು ಏಣಿಯ ಮೆಟ್ಟಲುಗಳಂತೆ. ಅಗ್ನಿ ಬೆಳಕಿನಲ್ಲಿ ಮುಕ್ತಾಯ. ಆದರೆ ಧೂಮ ಸಹಿತ ಬೆಂಕಿ ಎಲ್ಲದಕ್ಕೂ ಮೊದಲು. ಈ ಮೆಟ್ಟಲುಗಳು ಕ್ರಮವಾಗಿ ಮೂರು ಆರು ಮತ್ತು ಒಂಭತ್ತು ಸಂಖ್ಯೆಗಳಲ್ಲಿ ಅಡಗಿರುತ್ತವೆ. ಇದರ ಪ್ರಭಾವದಿಂದ ಗುರುವಿಗೆ ತನ್ನ ಈ ನಮೂನೆ ಸಂಯುಕ್ತ ಸಂಖ್ಯೆಗಳು ಸಂಗದಲ್ಲಿರುವ ಮಂದಿಯಲ್ಲಿ ಕಂಡು ಬರುತ್ತದೆ. ಮೊತ್ತದಲ್ಲಿ ಬೆಳಕಿನ ವಿವಿಧ ಹಂತಗಳಾದ ಕಾರಣ ಇವು ಒಂದೇ ಸಂಖ್ಯೆಯ ಬಾಲ್ಯ ಕೌಮಾರ್ಯ ಯೌವ್ವನ ಅವಸ್ಥೆಗಳು ಎನ್ನಬಹುದು.

ಈ ಮೂರೂ ಸಂಖ್ಯೆಗಳ ದಿನಾಂಕಗಳಂದು ಹುಟ್ಟಿದ ಮಂದಿಗೆ ಪರಮಾವಧಿ ಸಂಖ್ಯೆ ಹತ್ತೊಂಭತ್ತು ವರುಷ ಕಾಲ. ಮೊದಲ ದೆಶೆಯ ಗುರುವಿನದು. ಇದರಲ್ಲಿ ಹದಿಮೂರು ವರುಷಗಳ ಹಂತ. ಮೂರು ವರುಷಗಳು ಧೂಮ ಸಹಿತ ಬೆಂಕಿಯ ಕುಜ ಮತ್ತು ಶನಿಯ ಅರಿಷ್ಟದ ಕಾಲ. ಈ ಕಾಲದಲ್ಲಿ ಜೀರ್ಣ ಶಕ್ತಿಯ ದೋಷದಿಂದ ಉದರ ಬೇನೆ, ಹಣದ ಸಮಸ್ಯೆಗಳು, ಶಸ್ತ್ರ ಚಿಕಿತ್ಸೆಗಳಿಂದ ಆರೋಗ್ಯ ಕೆಟ್ಟೀತು. ಈ ದೋಷ ಕುಜನ ಶುದ್ಧ ಬೆಂಕಿಯ ಅಂಕೆಯಾದ ಆರರಲ್ಲಿ ನಿವಾರಣೆ. ಈ ಬೆಂಕಿ ಕಾಮ ಲಾಲಸೆ, ಭೋಗಗಳ ಯೋಗ. ಇದರಿಂದ ಹದಿನಾರನೆಯ ವರುಷದಿಂದ ಇವರಿಗೆ ಸುಯೋಗವಿದೆ. ಹತ್ತೊಂಭತ್ತನೆಯ ವರುಷ ದಲ್ಲಿ ಗುರು ರವಿಯೋಗ. ಇದರಿಂದ ಇವರಿಗೆ ಉದ್ಯೋಗದಿಂದ ಧನಯೋಗ ನಡೆದೀತು. ಹಾಗಿಲ್ಲ, ವಿದ್ಯೆಯಲ್ಲಿ ಪ್ರಗತಿ.

ಹತ್ತೊಂಭತ್ತನೆಯ ವರುಷದ ನಂತರ ಒಂದು ವರುಷ ಇವರಿಗೆ ಶನಿಯ ದೆಶೆ. ಇಪ್ಪತ್ತನೆಯ ವರುಷದ ನಂತರ ಹನ್ನೆರಡು ವರುಷದ ದೆಶೆ ಶುಕ್ರನದು. ಈ ಕಾಲದಲ್ಲಿ ಇವರಿಗೆ ವಿವಾಹದ ಯೋಗವಿದೆ. ಆದರೆ ಇಲ್ಲಿ ಹದಿಮೂರನೆಯ ಸಂಖ್ಯೆಯ ಕುಜನ ದೋಷ ಪರಿಹಾರ ಆಗಬೇಕು. ಇದಕ್ಕೆ ತಮ್ಮ ಕುಲ ಗುರು ಯತಿಯನ್ನು ಸೇವೆ ಮಾಡಬೇಕು. ಅದಿಲ್ಲ, ಆಗ ಹದಿಮೂರರ ಕುಜನ ದೋಷದಿಂದ ಮದುವೆ ಆಗುವುದು ಕಷ್ಟ. ಆಗ ಈ ಶುಕ್ರನೂ ಯೋಗಿಸನು. ಆದರೆ ಮನೆಯಲ್ಲಿ ಇತರ ಬಂಧುಗಳಿಗೆ ಈ ಯೋಗ ಶುಭಪ್ರದ ಆದೀತು. ರಾಶಿ ದಶಾಕ್ರಮದಂತೆ ಈ ಕಾಲ ಧನು ಅಥವಾ ಮಿಥುನ ರಾಶಿಗಳಲ್ಲಿ ನಡೆಯುತ್ತದೆ. ಮೇಷ ಔಷಧಿಗಳ ರಾಶಿ. ಇದರ ತ್ರಿಕೋಣ ಯೋಗದಿಂದ ಇವರಿಗೆ ವೈದ್ಯ ವೃತ್ತಿಯಲ್ಲಿ ಲೇಸು. ಹಾಗಿಲ್ಲ, ವೈದ್ಯರ ಪ್ರಭಾವ ಇವರ ಮೇಲೆ ಇರುತ್ತದೆ. ಮಿಥುನ ರಾಶಿಯ ಯೋಗ

ದಲ್ಲಿ ತುಲಾ ತ್ರಿಕೋಣದ ಯೋಗ. ಇದರಿಂದ ಇವರು ಸೌಂದರ್ಯ ವರ್ಧಕ ವಸ್ತುಗಳ ಮಾರಾಟ ತಯಾರಿಯಿಂದ ಜೀವನ ಸುಗಮ.

ಮಿಥುನ ರಾಶಿಯೋಗದಲ್ಲಿ ಶುಕ್ರನಿಗೆ ಶನಿಯ ಪ್ರಭಾವದಿಂದ ದೋಷ. ಈ ಕಾರಣ ಇವರಿಗೆ ವಿವಾಹ ಕಷ್ಟ. ಆದರೂ ಶ್ರೀಮತಿಯಿಂದ ನಿರಾಸೆ. ಹಾಗಿಲ್ಲ, ಆಕೆಗೆ ಆಲಸ್ಯದಿಂದ ಸುಖಭಂಗ. ಈ ಕಾರಣ ಇವರು ವೇದಾಂತಿಗಳು, ಹಾಗಿಲ್ಲ, ಪ್ರೀತಿಯ ಹೆಂಡತಿಯನ್ನು ಕಳೆದುಕೊಂಡು ಪ್ರೀತಿ ಮಾಡದ ಹೆಂಡತಿಯೊಡನೆ ಸಂಸಾರ ಮಾಡಿಯಾರು. ಇದಕ್ಕೆ ಶುಕ್ರ ಶುಕ್ರವಾರಗಳಲ್ಲಿ ಲಕ್ಷ್ಮೀ ಪೂಜೆಯನ್ನು ಮಾಡಿ ಮುತ್ತೈದೆಯರಿಗೆ ಹೆಸರುಬೇಳೆ, ಪಾನಕಗಳನ್ನು ದಾನ ಮಾಡಬೇಕು. ಇದರಿಂದ ಇವರಿಗೆ ಶುಕ್ರನ ಒಲುಮೆ ಸಾಧ್ಯ. ಸುಖವೂ ಪ್ರಾಪ್ತಿ.

ಶುಕ್ರನದೆಶೆ ಮೂವತ್ತೆರಡು ವರುಷಗಳಿಗೆ ಮುಗಿದು ನಂತರ ಏಳುವರುಷಗಳ ರಾಹುವಿನ ಕಾಲ ಶುರು ಆದೀತು. ಈ ಕಾಲದಲ್ಲಿ ಇವರು ವಿಶೇಷದ ಪ್ರಜ್ಞಾಶಕ್ತಿಯ ದೆಸೆಯಿಂದ ಕೀರ್ತಿ ಶಾಲಿಗಳು. ಕೆಲವರಿಗೆ ವಿದೇಶದ ಸಂಘ ಸಂಸ್ಥೆಗಳಲ್ಲಿ ಉದ್ಯೋಗ ಆದೀತು. ಒಂದು ಭಾಷೆ ಯಿಂದ ಮತ್ತೊಂದು ಭಾಷೆಗೆ ತರ್ಜುಮೆ ಮಾಡುವ ಕೆಲಸದಿಂದ ಪ್ರಗತಿ. ಅಂತೂ ಇವರು ಒಂದಲ್ಲ ಒಂದು ರೀತಿ ಬುದ್ಧಿಯ ಕೆಲಸಗಳಿಂದ ಮುಂಬರುವ ಕಾಲ ಇದು. ಅಲ್ಲದೆ ಮಂದಿಗೆ ಇವರ ಬಗ್ಗೆ ಕುತೂಹಲ ಗೌರವಗಳೂ ಹೆಚ್ಚುವುವು.

ಮೂವತ್ತೊಂಭತ್ತು ವರುಷಗಳ ನಂತರ ಇವರಿಗೆ ಎಂಟು ವರುಷ ಬುಧನ ಕಾಲ. ಈ ಕಾಲದಲ್ಲಿ ಸವ್ಯಚಕ್ರದಲ್ಲಿ ಸಿಂಹದಲ್ಲಿಯೂ ಅಪಸವ್ಯ ಚಕ್ರದಲ್ಲಿ ಕುಂಭ ರಾಶಿಯಲ್ಲಿ ಬುಧನಫಲ ನಡೆಯುತ್ತೆ. ಜನ್ಮ ದಿನಾಂಕ ಮಾಸದ ಉತ್ತರಾರ್ಧದಲ್ಲಿ. ಈ ಕಾರಣ ಸೂರ್ಯ ಬುಧರ ಯೋಗ. ಇದರಿಂದ ಸವ್ಯಚಕ್ರದಲ್ಲಿ ಇವರಿಗೆ ಆಡಳಿತ ವರ್ಗದಲ್ಲಿದ್ದರೆ ಅಧಿಕಾರ ಪದವಿ ಲಾಭವಾದೀತು. ಅಪಸವ್ಯ ಚಕ್ರದಲ್ಲಿ ತುಲಾ ತ್ರಿಕೋಣ ಯೋಗದಿಂದ ವ್ಯಾಪಾರ ದಲ್ಲಿ ಉತ್ತಮ ಲಾಭವಿದೆ. ಆದರೆ ಕುಂಭರಾಶಿ ರಹಸ್ಯದ ರಾಶಿ. ಈ ಕಾರಣ ಇವರು ಕಪ್ಪು ಮಾರುಕಟ್ಟೆಯಲ್ಲಿ ಲಾಭ ಸಂಪಾದನೆ ಮಾಡಿಯಾರು. ಹಾಗಿಲ್ಲ, ರಸಾಯನಿಕ ಶಾಸ್ತ್ರದಲ್ಲಿ ವಿಜ್ಞಾನವನ್ನು ಸಾಧಿಸುತ್ತಾರೆ. ಈ ಬುಧನ ಯೋಗವು ನಲವತ್ತೇಳು ವರುಷಕ್ಕೆ ಮುಕ್ತಾಯ.

ನಲವತ್ತೆಂಟನೆಯ ವರುಷದಿಂದ ಹದಿನೈದು ವರುಷಗಳು ಚಂದ್ರನ ಯೋಗ. ಇದು ಹೆಚ್ಚಿನಂಶ ಕನ್ಯಾರಾಶಿಯಲ್ಲಿ. ಅಪಸವ್ಯದಲ್ಲಿ ಮೀನರಾಶಿಯಲ್ಲಿ. ಇಲ್ಲಿಯೂ ಸಹ ರಾಶಿನಾಥ ರಾದ ಬುಧ ಗುರುಗಳ ಯೋಗದಿಂದ ಇವರು ಬುದ್ಧಿ ಜೀವಿಗಳು. ವಿದ್ಯಾಪ್ರಚಾರದ ದೆಸೆಯಿಂದ ಕೀರ್ತಿ ಶಾಲಿಗಳು.

## ಮೂರನೆಯ ವರ್ಗದ ಗುರುವಿನ ಸಂಖ್ಯೆಗಳ ದಶಾಕ್ರಮ

ಗುರುವಿನ ಶುದ್ಧ ಸಂಖ್ಯೆಗಳು ಐದು, ಹತ್ತು, ಗುರು ಮಂಗಳ ಯೋಗದ ಸಂಖ್ಯೆಗಳು ಹದಿಮೂರು ಮತ್ತು ಹದಿನಾರು. ಗುರುರವಿ ಯೋಗದ ಸಂಖ್ಯೆ ಹತ್ತೊಂಭತ್ತು. ಹತ್ತೊಂಭತ್ತರಲ್ಲಿ ಹದಿಮೂರು ಮತ್ತು ಹದಿನಾರು ಅಡಗಿದ್ದು ಒಂದೇ ಶ್ರೇಣಿಯ ಹಂತ ಗಳಾಗಿರುತ್ತೆ. ಇದು ಎರಡನೆಯ ವರ್ಗ. ಗುರುಚಂದ್ರ ಯೋಗದ ಸಂಖ್ಯೆ ಇಪ್ಪತ್ತು. ಗುರು

ಚಂದ್ರ ಯೋಗಕ್ಕೆ ಮಂಗಳನ ಯೋಗವಾದಾಗ ಇಪ್ಪತ್ತಮೂರು. ಇಪ್ಪತ್ತಾರು ಸಂಖ್ಯೆಗಳು. ಇದೇ ಗುರು ಚಂದ್ರ ಯೋಗಕ್ಕೆ ಸೂರ್ಯನ ಯೋಗ ಇಪ್ಪತ್ತೊಂಭತ್ತು. ಸಂಖ್ಯೆಯಲ್ಲಿ ಬೆರೆಯುತ್ತದೆ. ಇದು ಮೂರನೆಯ ವರ್ಗದ ಗುರುವಿನ ಸಂಖ್ಯೆಗಳು. ಅಲ್ಲದೆ ಇದೇ ಚಂದ್ರ ಗುರುಯೋಗಕ್ಕೆ ಬುಧನ ಯೋಗವಾದಾಗ ಇಪ್ಪತ್ತೆರಡು ಮತ್ತು ಇಪ್ಪತ್ತೆಂಟು ಆಗುತ್ತದೆ. ಈ ಯೋಗದಲ್ಲಿ ಒಂದು ಸೇರಿದರೆ ಶನಿಯ ಯೋಗದ ಸಂಖ್ಯೆ.

ಗುರು ರವಿಯೋಗ ಶ್ರೇಣಿಯ ಸಂಖ್ಯೆಗಳು ಈಶ್ವರ ಮತ್ತು ಈಶ್ವರನಂಶದ ಶ್ರೀರಾಮ ನನ್ನು ತೋರಿಸುತ್ತದೆ. ಆದರೆ ಗುರು ಚಂದ್ರ ಯೋಗ ಮಾತ್ರವಾದ ಶ್ರೀ ಸರಸ್ವತಿಯನ್ನು ತೋರಿಸುತ್ತದೆ. ಇದು ಜ್ಞಾನ, ವಿದ್ಯಾಯೋಗದಿಂದ ದೋಷವನ್ನು ಪರಿಹಾರ ಮಾಡಿಕೊಳ್ಳುವ ಯೋಗ. ಈ ಗುರು ಚಂದ್ರ ಯೋಗದ ಶ್ರೇಣಿಯಲ್ಲಿ ಗುರು ರವಿಯೋಗದ ಸಂಖ್ಯೆಗಳು ಅಡಗಿ ಗತಫಲವನ್ನು ತೋರಿಸುತ್ತದೆ. ಅಲ್ಲದೆ ಗುರುವಿನ ಗರಿಷ್ಠ ಸಂಖ್ಯೆಯಾದ ಐವತ್ತರಲ್ಲಿ ಗುರು ಶುಕ್ರ ಯೋಗವಿದ್ದು ಗುರುವಿನ ಶುದ್ಧಸಂಖ್ಯೆಯ ಸಂಕೇತವಾಗಿ ಶುದ್ಧ ಜ್ಞಾನಮಯನಾದ ಯೋಗಿಯಾದ ಶ್ರೀ ಕೃಷ್ಣನನ್ನು ತೋರಿಸುತ್ತದೆ. ಇಲ್ಲಿ ಗುರುವಿಗೆ ಯಾವ ವಿಧವಾದ ದೋಷ ಗಳೂ ಇರವು. ಈ ವರ್ಗೀಕರಣದ ತತ್ವವನ್ನು ತಿಳಿದುಕೊಂಡರೆ ದಶಾಕ್ರಮದಲ್ಲಿ ಫಲ ಹೇಳಲು ಸುಲಭ.

ಜನನದ ತಾರೀಖು ಇಪ್ಪತ್ತು. ಇಪ್ಪತ್ತುಮೂರು. ಇಪ್ಪತ್ತಾರು ಅಥವಾ ಇಪ್ಪತ್ತೊಂಭತ್ತು ಆದಾಗ ದಶಾಕ್ರಮ ಒಂದೇ ರೀತಿ. ಅಂದರೆ ಮೊದಲಿನ ದೆಶೆ ಗುರುವಿನದು. ಅದರ ಕಾಲ ಈ ಶ್ರೇಣಿಯ ಅತಿ ದೊಡ್ಡ ಸಂಖ್ಯೆಯಾದ ಇಪ್ಪತ್ತೊಂಭತ್ತು ವರುಷಗಳು. ಇದರಲ್ಲಿ ಪ್ರಥಮ ಹದಿಮೂರು ವರುಷಗಳು ಎರಡನೆಯ ವರ್ಗದ ಗುರುವಿನ ದಶಾಕ್ರಮದಂತೆ ಫಲ. ಹದಿಮೂರು ಹದಿನಾರು. ಹತ್ತೊಂಭತ್ತು. ಇಪ್ಪತ್ತು. ಇಪ್ಪತ್ತಮೂರು. ಇಪ್ಪತ್ತಾರು ಮತ್ತು ಇಪ್ಪತ್ತೊಂಭತ್ತು ವರುಷಗಳು ಈ ಇಪ್ಪತ್ತೊಂಭತ್ತು ವರುಷಗಳಲ್ಲಿ ವಿವಿಧ ಹಂತಗಳು. ಇಲ್ಲಿ ಗುರುವಿನ ದೆಶೆ ಮೊದಲು ಇಪ್ಪತ್ತೊಂಭತ್ತು ವರುಷಗಳು. ಈ ಕಾಲದಲ್ಲಿ ಗುರುವಿನ ಎರಡನೆಯ ವರ್ಗದ ಶ್ರೇಣಿಯಲ್ಲಿ ಹಂತ ಹಂತಗಳಾಗಿ ಫಲ ನಡೆಯುತ್ತೆ. ಅನಂತರ ಮೂರನೆಯ ಶ್ರೇಣಿಯಲ್ಲಿ ಮೂರು ಮೂರು ವರುಷಗಳ ಹಂತ ಹಂತಗಳಾಗಿ ಫಲ ನಡೆಯುತ್ತವೆ. ಮೊದಲು ಮೂರನೆಯ ವರ್ಷದಲ್ಲಿ ದೋಷ ಪ್ರಾಪ್ತಿ. ಆರನೆಯ ವರುಷದಲ್ಲಿ ಅದು ನಿವಾರಣೆ. ಒಂಭತ್ತನೆಯ ವರುಷದಲ್ಲಿ ಸುಯೋಗ ಲಾಭ. ಇದು ಈ ಶ್ರೇಣಿಯ ಒಂಭತ್ತು ವರುಷಗಳ ಫಲಕ್ರಮ. ಒಂದೊಂದು ಹಂತದಲ್ಲಿಯೂ ಆ ದೋಷ ನಿವಾರಣೆಯಾದಾಗ ಒಂದೊಂದು ದೇವತಾಪ್ರಸಾದ. ಉದಾಹರಣೆಗೆ ಹದಿಮೂರನೆಯ ಸಂಖ್ಯೆಯ ದೋಷ ಹದಿನಾರೆಯ ವರುಷ ದಲ್ಲಿ ಪರಿಹಾರ. ಆಗ ಹದಿಮೂರು ಸಂಖ್ಯೆಯ ದರಿದ್ರದ ಸಂಕೇತವಾದ ಭಿಕ್ಷಾಟನೆಯ ಧರ್ಮಜೀವನದಲ್ಲಿರುವ ಯತಿವರೇಣ್ಯರ ಪ್ರಸಾದ. ಇದರಿಂದ ಇವರಿಗೆ ಮಂಗಳನ ಶುಭದ ಫಲ. ಭೋಗಭಾಗ್ಯ ಪ್ರಾಪ್ತಿ. ಮನೆಯಲ್ಲಿ ಮಂಗಳ ಕಾರ್ಯ. ಹತ್ತೊಂಭತ್ತನೆಯ ವರುಷ ದಲ್ಲಿ ವಿದ್ಯೆಯಲ್ಲಿ ಪ್ರಗತಿ. ಕೆಲವರಿಗೆ ರವಿಯ ಯೋಗದಿಂದ ನೌಕರಿ ಪ್ರಾಪ್ತಿ. ಇಪ್ಪತ್ತ ಮೂರನೆಯ ವರುಷದಲ್ಲಿ ಗುರು ಚಂದ್ರ ಯೋಗದಿಂದ ತೀರ್ಥ ಯಾತ್ರೆ. ಇದರಿಂದ ದೇವತಾ ಪ್ರಸಾದ ಕೆಲವರಿಗೆ ದೇಶಾಟನೆ. ಜೀರಕಾಂಗ ದೋಷದಿಂದ ಉದರ ಬೇನೆ ಇತ್ಯಾದಿ ಕುಜನ

ದೋಷದ ಫಲಗಳು. ಇಪ್ಪತ್ತಾರು ಸಂಖ್ಯೆಯ ವರುಷ ಬಂದಾಗ ಇದು ನಿವಾರಣೆ. ಆಗ ಅನ್ನದಾತಳಾದ ಅನ್ನಪೂರ್ಣೆಯ ಅನುಗ್ರಹ. ಇದರಿಂದ ಅನೇಕರಿಗೆ ವಿವಾಹಯೋಗ. ದೇವೀ ಕ್ಷೇತ್ರ ದರ್ಶನದಿಂದ ಸಂತಾನ ಲಾಭ. ಬೇರೆ ಇಪ್ಪತ್ತೊಂಭತ್ತು ವರುಷದಲ್ಲಿ ವಿದ್ಯಾರ್ಹತೆಯ ಕಾರಣ ಉತ್ತಮ ನೌಕರಿ ಲಾಭ. ಜೀವನೂ ಸುಗಮ ಈ ರೀತಿ ಗುರುವಿನ ಮೂರನೆಯ ವರ್ಗದ ಗುರು ದಶಾಫಲ ನಿರ್ಣಯ.

ಮೂವತ್ತನೆಯ ವರುಷದಲ್ಲಿ ಶನಿಯಕಾಲ ಒಂದು ವರುಷ. ಆಗ ಮನೆಯಲ್ಲಿ ವೃದ್ಧರಿಗೆ ಆಲಸ್ಯ. ವಾಸದ ಸ್ಥಳ ಬದಲು. ವ್ಯಾಪಾರಿಗೆ ಸಂಚಾರದಿಂದ ಅನುಕೂಲ ಮೂವತ್ತ ಒಂದನೆಯ ವರುಷದಿಂದ ಹನ್ನೆರಡು ವರುಷಕಾಲ ಶುಕ್ರನ ದಶಾ ಫಲ. ಈ ಕಾಲದಲ್ಲಿ ಸಂಸಾರ ಜೀವನದಲ್ಲಿ ಸುಖ ಪ್ರಾಪ್ತಿ. ಸೋದರಿಕೆಯಲ್ಲಿ ಶುಭಕಾರ್ಯಗಳು ಬೇರೆ. ವಸ್ತ್ರಾಲಂಕಾರ. ವಸತಿ. ನಿರ್ಮಾಣ ಇತ್ಯಾದಿಗಳ ಪ್ರಾಪ್ತಿ. ಶ್ರೀಮತಿಯ ಸುಯೋಗದಿಂದ ಅನುಕೂಲದ ಕಾಲ ಅನ್ನಬಹುದು. ಒಂದು ವೇಳೆ ಶುಭಕಾರ್ಯದ ನಂತರ ಅಪ್ರಿಯ ಫಲಗಳು ನಡೆದೀತು. ಆಗ ಶುಕ್ರವಾರಗಳಲ್ಲಿ ಲಕ್ಷ್ಮೀ ಪೂಜೆಯನ್ನು ಮಾಡಿ ಹೂವೀಳಿಯ ವ್ರತವನ್ನು ಮಾಡಬೇಕು. ಆಗ ಈ ಕಾಲದಲ್ಲಿ ಶುಭ ಉಂಟು ನಲವತ್ತಮೂರನೆಯ ವರುಷದಿಂದ ಏಳು ವರುಷ ರಾಹುವಿನ ದಶೆ ನಡೆಯುತ್ತದೆ. ಈ ಕಾಲದಲ್ಲಿ ರಾಶಿ ದಶಾಕಾಲದಲ್ಲಿ ಕುಂಭ ಮತ್ತು ಸಿಂಹ ರಾಶಿಗಳ ದಶಾಫಲ ಪರ್ಯಾಯವಾಗಿ ನಡೆಯುತ್ತದೆ. ಈ ಕಾಲದಲ್ಲಿ ಅಪಸವ್ಯದ ಕುಂಭ ರಾಶಿಯಲ್ಲಿ ಗುಪ್ತ ವ್ಯವಹಾರಗಳಿಂದಾಗಿ ಸಮಸ್ಯೆಗಳು ಎದುರು ಆದೀತು. ಗುಪ್ತ ಸಂಶೋಧಕ ಪೊಲೀಸ ರಿಂದ ಶಿಕ್ಷೆಗೂ ಅವಕಾಶ ಆದೀತು. ಈ ಸಂದರ್ಭದಲ್ಲಿ ಮಂದಿ ನಾಗದೇವತಾ ಆರಾಧನೆ ಮಾಡಬೇಕೇ. ಹಾಗಿಲ್ಲ ಮುಸಲ ಸನ್ಯಾಸಿಯನ್ನು ಪೂಜಿಸಬೇಕು. ಆಗ ಕುಂಭ ರಾಶಿ ಬದಲಾಗಿ ಸಿಂಹ ರಾಶಿ ದಶಾಫಲದಿಂದ ಶುಭ ಆಗುವುದು.

ನಲವತ್ತೊಂಭತ್ತು ವರುಷಗಳ ನಂತರ ಇವರಿಗೆ ಬುಧನ ಕಾಲ ಎಂಟು ವರುಷಗಳು. ಈ ಕಾಲದಲ್ಲಿ ಐವತ್ತರ ದಶಕದ ರಾಶಿಯಾದ ಕನ್ಯೆ ಅಥವಾ ಮೀನದಲ್ಲಿ ಬುಧನು ಯೋಗಿಸುತ್ತಾನೆ. ಮೀನರಾಶಿಯ ಫಲ ಅಪಸವ್ಯ ಚಕ್ರ. ಕನ್ಯಾರಾಶಿಯ ಫಲ ಸವ್ಯಚಕ್ರ ಮೀನರಾಶಿಯ ಕಾಲದಲ್ಲಿ ಬುಧನಿಗೆ ಅಪವಾದದ ಫಲ. ಮನೆ ಮಠಗಳು ಹಾಳು. ಬಂಧು ಗಳಿಂದ ಮೋಸ. ಚಾರಿತ್ರ್ಯ ಸಂದೇಹ. ಈ ನಮೂನೆ ಮಂದಿಯ ತೂಕ ಹಾಳು ಮಾಡುವ ಫಲ. ಇದಕ್ಕೆ ಬುಧನ ಅಧಿದೇವತೆಯಾದ ವಿಷ್ಣುವಿನ ಆರಾಧನೆ ಸೂಕ್ತ ಶಾಂತಿ. ಇದರಿಂದ ಚಕ್ರ ಬದಲಾಗಿ ಕನ್ಯಾರಾಶಿಯ ಫಲ ನಡೆಯುತ್ತೆ. ಇಲ್ಲಿ ಬುಧನಿಗೆ ಉಚ್ಚದ ಫಲ. ಇದರಿಂದ ಭದ್ರಯೋಗ ನಡೆಯುತ್ತದೆ. ಬಹುಶಃ ದೇವತಾರಾಧನೆಯ ಮಹಿಮೆಯಿಂದ ಸುಯೋಗ ನಡೆದೀತು. ಲೇಖಕರಿಗೆ ಇದರಿಂದ ಕೀರ್ತಿ. ಸ್ವಗೃಹ ವಾಸದ ಯೋಗ. ಕೆಲವರಿಗೆ ಮಂತ್ರಿಯ ಸ್ಥಾನಪ್ರಾಪ್ತಿ. ಈ ವರುಷ ಎಂಟು ವರುಷಗಳ ಕಾಲದ ನಂತರ ಹದಿನೈದು ವರುಷ ಚಂದ್ರನ ದೆಶೆ. ಈ ಕಾಲದಲ್ಲಿ ಮಾಡುವ ತೀರ್ಥಯಾತ್ರೆ ವೇದಾಂತ ಶ್ರದ್ಧೆ, ಈಶ್ವರ ಉಪಾಸನೆಯಿಂದ ಜೀವನದ ಅಂತ್ಯಕಾಲ ಸುಗಮ.

ಜನ್ಮದಿನಾಂಕ ಹದಿಮೂರು. ಹದಿನಾರು ಅಥವಾ ಹತ್ತೊಂಭತ್ತು ಆದರೆ ಗುರುವಿನದೆಶೆ. ಇದರ ಪರಮಾವಧಿ ಕಾಲ ಹತ್ತೊಂಭತ್ತು ವರುಷಗಳು. ಅನಂತರ ಶನಿ. ಶುಕ್ರ,ರಾಹು

ಬುಧ, ಚಂದ್ರ ಮತ್ತು ಕುಜಗ್ರಹಗಳ ದೆಶೆಗಳು ಕ್ರಮವಾಗಿ ನಡೆಯುತ್ತವೆ. ಆದರೆ ಜನ್ಮ ದಿನಾಂಕ ಇಪ್ಪತ್ತಮೂರು, ಇಪ್ಪತ್ತಾರು, ಇಪ್ಪತ್ತೊಂಭತ್ತು ಆದರೆ ಆಗ ಗುರುವಿನ ದಶೆಯ ಪರಮಾವಧಿ ಕಾಲ ಇಪ್ಪತ್ತೊಂಭತ್ತು ವರುಷಗಳು. ಅನಂತರ ಮೇಲಿನಂತೆ ಶನಿ, ಶುಕ್ರ ರಾಹು ಇತ್ಯಾದಿ ಗ್ರಹಗಳ ಕಾಲ ನಡೆಯುತ್ತವೆ.

## ಜನ್ಮ ದಿನಾಂಕ ಮೂವತ್ತು – ಸಂಖ್ಯಾ ಗ್ರಹಗಳ ದಶಾಕ್ರಮ

ಜನ್ಮದಿನಾಂಕ ಮೂವತ್ತು, ಈ ಸಂಖ್ಯೆ ಸೂರ್ಯನ ವಿಶೇಷದ ಸಂಖ್ಯೆ. ಮೊದಲು ಬರುವ ದಶೆಯೂ ಸೂರ್ಯನದು. ಇದರ ಕಾಲ ಅವನ ಪರಮಾವಧಿ ಸಂಖ್ಯೆ ಮೂವತ್ತು ವರುಷಗಳು. ಈ ಮೂವತ್ತು ವರುಷಗಳ ಕಾಲದಲ್ಲಿ ಕ್ರಮವಾಗಿ ಸೂರ್ಯ (೯) ಗುರು (೫) ಶನಿ (೧) ಶುಕ್ರ (೧೨) ರಾಹು ೭) ರಲ್ಲಿ ಉಳಿದ ೩ ವರುಷಗಳು, ಮೊತ್ತದಲ್ಲಿ ಸೂರ್ಯನ ಕಾಲ ೩೦ ವರುಷಗಳ ದಶೆ ಮುಗಿಯುತ್ತದೆ. ಅನಂತರ ಪುನಃ ಗುರು (೫) ಶನಿ (೧) ಶುಕ್ರ (೧೨) ರಾಹು (೭) ಬುಧ (೮) ಚಂದ್ರ (೧೫) ಕುಜ (೬) ಮೊತ್ತ ೮೪ ವರುಷಗಳಿಗೆ ಫಲ. ಮೊದಲಿನ ದಶೆ ಸೂರ್ಯನದು ಮೂವತ್ತು ವರುಷ ಕಾಲ. ಈ ಯೋಗದಲ್ಲಿ ಕರ್ಮ ಸಂಖ್ಯೆಯಾದ ಹತ್ತನೆಯ ತಿಂಗಳ ಜನನವಾದರೆ ಸೂರ್ಯನು ಯೋಗವನ್ನು ಕೊಡುವುದಿಲ್ಲ. ಆಗ ಸೂರ್ಯನಿಗೆ ತನ್ನ ನೀಚದ ರಾಶಿಯ ಸಂಚಾರ. ಇದರಿಂದ ಪೂರ್ವಿಕರ ಪ್ರಭಾವ ಅನುಕೂಲ ಇರದು. ಈ ಕಾಲ ದಲ್ಲಿ ಈ ಮಂದಿ ತಂದೆಯಿಂದ ದೂರ ಬಂಧುಗಳ ಮನೆಗಳಲ್ಲಿ ಬೆಳೆದಾರು. ತಂದೆಯ ಅರ್ಜನೆ ಕೂಡ ಅವರ ಕಾಲದಲ್ಲಿಯೇ ಕಳೆದೀತು. ಆದರೆ ಇವರಿಗೆ ತಂದೆಗೆ ಸೇವೆ ಮಾಡುವ ಅವಕಾಶ ಗಳು ಅವರ ಅಂತಿಮಕಾಲಕ್ಕೆ ಅಗತ್ಯ ಆದೀತು. ತಂದೆಯ ಕಾಲಾನಂತರ ಇವರಿಗೆ ಮುನ್ನಡೆ, ಪ್ರಗತಿ. ಇದೇ ದೋಷದಿಂದ ಇವರಿಗೆ ಸರಕಾರದ ಕೆಲಸಗಳಲ್ಲಿಯೂ ಸಹ ಅನುಕೂಲ ಇರದು. ಈ ಕಾರಣ ಇವರು ಖಾಸಗಿ ಉದ್ಯಮಗಳಲ್ಲಿ, ಇಲ್ಲ, ವಿದ್ಯುತ್ ಸಂಬಂಧದ ಉದ್ಯಮದಲ್ಲಿ, ಹಾಗಿಲ್ಲ, ವೈದ್ಯಕೀಯ ವೃತ್ತಿಯಲ್ಲಿ ಪ್ರಗತಿ ಸುಗಮ. ಜೀವನದ ಇತರ ಹಂತಗಳಲ್ಲಿಯೂ ಕೂಡ ಮೂವತ್ತು ವರುಷಗಳ ನಂತರ ಅನುಕೂಲ. ಮದುವೆ, ನೌಕರಿ ಇವೆಲ್ಲಾ ಅನಂತರ ಸ್ಥಿರ.

ಮೂವತ್ತು ವರುಷಗಳ ನಂತರ ಬರುವ ಗುರುವಿನ ಕಾಲದಲ್ಲಿ ಇವರಿಗೆ ಸಂತಾನ ಯೋಗ, ಧನಯೋಗ ಅನುಕೂಲ. ಆದರೆ ಇಲ್ಲಿ ಅಪಸವ್ಯಚಕ್ರದಲ್ಲಿ ಮಕರ ರಾಶಿಯ ಯೋಗವಿದ್ದು ಅಲ್ಲಿ ಗುರು ಪ್ರತಿಕೂಲನು. ಇದಕ್ಕೆ ಗುರುಸೇವೆ ಮಾಡಬೇಕು. ಆಗ ಚಕ್ರಬದಲು. ಕಟಕರಾಶಿ ಯೋಗದಿಂದ ಮಕ್ಕಳಿಂದ ಸುಯೋಗಪ್ರಾಪ್ತಿ. ಧನ ಯೋಗ ಬೇರೆ. ಉದ್ಯೋಗಕ್ಕೆ ಸಂಬಂಧಿಸಿದ ವಿದ್ಯಾಯೋಗದಿಂದ ಪ್ರಗತಿ. ಮೂವತ್ತಾರನೆಯ ವರುಷದಲ್ಲಿ ಒಂದು ವರುಷ ನಡೆಯುವ ಶನಿಯೋಗದಲ್ಲಿ ತೀರ್ಥಯಾತ್ರೆ, ಕೇವಲ ಭಕ್ತಿಗಳಿಂದ ಮನಸ್ಸಿಗೆ ನೆಮ್ಮದಿ. ಮೂವತ್ತೇಳನೆಯ ವರುಷದಿಂದ ಹನ್ನೆರಡು ವರುಷಗಳ ಕಾಲ ಶುಕ್ರನ ದೆಶೆ. ಇದು ಸುಗಮ ಕಾಲ. ಸುಖಜೀವನ, ಸ್ತ್ರೀ ಯೋಗದಿಂದ ಅದೃಷ್ಟ. ಸಂಸಾರದಲ್ಲಿ ವಿವಾಹಾದಿ ಶುಭ ಬೇರೆ. ಐವತ್ತನೆಯ ವರುಷದಿಂದ ಏಳು ವರುಷಗಳು ರಾಹುವಿನ ಕಾಲ ಕನ್ಯಾರಾಶಿ ಯೋಗದಿಂದ ಶುಭ. ಬುದ್ಧಿ ಗ್ರಹ ಬುಧನ ಸಂಗದಿಂದ ಚತುರ ಬುದ್ಧಿ. ಪ್ರಭಾವದ ಮೈತ್ರಿಯಿಂದ

ಜೀವನದಲ್ಲಿ ಸುಯೋಗ ಪ್ರಾಪ್ತಿ. ಇದೇ ಯೋಗ ಮುಂಬರುವ ಎಂಟು ವರುಷದ ಬುಧನ ದೆಶೆಯಲ್ಲಿಯೂ ನಡೆಯುತ್ತದೆ. ಅರವತ್ತೈದನೆಯ ವರುಷದಿಂದ ಹದಿನೈದು ವರುಷಗಳ ಕಾಲ ಚಂದ್ರನ ಯೋಗ. ಇದು ವ್ಯಾಪಾರಿಗಳಿಗೆ ಮಾತ್ರ ಅನುಕೂಲ. ಉಳಿದವರಿಗೆ ಮಾನಸಿಕ ಕಷ್ಟ. ಇದರಿಂದ ಇವರಿಗೆ ಯಾತ್ರೆ ಸೂಕ್ತ. ಹಾಗಿಲ್ಲ, ಮನೋರೋಗದಿಂದ ಆಯುಃಕ್ಷೀಣ.

ಈ ರೀತಿಯಾಗಿ ಜನ್ಮ ದಿನಾಂಕ ಒಂದರಿಂದ ಮೂವತ್ತರವರೆಗೆ ಹುಟ್ಟಿದ ಮಂದಿಗೆ ಶ್ರೀ ಗಣಪತಿ ಸಂಖ್ಯಾಶಾಸ್ತ್ರದ ಪ್ರಕಾರ ಸಂಖ್ಯಾ ಗ್ರಹದೆಶೆಗಳ ಫಲ ವಿವರಿಸಲ್ಪಟ್ಟಿದೆ. ಈ ದಶಾಫಲ ಶಾಸ್ತ್ರ ಜ್ಞಾನ ದೃಷ್ಟಿಯಿಂದ ಹೇಳಲ್ಪಟ್ಟಿದೆ. ಅವಶ್ಯವಾಗಿ ನಡೆಯಲೇಬೇಕು ಎಂದಿಲ್ಲ. ಇದರ ಜೊತೆಗೆ ಆಯಾ ಜನ್ಮದಿನಾಂಕ ವಿವರಣೆಯಲ್ಲಿ ಹೇಳಿರುವ ಕಾಲ ಯೋಗಗಳ ಫಲ ಪ್ರಧಾನವಾಗಿ ಪ್ರಭಾವವನ್ನು ಬೀರುತ್ತವೆ. ಇದು ಮುಖ್ಯವಾಗಿ ಗಮನ ದಲ್ಲಿರಬೇಕಾದ ಅಂಶ.

ಭಾಗ ೪

# ವ್ಯವಹಾರದಲ್ಲಿ ಸಂಖ್ಯೆಗಳ ಉಪಯೋಗ

ಶ್ರೀ ಗಣಿತಿ ಸಂಖ್ಯಾ ಶಾಸ್ತ್ರದಲ್ಲಿ ಸಂಖ್ಯೆಗಳು ಎರಡು ನಮೂನೆ. ಒಂದು ಗ್ರಹ ಸಂಖ್ಯೆಗಳು. ಎರಡು ರಾಶಿಯ ನವಾಂಶ ಸಂಖ್ಯೆಗಳು. ಮೇಷಾದಿ ರಾಶಿಗಳಿಗೆ ಹತ್ತು ಹತ್ತು ಸಂಖ್ಯೆಗಳು. ಇದರಲ್ಲಿ ಏಕಾಂಕ ಸಂಖ್ಯೆಗಳು ಆ ರಾಶಿಯ ನವಾಂಶಗಳ ಸಂಖ್ಯೆಗಳು. ಪೂರ್ಣಾಂಕಗಳು ಆ ರಾಶಿಯ ಸಮಗ್ರ ಫಲವನ್ನು ತೋರಿಸುವ ಸಂಖ್ಯೆಗಳು. ಇದು ಸವ್ಯ ಚಕ್ರ. ಕೆಲವರು ಈ ಎಣಿಕೆಯನ್ನು ಮೇಷದಿಂದ ಏಳನೆಯದಾದ ತುಲಾ ರಾಶಿಯಿಂದ ಎಣಿಸುವರು. ಇದು ಅಪಸವ್ಯ ಚಕ್ರ. ಇದಕ್ಕೆ ಕಾರಣ ನೂರ ಇಪ್ಪತ್ತು ಸಂಖ್ಯೆಗಳನ್ನು ಬಳಕೆಯಲ್ಲಿ ಅರವತ್ತಕ್ಕೆ ಇಳಿಸಿಕೊಂಡು ಎರಡು ಭಾಗಗಳನ್ನಾಗಿ ವಿಂಗಡಿಸಿರುವುದು. ಯಾವುದಾದರೂ ಒಂದು ಕ್ರಮದಲ್ಲಿ ಅಭ್ಯಾಸ ಮಾಡಿದಲ್ಲಿ ಆ ಕ್ರಮ ಪ್ರಯೋಗ ಸಿದ್ಧ ಆಗುತ್ತದೆ. ಆದರೆ ಮೇಷಾದಿ ನೂರ ಇಪ್ಪತ್ತು, ತುಲಾದಿ ನೂರ ಇಪ್ಪತ್ತು ಹೀಗೆ ಎಣಿಸುವುದೂ ಸರಿ ಎಂದು ಕೆಲವರ ಮತ.

ಗ್ರಹ ಸಂಖ್ಯೆಗಳು ಜೀವನದ ಎಲ್ಲಾ ವ್ಯವಹಾರಗಳಲ್ಲಿ ಉಪಯೋಗಕ್ಕೆ ಬರುತ್ತವೆ. ರಾಶಿ ಸಂಖ್ಯೆಗಳು ಜಾತಕಗಳನ್ನು ವಿಮರ್ಶೆ ಮಾಡುವಾಗ ಮಾತ್ರ ಉಪಯೋಗಕ್ಕೆ ಬರುತ್ತವೆ. ಆರೂಢ ಪ್ರಶ್ನೆಗಳನ್ನು ಹೇಳುವಾಗಲೂ ಸಹ ರಾಶಿ ಸಂಖ್ಯೆಗಳು ಉಪಯೋಗಕ್ಕೆ ಬರುತ್ತವೆ. ಕಾರಣ ಆರೂಢ ಪ್ರಶ್ನೆ ಕುಂಡಲಿ ಜಾತಕ ಕುಂಡಲಿ ನಮೂನೆ ಇರುತ್ತದೆ. ಆದರೆ ಗ್ರಹ ಸಂಖ್ಯೆಗಳ ಬಳಕೆ ವೃತ್ತಿಪಂಡಿತನ ಕಲ್ಪನಾಶಕ್ತಿಯನ್ನು ಅವಲಂಬಿಸಿರುತ್ತದೆ. ವ್ಯಾಪಾರ, ಉದ್ಯಮ, ಉದ್ಯೋಗ, ವ್ಯವಹಾರ ಭಾಗೀದಾರ ಸಂಘಗಳು ವಾಹನಗಳಿಗೆ ಬಳಸುವ ದಾಖಲೆಗಳ ಸಂಖ್ಯೆಗಳು. ನ್ಯಾಯಾಂಗ ವ್ಯವಹಾರದಲ್ಲಿ ಕಟ್ಟಳೆ ದಾಖಲಾತಿ ಸಂಖ್ಯೆಗಳು ಇನ್ನೂ ಎಷ್ಟೋ ನಮೂನೆ ವ್ಯವಹಾರಗಳಲ್ಲಿ ಗ್ರಹಸಂಖ್ಯೆಗಳ ಬಳಕೆ ರೂಢಿಯಲ್ಲಿವೆ.

### ದೈನಂದಿನ ಹೋರೆಗಳು – ಗ್ರಹ ಸಂಖ್ಯೆಗಳು

ವ್ಯವಹಾರ ಯಾವುದೇ ನಮೂನೆ ಇರಲಿ. ವಿಮರ್ಶೆ ಮಾಡುವ ಕಾಲದ ಮಹಿಮೆ ಸ್ಪಷ್ಟ. ಈ ಕಾಲದಿಂದ ಗ್ರಹದ ಅರಿವು. ಆ ಗ್ರಹದ ಸಂಖ್ಯೆ ಆಗ ಆ ವ್ಯವಹಾರಕ್ಕೆ ಬಳಸಲು ಅನುಕೂಲ. ಕೇಳುವವನಿಗೆ ಆ ಸಂಖ್ಯೆಯೇ ಪ್ರಧಾನದ ಮಹತ್ವ ಬೀರುವ ಸಂಖ್ಯೆ ಆಗುತ್ತದೆ. ಉದಾಹರಣೆಗೆ ಪ್ರಶ್ನೆ ಕೇಳುವವನು ಬಂದಾಗ ಸೂರ್ಯನ ಹೋರೆ ನಡೆಯುತ್ತಿರುತ್ತದೆ. ಆಗ ಸೂರ್ಯನ ಸಂಖ್ಯೆಯಾದ ಒಂಭತ್ತರ ಮಹತ್ವ ಆ ವ್ಯಕ್ತಿಗೆ ಅನುಕೂಲ. ಈ ಸಂಖ್ಯೆಯನ್ನು ಕೇಳುವ ವ್ಯವಹಾರಕ್ಕೆ ಸಂಬಂಧಿಸಿದಂತೆ ಉಪಯೋಗಿಸುವುದು ವೃತ್ತಿ ಪಂಡಿತನ ಬುದ್ಧಿಬಲವನ್ನು ಆಶ್ರಯಿಸಿರುತ್ತದೆ.

ಅಲ್ಲದೆ ಕೇಳುವವನ ಹುಟ್ಟುದಿನದ ಜನ್ಮದಿನಾಂಕಕ್ಕೆ ಈ ಹೋರೆಯ ಗ್ರಹದ ಸಂಖ್ಯೆಯ ಬಂಧುತ್ವದ ಮಹಿಮೆ ಪರಿಣಾಮದ ಶುಭಾಶುಭವನ್ನು ನಿರ್ಣಯ ಮಾಡುತ್ತದೆ. ಉದಾಹರಣೆಗೆ ವ್ಯಕ್ತಿಯ ಜನ್ಮದಿನಾಂಕ ಒಂದು. ಆಗ ಇದರ ಸಂಖ್ಯಾಗ್ರಹ ಶನಿ. ಆದರೆ ವ್ಯವಹಾರ ವಿಮರ್ಶೆ ಮಾಡುವಾಗ ಇರುವ ಹೋರೆಯ ಗ್ರಹ ಸೂರ್ಯ. ಆಗ ಇದರ ಪರಿಣಾಮ ಸೂರ್ಯ ಶನಿಗಳ ಶತ್ರುತ್ವದ ಕಾರಣ ಅನುಕೂಲ ಆಗದು. ಹೀಗೆ ಹೋರಾಗ್ರಹ. ದಿನಾಂಕ ಗ್ರಹ ಎರಡರ ಸಂಬಂಧ ಫಲದ ಮೇಲೆ ತನ್ನ ಪರಿಣಾಮವನ್ನು ಬೀರುತ್ತದೆ. ಹಾಗಿಲ್ಲ ಕೇಳುವ ದಿನದ ಸಂಖ್ಯೆಯ ಗ್ರಹ ಆ ಕಾಲದಲ್ಲಿ ನಡೆಯುವ ಹೋರಾಗ್ರಹ ಎರಡರ ಸಂಬಂಧದ ಪರಿಣಾಮ ವನ್ನೂ ಸಹ ಗಣನೆಗೆ ತೆಗೆದುಕೊಳ್ಳಬೇಕು. ಇದರಿಂದ ಈ ಸಂಖ್ಯಾಶಾಸ್ತ್ರದ ಗ್ರಹ ಸಂಖ್ಯೆಗಳ ಬಳಕೆಗೆ ಕೀರ್ತಿ ಬರುತ್ತದೆ.

## ಹೋರೆಗಳ ಕ್ರಮ

ಜ್ಯೋತಿಷ್ಯ ಶಾಸ್ತ್ರದಲ್ಲಿ ಸೂರ್ಯನೇ ಪ್ರಧಾನ. ಸೂರ್ಯ ಸಿದ್ಧಾಂತ ಅಂದರು. ಮಹರ್ಷಿಗಳು ಈ ಕಾರಣ ಎಲ್ಲವನ್ನೂ ಸೂರ್ಯನಿಂದಲೇ ಮೊದಲು ಮಾಡಿದರು. ಇವನು ಆದಿ. ಈ ಕಾರಣ ಮೊದಲನೆಯ ದಿನವನ್ನು ಆದಿವಾರ ಅಂದರು. ಈ ಕಾರಣ ಹೋರೆಗಳೂ ಸಹ ಸೂರ್ಯನಿಂದಲೇ ಪ್ರಾರಂಭ. ಭೂಮಿ ಸೂರ್ಯನ ಸುತ್ತ ತಿರುಗುತ್ತೆ. ಅಲ್ಲದೆ ತನ್ನ ಅಕ್ಷದ ಮೇಲೆ ಒಂದು ಸುತ್ತು ತಿರುಗುತ್ತೆ. ಆಗ ಸೂರ್ಯನ ಬೆಳಕು ಭೂಮಿಯ ಎಲ್ಲಾ ಭಾಗಗಳಿಗೂ ಬೀಳುತ್ತದೆ. ನಿಗದಿಯಾದ ಕಾಲದಲ್ಲಿ ಭೂಮಿಯ ಅರ್ಧ ಸೂರ್ಯನತ್ತ ಮುಖ. ಆಗ ಆ ಅರ್ಧಕ್ಕೆ ಬೆಳಕು. ಇದನ್ನು ದಿನ ಅಂದರು. ಉಳಿದರ್ಧಕ್ಕೆ ಕತ್ತಲು ಆ ಭಾಗಕ್ಕೆ ಆಗ ರಾತ್ರಿ ದಿನಕ್ಕೆ ಸಂಸ್ಕೃತದಲ್ಲಿ ಅಹಸ್ಸು ಅಂದರು. ಈಗ ಅದು ಅಹೋರಾತ್ರಿ ಆಯಿತು. ಇದು ದಿನದ ಎರಡು ಭಾಗಗಳು. ಮೊದಲಕ್ಷರ ಕೊನೆಯಕ್ಷರಗಳನ್ನು ತೆಗೆದರೆ ಆಗ ಅದು ಹೋರಾ ಆಗುತ್ತದೆ. ಈ ಕಾರಣ ಈ ಶಾಸ್ತ್ರಕ್ಕೆ ಹೋರಾಶಾಸ್ತ್ರ ಅಂದರು.

ಭೂಮಿ ತನ್ನ ಅಕ್ಷದ ಮೇಲೆ ತಿರುಗುವ ಕಾಲಕ್ಕೆ ಅಹೋರಾತ್ರಿ ಅಂದರು. ಈ ಕಾಲವನ್ನು ಇಪ್ಪತ್ತನಾಲ್ಕು ಭಾಗಗಳನ್ನಾಗಿಸಿ ಅದನ್ನು ಹೋರೆ ಎಂದು ಕರೆದರು. ಆಂಗ್ಲರು ಬಹುಶಃ ಇದನ್ನು ಹವರ್ ಎಂದಿರಬೇಕು. ಅಂತೂ ಒಂದು ದಿನಕ್ಕೆ ಇಪ್ಪತ್ತ ನಾಲ್ಕು ಹೋರೆಗಳು. ಗಣತಕ್ಕೆ ಮೊದಲು ತೆಗೆದುಕೊಂಡ ದಿನಕ್ಕೆ ಸೂರ್ಯನ ಹೆಸರು ಕೊಟ್ಟು ಆದಿವಾರ, ಭಾನುವಾರ ಅಂದರು. ಸೂರ್ಯನ ಉದಯ ಕಾಲದಿಂದ ಹೋರೆಗಳನ್ನು ಸೂರ್ಯನಿಂದಲೇ ಎಣಿಸಿದರು. ಸೂರ್ಯ, ಶುಕ್ರ, ಬುಧ, ಚಂದ್ರ, ಶನಿ, ಗುರು, ಕುಜ ಈ ಕ್ರಮದಲ್ಲಿ ಹೋರೆಗಳನ್ನು ಎಣಿಸಿದರು. ಕಾರಣ ಇದೇಕ್ರಮದಲ್ಲಿ ಗ್ರಹಗಳು ಆಕಾಶದಲ್ಲಿ ತಮ್ಮ ತಮ್ಮ ಪಥದಲ್ಲಿ ಸೂರ್ಯನ ಸುತ್ತ ತಿರುಗುತ್ತವೆ. ಈ ಕ್ರಮದಲ್ಲಿ ಹೋರೆಗಳನ್ನು ಎಣಿಸಿದಾಗ ಮಾರನೆಯ ದಿನ ಸೂರ್ಯನ ಉದಯ ಕಾಲಕ್ಕೆ ಸೂರ್ಯನಿಂದ ನಾಲ್ಕನೆಯ ಹೋರೆ ನಡೆಯುತ್ತದೆ. ಕಾರಣ ಇಪ್ಪತ್ತನಾಲ್ಕು ಹೋರೆಗಳಲ್ಲಿ ಇಪ್ಪತ್ತೊಂದು ಹೋರೆಗಳಲ್ಲಿ ಗ್ರಹಗಳ ಕ್ರಮದಂತೆ ಮೂರು ಸಲ ತಿರುಗುತ್ತದೆ. ಉಳಿದ ಮೂರು ಹೋರೆಗಳ ನಂತರ ನಾಲ್ಕನೆಯ ಹೋರೆಯಲ್ಲಿ ಮರುದಿನದ ಸೂರ್ಯನ ಉದಯವಾಗುತ್ತದೆ. ಆಗ ಆ ನಾಲ್ಕನೆಯ ಹೋರೆಯ ಗ್ರಹ ಆ ದಿನದ ವಾರದ ಹೆಸರನ್ನು

ಕೊಡುತ್ತದೆ. ಈ ಕ್ರಮದಲ್ಲಿ ವಾರಗಳು ಕ್ರಮವಾಗಿ ಸೋಮವಾರ, ಮಂಗಳವಾರ, ಬುಧವಾರ, ಗುರುವಾರ, ಶುಕ್ರವಾರ ಶನಿವಾರ ಎಂದಾಗುತ್ತವೆ. ಸುಲಭವಾಗಿ ತಿಳಿಯಲು ಆಯಾ ವಾರದ ಸೂರ್ಯನ ಉದಯದಿಂದ ಮೊದಲನೆಯ ಹೋರೆ ಆ ವಾರದ ಗ್ರಹದ್ದೇ ಆಗುತ್ತದೆ. ಅಲ್ಲಿಂದ ಇತರ ಹೋರೆ ಗ್ರಹಗಳನ್ನು ಮೇಲಿನ ಕ್ರಮದಂತೆ ಪಟ್ಟಿ ಮಾಡಿಕೊಳ್ಳಬೇಕು. ಕೇಳುವವನು ಬಂದಾಗ ಆ ಕಾಲಕ್ಕೆ ಯಾವ ಗ್ರಹದ ಹೋರೆ ನಡೆಯುತ್ತದೆ. ಆ ಗ್ರಹದ ಸಂಖ್ಯೆಯನ್ನು ವಿಮರ್ಶೆ ಮಾಡುವಾಗ ಬಳಸಬೇಕು.

## ಸೂರ್ಯನ ಪ್ರಭಾವ – ಸಂಖ್ಯೆ ಒಂಭತ್ತು

ಕತ್ತಲುಬೆಳಕು ಈ ಎರಡು ತತ್ವಗಳು ಒಂದೇ ನಾಣ್ಯದ ಎರಡು ಮುಖಗಳು. ಕತ್ತಲಿನಿಂದ ಬೆಳಕೋ ಬೆಳಕಿನಿಂದ ಕತ್ತಲೊ? ಎಂದರೆ ಬೆಳಕಿನಿಂದ ಕತ್ತಲು ಎನ್ನುವುದು ಸಹಜ ಎಂದು ಕಾಣುತ್ತೆ. ಕಾರಣ ಸೂರ್ಯನೇ ಬೆಳಕು. ಇವನ ಮಗ ಶನಿ. ಇಬ್ಬರು ಪರಸ್ಪರ ವಿರೋಧ ತತ್ವಗಳ ಕಾರಕರು. ಈ ಕಾರಣ ಇವರು ಪರಸ್ಪರ ಶತ್ರುಗಳು.

ಕತ್ತಲಿನ ಗ್ರಹ ಶನಿ. ಇವನ ಸಂಖ್ಯೆ ಒಂದು ಮತ್ತು ಎಂಟು (೧-೮) ಈ ಕತ್ತಲನ್ನು ನೀಗಲು ವಿರೋಧ ತತ್ವದ ಬೆಳಕಿನ ಸೂರ್ಯನ ತತ್ವ ಅಗತ್ಯ. ಸೂರ್ಯನ ಸಂಖ್ಯೆ ಒಂಭತ್ತು (೯). ಸಕಲ ವಿಧವಾದ ಶನಿಯ ದೋಷಗಳನ್ನು ಹೋಗಲಾಡಿಸಲು ಈ ಬೆಳಕಿನ ಒಂಭತ್ತು ಸಂಖ್ಯೆ (೯) ಸರ್ವಕಾಲಕ್ಕೂ ಅಗತ್ಯ

ಬೇರೆ ಬೇರೆ ಗ್ರಹಗಳ ಅನಿಷ್ಟ ಫಲಗಳು ಆಯಾ ಗ್ರಹಗಳಿಗೆ ಉಂಟಾಗುವ ಶನಿಯ ಸಂಬಂಧದಿಂದ ಆಗುತ್ತವೆ. ಈ ಅನಿಷ್ಟ ಫಲಗಳ ಸಂಕೇತವಾಗಿ ಪ್ರತಿ ಗ್ರಹಕ್ಕೂ ಒಂದೊಂದು ಅನಿಷ್ಟ ಸಂಖ್ಯೆ ಇರುತ್ತೆ. ಈ ಸಂಖ್ಯೆಗಳಿಗೆ ಶುಭತ್ವವನ್ನು ಕೊಡಲು ಆ ಸಂಖ್ಯೆಗೆ ಈ ಬೆಳಕಿನ ಸಂಖ್ಯೆಯಾ ಒಂಭತ್ತು ಬೆರೆಯಬೇಕು. ಆಗ ಆ ಸಂಖ್ಯೆ ತೋರಿಸುವ ಗ್ರಹದ ಅಶುಭ ಫಲಗಳನ್ನು ತೊಡೆದು ಹಾಕಿ ಶುಭ ಫಲಗಳು ನಡೆಯಲು ಸಾಧ್ಯವಾಗುತ್ತದೆ.

### ಸೂರ್ಯನ ಹೋರೆ-ಕಾರ್ಯ ಸಾಧನೆ

ಕಲ್ಮಷ ರಹಿತವಾದ ಹೊಂಬೆಳಕು ಸೂರ್ಯನ ಲಕ್ಷಣ. ಇದು ಕತ್ತಲಿನ ಶತ್ರು. ಕತ್ತಲು ದೋಷಗಳ ಸಂಕೇತ. ಈ ಕಾರಣ ಸೂರ್ಯನ ಕಾಲ ಸೂರ್ಯನ ಹೋರೆ ಉಳಿದ ಹೋರೆಗಳಲ್ಲಿ ಮೂಡಿದ ದೋಷಗಳನ್ನು ನಿವಾರಿಸುತ್ತದೆ. ಇದರಿಂದ ಈ ಹೋರೆಯಕಾಲವು ಆಯಾ ದಿನದಲ್ಲಿ ಕಾರ್ಯ ಸಾಧನೆಗೆ ಉತ್ತಮ ಕಾಲ ಎನ್ನಬಹುದು.

ಈ ಶನಿ ಪೂರ್ವಾರ್ಜಿತ ಕರ್ಮಗಳಿಂದ ಅನುಭವಿಸಲೇಬೇಕಾದ ಕಷ್ಟಗಳನ್ನು ತೋರಿಸುತ್ತಾನೆ. ಈ ಕರ್ಮಫಲಗಳು ಸೂಕ್ತವಾದ ಶಾಂತಿ ಕ್ರಮಗಳಿಂದ ಶಮನವಾಗಿ ಶುಭ ಫಲಗಳನ್ನು ಅನುಭವಿಸಲು ಸಹಾಯ ಮಾಡುತ್ತವೆ. ಈ ಶಾಂತಿ ಕ್ರಮಗಳನ್ನು ಆಚರಿಸಲು ಪೂರ್ವಜರು ವೇದಗಳನ್ನು ಆಶ್ರಯಿಸುತ್ತಿದ್ದರು. ವೇದಗಳು ಈ ಕರ್ಮಫಲವನ್ನು ಹೋಗಲಾಡಿಸಿ ಶುಭಫಲವನ್ನು ಕೊಡುವ ದೇವತೆಗಳು ಮತ್ತು ಅವರ ಪ್ರೀತಿಸಂಪಾದನೆಗಾಗಿ ಮಾಡಬೇಕಾದ ಪೂಜಾವಿಧಿಗಳು. ಮಂತ್ರಗಳು ಇತ್ಯಾದಿಗಳ ನಿಘಂಟು. ಈ ವೇದಗಳಿಗೆ ಮೂಲವಾದ

ಗಾಯತ್ರೀ ಮಂತ್ರವು ಈ ಸೂರ್ಯನ ಶಕ್ತಿ ದೇವತೆ. ಈ ಕಾರಣ ಸರ್ವಮಂತ್ರಗಳಿಗೂ ಸೂರ್ಯನೇ ಮೂಲನು ಎಂದರೆ ತಪ್ಪಲ್ಲ. ಇಂತಹ ಸೂರ್ಯನನ್ನು ಶ್ರೀಮನ್ನಾರಾಯಣನ ಒಂದು ವಿಭೂತಿ ಎಂದರು.

ಈ ಗಾಯತ್ರೀ ಮಂತ್ರವನ್ನು ಉಪಾಸನೆ ಮಾಡುವ ಮಂದಿಯೇ ಬ್ರಾಹ್ಮಣರು. ಈ ಮಂತ್ರಶಕ್ತಿಯಿಂದ ಇವರಿಗೆ ಅಪಾಯಗಳನ್ನು ಹೋಗಲಾಡಿಸುವ ಉಪಾಯಗಳ ಜ್ಞಾನ ಉಂಟಾಗುತ್ತದೆ. ಈ ಜ್ಞಾನದಿಂದ ಅವರು ಜನಗಳಿಗೆ ಕಲ್ಯಾಣವನ್ನುಂಟು ಮಾಡುತ್ತಾರೆ. ಇದರಿಂದ ಅವರಿಗೆ ಗುರುಗಳು ಎಂದು ಮರ್ಯಾದೆ ಕೊಟ್ಟು ಗೌರವಿಸುತ್ತಾರೆ. ಈ ಗುರುಜನಗಳ ಸಹಾಯದಿಂದ ಜನಗಳು ಕರ್ಮಗಳಿಗೆ ಶಾಂತಿಯನ್ನು ಆಚರಿಸಿ ಶುಭವನ್ನು ಪಡೆಯುತ್ತಾರೆ. ಈ ವಿಧವಾದ ಕರ್ಮಾಚರಣೆಗೆ ಈ ಸೂರ್ಯನ ಹೋರೆಯು ಅತ್ಯಂತ ಶುಭ ಕಾಲವು.

ರೋಗ ರುಜಿನಾದಿಗಳಿಗೆ ಮೂಲ ಕಾರಣ ಶನಿ. ಇದನ್ನು ಹೋಗಲಾಡಿಸಲು ವೈದ್ಯರು ಅಗತ್ಯ. ಇವರಿಗೆ ರೋಗನಾಶಕ ಔಷಧಗಳ ಜ್ಞಾನ ಇರುತ್ತದೆ. ಯಾವ ರೋಗಕ್ಕೆ ಯಾವ ಔಷಧ ಎನ್ನುವ ಸಕಾಲಿಕ ಸ್ಫೂರ್ತಿ ಬೇರೆ. ಇದು ಸೂರ್ಯನ ಪ್ರಸಾದ ಸೂಚಕವಾಗಿದ್ದು ಸೂರ್ಯನ ಹೋರೆ ಅತ್ಯಂತ ಶುಭಪ್ರದ ಎಂದರು. ಅಂದರೆ ಪ್ರತಿದಿನ ಈ ಸೂರ್ಯನ ಹೋರೆ ಬಂದಾಗ ಔಷಧ ಪ್ರಾರಂಭಿಸಲು ಶುಭವಾದ ಕಾಲ ಎಂದರ್ಥ.

ಸೂರ್ಯನು ಗ್ರಹ ರಾಜನು. ರಾಜ ಎಂದರೆ ಸರಕಾರ. ಸರಕಾರದ ವಿಶಿಷ್ಟ ಕೆಲಸಗಳಿಗೆ ಈ ಸೂರ್ಯನೇ ಕಾರಣನು. ಸೂರ್ಯನು ಸರ್ವಕಾಲದಲ್ಲಿಯೂ ಬಲಿಷ್ಠನು. ಆದರೆ ತುಲಾ ರಾಶಿ ಇವನಿಗೆ ನೀಚರಾಶಿ ಎಂದರು. ಈ ರಾಶಿಯಲ್ಲಿ ಬಲವಿಲ್ಲ ಎಂದರು. ಅಂದರೆ ನಮಗೆ ಅವನ ಬಲವಿಲ್ಲ ಎಂದರ್ಥ. ಸರಕಾರದ ಕೆಲಸಗಳು ಅನುಕೂಲವಾಗುವುದಿಲ್ಲ. ಅನುಕೂಲದ ಅಧಿಕಾರಿಗಳು ಕೈಗೆ ಸಿಗುವುದಿಲ್ಲ. ಅಲ್ಲದೆ ಅಧಿಕಾರಿಗಳಿಗೂ ಸಹ ಆಗಾಗ ಬದಲಾವಣೆಗಳು. ಅಂತೂ ನಿಮಗೆ ಸರಕಾರದ ಕೆಲಸಗಳು ಕೈಗೂಡುವುದಿಲ್ಲ.

ಸೂರ್ಯನಿಗೆ ಬಲವಿಲ್ಲ ಎಂದರೆ ಸೂರ್ಯನಿಲ್ಲದಿರುವಾಗ ರಾತ್ರಿಯಲ್ಲಿ ಮಾಡುವ ಕೆಲಸಗಳು ಕೈಗೂಡುವುವು. ಖಾಸಗಿ ವ್ಯವಹಾರಗಳಲ್ಲಿ ಜಯ ಎಂದರ್ಥ. ಈ ಸೂರ್ಯನ ಹೋರೆ ನಡೆಯುವಾಗ ಸರಕಾರದ ಕೆಲಸಗಳು ನಡೆಯವು. ಆದರೆ, ಖಾಸಗಿ ಕೆಲಸಗಳಿಗೆ ಶುಭ. ಈ ಕಾಲದಲ್ಲಿ ಸೂರ್ಯನ ವೈರಿಗಳಿಗೆ ಬಲವಿರುತ್ತೆ. ಆಡಳಿತಕ್ಕೆ ಹಾನಿ ಎಣಿಸುವವರಿಗೆ ಸಕಾಲ ಎನ್ನಬಹುದು. ಈ ಕಾಲವು ಅಕ್ಟೋಬರ್ ೧೭ರಿಂದ ನವೆಂಬರ್ ೧೬ರ ವರೆಗೆ ಇರುವುದು.

ಪ್ರತಿ ವರ್ಷ ಏಪ್ರಿಲ್ ೧೪ ರಿಂದ ಮೇ ೧೫ರ ವರೆಗೆ ಮೇಷ ಮಾಸ. ಈ ಕಾಲದಲ್ಲಿ ಸೂರ್ಯನಿಗೆ ಹೆಚ್ಚಿನ ಬಲವಿರುತ್ತೆ. ಈ ತಿಂಗಳಿನಲ್ಲಿ ಸರಕಾರದ ಕೆಲಸಗಳು ಸುಗುಮ. ಸೂರ್ಯನ ಹೋರೆಯ ಅತ್ಯಂತ ಬಲಿಷ್ಠ ಕಾಲ. ಆಗ ಅನುಕೂಲದ ಅಧಿಕಾರಿಗಳು ಕೈಗೆ ಸಿಕ್ಕಿ ಕೆಲಸಗಳು ಹೂವಿನ ಸರದಂತೆ ಸುಗಮ.

ಈ ಹೋರೆಗೆ ಸಂಖ್ಯೆ ಒಂಭತ್ತು (೯). ಇದರ ಉಪಯೋಗದಿಂದ ಅದೃಷ್ಟ ಪ್ರಾಪ್ತಿ ಆಗುತ್ತೆ.

# ಸಂಖ್ಯೆ ಮೂರು (೩) ಆರು (೬) ಕುಜ ಹೋರೆ

ಕುಜನ ಸಂಖ್ಯೆಗಳು ಮೂರು (೩) ಮತ್ತು ಆರು (೬). ಕುಜನಿಗೆ ಶನಿಯ ಸಂಬಂಧವಿದೆ. ಆಗ ಈ ಮೂರು (೩) ಸಂಖ್ಯೆ ಬಲಿಷ್ಠ ಆಗಿರುತ್ತದೆ. ಈ ಕುಜಶನಿ ಯೋಗದ ವಿಷಯಗಳಿಗೆ ಈ ಹೋರೆ ಪ್ರಧಾನಾಗಿ ಶುಭ ನೀಡುತ್ತದೆ. ಈ ಯೋಗದಲ್ಲಿ ಯಂತ್ರ ಉದ್ಯಮ, ಕೈಗಾರಿಕೆಗಳ ಯತ್ನ ಶುಭ. ಶಸ್ತ್ರ ಚಿಕಿತ್ಸೆ, ದೂರ ಪ್ರಯಾಣ, ವಿದೇಶದ ವ್ಯವಹಾರಗಳಿಗೂ ಈ ಕಾಲ ಶುಭ. ಯಂತ್ರ ರಿಪೇರಿ, ಬೇಸಾಯ ಯತ್ನಕ್ಕೂ ಇದು ಸರಿಗಾಲ.

ಕೈಗಾರಿಕೆಗಳ ಯೋಜನೆಗೆ ಈ ಕಾಲ ಶುಭ. ಮೂರು ಜನ ಭಾಗೀದಾರರು ಅನುಕೂಲರು. ಮೂರು (೩) ಸಂಖ್ಯೆಯ ಮಂದಿ ಆರು (೬) ಸಂಖ್ಯೆಯ ಮಂದಿಗೆ ಈ ಹೋರೆ ಶುಭಪ್ರದ. ಸೋದರ ವರ್ಗದ ಜನಗಳ ಭಾಗದಲ್ಲಿ ಮಾಡುವ ಎಲ್ಲಾ ಕೆಲಸಗಳಿಗೂ ಈ ಹೋರೆಯು ಜಯವನ್ನು ತೋರಿಸುತ್ತದೆ.

ಮೂರನೆಯ ಗರ್ಭದವರು, ಮೂರನೆಯತಾರೀಖು ಹುಟ್ಟಿದವರು ಮೂರು (೩) ಸಂಖ್ಯೆಯ ಮಂದಿ. ಈ ಮಂದಿ ದುಡಿಯುವ ಮಂದಿ. ಇವರಲ್ಲಿ ಹಣ ಇರದು, ಅನುಕೂಲವೂ ಇರದು. ಈ ಕಾರಣ ಇವರು ದುಡಿಮೆಯ ಭಾಗದವರು. (working partners) ಮೂರು ಮಂದಿ ಭಾಗೀದಾರರಲ್ಲಿ ಮೂರನೆಯವನು ದುರದೃಷ್ಟವಂತನು. ಧನ ಪಿಪಾಸೆಯೂ ಹೆಚ್ಚು. ಇವರಿಂದ ಉದ್ಯಮಕ್ಕೆ ವಿಘ್ನ ಏರ್ಪಡುತ್ತದೆ. ಇವರ ಬಗ್ಗೆ ಕೆಲವರಿಗೆ ಗೌರವವೂ ಕಡಿಮೆ.

ಜಯಾಪಜಯಗಳ ಸಮಸ್ಯೆಗೆ ಈ ಹೋರೆ ಮೊದಲನೆಯ ಸಲ ಬಂದಾಗ ಅಪಜಯ ಆದೀತು. ಕುಜನಿಗೆ ಶನಿಯೋಗ ಇರುವುದೇ ಇದಕ್ಕೆ ಕಾರಣ. ಆಗ ಈ ಯೋಗದ ದೋಷ ಕತ್ತರಿಸಲು ಶ್ರೀ ದುರ್ಗಾ ಪೂಜೆ ಉತ್ತಮ. ಹಾಗಿಲ್ಲ ಸುಬ್ರಹ್ಮಣ್ಯ ಸ್ವಾಮಿಯ ಸೇವೆ ಅಗತ್ಯ. ಈ ಶಾಂತಿ ಮಾಡಿದಲ್ಲಿ ಇದೇ ಕುಜನ ಹೋರೆ ಪುನಃ ಬರುವಾಗ, ಈ ಕೆಲಸಕ್ಕೆ ಮರಳಿ ಯತ್ನ ಮಾಡುವುದು ಲೇಸು. ಇದರಿಂದ ಮೂರು (೩) ಆರು (೬) ಸಂಖ್ಯೆಯ ಮಂದಿಗೆ ಜಯವು ಲಭಿಸುತ್ತದೆ. ಇಂಜನಿಯರಿಂಗ್, ಕಂಟ್ರಾಕ್ಟ್ ಕೆಲಸ, ಯಂತ್ರ ಉದ್ಯಮದ ಕೈಗಾರಿಕೆಗೆ ಈ ಹೋರೆ ಶುಭ. ಮೊದಲು ದುರ್ಗಾ, ಕುಮಾರರ ಶಾಂತಿಸೇವೆ ಮಾಡುವುದರಿಂದ ಈ ಕಾಲ ಶುಭದ ಫಲವನ್ನೇ ಕೊಡುತ್ತದೆ.

ಈ ಕುಜನ ಹೋರೆಗೆ ಮೂರು (೩) ಸಂಖ್ಯೆಯೇ ಪ್ರಧಾನ. ಮೂರನೆಯ ತಾರೀಖು ಮೂರನೆಯ ತಿಂಗಳು ಈ ಹೋರೆಯ ಶುಭಾಶುಭ ಯೋಗ ಸ್ಪಷ್ಟ ಆಗುತ್ತದೆ. ಈ ಉದ್ಯಮ ಶುರುವಾದ ಮೂರನೆಯ ತಿಂಗಳು ವಿಘ್ನ ಕಂಡೀತು. ಆಗ ದುರ್ಗಾ ಪೂಜೆಯಿಂದ ಪರಿಹಾರ. ಆರನೆಯ ತಿಂಗಳಿನಿಂದ ಈ ಯತ್ನಕ್ಕೆ ಬಲ ಮೂಡುತ್ತದೆ. ಮೂರು ವರ್ಷಗಳ ಕಾಲ ಶ್ರದ್ಧೆಯ ದುಡಿಮೆ ಅಗತ್ಯ. ಮೂರು ವರ್ಷಗಳ ನಂತರ ಈ ಸಂಬಂಧದ ವ್ಯಾಪಾರ ಉದ್ಯಮಗಳು ತ್ವರಿತಗತಿಯಲ್ಲಿ ಮುಂದುವರೆಯುತ್ತವೆ. ಮೊದಲು ಮೂರು ವರುಷಗಳು ಬಂಡವಾಳಕ್ಕೆ ಸರಿ ತೂಗುವ ಲಾಭ ಬರದು. ಮೂರು ವರುಷಗಳ ನಂತರ ಆರು ವರುಷಗಳಲ್ಲಿ ಆದಾಯವು ವರ್ಷೇ ವರ್ಷೇ ಜಾಸ್ತಿಯಾಗುತ್ತದೆ. ಆರು ವರುಷಗಳ ನಂತರ ಉದ್ಯಮವು ಸಂಪೂರ್ಣ ಜಯಪ್ರದ ಅಲ್ಲದೆ ಕನಿಷ್ಠ ಮೂರು ಜನರಿಗೆ ಜೀವನ ಕೊಡುತ್ತೆ. ಹಾಗಿಲ್ಲ ಮುನ್ನೂರು ಮಂದಿಗೆ

ಉದ್ಯೋಗವಾಗುತ್ತದೆ. ಇನ್ನೂ ದೊಡ್ಡದಾದರೆ ಮೂರು ಸಾವಿರ ಸಂಸಾರಗಳಿಗೆ ಈ ಉದ್ಯಮ ಅನ್ನ ಕೊಡುತ್ತದೆ.

ಈ ಉದ್ಯಮಕ್ಕೆ ಮೊದಲು ಮೂರು ರೂಪಾಯಿ ಇಲ್ಲ ಮುನ್ನೂರು ರೂಪಾಯಿಗಳ ಬಂಡವಾಳವಾಗಿ ಅದು ಕ್ರಮೇಣ ಮೂರು ಸಾವಿರ ಮೂರು ಲಕ್ಷ ರೂಪಾಯಿಗಳಿಗೆ ಏರುತ್ತದೆ. ಪೂರ್ಣ ಜಯವಾದಾಗ ಅದರ ಬಂಡವಾಳ ಆರು ಸಾವಿರ ಇಲ್ಲ, ಅರವತ್ತು ಸಾವಿರ ಆಗಿ ಆರು ಲಕ್ಷಕ್ಕೆ ಏರುತ್ತದೆ. ಈ ಕೈಗಾರಿಕೆಗೆ ದುಡಿಯುವ ಕೂಲಿ ಕಾರ್ಮಿಕರಿಗೆ ಮೂರು ಸಾವಿರ ರೂ. ಖರ್ಚು ಆಗುತ್ತದೆ. ಹಾಗಿಲ್ಲ ಅರವತ್ತು ಸಾವಿರ ಸಂಬಳ ಸಾರಿಗೆ ಆದೀತು.

## ಪರಜನಗಳಿಂದ ಸುಯೋಗ

ಈ ಸಂಖ್ಯೆಯ ಉದ್ಯಮ ವ್ಯವಹಾರಗಳಲ್ಲಿ ಅದೇ ಊರಿನವರಿಂದ ಅದೃಷ್ಟ ಇರದು. ಪರದೇಶದ ಜನಗಳಿಂದ ಇವರಿಗೆ ಹೆಚ್ಚು ಅನುಕೂಲ. ಕುಜನ ಭಾಷೆಯಾದ ತಮಿಳು ರಾಜ್ಯದವರಿಂದ ಹಾಗಿಲ್ಲ ದೇವಿಕ್ಷೇತ್ರದ ಭಾಷೆಯಾದ ಮಹಾರಾಷ್ಟ್ರ ರಾಜ್ಯದವರಿಂದ ಈ ಉದ್ಯಮ ಪ್ರಗತಿಯನ್ನು ಹೊಂದುತ್ತದೆ. ತಯಾರಾದ ವಸ್ತುಗಳಿಗೆ ಈ ರಾಜ್ಯಗಳಿಂದ ಹೆಚ್ಚಿಗೆ ಬೇಡಿಕೆ ಬರುವುದೆಂದು ಅರ್ಥ. ಅಲ್ಲದೆ ಈ ರಾಜ್ಯಗಳಲ್ಲಿ ಹೆಚ್ಚಿನಂಶ. ಈ ಸಂಖ್ಯೆಯ ಉದ್ಯಮ ಯಶಸ್ವಿ ಆಗುತ್ತದೆ. ಈ ಭಾಷೆ ಮಾತಾಡುವ ಇಲ್ಲ ಆ ಭಾಷೆಯ ರಾಜ್ಯದವರಿಂದ ಪ್ರಗತಿ ಎಂದರ್ಥ.

### ರೋಗ ನಿಧಾನ

ಈ ಕುಜನ ಹೋರೆಯಲ್ಲಿ ಏನೇ ಆದರೂ ಅದು ಆ ಕುಜನ ತತ್ವಕ್ಕೆ ಸೇರಿದ್ದು. ಆ ಘಂಟೆಯಲ್ಲಿ ಬರುವ ರೋಗಿಗೂ ಸಹ ಈ ಕುಜನ ರೋಗವೇ ಇರುತ್ತೆ. ಕುಜನು ಅಗ್ನಿಗ್ರಹ. ಇದರಿಂದಲೇ ಅವನಿಗೆ 'ಅಂಗಾರಕ' ಎಂದೂ ಹೆಸರು. ಈ ಅಗ್ನಿ, ಹೆಚ್ಚಳದಿಂದ ಆಗುವ ರೋಗ ಇವನದು. ಉದಾಹರಣೆಗೆ ಮೂಲವ್ಯಾಧಿ. ಅಜೀರ್ಣ, ಉಷ್ಣ ವಾತದಿಂದ ಹಸಿವಿಲ್ಲದೇ ಇರುವುದು ಇತ್ಯಾದಿ. ಅಲೆತ, ಹಸಿವು ಬಳಲಿಕೆ ಎಲ್ಲಕ್ಕೂ ಕುಜನೇ ಕಾರಣ.

ಕುಜನು ಆಯುಧ ಅಥವಾ ಶಸ್ತ್ರದ ಗ್ರಹ. ಶಸ್ತ್ರದ ಚಿಕಿತ್ಸೆಯಿಂದ ಗುಣಮುಖ ಆಗುವ ಕಾಯಿಲೆಗಳು ಈ ಕುಜನವು. ಉದಾಹರಣೆಗೆ ದಂತಪೀಡೆ. ಕರುಳಿನ ಬೇನೆ (Appendicities) ಕೈ ಕಾಲು ಮುರಿಯುವ ಆಕಸ್ಮಿಕ ಘಟನೆಗಳಿಗೂ ಈ ಕುಜನೇ ಕಾರಕ. ಕುಜ ಹೋರೆ ನಡೆಯುವಾಗ ಈ ಮೂರು ಸಂಖ್ಯೆಯ ಮಂದಿ ಈ ರೀತಿ ಸಂಭವಿಸುವ ರೋಗಗಳಿಗೆ ತುತ್ತಾಗುತ್ತಾರೆ. ಈ ಕಾರಣ ಈ ಮಂದಿ ಈ ಕಾಲವನ್ನು ಬಿಟ್ಟು ಪ್ರಯಾಣ ಮಾಡಬೇಕು. ಹಾಗಿಲ್ಲ ದೇವಿ, ಕುಮಾರನ ಪೂಜೆ ಮಾಡಿಕೊಂಡು ಪ್ರಯತ್ನ ಮಾಡಬೇಕು ಎಂದರ್ಥ.

## ಎರಡು ಸಂಖ್ಯೆಗಳ ಸಹಕಾರ

ಎರಡು ಬೇರೆ ಬೇರೆ ಸಂಖ್ಯೆಗಳ ಮಿಲನದಿಂದ ಪರಿಣಾಮ ಆಗುತ್ತದೆ. ಆ ಮಿಲನವನ್ನು ಸಾಧಿಸುವುದು ಹೇಗೆ? ಇದರಲ್ಲಿ ನಾನಾ ಕ್ರಮಗಳಿವೆ. ಮೊದಲನೆಯದು ಆ ಎರಡು ಸಂಖ್ಯೆಗಳ ಮಂದಿ ಒಂದಿಗೆ ಸೇರಿ ಕೆಲಸ ಮಾಡುವುದು. ಎರಡನೆಯದು ತಾರೀಖು ಸಂಖ್ಯೆ ತಿಂಗಳಿನ ಸಂಖ್ಯೆ ಸೇರಿಸುವುದು. ಉದಾಹರಣೆಗೆ ಏಳನೆಯ ತಿಂಗಳಿನಲ್ಲಿ ಮೂರನೆಯ ತಾರೀಖು ಇತ್ಯಾದಿ. ಮೂರನೆಯದು ಆ ಸಂಖ್ಯೆಯಷ್ಟು ಬಾರಿ ಪ್ರಯತ್ನ ಮಾಡುವುದು (number of trails). ಉದಾಹರಣೆಗೆ ಮೂರು ಬಾರಿ ಪ್ರಯತ್ನ ಮಾಡುವುದು ಕುಜನಿಗೆ. ಏಳು ಬಾರಿ ರಾಹುವಿಗೆ, ಐದು ಬಾರಿ ಮಾಡುವುದು ಗುರುವಿಗೆ - (ಪಂಚಮನಮಸ್ಕಾರ) ಇತ್ಯಾದಿ. ನಾಲ್ಕನೆಯದು ಆ ಎರಡು ಸಂಖ್ಯೆಗಳ ಸಂಯುಕ್ತ ಸಂಖ್ಯೆ (compound number).ಉದಾಹರಣೆಗೆ ಗುರು ಮಂಗಳರ ಯೋಗಕ್ಕೆ ಹದಿಮೂರು (೧೩), ರವಿ ಮಂಗಳರಿಗೆ ಮೂವತ್ತಮೂರು (೩೩) ಇತ್ಯಾದಿ. ಈ ಸಂಯುಕ್ತ ಸಂಖ್ಯೆಯಷ್ಟು ಮೊತ್ತ ಹಣ ವ್ಯವಹಾರದಿಂದ ಈ ಮಿಲನದ ವ್ಯವಹಾರ ಉದ್ಯಮಗಳಲ್ಲಿ ಜಯ ಆಗುತ್ತೆ. ಆ ಸಂಖ್ಯೆ ಹೊತ್ತ ಅಂಗಡಿಯಿಂದ ವ್ಯಾಪಾರ ಪ್ರಗತಿ ಆಗುತ್ತೆ. ಹಾಗಿಲ್ಲ ಈ ಸಂಖ್ಯೆಯ ವರ್ಷದಲ್ಲಿ ಆ ಫಲ ನಡೆಯುತ್ತೆ. ಕೊನೆಯದಾಗಿ ಆ ಸಂಖ್ಯೆಯ ಇಸ್ವಿ ಬಂದಾಗ ಆ ವ್ಯಾಪಾರದಲ್ಲಿ ಸುಯೋಗ ನಡೆಯುತ್ತೆ.

ಈ ಸಂಖ್ಯೆಗಳ ಯೋಗ ಸುಯೋಗಗಳು ಕಾಲ, ಕರ್ಮ, ವಸ್ತುಗಳಿಗೆ ಅನ್ವಯವಾಗುವಂತೆ ತರತರಹವಾಗಿ ಹೊಂದಿಸಿ ಫಲವನ್ನು ಹೊಂದಬೇಕು ಎಂದರ್ಥ. ಇದಕ್ಕೆ ಕಲ್ಪನೆಯ ಶಕ್ತಿ ಸ್ಫೂರ್ತಿ ದೈವದತ್ತ ಇರಬೇಕು. ಆಗ ಇದರ ಉಪಯೋಗ ಮಹತ್ವದ ಪರಿಣಾಮವನ್ನು ಕೊಡುತ್ತದೆ. ಹಾಗಿಲ್ಲ, ಇಲ್ಲ.

ಈ ಮೂರು (೩) ಸಂಖ್ಯೆಯ ಮಂದಿಯ ಜೊತೆಗೆ ಏಳು ಸಂಖ್ಯೆ (೭) ಮಂದಿ ಬೆರೆತರೆ ಅದು ಕೇಡಿನ ಸಂಕೇತ. ಕಾರಣ ಏಳು ಸಂಖ್ಯೆಯ ರಾಹು ಈ ಕುಜನಿಗೆ ಸೇರಿದರೆ ಆಗ ಅದು ಸರ್ಪ ದೋಷದ ಫಲ ನಡೆಯುತ್ತದೆ. ಇದರಿಂದ ಪರಸ್ಪರ ವಿರೋಧ ಮತ್ತು ಪ್ರಾಣಾಪಾಯದ ಘಟನೆಗಳಿಗೆ ಅವಕಾಶ. ಇದೇ ಫಲವು ಮೂರನೆಯ ತಾರೀಖು ಏಳು ಸಂಖ್ಯೆಯ ಮಂದಿಗೆ ನಡೆಯುತ್ತದೆ. ಹಾಗಿಲ್ಲ ಮೂರನೆಯ ಸಂಖ್ಯೆಯ ಮಂದಿ ಏಳನೆಯ ತಾರೀಖು ಮಾಡುವ ಪ್ರಯತ್ನಗಳಿಗೂ ಅನ್ವಯಿಸುತ್ತದೆ. ಈ ಎರಡು ಸಂಖ್ಯೆಗಳ ಸಂಯೋಗ ಯಾವ ರೀತಿ ಆದರೂ ಸರಿ ಅದರಿಂದ ಫಲ ಶುಭ ಇರದು. ವಿಶೇಷವಾಗಿ ಯಂತ್ರ ಉದ್ಯಮಿಗಳಿಗೆ ಹೆಚ್ಚು ಪರಿಣಾಮ ಕಂಡೀತು.

ಸಂಖ್ಯೆ ಒಂಭತ್ತಕ್ಕೆ ರವಿಯು ಅಧಿಪತಿ. ಈ ಮೂರು ಸಂಖ್ಯೆಯ ಮಂದಿಗೆ ಈ ಒಂಭತ್ತರ ಮಂದಿಯಿಂದ ಹೆಚ್ಚು ಅನುಕೂಲ. ಆದರೆ ಈ ಮೂರು ಸಂಖ್ಯೆ (೩) ಯ ಮಂದಿಗೆ ಒಂಭತ್ತು ಸಂಖ್ಯೆಯ (೯) ಮಂದಿ ನೇರ ಸಿಗರು. ಇದಕ್ಕೆ ಆರು ಸಂಖ್ಯೆಯ (೬) ಮಂದಿ ಅಗತ್ಯ. ಅವರ ಮೂಲಕ ಈ ಸಂಬಂಧ ಎಂದರ್ಥ. ಕಾರಣ ಮೂರು ಆರಾಗಿ ಒಂಭತ್ತು ಆಗುತ್ತೆ.

ಯಂತ್ರ ಸಂಬಂಧ ವ್ಯಾಪಾರ, ಉದ್ಯಮಕ್ಕೆ ಕುಜ ಶನಿಯೋಗ ಅಗತ್ಯ. ಹಾಗೆಯೇ ಈ ಕುಜ ಶನಿಯ ಮೂರು ಸಂಖ್ಯೆಯೂ ಶುಭ. ಆದರೆ ಬೇಸಾಯಕ್ಕೆ ಭೂಮಿ, ನೀರು ಸೇರಬೇಕು. ಭೂಗ್ರಹ

ಕುಜನಿಗೆ ಜಲಗ್ರಹ ಚಂದ್ರನ ಯೋಗ ಆಗಬೇಕು. ಇಲ್ಲಿ ಜಲಗ್ರಹ ಚಂದ್ರನ ಸಂಖ್ಯೆ ನಾಲ್ಕು (೪). ಕಾರಣ ಮೂರು ಸಂಖ್ಯೆಯ ಮಂದಿಗೆ ನಾಲ್ಕು ಸಂಖ್ಯೆಯ ಮಂದಿ ಸೇರಿ ಬೇಸಾಯ ಮಾಡಿದರೆ ಶುಭ ಎಂದರ್ಥ. ಇದೇ ಯೋಗದಲ್ಲಿ ಬಾವಿ ತೆಗೆಯುವುದು ಶುಭ. ಹಾಗೆಯೇ ಜಲ ಯೋಜನೆಗಳಲ್ಲಿ ಕಂಟ್ರಾಕ್ಟ್ ಮಾಡುವಿಕೆ (project contracts) ಇತ್ಯಾದಿಗಳಲ್ಲಿ ಜಯವಾಗುವುದು.

ರಾಹು ಸರ್ಪಗ್ರಹ, ಹಗ್ಗದಂತೆ ಇರುತ್ತೆ. ತಂತಿ, ದಾರ, ಎಳೆ ಇತ್ಯಾದಿಗಳನ್ನು ಉಪಯೋಗಿಸುವ ವಿದ್ಯುತ್ ಯಂತ್ರಗಳು, ಹೊಲಿಯುವ ಯಂತ್ರಗಳು, ನೇಯ್ಗೆ ಯಂತ್ರಗಳಿಗೆ ಈ ರಾಹುವಿಗೆ ಕುಜನ ಯೋಗ ಇರುತ್ತೆ. ಈ ವ್ಯಾಪಾರ ಉದ್ಯಮಗಳಿಗೆ ಏಳು ಮತ್ತುಮೂರು ಸಂಖ್ಯೆಗಳ ಮಿಲನ ಶುಭ. ಉಳಿದ ವಿಚಾರಗಳಿಗೆ ಇದು ಕೆಟ್ಟದ್ದು. ಧನ ವ್ಯವಹಾರಗಳಿಗೆ ಗುರುವಿನ ಐದನೆಯ ಸಂಖ್ಯೆ ಮಿಲನ ಶುಭ ಇದ್ದರೂ ಹಣ ಪ್ರಗತಿ ಆಗುವುದಿಲ್ಲ. ಇದು ಯತಿಯೋಗ. ಅಂದರೆ ಭಿಕ್ಷೆ ಎತ್ತುವ ಕೆಲಸ. ಈ ನಮೂನೆ ಕೆಲಸಗಳಿಗೆ ಈ ಐದು ಮೂರು ಸಂಖ್ಯೆಗಳ ಮಿಲನ ಶುಭ. ಧಾರ್ಮಿಕ ಸಂಸ್ಥೆಗಳಿಗೆ ಚಂದಾ ವಸೂಲಿ ಮಾಡುವುದು ಎಂದರ್ಥ.

ಲೇಖನ, ಗಣಿತ ಇತ್ಯಾದಿಗಳಿಗೆ ಬುಧನು ಅಧಿಪತಿ. ಇದಕ್ಕೆ ಸಂಬಂಧಪಟ್ಟ ಯಂತ್ರಗಳ ಉದ್ಯಮಕ್ಕೆ ಮೂರು ಸಂಖ್ಯೆಗೆ ಬುಧ ಯೋಗದ ಎರಡು ಸಂಖ್ಯೆ ಬೆರೆಯುವುದು ಲೇಸು. ಉದಾಹರಣೆಗೆ ಲೆಕ್ಕದ ಶಾಖೆ (Accounting and Auditing) ಮುದ್ರಣ ಕಾರ್ಯ (Printing) ಪತ್ರ ತಯಾರಿಕೆ (Paper Manufacturing) ಪಿತ್ತ ಉದ್ರೇಕಿಸುವ ತಂಬಾಕು ಉದ್ಯಮ (Tobacco Industry) ಇತ್ಯಾದಿಗಳಿಗೆ ಎರಡು ಸಂಖ್ಯೆಯ ಮಂದಿ ಮೂರು ಸಂಖ್ಯೆಯ ಮಂದಿ ಸಂಯೋಗ ಉತ್ತಮ.

## ಬುಧನ ಹೋರೆ

ಬುಧನ ಸಂಖ್ಯೆಗಳು ಕ್ರಮವಾಗಿ ಎರಡು (೨) ನಾಲ್ಕು (೪) ಎಂಟು (೮) ಇವುಗಳಲ್ಲಿ ಬುಧನಿಗೆ ವಿಶೇಷ ಸಲ್ಲುವ ಸಂಖ್ಯೆ ಎರಡು (೨). ಬುಧನು ಒಂದು ನಮೂನೆ ಅಂತರ್ಯಾಮಿ ತತ್ತ್ವ. ಸೌದೆಯಲ್ಲಿ ಅಗ್ನಿ ಅಡಗಿದಂತೆ ಅವನ ಅಸ್ತಿತ್ವ ಗೋಚರವಾಗುವುದಿಲ್ಲ. ಬೇರೆ ಗ್ರಹಗಳಂತೆ ಇವನ ಫಲ ಕಾಣುತ್ತೆ. ಕಾರಣ ಇವನನ್ನು ತಿಳಿಯಲು ಒಂದು ಸಾಧನೆ (medium) ಅಗತ್ಯ. ಬುದ್ಧಿ ಬುಧನ ತತ್ತ್ವ. ಬುದ್ಧಿಯನ್ನು ಅಳೆಯುವುದು ಹೇಗೆ? ಇದಕ್ಕೆ ಕಾಣುವ, ಕಾಣಿಸುವ ಸಾಧನೆ ಇರಬೇಕು. ಇದಕ್ಕಾಗಿ ಇವನು ಪ್ರಧಾನವಾಗಿ ಗುರು, ಚಂದ್ರ ಶನಿಗಳನ್ನು ಆಶ್ರಯಿಸುತ್ತಾನೆ. ಇಲ್ಲಿ ಎರಡು (೨) ಗುರುವಿನೊಡನೆ ಕೂಡಿದ ಬುಧನ ಸಂಖ್ಯೆ. ಇದೇ ಮಾತುಕತೆ. ಜ್ಞಾನ ಯತ್ನಗಳ ಸಂಖ್ಯೆ. ಇದು ಬಾಲ್ಯದ ಮೊದಲನೆಯ ಸಂಖ್ಯೆ. ಇತರ ಗ್ರಹಗಳಿಗೆ ಸಂಖ್ಯೆಗಳು ಏರಿದಂತೆ ಗುಣಾಂಶ ಹೆಚ್ಚುತ್ತದೆ. ಉದಾಹರಣೆಗೆ ಹತ್ತಕ್ಕಿಂತ ಇಪ್ಪತ್ತರಲ್ಲಿ ಗುರು ಶುಭ. ಐವತ್ತರಲ್ಲಿ ಇನ್ನೂ ಶುಭ ಮೂರು ಸಂಖ್ಯೆಗಿಂತ ಆರರಲ್ಲಿ ಕುಜನ ಗುಣಾಂಶ ಹೆಚ್ಚು, ಇತ್ಯಾದಿ. ಆದರೆ ಬುಧನಿಗೆ ಇದು ವಿಪರೀತ, ತಿರುಗು - ಮುರುಗು. ಎರಡರಲ್ಲಿ ಬುದ್ಧಿ ತೀಕ್ಷ್ಣವಾದರೆ ನಾಲ್ಕರಲ್ಲಿ ಚಂದ್ರನಿಂದ ಭ್ರಮೆ, ಚೆಲ್ಲುಬುದ್ಧಿ ಎಂಟರಲ್ಲಿ ಬುದ್ಧಿಮಾಂದ್ಯ. ಕಾರಣ ವಯಸ್ಸು ಆಗುತ್ತಾ

ಆಗುತ್ತಾ, ಬುದ್ಧಿ ಶಕ್ತಿ ಕಡಿಮೆ. ಇದರಿಂದಲೇ ಏನೋ ಬುಧನ ಅಧಿದೇವತೆ ವಿಷ್ಣುವಿಗೆ ಬಾಲ್ಯವೇ ಪ್ರಧಾನ ಆಗಿದ್ದು.

## ಎರಡು-ಬುಧನಿಗೆ ಶುಭಪ್ರದ

ಬುಧನಿಗೆ ಮೊದಲು ಬರುವ ಎರಡು (೨) ಸಂಖ್ಯೆಯೇ ಬಲಿಷ್ಠವಾದುದು. ಈ ಕಾರಣ ಸೂರ್ಯ ಉದಯವಾದ ಮೇಲೆ ಬರುವ ಬುಧನ ಹೋರೆಯ ಕಾಲವೇ ಅವನಿಗೆ ಬಲಿಷ್ಠ ಶುಭದ ಕಾಲ.

ಬುಧನ ಹೋರೆಯಲ್ಲಿ ಬುಧನ ತತ್ತ್ವವು ಶುಭಪ್ರದ. ಈ ಕಾಲದಲ್ಲಿ ಲೇಖನ ಕಾರ್ಯ ಉತ್ತಮ. ಶಾಸ್ತ್ರಗಳ ಅಧ್ಯಯನವೂ ಶುಭಪ್ರದ. ಸ್ಫೂರ್ತಿ ಈ ಕಾಲದಲ್ಲಿ ದೈವದತ್ತ. ಇದೇ ರೀತಿ ನಾಲ್ಕನೆಯ ಸಲ ಬರುವ ಬುಧನ ಕಾಲವೂ ಶುಭ. ಕಾರಣ ಮೂರನೆಯ ಸಂಬಂಧ ಹೋರೆಗೆ ಬುಧ ಶನಿಯೋಗ ಮುಗಿದು ನಾಲ್ಕನೆಯ ಬಾರಿ ಬಂದಾಗ ಪುನಃ ಎರಡು (೨) ಸಂಖ್ಯೆಯಂತೆ ಕೆಲಸ ಮಾಡುತ್ತೆ. ಈ ಕಾರಣ ಈ ಕಾಲ ಲೇಖನ ಕಾರ್ಯ. ಮಂತ್ರಸಾಧನೆ, ಹರಿಪೂಜೆಗೆ ಶುಭ ಎಂದರು.

ಬುಧನಿಗೆ ಮೊದಲನೆಯ ಸಂಖ್ಯೆ ಎರಡು (೨). ಇದಕ್ಕೆ (ಬುಧ ಗುರು) ಯೋಗ ಎಂದರು. ಎರಡನೆಯದು ನಾಲ್ಕು (೪) ಇದನ್ನು (ಬುಧ ಚಂದ್ರ) ಯೋಗ ಎಂದರು. ಮೂರನೆಯದು ಎಂಟು (ಬುಧ ಶನಿ) ಯೋಗ ಎಂದರು. ಈ ಮೂರು ಸಂಖ್ಯೆಗಳಲ್ಲಿ ಎರಡನೆಯದಾದ ನಾಲ್ಕು (೪). ಈ ಸಂಖ್ಯೆಗೆ ತನ್ನದೇ ಆದ ಚಂದ್ರನ ಹೋರೆಯೇ ಇದೆ. ಈ ಕಾರಣ ಈ ಬುಧ ಚಂದ್ರನ ಯೋಗವನ್ನು ಚಂದ್ರನ ಹೋರೆಯಲ್ಲಿಯೇ ನೋಡಬೇಕು. ಇದು ಎಲ್ಲರೂ ಒಪ್ಪುವ ಮತ. ಆದರೆ ಆ ಚಂದ್ರನ ಹೋರೆಯಲ್ಲಿ ಚಂದ್ರನಿಗೆ ತನ್ನದೇ ಆದ ಅಸ್ತಿತ್ವ ಇದೆ. ಅಂದರೆ, ಚಂದ್ರನಿಗೆ ಯಾವ ಗ್ರಹ ಸಂಯೋಗವಿದ್ದರೂ ಆ ಚಂದ್ರನ ಹೋರೆಯಲ್ಲಿ ಕಾಣಬಹುದು. ಆದರೆ ಈ ನಾಲ್ಕು ಸಂಖ್ಯೆಯ (೪) ಚಂದ್ರನು ಬುಧ ಹೋರೆಯಲ್ಲಿ ಬಂದಾಗ ಅದು ಕೇವಲ ಬುಧ ಚಂದ್ರಯೋಗವನ್ನೇ ತೋರಿಸುತ್ತೆ.

## ಪ್ರಧಾನಕಾಲ

ಕೆಲವರು ಈ ಬುಧನ ಹೋರೆಯನ್ನು ಪ್ರಧಾನ ಕಾಲವೆಂದು ಗಣಿಸುತ್ತಾರೆ. ಕಾರಣ ಈ ಬುಧನು ಎರಡು ತತ್ತ್ವಗಳ ಬಂಧುತ್ವ ವಿರಸಗಳನ್ನು ತೋರಿಸುತ್ತಾನೆ. ಪ್ರಪಂಚ,ಲೋಕ ಎಂದರೆ ಜನ. ವ್ಯಕ್ತಿಯನ್ನು ಬಿಟ್ಟು ಉಳಿದ ಮಂದಿ ವ್ಯವಹಾರ ಏನೇ ಇರಲಿ ಅದು ಈ ಬುಧನಿಗೇ ಸೇರಿದ್ದು. ಅದು ಅವನ ಹೋರೆಯ ಕಾಲಕ್ಕೇ ಸರಿ. ವ್ಯಕ್ತಿಯು ಲೋಕ ವ್ಯವಹಾರಕ್ಕೆ ಹೊಂದಿಕೊಂಡು ಇದ್ದರೆ ಆಗ ಅವನ ಜೀವನ ಸುಗಮ. ವಿರೋಧದಿಂದ ಘರ್ಷಣೆಗಳಿವೆ. ಆಗ ಅವನಿಗೆ ಹೆಜ್ಜೆ ಹೆಜ್ಜೆಗೆ ಕಷ್ಟ. ಮಂದಿಯೂ ನಾನಾ ಬಗೆ. ಯಾರು ಹಿತ? ಯಾರು ಅಹಿತ? ಯಾರಿಗೆ ಗೊತ್ತು. ಶುಭ ಕಾಲದಲ್ಲಿ ಮಂದಿ ಮಿಲನವಾದರೆ ಅದು ಶುಭ. ಅಶುಭ ಕಾಲದಲ್ಲಿಯಾದರೆ

ಅದು ಅಶುಭ. ಕೇವಲ ಕಾಲದಿಂದಲೇ ಮಂದಿಯ ಗುಣಾವಗುಣಗಳ ನಿರ್ಣಯ. ಈ ಕಾರಣ ಬುಧನ ಕಾಲ ಅತಿಮಹತ್ವದ ಹೋರೆ ಎಂದರು.

### ಒಪ್ಪಂದಗಳಿಗೆ ಶುಭ

ವ್ಯವಹಾರದಲ್ಲಿ ವ್ಯಾಪಾರದಲ್ಲಿ ಈ ಕಾಲದ ಉಪಯೋಗ ಅಷ್ಟಿಷ್ಟಲ್ಲ. ಸಮಸ್ತ ರೀತಿಯ ಒಪ್ಪಂದಗಳಿಗೆ ಇದು ಶುಭವಿದೆ. ಈ ಒಪ್ಪಂದವು ಮುರಿದು ಬೀಳದೆ ಬಹುಕಾಲ ನಡೆಯುತ್ತದೆ. ಮಾತಿನಲ್ಲಿ, ಲಿಖಿತ ಪತ್ರದಲ್ಲಿ ಏರುಪೇರಾಗದೆ ಪದಗಳು ಸರಿಗೂಡಿ ಬರುತ್ತವೆ. ಕೋಪ ತಾಪಾದಿಗಳ ಉದ್ವೇಗಗಳು ಈ ಕಾಲದಲ್ಲಿ ಬಾರವು. ಕೇವಲ ಮೈತ್ರಿ ಗ್ರಹ ಬುಧ. ಇವನ ಕಾಲ ಈ ಕಾರಣ ಮೈತ್ರಿ ಚೋದಕವಿರುತ್ತದೆ.

ಸಂಘ ಸಂಸ್ಥೆಗಳಲ್ಲಿ ನೌಕರಿಗಾಗಿ ಬರುವ ಮಂದಿ ಹೆಚ್ಚು. ಗುಮಾಸ್ತೆಗಳು, ಲೆಕ್ಕಪತ್ರದ ಸಿಬ್ಬಂದಿ, ಲಿಪಿಕಾರರು, ಅಗತ್ಯ. ಇವರು ಈ ಕಾಲದಲ್ಲಿ ಬಂದು ಸೇರಿದಲ್ಲಿ ಆಗ ಇವರಿಂದ ಅಭಿವೃದ್ಧಿ ಆಗುತ್ತೆ. ವ್ಯಾಪಾರದಲ್ಲಿಯೂ ಪ್ರಗತಿ. ಆದರೆ ಕಾರ್ಮಿಕರಿಗೆ ಈ ಕಾಲ ಸರಿಬಾರದು ಕಾರಣ ಅವರು ಕೆಲಸ ಮಾಡದೆ ಹರಟೆ ಮಲ್ಲರಾಗುತ್ತಾರೆ.

ರಾಸಾಯನಿಕ ವಸ್ತುಗಳ ತಯಾರಿಕೆಗೆ ಈ ಕಾಲ ಶುಭ. ಪರಿಮಾಣದಲ್ಲಿ ಏರುಪೇರಾಗದೆ ಸರಿಹೊಂದಾಣಿಕೆ ಆಗುತ್ತೆ. ವಸ್ತ್ರ ವ್ಯಾಪಾರ, ಚಕ್ರಬಂಧ ಸ್ಪರ್ಧೆಯ ಯತ್ನಗಳಲ್ಲಿ ಈ ಕಾಲ ಜಯ ತಂದುಕೊಡುತ್ತೆ. ವಿದ್ಯಾರ್ಥಿಗಳಿಗೆ ಗಣಿತ, ರಸಾಯನ ಶಾಸ್ತ್ರ ಶಿಲ್ಪಕಲೆಯ, ಅಧ್ಯಯನಕ್ಕೆ ಈ ಕಾಲ ಶುಭವಿದೆ.

ವ್ಯಾಪಾರ ವ್ಯವಹಾರಗಳಲ್ಲಿ ಶುರು ಮಾಡಿದ ವರ್ಷದಿಂದ ಪ್ರಗತಿ ಇದೆ. ಎರಡನೆಯ ವರುಷ ಉತ್ತಮ ಲಾಭ ಕೊಡುತ್ತೆ. ನಾಲ್ಕನೆಯ ವರ್ಷ ವಿಶೇಷ ಅಭಿವೃದ್ಧಿ ಆಗುತ್ತೆ, ನಾನಾರೀತಿ ಪೋಷಕ ವ್ಯವಹಾರಗಳು ಜೊತೆಗೂಡಿ ಬರುತ್ತವೆ. ಆದರೆ ಎಂಟನೆಯ ವರ್ಷ ಕಷ್ಟಗಳಿವೆ. ಭಾಗಿದಾರರಲ್ಲಿ ನಂಬಿಕೆದ್ರೋಹ ಆಗುತ್ತೆ. ಆಗ ಶ್ರೀಹರಿ ಕ್ಷೇತ್ರ ದರ್ಶನದಿಂದ ಕಷ್ಟ ಪರಿಹಾರವಾಗುತ್ತೆ.

### ಬುಧನ ಹೋರೆ-ಎಂಟರ ಪ್ರಭಾವ

ಈ ಬುಧನ ಹೋರೆ ಮೂರನೆಯ ಸಲ ಬಂದಾಗ ಬುಧನಿಗೆ ಶನಿಯೋಗ ಆಗುತ್ತೆ. ಇದು ನಿರ್ಮಾಣ ಕಾರ್ಯಗಳಿಗೆ ಶುಭವಿದೆ. ಪರಿಚಾರಕರನ್ನು ಸೇವೆಗೆ ತೆಗೆದುಕೊಳ್ಳಲು ಶುಭ. ಆದರೆ ಈ ಕಾಲದಲ್ಲಿ ಲೆಕ್ಕಪತ್ರ ಲೇಖನ ಕೂಡದು. ಪ್ರಮಾದಗಳು ತಲೆ ಹಾಕಿ ಅಪವಾದ ಬಂದೀತು. ಈ ಹೋರೆಗೆ ಸಂಖ್ಯೆ ಎಂಟು (೮) ಫಲ ಕೊಡುತ್ತೆ. ಈ ಕಾರಣ ಓದಲು ಶುಭ ಇರದು. ಪುಸ್ತಕ ಹಿಡಿದರೆ ನಿದ್ರೆ ಬಂದೀತು! ಆದರೆ ಆಟ, ಪಾಟ, ವಿಹಾರ ವಿಲಾಸಗಳಿಗೆ ಶುಭವಿದೆ. ಮಧುಪಾನ, ಮಧುರ ವ್ಯವಹಾರಗಳಲ್ಲಿ ಇದು ಹರ್ಷವನ್ನು ಕೊಡುತ್ತೆ. ಈ ಕಾಲದಲ್ಲಿ ಮೈತ್ರಿಯಾದರೆ ಆ ಮಿತ್ರನಿಗೆ ಕಷ್ಟ ಬರುತ್ತೆ. ಅವರಿಂದ ಇವರಿಗೆ ಕಷ್ಟ. ಮನೆಗೆ ಪ್ರವೇಶ ಮಾಡಿದರೆ ಆಗ ಆ ಮನೆ ಪುನಃ ಬದಲಾವಣೆ ಆಗುತ್ತೆ. ಆದರೆ ವಾಸನೆ ಕೊಡುವ ಗಂಧದ್ರವ್ಯ ತಯಾರಕರಿಗೆ ಈ ಕಾಲ

ಶುಭವಿದೆ. ಆ ಮನೆಯೂ ಶುಭದ ಪ್ರಗತಿ ಕೊಡುತ್ತದೆ. ಚರ್ಮ ಸಂಬಂಧದ ಕೈಗಾರಿಕೆಗೂ ಈ ಕಾಲ ಪ್ರಗತಿ ಪ್ರದವಿದೆ. ವಾತ ಪ್ರಧಾನವಾದ ಬೀಸುವ ಯಂತ್ರಗಳ ವ್ಯಾಪಾರದಲ್ಲಿ ಅಭಿವೃದ್ಧಿ ಆಗುತ್ತೆ.

### ಇತರ ಸಂಖ್ಯೆಗಳ ಸಹಕಾರ

ಈ ಎರಡು (೨) ಸಂಖ್ಯೆ ಮಂದಿ ಮಿತ್ರಶೀಲರು. ಇವರು ಎಲ್ಲಾ ಬಗೆ ಜನಗಳಲ್ಲಿಯೂ ಸುಲಭ ಬೆರತಾರು. ಆದರೆ ಇವರಿಗೆ ತಮ್ಮ ಸಂಖ್ಯಾಮಾಲೆಯವರು ಆತ್ಮ ಸ್ನೇಹದವರಾಗು ತ್ತಾರೆ. ಅಂದರೆ ಈ ಮಂದಿಗೆ ನಾಲ್ಕು (೪) ಎಂಟು (೮) ಇಪ್ಪತ್ನಾಲ್ಕು (೨೪) ಸಂಖ್ಯೆಯವರು ಪ್ರಾಣಪ್ರಿಯರು. (೫) ಸಂಖ್ಯೆಯ ಮಂದಿಗೆ ಇವರು ಅಗತ್ಯದ ಸಖರು. ಈ ಮಂದಿಗೆ ಐದರ ಮಂದಿ ಪೋಷಕರೂ ಆದಾರು. ಏಳು (೭) ಸಂಖ್ಯೆಯ ಮಂದಿಯಿಂದ ಅಪವಾದ, ಪ್ರಮಾದ, ಮೋಸಗಳಿಗೆ ಎಡಕೊಟ್ಟೀತು. ಆದರೆ ನೂಲು ವ್ಯಾಪಾರಕ್ಕೆ ಈ ಎರಡು ಸಂಖ್ಯೆಯವರಿಗೂ ಹೊಂದಾಣಿಕೆ ಆಗುತ್ತದೆ. ಒಂಬತ್ತು (೯) ಸಂಖ್ಯೆಯವರಿಂದ ಇವರಿಗೆ ಕೀರ್ತಿ ಬರುತ್ತೆ. ಆದರೆ ಕುಜನ ಸಂಖ್ಯೆಯಾದ ಮೂರು (೩) ಇವರಿಗೆ ಒಗ್ಗದು. ಬೆರತರೆ ಕಲಹ ಆದಿತು.

## ಸಂಖ್ಯೆ (೫) ಗುರುವಿನ ಹೋರೆ

ಪ್ರತಿದಿನ ಗ್ರಹಗಳು ಹೋರೆಗಳಲ್ಲಿ ಅಧಿಕಾರ ನಡೆಸುತ್ತವೆ. ಸೂರ್ಯನ ಉದಯದಿಂದ ಇಪ್ಪತ್ತನಾಲ್ಕು ಗಂಟೆಗಳಿಗೆ ಇಪ್ಪತ್ತನಾಲ್ಕು ಹೋರೆಗಳು. ಈ ಹೋರೆಗಳು ಭಾನುವಾರ ರವಿಯಿಂದ, ಸೋಮವಾರ ಚಂದ್ರನಿಂದ, ಹೀಗೆ ಆ ದಿನದ ಮೊದಲನೆಯ ಹೋರೆ ಆ ವಾರದ ಗ್ರಹದಿಂದಲೇ ಶುರು. ಈ ಹೋರೆಗಳು ರವಿ, ಶುಕ್ರ, ಬುಧ, ಚಂದ್ರ ಶನಿ, ಗುರು, ಕುಜ ಈ ಕ್ರಮದಲ್ಲಿ ಬಾರಿ ಬಾರಿಗೆ ಸುತ್ತುತ್ತವೆ. ದಿನದಲ್ಲಿ ಮೂರು ಬಾರಿ ಗುರು ಹೋರೆ ಬರುತ್ತೆ. ಈ ಕಾಲದಲ್ಲಿ ಗುರು ಅಧಿಕಾರ ನಡೆಸುತ್ತಾನೆ. ಈ ಹೋರೆಗೆ, ಸಂಖ್ಯೆ ಪ್ರಧಾನವಾಗಿ ಐದು (೫) ಈ ಕಾಲದಲ್ಲಿ ಮಾಡುವ ಪ್ರಯತ್ನಗಳಲ್ಲಿ ಈ ಐದು (೫) ಜಯವನ್ನು ಗಳಿಸಿಕೊಡುತ್ತೆ. ಹಾಗೆಯೇ ಗುರುವಿನ ಇತರ ಸಂಖ್ಯೆಗಳಾದ ಹತ್ತು ಇಪ್ಪತ್ತು ಐವತ್ತು ಸಹ ಫಲಪ್ರದ.

ಈ ಹೋರೆಗೆ 'ಗುರು' ಅಧಿಪತಿಗ್ರಹ. ಗುರುವಿನ ಸೇವೆ ಮಾಡುವುದು ಈ ಕಾಲದ ಕೆಲಸಗಳಿಗೆ ಶುಭಪ್ರದ. ಗುರುವಿನ ಸಂಖ್ಯೆ(೫). ಐದು ಸಲ ಗುರುವನ್ನು ಸುತ್ತಿ ಬಂದು ನಮಸ್ಕಾರ ಮಾಡುತ್ತಾರೆ. ಇದನ್ನು 'ಪಂಚ ನಮಸ್ಕಾರ' ಎಂದರು. ಗುರು ಶುಭಗ್ರಹ. ಇದು ಎಲ್ಲಾ ಕೆಲಸಗಳಿಗೂ ಶುಭ. ಈ ಕಾರಣ 'ಪಂಚಮಂ ಕಾರ್ಯ ಸಿದ್ಧ್ಯರ್ಥಂ' ಎಂದರು.

ಗುರುಗ್ರಹದ ತತ್ವಗಳಿಗೆ ಈ ಹೋರೆ ಶುಭ. ಗುರು ವಿದ್ಯಾಗ್ರಹ, ವಿದ್ಯಾ ಪ್ರಯತ್ನಗಳಿಗೆ ಈ ಕಾಲ ಶುಭ. ಈ ಕಾಲದಲ್ಲಿ, ಗುರು ಸಂದರ್ಶನ, ಗುರುವಿನಿಂದ ಆದೇಶ ಸ್ವೀಕರಿಸಲು ಉತ್ತಮ. ಗುರುವಿನ ಪೂರ್ಣ ಅನುಗ್ರಹ ಪ್ರಾಪ್ತಿಯಾಗಿ ವಿದ್ಯೆಯಲ್ಲಿ ಕೀರ್ತಿ ಬರುತ್ತದೆ.

ನ್ಯಾಯಾಲಯಗಳಲ್ಲಿ ಮೊಕದ್ದಮೆ, ದಾವೆಗಳನ್ನು ದಾಖಲು ಮಾಡಿದರೆ ನ್ಯಾಯ ದೊರಕುತ್ತದೆ. ದಾಖಲೆ ನಂಬರಿನಲ್ಲಿಯೂ ಸಹ ಗುರುವಿನ ಸಂಖ್ಯೆ ಐದನ್ನು (೫) ಉಪಯೋಗಿಸಿದರೆ, ಇದರ ಫಲ ಐದು ತಿಂಗಳಲ್ಲಿ ಐದು ವರುಷಗಳಲ್ಲಿ ಪ್ರಾಪ್ತಿ ಆದೀತು.

ಧನ ವ್ಯವಹಾರಗಳಿಗೆ ಈ ಹೋರೆ ಶುಭವಿದೆ. ಇದರಿಂದ ಧನವು ಅಭಿವೃದ್ಧಿ. ಬ್ಯಾಂಕುಗಳಲ್ಲಿ ಠೇವಣಾತಿ ಇಡಲು. ಖಾತೆಗಳನ್ನು ತೆರೆಯಲು ಅನುಕೂಲವಾಗಿ ದೀರ್ಘಕಾಲ ಹಣವು ಹೆಚ್ಚು ಹೆಚ್ಚು ಆಗುತ್ತಾ ಹೋಗುವುದು. ಈ ಕಾಲದಲ್ಲಿ ಪ್ರಾರಂಭ ಮಾಡಿದ ವ್ಯವಹಾರಗಳಲ್ಲಿ ಶೀಘ್ರವಾಗಿ ಸಾಲ ಸೋಲಗಳು ತೀರಿ ಹಣ ಸೇರುವುದು.

ವ್ಯಾಪಾರ ಸಂಘ ಸಂಸ್ಥೆಗಳಲ್ಲಿ ಸರಾಫರನ್ನು ಸೇವೆಗೆ ತೆಗೆದುಕೊಂಡರೆ ಮೋಸ ಮಾಡದೆ ನಿಯತ್ತಿನವರಿದ್ದು ಬಹಳ ಕಾಲ ಇರುತ್ತಾರೆ. ಅಲ್ಲದೆ ಖರ್ಚು ಕಡಿಮೆಯಾಗಿ ಆದಾಯ ಹೆಚ್ಚುತ್ತಾ ಹೋಗುವುದು. ಅಲ್ಲದೆ ಬಾಕಿ ವಸೂಲಿಗಳೂ ಆಗುತ್ತವೆ.

ಪರೀಕ್ಷೆಗಳಿಗೆ, ಟೆಂಡರುಗಳಿಗೆ, ಲೈಸೆನ್ಸುಗಳಿಗೆ ಹಣ ಕಟ್ಟುವುದಕ್ಕೂ ಈ ಕಾಲ ಪ್ರಗತಿಪ್ರದ. ವಾದ ವಿವಾದಗಳಲ್ಲಿ ಈ ಸಂಖ್ಯೆಯ ಮಂದಿ ನಿಯತ್ತಿನವರಿದ್ದು ಜಯಗಳಿಸಿ ಕೊಡುತ್ತಾರೆ.

## ನ್ಯಾಯಾಂಗ

ನ್ಯಾಯಾಂಗ ವ್ಯವಹಾರಗಳಲ್ಲಿ ಗುರುವಿನ ಜೊತೆ ಮಂಗಳನ ಪ್ರಭಾವ ಸೇರಿ ಕೊಂಡಿರುತ್ತದೆ. "ಗುರು ಮಂಗಳಯೋಗೇ ತರ್ಕಂ" ಎಂದರು ಹಿರಿಯರು. ಮಾತಿನಲ್ಲಿ ಸಾಧನೆ ಮಾಡುವುದು "ವಾದ". ಇಲ್ಲಿ ಈ ಸಾಧನೆಯ ತತ್ತ್ವ ಮಂಗಳನದು. ಮಾತಿನ ತತ್ತ್ವ ಗುರುವಿನದು. ಹೀಗೆ "ವಾದ" ಯೋಗಕ್ಕೆ ಗುರು ಮಂಗಳರ ಸಂಯೋಗ ಆಗುತ್ತೆ. ಮಂಗಳನು ಅಮಂಗಳನಾದರೆ ವಾದದಲ್ಲಿ ಸೋಲೇ ಫಲ. ಮಂಗಳನಿಗೆ ಈ ಯೋಗ ಮೂರು (೩) ಸಂಖ್ಯೆಯಲ್ಲಿದೆ. ಈ ಕಾರಣ ಸಂಖ್ಯೆ ಹದಿಮೂರು (೧೩) ಬಂದರೆ ವಾದದಲ್ಲಿ ಅಪಜಯವೇ ಸರಿ. ಆದರೆ ಸಂಖ್ಯೆ ಹದಿನಾರು (೧೬) ಬಂದಾಗ ಮಂಗಳನಿಗೆ ಶುಭತ್ವ ಮೂಡಿ ಜಯ ಲಭಿಸುತ್ತದೆ. ಇದರಿಂದೇನು? ನ್ಯಾಯಾಂಗದಲ್ಲಿ ಕಟ್ಟಳೆ ದಾಖಲಾತಿಗೆ ಹದಿಮೂರನೆಯ (೧೩) ತಾರೀಖು ಅಶುಭ. ಲಾಯರು ಈ ತಾರೀಖಿನ ಸಂಖ್ಯೆಯ ಮಂದಿಯಾದರೆ ಇನ್ನೂ ಕೆಟ್ಟದ್ದು. ಇದೇ ತಾರೀಖಿನಲ್ಲಿ ತೀರ್ಪು ಬಿದ್ದರೆ ಮುಂದಿನ ನ್ಯಾಯಾಲಯಕ್ಕೆ ಯತ್ನ ಅಗತ್ಯ ಆದೀತು. ಈ ಕಾರಣ ಜಯ ಲಭಿಸದಿದ್ದರೆ ಲಹಾ ಹದಿನಾರು (೧೬) ಸಂಖ್ಯೆಯಿಂದ, ಆ ಸಂಖ್ಯೆಯ ಮಂದಿಯಿಂದ, ಆ ತಾರೀಖಿನಂದು ತೀರ್ಪು ಆದರೆ ಜಯ ಲಭಿಸುತ್ತೆ. ಇದು ನೆನಪಿಡಬೇಕಾದ ಅಂಶ.

ಮಂಗಳನ ಬಲದಲ್ಲಿ ಏರುಪೇರಾದರೆ ಮಾತ್ರ ಉನ್ನತ ನ್ಯಾಯಾಲಯದಲ್ಲಿ ಪ್ರವೇಶ. ಅಪಜಯವನ್ನು ಜಯವನ್ನಾಗಿಸುವ ಜಾಗ ಅದು. ಈ ಕಾರಣ ಮಂಗಳನ ದೌರ್ಬಲ್ಯವನ್ನು ಹೋಗಲಾಡಿಸುವ ಸೂರ್ಯನ ಬಲ ಇದಕ್ಕೆ ಅಗತ್ಯ. ಈ ಕಾರಣ ಇಲ್ಲಿ ಗುರು ರವಿಗಳ ಸಂಖ್ಯೆಯಾದ ಹತ್ತೊಂಭತ್ತನ್ನು (೧೯) ಬಳಸಿಕೊಳ್ಳಬೇಕು. ಕೀರ್ತಿಯುತ ಲಾಯರುಗಳು ಈ ಸಂಖ್ಯೆಯವರೇ ಆಗಿರುತ್ತಾರೆ. ಈ ತಾರೀಖಿನಲ್ಲಿ ಕಟ್ಟಳೆ ಕಟ್ಟುವುದರಿಂದ ಶುಭವಿದೆ.

ತೀರ್ಪಾದರೂ ಈ ತಾರೀಖಿನಲ್ಲಿದ್ದರೆ ಜಯವಾಗುತ್ತದೆ. ಹೀಗೆ ಈ ಹೋರೆಯಲ್ಲಿ ಈ ಸಂಖ್ಯೆಯ ಫಲವನ್ನು ತಿಳಿಯಬೇಕು.

## ಧನವ್ಯವಹಾರ

ಸಾಲಕೊಟ್ಟು ಬಡ್ಡಿಯಿಂದ ಮಾಡುವ ವ್ಯವಹಾರಕ್ಕೂ ಈ ಗುರುವೇ ಕಾರಕ. ಆದರೆ ಕೊಟ್ಟ ಹಣ ವಾಪಸು ಬರುವುದು ಕಷ್ಟ. ಕೆಲವೆಡೆಗಳಲ್ಲಿ ಬಡ್ಡಿಯೂ ಬಾರದು. "ಹಣವ ಕೊಟ್ಟು ಹೆಣಗಾಡು" ಎಂದಂತೆ ಆದೀತು. ಆಗ ಏನು ಮಾಡಬೇಕು? ಗುರುವಿನ ಶುಭದಾಯಕ ಸಂಖ್ಯೆಯನ್ನು ಬಳಸುವುದು ಉತ್ತಮ.

ಗುರುವಿನ ಬಲ, ಸಂಖ್ಯೆ ಇಪ್ಪತ್ತಕ್ಕೆ (೨೦) ಹೆಚ್ಚು. ಈ ಕಾರಣ ಈ ಸಂಖ್ಯೆಯ ಬಳಕೆ ಈ ವ್ಯವಹಾರಕ್ಕೆ ಶುಭ. ಋಣದ ಗ್ರಹ ಮಂಗಳ. ಈ ಮಂಗಳನ ಸಂಖ್ಯೆಗಳು ಮೂರು (೩) ಮತ್ತು ಆರು(೬). ಲೇವಾದೇವಿಗೆ ಉತ್ತಮ ತಾರೀಖು ಇಪ್ಪತ್ತಾರು (೨೬). ಈ ದಿನದಲ್ಲಿ ಜನಸಿದವರಿಗೆ ಈ ವ್ಯವಹಾರ ಶುಭ. ಈ ಸಂಖ್ಯೆಯ ದಿನ. ಈ ಸಂಖ್ಯೆ ಮಂದಿಯೊಡನೆ ಲೇವಾದೇವಿ ಮಾಡಿದಲ್ಲಿ ಹಣ ಹಾಳಾಗದೆ ಅಸಲು ಬಡ್ಡಿ ಸಮೇತ ವಾಪಸ್ಸು ಬಂದೀತು.

ಅಲ್ಲದೆ ವ್ಯವಹಾರ ನ್ಯಾಯಾಂಗವನ್ನೂ ಹತ್ತುವುದಿಲ್ಲ. ಆದರೆ ಸಂಖ್ಯೆ ಹದಿಮೂರು (೧೩) ಮಂದಿಯೊಡನೆ ಈ ವ್ಯವಹಾರ ಸಲ್ಲದು. ಹದಿನಾರನೆಯ (೧೬) ಸಂಖ್ಯೆ ಮಂದಿ ಇದಕ್ಕಿಂಕತಲೂ ವಾಸಿ. ಆದರೂ ಈ ಎರಡು ಸಂಖ್ಯೆಯ ವ್ಯವಹಾರ ಕೋರ್ಟಿಗೆ ಹತ್ತದೇ ಇರದು. ಇಪ್ಪತ್ತಮೂರು (೨೩) ಸಂಖ್ಯೆ ಬಳಸಿದಲ್ಲಿ ನಿಧಾನವಾಗಿಯಾದರೂ ವ್ಯವಹಾರ ಲಾಭದಾಯಕ ಆದೀತು.

## ಸ್ವರ್ಣವ್ಯಾಪಾರ

ಆಭರಣ ವ್ಯಾಪಾರ ಪಟ್ಟಣಗಳಲ್ಲಿ ಹೆಚ್ಚು. ಈ ವ್ಯಾಪಾರದಲ್ಲಿ ಚಿನ್ನದ ಆಭರಣ ತಯಾರುಮಾಡುವ ವಾಜರಿಗೆ (ವಿಶ್ವಕರ್ಮ) ಸಂಖ್ಯೆ ಹದಿಮೂರು (೧೩) ಮತ್ತು ಹದಿನಾರು (೧೬) ಶುಭಪ್ರದ. ಈ ಮಂದಿ ಉತ್ತಮ ಕರ್ಮಿಗಳು. ಈ ಮಂದಿಯನ್ನು ಹಿಡಿತದಲ್ಲಿ ಇಡುವುದು ಕಷ್ಟ. ಈ ಕೆಲಸ ಸಂಖ್ಯೆ ಇಪ್ಪತ್ತಾರರಂದು (೨೬) ಜನಿಸಿದ ಮಂದಿಗೆ ಸಾಧ್ಯ. ಈ ಇಪ್ಪತ್ತಾರು (೨೬) ಸಂಖ್ಯೆಯ ಮಂದಿಗೆ ಈ ವ್ಯವಹಾರದಲ್ಲಿ ಕೀರ್ತಿ ಹೆಚ್ಚು. ಜನಗಳಿಗೂ ಇವರಲ್ಲಿ ನಂಬಿಕೆ ಹೆಚ್ಚು. ಮೇಲಿನ ಗುರು ಮಂಗಳರ ಎಲ್ಲಾ ಸಂಖ್ಯೆಯ ಮಂದಿ ಈ ವ್ಯಾಪಾರದಲ್ಲಿ ಇರುತ್ತಾರೆ. ಆದರೆ ಹಲವೇ ಮಂದಿ ಈ ಚಿನಿವಾರ ವ್ಯಾಪಾರದಲ್ಲಿ ಹೆಸರನ್ನು ಗಳಿಸಲು ಸಾಧ್ಯ. ಈ ಕಾರಣ ಈ ಸಂಖ್ಯೆ ಇಪ್ಪತ್ತಾರನೆಯ (೨೬) ತಾರೀಖಿನಂದು ಆಭರಣ ಮಾಡಿಸಲು ಉಪಯೋಗಿಸಿದಲ್ಲಿ ಶುಭ ಇರುತ್ತದೆ. ಈ ಆಭರಣ ಧಾರಣೆಯಿಂದ ಶುಭಕಾರ್ಯಗಳು ನಿರ್ವಿಘ್ನ.

## ಧಾರ್ಮಿಕ ವೃತ್ತಿ

"ಧರ್ಮದಲ್ಲಿ ಕರ್ಮ ಜಯ" ಎಂದರು. "ಕರ್ಮ" ಎಂದರೆ ವೃತ್ತಿ. ವೃತ್ತಿಯಲ್ಲಿ ಇತರರಿಗೆ ಆಗುವ ಪೀಡೆಯಿಂದ ಬರುವ ಫಲ ಕಷ್ಟ. ಇದನ್ನು "ಪಾಪಕರ್ಮ" ಎಂದರು. ವೃತ್ತಿಯಲ್ಲಿ ಮಂದಿಗೆ ಸಹಾಯ ಅನುಕೂಲ. ಆಗ ಇರುವ ಫಲ ಸಂತಸ. ಇದನ್ನೇ "ಪುಣ್ಯ" ಎಂದರು. "ಪುಣ್ಯಕರ್ಮ" ಯಾರಿಗೆ ಸಹಜದ ಗುಣ ಆಗಿರುತ್ತೆಯೋ ಅವರು ಧರ್ಮಜೀವಿಗಳು. ಇವರಿಗೆ ಫಲ ಶುಭವೇ ಇರುತ್ತೆ. ಆದರೆ ಪಾಪ ಕರ್ಮದಿಂದ ಕಷ್ಟವೇ ಫಲ. ಈ ಕಷ್ಟ ಪರಿಹಾರಕ್ಕೆ ಶಾಂತಿ ಮಾಡು ವುದರಿಂದ ಪಾಪ ಪರಿಹಾರ ಅಗುತ್ತೆ. ಕಾರಣ ಈ ಶಾಂತಿ ಪಶ್ಚಾತ್ತಾಪದ ಒಂದು ಸ್ವರೂಪ.

ಕರ್ಮಸಾಧನೆ ಹತ್ತನೆಯದು. ಕರ್ಮ ಸಂಖ್ಯೆಯೂ ಹತ್ತೇ (೧೦) ಸರಿ. ಈ ಸಂಖ್ಯೆಗೆ ಗುರು ಶನಿಯೋಗ. ಇದರ ದೋಷ ಪರಿಹಾರ ಮಾಡಲು ಗುರು ಚಂದ್ರ ಯೋಗ ಅಗತ್ಯ. ಈ ಯೋಗದ ಸಂಖ್ಯೆ (೨೦) ಇಪ್ಪತ್ತು. ಇಲ್ಲಿ ಶನಿ ಸೇರಿದರೆ ದೋಷಗುಣ ಗ್ರಹಗಳ ಬೆರಕೆಯಾಗಿ ದೋಷದ ಮಲ ನಿರ್ಮಲವಾಗುತ್ತದೆ. ಈ ಕಾರಣ ಸಂಖ್ಯೆ ಇಪ್ಪತ್ತೊಂದು (೨೧) ಈ ಧರ್ಮ ಕರ್ಮದಲ್ಲಿ ಹೆಚ್ಚಿಗೆ ಬಳಕೆಯಲ್ಲಿ ಇರುತ್ತದೆ.

ಇಪ್ಪತ್ತೊಂದು (೨೧) ದಿನ ಗುರುಗಳ ಸೇವೆ. ಗಣಪತಿಗೆ (೨೧) ನಮಸ್ಕಾರಗಳು. ಅದೇ ಸಂಖ್ಯೆಯಷ್ಟು ಕಡಬು ನಿವೇದನೆ ಇತ್ಯಾದಿ ದೇವತಾ ಕರ್ಮಗಳಲ್ಲಿ ಈ ಸಂಖ್ಯೆ ಬಳಕೆಯಲ್ಲಿದೆ. ದಾನ ಧರ್ಮದಲ್ಲಿ ಇಪ್ಪತ್ತೊಂದು ಸಂಖ್ಯೆ ರೂಢಿಯಲ್ಲಿವೆ.

ಈ ರೀತಿ ಐದು (೫). ಹತ್ತು (೧೦). ಇಪ್ಪತ್ತು (೨೦) ಸಂಖ್ಯೆಯ ಮಂದಿಗೆ ಗುರುವಾರಗಳು ಶ್ರೇಷ್ಠ. ಗುರು ಹೋರೆ ನಡೆಯುವಾಗ ಗುರು ಸಂಬಂಧ ವ್ಯವಹಾರಗಳನ್ನು ಮಾಡುವುದರಿಂದ ಕಾರ್ಯಗಳು ನೆರವೇರಿ ಹಣ ಪ್ರಾಪ್ತಿ ಆಗುತ್ತದೆ.

## ದಿವ್ಯ ಜ್ಞಾನ ಅರಿವಿಗೆ ಯತ್ನ

ಗುರುದೇವತಾಗ್ರಹ. ದೇವತೆಗಳ ಆರಾಧನೆ: ಜೀವಕ್ಕೆ ಅಂಟಿಬಂದ ಕರ್ಮ ಮತ್ತು ಅದರಿಂದ ಬಿಡುಗಡೆ ಇತ್ಯಾದಿ ರಹಸ್ಯ ತತ್ವಗಳ ಜ್ಞಾನ ಕೆಲವರಿಗೆ ಇಷ್ಟ. ಈ ಜ್ಞಾನವನ್ನು ದಿವ್ಯಜ್ಞಾನ ಎಂದರು.

ಈ ತಿಳಿವಳಿಕೆ ಪ್ರಾಪ್ತಿಯಾಗಲು ಗುರುವು ದೋಷ ರಹಿತನಾಗಿರಬೇಕು. ಗುರುವಿನ ಅತಿ ಮಹತ್ವದ ಸಂಖ್ಯೆ ಐವತ್ತು (೫೦). ಈ ಸಂಖ್ಯೆಗೆ ಗುರು ಶುಕ್ರ ಯೋಗವಿದೆ. ಈ ಕಾರಣ ಈ ಸಂಖ್ಯೆಯ ಬಳಕೆಯಿಂದ ದಿವ್ಯಜ್ಞಾನ ಪಡೆಯಲು ಸಹಾಯವಾಗುತ್ತವೆ. ಬುದ್ಧಿ ಚುರುಕಿನ ಸಂಖ್ಯೆ ಎರಡು (೨). ಈಗ ಸಂಖ್ಯೆ ಐವತ್ತೆರಡು (೫೨) ಈ ಅರಿವಿಗೆ ಸಹಾಯಕ ಸಂಖ್ಯೆ.

ವಿದ್ಯಾ ಸಂಬಂಧ ವಿವಿಧ ಬೋಧಕ ವ್ಯಕ್ತಿಗಳಿಗೂ ಈ ಸಂಖ್ಯೆ (೫೦) ಐವತ್ತು ಉಪಯುಕ್ತ. ಮಂದ ಬುದ್ಧಿಗೆ ಬುಧನಿಗೆ 'ಮಂದ' ಎಂದರೆ ಶನಿಯೋಗವಿರುತ್ತದೆ. ಇದರ ಸಂಖ್ಯೆ ಎಂಟು (೮). ಮಂದ ಬುದ್ಧಿಗೆ ಜ್ಞಾನವನ್ನು ಮೂಡಿಸಬೇಕು. ಆಗ ಸಂಖ್ಯೆ ಐವತ್ತೆಂಟು (೫೮) ತುಂಬಾ ಸಹಾಯಕ. ಇದರ ಬಳಕೆ ಹೇಗೆ? ಯಾವದಾದರೂ ಗ್ರಂಥ ಮತ್ತು ಅರ್ಥ ಬೋಧಕ ವ್ಯಾಖ್ಯಾನವಿದೆ. ಅದನ್ನು ಪದೇ ಪದೇ ಓದಬೇಕು. ಐವತ್ತೆರಡನೆಯ ಫಲ ಓದುವಾಗ ಅದರ

ಒಳರ್ಥ ಅರಿವಾಗುತ್ತದೆ. ಐವತ್ತೆಂಟುಸಲ ಓದುವುದರಿಂದ ಮತ್ತೊಬ್ಬರಿಗೆ ತಿಳಿಯ ಹೇಳುವಷ್ಟು ಜ್ಞಾನ ಆಗುತ್ತದೆ.

ಪ್ರಭಾವ ಬೀರುವಾಗ ಪ್ರಭವ ವರ್ಷದಿಂದ ಐವತ್ತೆರಡು, ಐವತ್ತೆಂಟನೆಯ ವರ್ಷ ಹುಟ್ಟಿದವರಿಗೆ ಈ ಯೋಗ ಉತ್ತಮ. ಅಲ್ಲದೆ ಇಸ್ವಿ ಐವತ್ತು, ಐವತ್ತೆರಡು, ಐವತ್ತೆಂಟು ವರುಷಗಳು ನಡೆಯುವಾಗ ಉತ್ತಮ. ಆ ಇಸ್ವಿ ವರುಷಗಳಲ್ಲಿ ಜನಿಸಿದವರಿಗೂ ಈ ಯತ್ನದಲ್ಲಿ ಶುಭ ಫಲ ದೊರೆಯುತ್ತದೆ.

ಈ ಅರಿವಿಗೆ ಮೂಲ ಕಾರಣವಾದ ಮಂತ್ರೋಪಾಸನೆಗೂ ಈ ಸಂಖ್ಯೆಯು ಉತ್ತಮ ಫಲ ಕೊಡುತ್ತದೆ. ಅನೇಕ ವಿದ್ಯಾ ಸಂಸ್ಥೆಗಳಿಗೂ ಈ ಸಂಖ್ಯೆ ಉತ್ತಮ. ಈ ರೀತಿ ಗುರುವಿನ ತತ್ವಗಳು ಹಲವಾರು. ಆಯಾ ತತ್ವಕ್ಕೆ ಅನುಗುಣವಾದ ಸಂಖ್ಯೆಗಳನ್ನು ಬಳಸುವುದರಿಂದ ಅತಿ ಶೀಘ್ರವಾಗಿ ಕಾರ್ಯ ಸಾಧನೆಯಾಗಿ ಜಯ ಲಭಿಸುವುದು ಎಂದರ್ಥ.

## ಸಾಧಕ ಮಾರ್ಗಗಳು – ಸಂಖ್ಯೆ ಐದು (೫)

ವ್ಯವಹಾರಗಳಲ್ಲಿ ಮೊದಲು ಗುರುಸೇವೆ ಮಾಡುವುದು ಪ್ರಗತಿ ಸಾಧಕ. ಮೊದಲು ಹಣ ಪಾವತಿ ಮಾಡಿದಲ್ಲಿ ವ್ಯವಹಾರ ಜಯಪ್ರದವಾಗುತ್ತದೆ. ವಿದ್ಯಾರ್ಹತೆ ನೌಕರಿಗಳಲ್ಲಿ ಮೂಲ ಕಾರಣವಾಗಬೇಕು. ಆಗ ನೌಕರಿ ಬಹುಕಾಲ ಮುಂದುವರೆದು ಕೀರ್ತಿ ತರುತ್ತೆ.

ಐದು ಜನ ಭಾಗಸ್ಥರು ವ್ಯವಹಾರಕ್ಕೆ ಉತ್ತಮ. ಐದು ಸಂಖ್ಯೆಯಿಂದ ಪ್ರಾರಂಭವಾಗುವ ಮೊಬಲಗು ಬಂಡವಾಳ ಹಾಕುವುದು ಲೇಸು. ಹಿರಿಯ ಮಗನಿಗೆ ಯಜಮಾನಿಕೆ ಕೊಡುವುದು ಉತ್ತಮ. ಸಾಲದ ವ್ಯಾಪಾರ ಮಾಡದೇ ಕೇವಲ ಹಣ ಸಂದಾಯದ ವ್ಯಾಪಾರದಿಂದ ಪ್ರಗತಿಯಾಗುತ್ತೆ.

ವ್ಯವಹಾರ ಪ್ರಾರಂಭ ಮಾಡಿದ ಐದನೆಯ ದಿನ, ಐದನೆಯ ತಿಂಗಳು, ಐದನೆಯ ವರುಷ ಪ್ರಗತಿಪರ ಹಂತಗಳನ್ನು ಮುಟ್ಟುತ್ತೆ. ಹಣವೇ ಈ ವ್ಯಾಪಾರದಲ್ಲಿ ನಿರ್ಣಾಯಕ ಅಂಶ. ಮಾತಿನ ಗೌರವವೂ ಅಷ್ಟೇ ಪ್ರಧಾನ. ಅಲ್ಲದೆ ಬೃಹತ್ ವ್ಯವಹಾರಗಳಲ್ಲಿಯೇ ಪ್ರಗತಿ ಆಗುತ್ತೆ. ಚಿಲ್ಲರೆ ವ್ಯಾಪಾರದಿಂದ ಅಲ್ಲ.

ಹಣ, ಮಾತಿನ ಗೌರವ, ಜೊತೆಗೆ ಆತ್ಮಾರ್ಥವಾದ ದೈವಿಕ ಭಕ್ತಿ ಈ ವ್ಯವಹಾರದ ಅಡಿಗಲ್ಲು ಎಂದರೆ ತಪ್ಪಾಗದು. ಬಂದ ಲಾಭದಲ್ಲಿ ದೇವರಿಗಿಷ್ಟು ಎಂದು ತೆಗೆದಿಡುವುದೂ ಉಂಟು. ಹೊಸ ವ್ಯಾಪಾರ ವ್ಯವಹಾರಗಳ ಆರಂಭದ ದಿನ ದೇವತಾಕ್ಷೇತ್ರ ದರ್ಶನ ಮಾಡುವುದು ಈ ಮಂದಿಗೆ ಬೆಳೆದು ಬಂದ ವಾಡಿಕೆ.

ಹೆಚ್ಚಿನಂಶ ಐದು (೫) ಹತ್ತು (೧೦) ಇಪ್ಪತ್ತು (೨೦) ಸಂಖ್ಯೆಯ ಮಂದಿ ಈ ವ್ಯವಹಾರದಲ್ಲಿ ಕೊಡುತ್ತಾರೆ. ಹಾಗಿಲ್ಲ ತಿಂಗಳ ಕೊನೆಯ ಒಂದು ವಾರದಲ್ಲಿ ಹುಟ್ಟಿದವರೂ ಇದಕ್ಕೆ ಅನುಕೂಲರು. ಈ ಸಂಖ್ಯೆಯ ಮಂದಿಗೆ ಹಣದ ಬಲವಿರುತ್ತೆ. ಗೌರವ ಪ್ರಧಾನದ ವ್ಯಕ್ತಿಗಳು ಬೇರೆ. ನ್ಯಾಯಾಂಗದ ಹಗರಣ ಇವರಿಗೆ ಅಷ್ಟಾಗಿ ಹಿಡಿಸದು. ಒಂದೊಂದು ವೇಳೆ ಧರ್ಮ ದೃಷ್ಟಿಯಲ್ಲಿ ಮೊಬಲಗನ್ನೂ ಮನ್ನಾ ಮಾಡಿಯಾರು.

ಯಾವ ಕೆಲಸ ಆಗಲಿ, ಮಂದಿ ಯಾರೇ ಆಗಲಿ ಹಣದಿಂದ ಅವರನ್ನು ಬಲೆಗೆ ಬೀಳಿಸಲು ಇವರು ಯತ್ನ ಮಾಡುತ್ತಾರೆ. ಹೆಚ್ಚಿನಂಶ ಯಶಸ್ವಿಗಳೂ ಆದಾರು.

## ಶನಿಯ ಪ್ರಭಾವ

ಗ್ರಹ ಯಾವುದೇ ಆಗಲಿ, ಎಷ್ಟೇ ಬಲವಿರಲಿ, ಶನಿಯ ಸಂಬಂಧ ಆಯಿತು ಎಂದರೆ ಅದರ ಬಲವಷ್ಟೂ ಕುಂದಿ ಬಲಹೀನವಾಗುತ್ತದೆ. ಈ ಕಾರಣ ಆಯಾ ಗ್ರಹದ ಸಂಖ್ಯೆಗಳಲ್ಲಿ ಎರಡು ನಮೂನೆ ಆಯಿತು. ಒಂದು ಬಲಹೀನದ ಸಂಖ್ಯೆ. ಎರಡನೆಯದು ಬಲ ಇರುವ ಸಂಖ್ಯೆ. ಪ್ರತಿಯೊಂದು ಗ್ರಹಕ್ಕೂ ಈ ರೀತಿಯ ಎರಡೆರಡು ಸಂಖ್ಯೆಗಳಿವೆ.

ಉದಾಹರಣೆಗೆ ಮಂಗಳ. ಇವನು ಶನಿಯೊಡನೆ ಸೇರಿದಾಗ ಬಲ ಕಳೆದುಕೊಂಡು ಮೂರನೆಯ ಸಂಖ್ಯೆ(೩) ಯನ್ನು ತೋರಿಸುತ್ತಾನೆ. ಇದೇ ರೀತಿಯಾಗಿ ಬುಧನೊಡನೆ ಸೇರಿದಾಗ ಬುಧನ ಸಂಖ್ಯೆ ಎಂಟಾಗುತ್ತದೆ. (೮). ಇಷ್ಟೇ ಅಲ್ಲ ಸರ್ವ ಶ್ರೇಷ್ಠನಾದ ಗುರುವಿಗೂ ಪೀಡೆ ತಪ್ಪಿದ್ದಲ್ಲ. ಗುರುವಿಗೆ ಶನಿಯ ಸಂಬಂಧವಾದಾಗ ಅವನ ಸಂಖ್ಯೆ ಹತ್ತು (೧೦) ಆಗುತ್ತದೆ. ಶುಕ್ರನು ವಾಸ್ತವವಾಗಿ ಶನಿಯ ಗುರು. ಅಂತಹುದರಲ್ಲಿಯೂ ಅವನಿಗೆ ಪೀಡೆ ತಪ್ಪಿದ್ದಲ್ಲ. ಇದರಿಂದ ಶುಕ್ರನ ಬಲಹೀನ ಸಂಖ್ಯೆ (೧೧) ಹನ್ನೊಂದು ಆಗುತ್ತದೆ. ಇಷ್ಟು ಪಂಚ ಅಪ್ರಕಾಶಕ ಗ್ರಹಗಳ ವಿಚಾರ.

ಪ್ರಕಾಶಕ ಗ್ರಹಗಳಾದ ರವಿ ಮತ್ತು ಚಂದ್ರ. ಇವರ ಮೇಲೆ ಶನಿಯ ಪ್ರಭಾವ ಮತ್ತೊಂದು ನಮೂನೆ. ರವಿಯು ಈ ಶನಿಯ ವೇಧೆಯಿಂದ ವರ್ಜಿತನು. ಈ ಕಾರಣ ಅವನಿಗೆ ಒಂದೇ ಬಲಯುತ ಸಂಖ್ಯೆ ಆ ಸಂಖ್ಯೆ ಒಂಭತ್ತು (೯). ಆದರೆ ಚಂದ್ರನು ಹಾಗಲ್ಲ. ಅವನು ಮನಸ್ಸಿಗೆ ಕಾರಕನು. ಮನಸ್ಸು ವಿಕಾರಾತ್ಮಕವಾದದ್ದು. ಅವನಿಗೆ ಶನಿಯ ವೇಧೆ ಎಂದೆಂದಿಗೂ ತಪ್ಪಿದ್ದಲ್ಲ. ಇದರಿಂದ ಅವನಿಗೂ ಒಂದೇ ಸಂಖ್ಯೆ ನಾಲ್ಕು (೪).

ಶನಿಯನ್ನೇ ತೆಗೆದುಕೊಂಡರೆ ಅವನು ಕೇವಲ ಕತ್ತಲಿನ ಗ್ರಹ. ಅಂತೆಯೇ ಸೂರ್ಯನು ಬೆಳಕಿನ ಗ್ರಹ. ಈ ಕಾರಣ ಶನಿಯ ಸಂಖ್ಯೆ ಒಂದು (೧) ಆದರೆ ಬೆಳಕಿನ ಸೂರ್ಯನ ಸಂಖ್ಯೆ ಒಂಭತ್ತು ಆಗುತ್ತದೆ.

ಸಂಯುಕ್ತ ಸಂಖ್ಯೆಗಳಲ್ಲಿ ಇದರ ಉಪಯೋಗ ಚೆನ್ನಾಗಿ ಕಾಣಬಹುದು. ಉದಾಹರಣೆಗೆ ಹದಿಮೂರು (೧೩). ಈ ಸಂಖ್ಯೆ ಗುರು ಮಂಗಳ ಯೋಗದ ಸಂಖ್ಯೆ. ಇಲ್ಲಿ ಮಂಗಳನ ಮೂರು ಸಂಖ್ಯೆ(೩) ಶನಿಯ ಸಂಬಂಧದ ಸೂಚನೆ. ಈ ಮಂಗಳನ ದೋಷ ನೀಗಲು ಸೂರ್ಯನ ಸಂಖ್ಯೆಯಾದ ಒಂಭತ್ತು (೯) ಬರಬೇಕು. ಅಂದರೆ ಹದಿಮೂರು ಹೋಗಿ ಹತ್ತೊಂಭತ್ತು (೧೯) ಆಗಬೇಕು. ಅಂದರೆ ಮೊತ್ತದಲ್ಲಿ ಮೊದಲನೆಯ ದಶಕದ ಸಂಖ್ಯೆಗಳಲ್ಲಿ ಯಾವುದೇ ದೋಷ ವಿರಲಿ ಆ ಸಂಖ್ಯೆ ಸೂರ್ಯ ಗುರುವಿನ ಹತ್ತೊಂಭತ್ತು (೧೯) ಸಂಖ್ಯೆಯಿಂದ ಬಲವನ್ನು ಹೊಂದಿ ಗುಣ ಸಂಖ್ಯೆ ಆಗುತ್ತದೆ.

ಇದೇ ರೀತಿಯಲ್ಲಿ ಎರಡನೆಯ ದಶಕ ಮೂರನೆಯ ದಶಕ ನಾಲ್ಕನೆಯ ದಶಕ ಇತ್ಯಾದಿ ಎಂಟನೆಯ ದಶಕದವರೆಗೆ ನಡೆದು ಎಂಭತ್ತೊಂಭತ್ತು (೮೯) ಸಂಖ್ಯೆಗೆ ಪೂರ್ತಿಯಾಗುತ್ತದೆ.

ಈ ಶನಿಯ ಹೋರೆಯಲ್ಲಿ ಅಶುಭ ಫಲಗಳೇ ಜಾಸ್ತಿ. ಆಯಾ ಕಾಲದಲ್ಲಿ ಯಾವ ಗ್ರಹಕ್ಕೆ ಶನಿಯ ಸಂಬಂಧ ಇದೆಯೋ ಆ ಗ್ರಹದ ಅಶುಭ ಫಲವೇ ಪ್ರಧಾನವಾಗಿ ನಡೆಯುತ್ತದೆ. ಅದಿಲ್ಲ ಅಂದು ಯಾವ ವಾರವಾಗಿದೆಯೋ ಆ ವಾರದ ಗ್ರಹದ ಅಶುಭ ಫಲವು ನಡೆಯುತ್ತದೆ.

ಈ ಕಾಲದಲ್ಲಿ ಸಾಮಾನ್ಯವಾಗಿ ಆಸ್ಪತ್ರೆ ದರ್ಶನ ಶುಭವಾಗುತ್ತದೆ. ಅಲ್ಲದೆ ನಿರ್ಮಲೀ ಕರಣ ಕಾರ್ಯಕ್ಕೆ ಉತ್ತಮ ಕಾಲ ಎನ್ನಬಹುದು. ಸೋಮವಾರದಲ್ಲಿ ಈ ಹೋರೆಯಲ್ಲಿ ಕೆಲಸಕ್ಕೆ ಬರುವ ಪರಿಚಾರಿಕೆಯರು ಉತ್ತಮ ಕೆಲಸಗಾರರೂ ಆಗುತ್ತಾರೆ.

ಮಂಗಳವಾರದಲ್ಲಿ ಈ ಸಮಯದಲ್ಲಿ ಯಂತ್ರಗಳ ರಿಪೇರಿ ಉತ್ತಮ. ಬುಧವಾರದಲ್ಲಿ ಗೃಹಶಿಲ್ಪ ನಕ್ಷೆ ತಯಾರಿಕೆಗೆ ಉತ್ತಮ ಕಾಲವಾಗಿರುತ್ತದೆ. ಗುರುವಾರದಲ್ಲಿ ದೇವತಾ ಸೇವೆ, ಯಾತ್ರಾ ಕಾರ್ಯಗಳಿಗೆ ಅನುಕೂಲವಾಗುತ್ತೆ. ಹಾಗೆಯೇ ಶುಕ್ರವಾರದಲ್ಲಿ ಮುತ್ತೈದೆಯರ ಉಪಚಾರಾದಿ ಶಾಂತಿಗೆ ಶುಭವಿರುತ್ತದೆ. ಅಲಂಕಾರ ಖರೀದಿ, ದಾನಕ್ಕೆ ಶುಭ. ಶನಿವಾರದಲ್ಲಿ ಆಯುಷ್ಯ ಅಭಿವೃದ್ಧಿ ಮಾಡುವ ಅಭ್ಯಂಜನಕ್ಕೆ ಶುಭವಿದೆ.

ಶುಭಕಾರ್ಯಗಳಲ್ಲಿ ಈ ಹೋರೆಯು ವರ್ಜ್ಯಕಾಲವು. ಪ್ರಗತಿಪರ ಕೆಲಸ ಕಾರ್ಯಗಳಲ್ಲಿ ಕೂಡಾ ಈ ಕಾಲವು ವರ್ಜ್ಯ ಎಂದು ತಿಳಿಯತಕ್ಕದ್ದು. ಮೊತ್ತದಲ್ಲಿ ಈ ಶನಿಯ ಕಾಲ ಶನಿಯ ಕೆಲಸಗಳಿಗೆ ಮೀಸಲು ಎಂದರೆ ತಪ್ಪಲ್ಲ.

## ಶುಕ್ರನ ಹೋರೆ

ಗಣಪತಿ ಸಂಖ್ಯಾ ಶಾಸ್ತ್ರದಲ್ಲಿ ಶನಿಯಿಂದ ಸಂಖ್ಯೆ ಶುರು. ಅವನೇ ಒಂದು (೧) ಸಂಖ್ಯೆಗೆ ಅಧಿಪತಿ. ವಿಷಯ ಯಾವುದಾದರೂ ಮೊದಲು ಬರುವುದು ಅದರ ಅರಿವಿಲ್ಲದ ಭ್ರಮೆ. ಈ ಭ್ರಮೆಯೇ ಒಂದು ನಮೂನೆ ಕತ್ತಲು. ಇದಕ್ಕೆ ಶನಿ ಅಧಿಪತಿ. ಒಂದು ಎರಡಾದಾಗ ಎರಡರಲ್ಲಿ ಯಾವುದು? ಈ ಜಿಜ್ಞಾಸೆ ಹುಟ್ಟಿ ಇದರಿಂದ ಬುದ್ಧಿಯು ಕೆಲಸ ಮಾಡುತ್ತದೆ. ಈ ಕಾರಣ ಈ ಎರಡು (೨) ಸಂಖ್ಯೆ ಬುದ್ಧಿಯ ಗ್ರಹವಾದ ಬುಧನನ್ನು ತೋರಿಸಿತು. ಸಮತೋಲನೆಯಲ್ಲಿ ಉತ್ತಮ ಯಾವುದು ಎಂದು ತಿಳಿಯಲು ಗುರುವಿನ ಸಹಾಯ ಬೇಕಾಯಿತು. ಇದರಿಂದ ಎರಡು (೨) ಸಂಖ್ಯೆಗೆ ಬುಧ-ಗುರು ಯೋಗ ಎಂದರು. ಗುರುವಿನ ಸಹಾಯವಿಲ್ಲದೆ ಇದ್ದರೆ ಆಗ ಅದು ನಾಲ್ಕು (೪) ಸಂಖ್ಯೆಯ ಗಡಿಬಿಡಿಯ ಮನಸ್ಸನ್ನು ತೋರಿಸುತ್ತೆ. ಅತ್ತಿತ್ತ ಚಲಿಸುವ ಪಾದರಸದಂತೆ ಇದರ ಪ್ರಭಾವ. ಇಲ್ಲಿ ಬುದ್ಧಿಗೆ ಚಲಿಸುವ ಚಂದ್ರನ ಗುಣ ಸೇರಿಕೊಳ್ಳುತ್ತೆ. ಈ ಕಾರಣ ಈ ನಾಲ್ಕು ಸಂಖ್ಯೆಗೆ ಬುಧ-ಚಂದ್ರ ಯೋಗ ಎಂದರು. ಮಂಕು ಬಡಿದ ಬುದ್ಧಿ ಅಥವಾ ನಿದ್ರೆಗೆ ಶನಿಯ ಪ್ರಭಾವವಿದ್ದು ಈ ಬುಧ-ಶನಿ ಯೋಗ ಎಂಟನೆಯ ಸಂಖ್ಯೆ(೮) ಆಗುತ್ತದೆ. ಇಲ್ಲಿ ಬುದ್ಧಿ ಬಾಲ್ಯದಲ್ಲಿ ಚುರುಕು ಮಧ್ಯೆ ಚಂಚಲತೆ ಮುದಿತನದಲ್ಲಿ ಮೌಢ್ಯ ಈ ರೀತಿ ವಿಲೋಮದಲ್ಲಿ ಫಲವನ್ನು ಕೊಡುತ್ತೆ.

ಹಾಗೆಯೇ ಅಗ್ನಿ ಗ್ರಹವಾದ ಕುಜನಿಗೆ ಹೊಗೆಯನ್ನು ತೋರಿಸುವಾಗ ಮೂರು (೩) ಸಂಖ್ಯೆ ಕೆಂಡದಂತೆ ಉರಿಯುವಾಗ ಆರು(೬) ಸಂಖ್ಯೆ ಮತ್ತು ಅತಿಯ ಜ್ವಾಲೆಯಿಂದ ಕೊಡುವ

ಪ್ರಕಾಶವೇ ಸೂರ್ಯನ (೯) ಒಂಭತ್ತು ಸಂಖ್ಯೆಯಾಯಿತು. ಹತ್ತು ಕರ್ಮಸ್ಥಾನದ ಕರ್ಮ ಸಂಖ್ಯೆಯಾಗಿ ಇದನ್ನು ತುಂಡರಿಸಲು ಐದು (೫) ಸಂಖ್ಯೆ ಕರ್ಮವನ್ನು ಕತ್ತರಿಸುವ ಪುಣ್ಯದ ಸಂಖ್ಯೆಯಾಯಿತು. ಇದಕ್ಕೆ ಪುಣ್ಯ ಗ್ರಹವಾದ ಗುರು ಅಧಿಪತಿಯಾದನು.

ಗ್ರಹಗಳಲ್ಲಿ ಗ್ರಹ ಸಂಖ್ಯೆಗಳಲ್ಲಿ ಎರಡು ನಮೂನೆ. ಗುರು ರವಿ ಮಂಗಳರ ಗುಂಪು ವೀರ್ಯ ಶೌರ್ಯ ಜ್ಞಾನಗಳಿಂದ ಕೂಡಿದ ಗುಂಪು. ಎರಡನೆಯದು ಇದರ ಆಶ್ರಯದಲ್ಲಿ ಬೆಳೆಯುವ ಸ್ತ್ರೀ ತತ್ತ್ವ ಪ್ರಧಾನ ಗ್ರಹಗಳು. ಅಂದರೆ ಶನಿ ಚಂದ್ರ ಬುಧ ಮತ್ತು ಶುಕ್ರ. ಈ ಎರಡು ಜಾತಿಗಳು ಸೇರುವ ಸಂಧಿಯ ಸಂಖ್ಯೆ ಏಳು (೭) ಈ ಸಂಖ್ಯೆಗೆ ಅತ್ತಿತ್ತ ಎರಡು ಭಾಗ ಮಾಡಲ್ಪಟ್ಟ ರಾಹುವೇ ಅಧಿಪತಿಯಾದನು. ಈ ಕಾರಣ ಸಪ್ತಮ ಸ್ಕಂಧದಲ್ಲಿ ರುದ್ರ ಹರಿಗಳ ಬೆಸಗೆ ಅವತಾರದ ನರಹರಿಯ ಕಥೆ ಹೇಳಲ್ಪಟ್ಟಿದೆ.

## ಪೂರ್ಣ ಸಂಖ್ಯೆ

ಒಂದರಿಂದ ಒಂಭತ್ತರವರೆಗೆ ಉತ್ಪತ್ತಿಯಾಗುವ ವಿವಿಧ ಕರ್ಮಗಳನ್ನು ಅನುಭವಿಸಿದ ಮೇಲೆ ಆ ದಶಕದಲ್ಲಿ ಆ ಸಂಖ್ಯೆ ಶುದ್ಧವಾಗಿ ಗುಣಸಂಖ್ಯೆಯಾಗಿ ಮಾರ್ಪಾಡನ್ನು ಹೊಂದುತ್ತೆ. ಈ ಕಾರಣ ಪೂರ್ಣ ಸಂಖ್ಯೆಗಳು ಶುದ್ಧ ಗುಣವುಳ್ಳದ್ದಾಗಿ ದೋಷರಹಿತವಾಗಿರುವುದಲ್ಲದೆ ದೋಷಗಳನ್ನು ಹೋಗಲಾಡಿಸುವ ಶಕ್ತಿಯನ್ನೂ ಪಡೆದಿರುತ್ತವೆ. ಈ ಕಾರಣ ಈ ಸಂಖ್ಯೆಗೆ 'ಸಿತ್' ಎಂದರೆ ಬೆಳ್ಳಗಿನದು ಎಂದರ್ಥವಾಗುವ ಶುಕ್ರನೇ ಅಧಿಪತಿಯಾದನು. ಪೂರ್ಣಾಂಕ ಗಳಲ್ಲದೆ ಈ ಶುಕ್ರನಿಗೆ ತನ್ನದೇ ಆದ ಸಂಖ್ಯೆಗಳಿವೆ. ಇವು ಹನ್ನೊಂದು ಮತ್ತು ಹನ್ನೆರಡು (೧೧-೧೨). ಕೆಲವು ಜನ ಈ ಎರಡು ಸಂಖ್ಯೆಗಳನ್ನು ಒಂದೇ ಸಂಖ್ಯೆಯ ಎರಡು ಮುಖಗಳು ಎಂದರು. ಕಾರಣ ಈ ಎರಡು ಸಂಖ್ಯೆಗಳು ಒಂದೇ ತತ್ತ್ವದ ವಿರೋಧ ಮುಖಗಳು.

ಉದಾಹರಣೆಗೆ ಹನ್ನೊಂದು ಶುಕ್ರನ ತತ್ತ್ವಗಳ ಅಭಾವವನ್ನು ತೋರಿಸುತ್ತೆ. ಅಂದರೆ ಸುಖ ತ್ಯಾಗದಲ್ಲಿ ಸುಖವನ್ನು ಕಾಣುವ ವೇದಾಂತ ತತ್ತ್ವವನ್ನು ಬೋಧಿಸುತ್ತೆ. ಇದು ಮದುವೆ ಆಗದ ಆಗಲಾರದ ಹೆಣ್ಣಿನಂತೆ. ಸುಖವಾಗಲೀ ಸುಖಪೋಷಕ ಶೃಂಗಾರ ಸಾಧಕಗಳಲ್ಲಿ ಅಭಿರುಚಿ ಕೂಡಾ ಇರದ ಮನೋಭಾವ ಇದರ ಗುಣ. ಶುಚಿ ರುಚಿಗಳಲ್ಲಿಯೂ ತಾತ್ಸಾರ ಮನೋಭಾವ ಇದರ ಕುರುಹು. ಹೆಣ್ಣಾದರೆ ಇದು ತಾತ್ಸಾರದಿಂದ ಬಿಡಲ್ಪಟ್ಟ ಹೆಂಡತಿ ಆದಾಳು. ಇದು ಶುಕ್ರನ ಶಾಪದಿಂದ ಕೂಡಿದ ಸಂಖ್ಯೆ ಎಂದರೆ ಬಹುಶಃ ತಪ್ಪಾಗಲಾರದು.

ಇದಕ್ಕೆ ವಿರುದ್ಧ ಹನ್ನೆರಡು ಸಂಖ್ಯೆ. ಸರ್ವಾಲಂಕಾರ ಭೂಷಿತಳಾದ ಹೆಣ್ಣನ್ನು ತೋರಿಸುತ್ತೆ. ಕಾಮೋದ್ದೀಪಕ ಸೌಂದರ್ಯ ಇದರ ಆಸ್ತಿ. ಈ ಸಂಖ್ಯೆ ಲಕ್ಷ್ಮೀ ಸಂಖ್ಯೆ ಆದರೆ ಇದರ ಹಿಂದಿನ ಹನ್ನೊಂದು ಲಕ್ಷ್ಮಿಯ ಅಕ್ಕನ ಸಂಖ್ಯೆ.

ಈ ಎರಡು ಸಂಖ್ಯೆಗಳ ಫಲಗಳೂ ಶುಕ್ರನ ಹೋರೆಯಲ್ಲಿ ನಡೆಯುತ್ತವೆ. ಇದು ಗಮನದಲ್ಲಿಡಬೇಕಾದ ಅಂಶ.

## ಶುಕ್ರನ ಹೋರೆ

ಪ್ರತಿದಿನ ಸೂರ್ಯನ ಹೋರೆಯ ನಂತರ ಶುಕ್ರನ ಹೋರೆ ಬರುತ್ತದೆ. ಈ ಹೋರೆಯಲ್ಲಿ ಶುಭ ವಿಷಯಗಳಿಗಾಗಿ ಶುಭವಿರುತ್ತದೆ. ಕಾರ್ಯಾರ್ಥವಾಗಿ ಹೊರಡುವಾಗ ಶುಭ ವಾದ್ಯಗಳು ಮೊಳಗುವಿಕೆ ಸರ್ವಾಲಂಕಾರಭೂಷಿತ ಹೆಣ್ಣಿನ ದರ್ಶನ ಈ ಹೋರೆಯ ಶುಭ ಲಕ್ಷಣಗಳು. ಆಗ ಈ ಕಾರ್ಯ ಹಣ್ಣಾದಂತೆಯೇ ಸರಿ. ಈ ಹೋರೆಯಲ್ಲಿ ಮಂಗಳ ವಸ್ತುಗಳ ಖರೀದಿ ವಾಹನಾದಿಗಳನ್ನ ಆರಿಸುವುದಕ್ಕೆ, ವಿವಾಹಾದಿ ಶುಭ ಯತ್ನಗಳಿಗೆ ಶುಭ ಎನ್ನಬಹುದು.

ಆದರೆ ಈ ಶುಕ್ರನ ಹೋರೆಯಲ್ಲಿ ಹೊರಡುವಾಗ ಮದುವೆ ಇಲ್ಲದ ವಯಸ್ಸಿನ ಹೆಣ್ಣು ಅಲಂಕಾರಹಿತಳಾಗಿ ಎದುರುಬದುರಾದರೆ ಆಗ ಈ ಕಾರ್ಯ ಸಾಧಿಸದು. ಈ ಕಾರಣ ಹಿಂದಿರುಗುವುದು ಲೇಸು. ಆದರೆ ಆ ಕಾಲದಲ್ಲಿ ಸ್ತ್ರೀತತ್ವ ವಿರೋಧವಾದ ವೇದಾಂತ ಅಧ್ಯಯನ ದೇವತಾರಾಧನೆ ಇತ್ಯಾದಿ ಪರಲೋಕ ಸಾಧಕ ವಿಷಯಗಳಿಗೆ ಶುಭ ಎನ್ನಬಹುದು.

ಈ ಹೋರೆಯಲ್ಲಿ ಕಾರ್ಯ ಸಾಧನೆಯಾಗಬೇಕಾದರೆ ಅಲಂಕಾರ ಮುಖ್ಯ ಸಾಧನೆ. ಹಣ್ಣು ಹಂಪಲುಗಳನ್ನು ಕೊಂಡೊಯ್ಯುದು ಎರಡನೆಯ ಸಾಧನೆ. ಪ್ರೀತಿ ಉಮ್ಮಳಿಸಿ ಹೊರ ಹೊಮ್ಮುವ ಮಾತು ಮೂರನೆಯ ಸಾಧನೆ. ಶ್ರೀಮತಿಯ ಜೊತೆ ಹೋಗುವುದು ಅತಿ ಸುಲಭ ಸುಗಮದ ವಿಧಾನ ಎಂದರೆ ತಪ್ಪಾಗದು. ಕೊನೆಯದಾಗಿ ಹನ್ನೆರಡು ಸಂಖ್ಯೆಯನ್ನು ಉಪಯೋಗಿಸುವುದು ಹೆಚ್ಚು ಉಪಯುಕ್ತ.

ಈ ರೀತಿ ಗಣಪತಿ ಸಂಖ್ಯಾಶಾಸ್ತ್ರದಲ್ಲಿ ಶುಭಸಾದನೆಗಾಗಿ ಆಯಾ ಹೋರೆಗಳಲ್ಲಿ ಆಯಾ ಗ್ರಹದ ಸಂಖ್ಯೆಗಳನ್ನು ಬಳಸಿ ಶುಭವನ್ನು ಸಾಧಿಸಲು ಅನುಕೂಲವಾಗುವುದು.

ವಾರದ ಹೆಸರು

| | ಸೂರ್ಯ | ಚಂದ್ರ | ಮಂಗಳ | ಬುಧ | ಗುರು | ಶುಕ್ರ | ಶನಿ |
|---|---|---|---|---|---|---|---|
| 1. | ಸೂರ್ಯ | ಚಂದ್ರ | ಮಂಗಳ | ಬುಧ | ಗುರು | ಶುಕ್ರ | ಶನಿ |
| 2. | ಶುಕ್ರ | ಶನಿ | ಸೂರ್ಯ | ಚಂದ್ರ | ಮಂಗಳ | ಬುಧ | ಗುರು |
| 3. | ಬುಧ | ಗುರು | ಶುಕ್ರ | ಶನಿ | ಸೂರ್ಯ | ಚಂದ್ರ | ಮಂಗಳ |
| 4. | ಚಂದ್ರ | ಮಂಗಳ | ಬುಧ | ಗುರು | ಶುಕ್ರ | ಶನಿ | ಸೂರ್ಯ |
| 5. | ಶನಿ | ಸೂರ್ಯ | ಚಂದ್ರ | ಮಂಗಳ | ಬುಧ | ಗುರು | ಶುಕ್ರ |
| 6. | ಗುರು | ಶುಕ್ರ | ಶನಿ | ಸೂರ್ಯ | ಚಂದ್ರ | ಮಂಗಳ | ಬುಧ |
| 7. | ಮಂಗಳ | ಬುಧ | ಗುರು | ಶುಕ್ರ | ಶನಿ | ಸೂರ್ಯ | ಚಂದ್ರ |
| 8. | ಸೂರ್ಯ | ಚಂದ್ರ | ಮಂಗಳ | ಬುಧ | ಗುರು | ಶುಕ್ರ | ಶನಿ |